# ಅಲ್ಲಮನ ವಚನ ಚಂದ್ರಿಕೆ

## ಪ್ರಭುದೇವರ ವಚನಗಳು

ಸಂಪಾದಕ:

ಎಲ್. ಬಸವರಾಜು, ಎಂ.ಎ.

ಕನ್ನಡ ಅಧ್ಯಾಪಕ, ಯುವರಾಜ ಕಾಲೇಜು, ಮೈಸೂರು



ನಳಿನೀಶಂಕರ ಪ್ರಕಾಶನ

ಮೈಸೂರು

# ಅಲ್ಲಮನ ವಚನ ಚಂದ್ರಿಕೆ

ಪ್ರಭುದೇವರ ವಚನಗಳು

ಸಂಪಾದಕ:

ಎಲ್. ಬಸವರಾಜು, ಎಂ.ಎ,

ಕನ್ನಡ ಅಧ್ಯಾಪಕ, ಯುವರಾಜ ಕಾಲೇಜು, ಮೈಸೂರು

ನಳಿನೀಶಂಕರ ಪ್ರಕಾಶನ

ಮೈಸೂರು

# ವಿಜ್ಞಾಪನೆ

ಪೂಜ್ಯ ಪಿತಾಮಹ ಶ್ರೀ ಪಿ. ಜಿ. ಹಳಕಟ್ಟಿಯವರು ಮುವ್ವತ್ತು ವರ್ಷಗಳ ಹಿಂದೆ ತಮ್ಮ ಶಿವಾನುಭವ ಗ್ರಂಥಮಾಲೆಯಲ್ಲಿ ಪ್ರಭುದೇವರ ಆರುನೂರ ತೊಂಬತ್ತು ನಾಲ್ಕು ವಚನಗಳನ್ನು ಪ್ರಕಟಿಸಿದರು. ಆ ಕಾರ್ಯವನ್ನೇ ನಾನಿಂದು, ಗುರುಪರಂಪರೆಯನ್ನು ಶಿಷ್ಯನಂತೆ, ಯಥಾಶಕ್ತಿ ಊರ್ಜಿತಗೊಳಿಸಿದ್ದೇನೆಂದುಕೊಳ್ಳಬಹುದು. ಆದರೂ ಈ ನನ್ನ ಕೃತಿಯಲ್ಲಿನ ಕೊರತೆಗಳ ಅರಿವೂ ನನಗುಂಟು. ವಚನಸಾಹಿತ್ಯದ ಪ್ರಾಚೀನತೆ, ಅದರ ಉಗಮ ಮತ್ತು ಪ್ರಕಾರ, ಪ್ರಭುದೇವರ ವಚನಗಳ ಮೂಲಗಳ ಸ್ವರೂಪ, ಅಲ್ಲಮಪ್ರಭುವಿನ ಸಂಪ್ರದಾಯ ಮತ್ತು ಆತನ ಜೀವನದ ಕೆಲವು ಮಹತ್ವದ ಘಟ್ಟಗಳ ಜಟಿಲ ವಿಚಾರ—ಇವನ್ನು ಸದ್ಯಕ್ಕೆ ಪೀಠಿಕೆಯಲ್ಲಿ ಬಿಡಿಸಲು ಪ್ರಯತ್ನಿಸಿರುವೆನಾದರೂ ಅಷ್ಟರಿಂದ ನನಗೆ ತೃಪ್ತಿಯಾಗಿಲ್ಲ. ಆತನ ವ್ಯಕ್ತಿತ್ವ, ವಾಣಿಯ ವೈಶಿಷ್ಟ್ಯ, ಯೋಗಮಾರ್ಗ, ಆತನು ಸಂಧಿಸಿದ ಶರಣರು ಮತ್ತು ಅವರಿಗೆ ಅವನಿಂದ ಒದಗಿದ ಆಧ್ಯಾತ್ಮಿಕ ಸಂಪತ್ತು, ಈ ಮುಂತಾದ ವಿಷಯಗಳ ಬಗ್ಗೆಯೂ ವಿಚಾರಮಾಡಬೇಕೆಂದು ವಿಷಯಸಂಗ್ರಹಣೆಯನ್ನು ಮಾಡಿಕೊಂಡಿದ್ದೆನಾದರೂ, ನಿರೀಕ್ಷಿಸಿದ್ದಕ್ಕಿಂತ ಎರಡರಷ್ಟು ಬೆಳೆದುನಿಂತಿದ್ದ ಈ ಪುಸ್ತಕವನ್ನು ಮತ್ತಷ್ಟು ದೊಡ್ಡದು ಮಾಡಲು ಹಣದ ಅಭಾವದಿಂದ ಸಾಧ್ಯವಿಲ್ಲವಾಗಿದೆ. ಆಗಿರುವ ಈ ವಿಚಾರದ ಕೊರತೆಯನ್ನು ಮುಂದಣ ಆವೃತ್ತಿಯಲ್ಲಿ ತುಂಬಿಕೊಡಲು ಪ್ರಯತ್ನಿಸುತ್ತೇನೆ.

ಈ ನನ್ನ ಕೃತಿಯ ಬಗ್ಗೆ ಸದ್ಭಾವನೆಯನ್ನು ವ್ಯಕ್ತಪಡಿಸಿ, ಈ ಗ್ರಂಥವು ಮಾನ್ಯ ಡಿ. ಸಿ. ಪಾವಟೆಯವರಿಗೆ ಅರ್ಪಿತವಾಗಲು ಅನುಮಾಡಿ ಕೊಟ್ಟ ಕರ್ಣಾಟಕ ವಿಶ್ವವಿದ್ಯಾನಿಲಯದ ಸಂಸ್ಕೃತ ಮಹೋಪಾಧ್ಯಾಯರೂ, ಬಾಗಲ್‌ಕೋಟೆಯ ಬಸವೇಶ್ವರ ಕಾಲೇಜಿನ ಪ್ರಿನ್ಸಿಪಾಲರೂ ಆದ ಡಾ. ಎಸ್. ಸಿ. ನಂದೀಮಠ, ಎಂ.ಎ., ಪಿಹೆಚ್.ಡಿ. (ಲಂಡನ್) ಅವರಿಗೆ ಮತ್ತು ಈ ನನ್ನ ಗ್ರಂಥವು ಯೋಗ್ಯವೆಂದು ಒಪ್ಪಿ, ಮಮತೆಯಿಂದ ಇದನ್ನು ಒಪ್ಪಿಸಿಕೊಂಡ ಕರ್ಣಾಟಕ ವಿಶ್ವವಿದ್ಯಾನಿಲಯದ ವೈಸ್ ಛಾನ್ಸಲರ್ ಆದ ರ್‍ಯಾಂಗ್ಲರ್ ಡಿ.ಸಿ. ಪಾವಟೆಯವರಿಗೆ ನಾನು ಕೃತಜ್ಞ.

ಈ ಗ್ರಂಥವನ್ನು ನಾನು ಸಿದ್ಧಪಡಿಸುವಾಗ ಗೀತೆಗಳ ಛಂದಸ್ಸನ್ನು ಗುರುತು ಹಚ್ಚುವಲ್ಲಿ ಮತ್ತು ಕೆಲವು ಕಠಿನಪದಗಳಿಗೆ ಅರ್ಥ ನಿರ್ಣಯಿಸು

ವಲ್ಲಿ ನನಗೆ ಪ್ರೊ. ಡಿ. ಎಲ್. ನರಸಿಂಹಾಚಾರ್ಯರು ಅಮೂಲ್ಯವಾದ ಸಲಹೆಗಳನ್ನು ಕೊಟ್ಟಿದಾರೆ. ನನ್ನ ಮಿತ್ರರಾದ ಶ್ರೀ ಬಿ. ಎಸ್. ಸಣ್ಣಯ್ಯ, ಎಂ. ಎ. ಅವರು ಕೆಲವು ಓಲೆಯ ಪ್ರತಿಗಳನ್ನು ನನಗೆ ಓದಿ ಹೇಳಿದ್ದಾರೆ. ಶ್ರೀಯುತರುಗಳಾದ ಎಂ. ಸಿ. ಚಿದಾನಂದಮೂರ್ತಿ, ಎಂ. ಎ., ವಿದ್ವಾನ್ ಬಸವರಾಜ ಶಾಸ್ತ್ರಿಗಳು, ಎಂ. ಡಿ. ಬಸಪ್ಪನವರು—ಈ ಮೂವರು ಮಹನೀಯರೂ ತಮ್ಮಲ್ಲಿದ್ದ ಪ್ರಭುದೇವರ ಟೀಕಿನ ವಚನಗಳ ಒಂದೊಂದು ಪ್ರತಿಯನ್ನು ನನಗೆ ಕೊಟ್ಟಿದ್ದಾರೆ. ನನ್ನ ಪ್ರಿಯಮಿತ್ರರಾದ ಶ್ರೀ ಎನ್, ಬಸವಾರಾಧ್ಯ, ಎಂ. ಎ. ಅವರು ನನ್ನನ್ನು ವಿಶೇಷವಾಗಿ ಪ್ರೋತ್ಸಾಹಿಸಿದ್ದಾರೆ. ಈ ಎಲ್ಲರಿಗೂ ನನ್ನ ಹೃತ್ಪೂರ್ವಕ ವಂದನೆಗಳು.

ಈ ಗ್ರಂಥವು ಇಷ್ಟು ಅಚ್ಚುಕಟ್ಟಾಗಲು ಶ್ರಮಿಸಿರುವ ಶ್ರೀ ಶಕ್ತಿ ಎಲೆಕ್ಟ್ರಿಕ್ ಪ್ರೆಸ್ಸಿನ ಸಂಚಾಲಕರಿಗೆ ನನ್ನ ನಮಸ್ಕಾರಗಳು.

ಮೈಸೂರು,
20—6—1960.

ಎಲ್. ಬಸವರಾಜು

*

ವಿಜ್ಞಾನ ಮತ್ತು ವಿಜ್ಞಾನೇತರ ವಿಷಯಗಳಲ್ಲಿ
ಸಂಶೋಧನೆ ಮತ್ತು ಪ್ರಯೋಗಗಳನ್ನು ಊರ್ಜಿತಗೊಳಿಸಲನುವಾಡಿ
ನವಭಾರತ ನಿರ್ಮಾಣದ ಮಹತ್ಕಾರಣಕ್ಕಾಗಿ
ಅವಿಶ್ರಾಂತವಾಗಿ ದುಡಿಯುತ್ತಿರುವ
ಕರ್ಣಾಟಕ ವಿಶ್ವವಿದ್ಯಾನಿಲಯದ ವೈಸ್ ಛಾನ್ಸ್‌ಲರ್ ಆದ
ರ್‍ಯಾಂಗ್ಲರ್ ಡಿ. ಸಿ. ಪಾವಟೆ, ಎಂ.ಎ. (ಕ್ಯಾಂಟಬ್) ಅವರಿಗೆ
ಅಲ್ಲಮನ ವಚನ ಚಂದ್ರಿಕೆ
ಅರ್ಪಿತ

ಆತನಲ್ಲಮ ಸಕಲಸಮಯ
ಪ್ರೀತನಲ್ಲಿಯು ಶೈವದಲಿ ಸಂ-
ಪ್ರೀತನದರೊಳು ವೀರಶೈವದಲತಿಮಹಾಪ್ರೀತ.
ಬಾಲರನು ವೃದ್ಧರನು, ಭೂಮೀ
ಪಾಲರನು ಬಡವರನು, ಸದಮಲ
ಶೀಲರನು ಗುಣಿಗಳನು, ಗೋಬ್ರಾಹ್ಮರನು ಭಕ್ತರನು,
ಲೋಲತೆಯಲಿ ಸಮಸ್ತಜಾತಿಯ
ಜಾಲವನು, ಸರ್ವರನು ಕರುಣಿಸಿ
ಪಾಲಿಸುತಲಿರುತಿರ್ದನೆಮ್ಮಯ ಗುರು ಗುಹೇಶ್ವರನು.

[ಪ್ರಭುಲಿಂಗಲೀಲೆ 25-9, 21]

# ವಿಷಯಾನುಕ್ರಮಣಿಕೆ

# ಪೀಠಿಕೆ

ಶಿವಶರಣರ ವಚನಸಾಹಿತ್ಯ ಬಹಳ ಪ್ರಾಚೀನ. ಪ್ರಾಚೀನವೆಂಬಷ್ಟರಲ್ಲೇ ಘನತೆಯಿರುವುದೆಂದಲ್ಲ ; ಘನತೆಯಿದ್ದುದರಿಂದಲೇ ಅದು ಅಂದಿನಿಂದ ಇಂದಿನ ವರಿಗೆ ಅಷ್ಟೋ ಇಷ್ಟೋ ಉಳಿದು ಬಂದಿದೆ. ಉಳಿದು ಬಂದ ವಚನಸಾಹಿತ್ಯಕ್ಕಿಂತ ಕಳೆದು ಹೋದ ವಚನಸಾಹಿತ್ಯವು ನೂರ್ಮಡಿ ಸಾಸಿರ್ಮಡಿಯಷ್ಟು ವಿಪುಲವಿದ್ದಿರಬಹುದು. ಆದರೆ ಆ ವೈಪುಲ್ಯದಲ್ಲಾಗಿರುವ ಕೊರತೆಗಾಗಿ ನಾವು ಕೊರಗ ಬೇಕಾಗಿಲ್ಲ. ಏಕೆಂದರೆ ಧರ್ಮಸಿದ್ಧಾಂತದ ದೃಷ್ಟಿಯಿಂದ ನೋಡಿದಾಗ ಆಗಿರುವ ಕೊರತೆಯು ಸ್ಥೂಲರೂಪವಾದುದೇ ಹೊರತು, ಸಾರರೂಪವಾದುದಲ್ಲವೆಂದು ಖಚಿತವಾಗುವುದು. ಆದರೂ ಅದರ ವಿವರವನ್ನು ವಿಚಾರಿಸುವ, ಅದರ ಮೂಲವನ್ನೂ ಕಾಲವನ್ನೂ ಬೆದಕುವ ಭ್ರಮೆ ಮಾತ್ರ ಬಿಡದು.

ಬಸವಣ್ಣನವರೂ, ಅವರ ಸಮಕಾಲೀನ—ಹಿರಿಯ ಸಮಕಾಲೀನ—ಪೂರ್ವಕಾಲೀನ ಶರಣರೂ ತಮ್ಮ ತಮ್ಮ ವಚನಗಳಲ್ಲಿ ತಮಗಿಂತ ಹಿಂದಿದ್ದ ಶರಣರನ್ನೂ ಅವರ ವಚನಸಾಹಿತ್ಯವನ್ನೂ ಸ್ಮರಿಸಿಕೊಂಡಿದ್ದಾರೆ. ಆದ್ದರಿಂದ ವಚನ ಸಾಹಿತ್ಯವು 12 ನೇ ಶತಮಾನಕ್ಕಿಂತ ಪ್ರಾಚೀನ. ಎಷ್ಟು ಪ್ರಾಚೀನ? ಅದೇ ತೊಡಕಿನ ಪ್ರಶ್ನೆ. "ಕ್ರಿ.ಶ.ಸು. 980 ರಲ್ಲಿ ಹುಟ್ಟಿ ಕ್ರಿ.ಶ.ಸು. 1040 ರಲ್ಲಿ ಶಿವೈಕ್ಯನಾಗಿರಬಹುದು[1]" ಎಂದು ಊಹಿಸಬಹುದಾದ ಜೇಡರದಾಸಿಮಯ್ಯ[A]ನು ತನ್ನ ವಚನಗಳಲ್ಲಿ ಕೆಲವು ಶಿವಶರಣರನ್ನು ಕೊಂಡಾಡಿದ್ದಾನೆ.[2] ಅವರು— ಓಹಿಲ, ಉದ್ಭಟ, ಕೆಂಭಾವಿ ಭೋಗಯ್ಯ, ಮಾದರಚೆನ್ನಯ್ಯ, ಕೊಂಡಗುಳಿ ಕೇಶಿರಾಜ ಮತ್ತು ಡೋಹರಕಕ್ಕಯ್ಯ. ಇವರಲ್ಲಿ ಓಹಿಲನೊಬ್ಬನನ್ನು ಬಿಟ್ಟು

---

1. ಜೇಡರದಾಸಿಮಾರ್ಯಪ್ರಶಸ್ತಿ, ಪುಟ 191. 2. ಅದೇ–ಪುಟ 106,192.

A ಒಂದನೇ ಜಗದೇಕಮಲ್ಲನೆಂಬ ಬಿರುದಾಂಕಿತನಾದ ಎರಡನೇ ಜಯಸಿಂಹನು ಕಲ್ಯಾಣಿ ಪೊಟ್ಟಲಕೆರೆ, ಕೊಲ್ಲಿಪಾಕಿಗಳನ್ನು ರಾಜಧಾನಿಗಳನ್ನಾಗಿ ಮಾಡಿಕೊಂಡು ಆಳುತ್ತಿದ್ದ (ಪಶ್ಚಿಮಚಾಳುಕ್ಯವಂಶದ) ಒಬ್ಬ ಅರಸ. Dynasties of the Kanarese Districts by Fleet ಪುಟ 437 ಮತ್ತು Archaeological Survey of India 1929-20). ಈತನ ಕಾಲ ಕ್ರಿ.ಶ. 1015–1042. ಈ ಜಯಸಿಂಹನಿಗೆ ಸುಗ್ಗಲದೇವಿಯೆಂಬ ರಾಣಿಯಿದ್ದಳೆಂಬುದಕ್ಕೆ ಶಾಸನಾಧಾರಗಳೂ ಇವೆ (Dynasties of the Kanarese Districts by Fleet ಪುಟ 435 ಅಡಿ ಟಿಪ್ಪಣಿ 7). ಈ ಸುಗ್ಗಲೆ ಜೇಡರದಾಸಯ್ಯನ ಶಿಷ್ಯಳಾಗಿದ್ದಳೆಂದು ಬಸವಪುರಾಣಗಳಿಂದ ತಿಳಿಯ ಬರುವುದು.

ಮಿಕ್ಕವರಲ್ಲಿ ಕೆಲವರು ವಚನಕಾರರೂ, ಕೆಲವರು ವೃತ್ತಪದ್ಯಗಳನ್ನು ಬರೆದಿರುವ ಕವಿಗಳೂ ಆಗಿದ್ದರೆನ್ನಬಹುದು.

ಓಹಿಲ ಮತ್ತು ಉದ್ಭಟ ಇಬ್ಬರೂ ಸಮಕಾಲೀನರು ಮತ್ತು ಒಂದೇ ದೇಶ (ಸೌರಾಷ್ಟ್ರ)ದವರು. ಓಹಿಲನು ಕಾಯಬೆರಸಿ ಕೈಲಾಸಕ್ಕೆ ಹೋದ ವಾರ್ತೆಯನ್ನು ಕೇಳಿ ಉದ್ಭಟನು * ತನ್ನ ಪುರವಷ್ಟನ್ನೂ ತನ್ನೊಡನೆ ಕೈಲಾಸಕ್ಕೆ ಒಯ್ಯುವೆನೆಂದು ಪ್ರತಿಜ್ಞೆ ಮಾಡಿ, ಶಿವಾಲಯಕ್ಕೆ ಹೋಗಿ " ನಾನಾ ನೂತನ ರಸ ಒಸರುತ್ತಿರೆ ಮೃಡಮೂರ್ತಿಯ ವರ್ಣನೆಯಂ ತೊಡಗಲ್ ಜಡೆ

---

* ತನ್ನ ಪುರವಷ್ಟನ್ನೂ ತನ್ನ ಜೊತೆಯಲ್ಲೇ ಕೈಲಾಸಕ್ಕೊಯ್ದನೆಂದು ಪ್ರಸಿದ್ಧನಾಗಿರುವ ಉದ್ಭಟದೇವನು ಗುರ್ಜರದೇಶದವನೇ ಆದರೂ, ಅವನು ಕ್ರಿ.ಶ. 1141ರಲ್ಲಿ ಅಭಿಷಿಕ್ತನಾದ ಕುಮಾರಪಾಲಾಭಿಧ ಉದ್ಭಟದೇವನಲ್ಲವೆನ್ನಲು ಹತ್ತನೇ ಶತಕದ ಜೇಡರ-ದಾಸಿಮಯ್ಯನು ತನ್ನ ವಚನದಲ್ಲಿ ಆತನನ್ನು ಸ್ತುತಿಸಿರುವನೆಂಬುದಷ್ಟೇ ಅಲ್ಲದೆ, ಮತ್ತೆ ಒಂದೆರಡು ಕಾರಣಗಳಿವೆ : (1) ಓಹಿಲ, ಉದ್ಭಟ, ಹಲಾಯುಧ, ಸಾಮವೇದಿ, ಮಳಯರಾಜ ಇವರೈವರೂ ಸ್ಪರ್ಧೆಯಿಂದ ಉತ್ತರೋತ್ತರ ಅಧಿಕಾಧಿಕ ದೇಶಸಹಿತ ಕೈಲಾಸಕ್ಕೆ ಹೋದರೆಂದು ವೀರಶೈವಪುರಾಣಗಳಿಂದ ತಿಳಿದುಬರುವುದರಿಂದ—ಇವರೆಲ್ಲರೂ ಸಮಕಾಲೀನರಿರಬಹುದು. (2) ಈ ಐವರಲ್ಲಿ ಒಬ್ಬನಾದ ಸಾಮವೇದಿಯನ್ನೂ, ಸಾಮವೇದಿಯ ಗುರುವೆಂದು ಹರಿಹರನ ರಗಳೆಯಿಂದ ತಿಳಿದುಬರುವ ಶ್ವಪಚಯ್ಯನನ್ನೂ ಬಸವಣ್ಣನವರು ತಮಗಿಂತ ಪುರಾತನರೆಂಬಂತೆ ತಮ್ಮ ವಚನಗಳಲ್ಲಿ ಸ್ತುತಿಸಿರುವರು. (ಬ. ವ. 149, 81 342, 350) (3) ಈ ಉದ್ಭಟನು ತ್ರಿಷಷ್ಠಿ ಪುರಾತನರಲ್ಲಿ ಓರ್ವನೆಂದು ಹರಿಹರ-ನಂತರದವನಿಂದಲೂ ಗಣ್ಯನಾಗುವಷ್ಟು ಹಳಬ. ಹೇಗೆಂದರೆ " ಅರವತ್ತುಮೂವರು ಪುರಾತನರ ಪುರಾಣ " ವನ್ನು ಬರೆದಿರುವ ವೀರಭದ್ರಕವಿಯು ತನ್ನ ಗ್ರಂಥದ ಆರಂಭದಲ್ಲಿ ಹರಿಹರನನ್ನು ಭಕ್ತಿಯಿಂದ ಸ್ತೋತ್ರಮಾಡಿ ತನ್ನ ಗ್ರಂಥರಚನೆಗೆ ಕಾರಣವಾದ ಒಂದು ಸಂದರ್ಭವನ್ನು ಹೇಳಿದ್ದಾನೆ : ನಾಗಭೂಷಣನೆಂಬ ಶಿವಯೋಗಿಯು ಸಂಚರಿಸುತ್ತ ಬಂದು ವೀರಭದ್ರಕವಿಗೆ " ಕೇಳಿಗಳ್ ಪುರಾತನರ ಚರಿತ್ರ ವರ್ಣದೊಳಿಲ್ಲ ರಚಿಸು " (1-13). ಎನ್ನಲು " ಹರಿಹರಾಚಾರ್ಯ ಸುಜ್ಞಾನದಿಂದೊರೆದ ರಘಟಾಪ್ರಬಂಧದ ಸುವಾಕ್ಯಪ್ರಸಾದದಿಂದ " ತನ್ನ ಗ್ರಂಥವನ್ನು ಬರೆದನಂತೆ (1-14). ಆ ' ಅರವತ್ತು ಮೂವರು ಪುರಾತನರ ಪುರಾಣ ' ಕ್ಕೆ " ಆಧಾರವಾವುದೆನಲು ಹರಿದೇವನೊರೆದ ರಘಟಾ ಕಾವ್ಯವಾಧಾರ " (1-18) ಎಂದು ಸ್ಪಷ್ಟವಾಗಿ ಹೇಳಿಕೊಂಡಿದಾನೆ. ಈ ವೀರಭದ್ರನು ಬರೆದ ಪುರಾಣದ 63 ಪುರಾತನರಲ್ಲಿ ' ಉದ್ಭಟ'ನೂ ಒಬ್ಬನಾಗಿರುವುದರಿಂದ ತ್ರಿಷಷ್ಠಿ ಪುರಾತನರಲ್ಲಿ ಉದ್ಭಟನೂ ಒಬ್ಬನೆಂದು ಹರಿಹರನೂ ಮಾನ್ಯ ಮಾಡಿದ್ದನೆಂಬುದು ಖಚಿತವಾಗುವುದು. ಆದರೆ ಈ ನಿರ್ಧಾರಕ್ಕೆ ಅಡ್ಡಿಯಾಗುವ ಒಂದೇ ಒಂದು ಅಂಶವೆಂದರೆ ಹರಿಹರನ ಹಲವು ರಗಳೆಗಳಿರುವ O.R.I. K. 358 ನೇ ಓಲೆಯ ಗ್ರಂಥದಲ್ಲಿನ " ಅರವತ್ತು ಮೂವರು ಪುರಾತನರ ಕಥಾಗರ್ಭ "ದಲ್ಲಿ ಉದ್ಭಟನ ಹೆಸರು ಬರುವುದಿಲ್ಲ. ಆದರೆ ಆ ಕಥಾಗರ್ಭವು ಹರಿಹರಲಿಖಿತವೆಂಬುದಕ್ಕೆ ಯಾವ ಆಧಾರವೂ ಇಲ್ಲವೆಂಬುದನ್ನು ಗಮನಿಸಬೇಕು.

ಮುಡಿಗೊಂದೇ ಪದ್ಯಮನೆಸಗಲ್" ಅವನ ಪುರವು ಕೈಲಾಸದ ಕಡೆಗೆ ಎದ್ದಿತಂತೆ. ಅವನು ಒಂದೊಂದು ಪದ್ಯವನ್ನು ರಚಿಸಿದಾಗಲೆಲ್ಲ ಆ ಪುರವು ಕೈಲಾಸಾಭಿಮುಖವಾಗಿ ನೂರು ಯೋಜನದಷ್ಟು ದೂರ ಏರಿ ಹೋಗುತ್ತಿತ್ತು. ನೂರು ಪದ್ಯಗಳನ್ನು ರಚಿಸುವ ಹೊತ್ತಿಗೆ ಅದು ಕೈಲಾಸವನ್ನು ಸೇರಿತಂತೆ.[1] ಹರಿಹರನ ಈ ಅಭಿಪ್ರಾಯಕ್ಕೆ ಮಲ್ಲಿಕಾರ್ಜುನ ಪಂಡಿತಾರಾಧ್ಯರ ಶಿವತತ್ತ್ವಸಾರದ ಒಂದು ಪದ್ಯದಿಂದ ಪುಷ್ಟಿಯೂ ದೊರೆಯುತ್ತದೆ.[2] ಆದರೆ ಉದ್ಭಟನು ಬರೆದದ್ದು ಕನ್ನಡದಲ್ಲಿ ಎನ್ನುವುದಕ್ಕೆ ಆಧಾರಗಳಿಲ್ಲ.

ಕೆಂಭಾವಿ ಭೋಗಣ್ಣನ ಮೇಲೆ ಹರಿಹರನದೊಂದು ರಗಳೆಯಿದೆ. ಅದರಿಂದ ಇವನೊಬ್ಬ ವಚನಕಾರನೆಂಬುದಕ್ಕೆ ಯಾವೊಂದು ಸೂಚನೆಯೂ ಸಿಗುವುದಿಲ್ಲ. ಹರಿಹರನು ಕೆಂಭಾವಿಭೋಗಣ್ಣನ ಬಾಯಲ್ಲಿ ಎರಡು ಮಾತನಾಡಿಸಿದ್ದಾನೆ;[3] ಅವು ಅವನ ವಚನೋಲ್ಲೇಖಗಳೋ ಅಲ್ಲವೋ ಹೇಳುವುದು ಕಷ್ಟ. ಆರ್. ನರಸಿಂಹಾಚಾರ್ ಮತ್ತು ಹಳಕಟ್ಟಿಯವರು ಇಬ್ಬರೂ ವಚನಕಾರ ಭೋಗಯ್ಯನೆಂಬೊಬ್ಬನನ್ನು ಹೆಸರಿಸಿ ಅವನ ಅಂಕಿತ "ನಿಜಗುರು ಭೋಗಸಂಗ[4]" ಎಂದು ಹೇಳಿದ್ದಾರೆ. ಅವನೇ ಇವನಿರಬಹುದು.

ಮಾದರ ಚೆನ್ನಯ್ಯನು ಬಸವನಿಗಿಂತ, ಜೇಡರ ದಾಸಿಮಯ್ಯನಿಗಿಂತ,

---

1. ಹರಿಹರನ ಉದ್ಭಟದೇವರ ರಗಳೆ ಮತ್ತು ಓಹಿಲಯ್ಯರಗಳೆ: ಸಂ. ಶ್ರೀ. ಹಳಕಟ್ಟಿ. 2. "ಹರಲೀಲಾಸ್ತವರಚನಾ । ಸ್ಥಿರನಿರುಪಮ ಭಕ್ತಿ(ದನದು ದೇಹಮುತೋಡನ್ । ಸುರಚಿರವಿಮಾನಮುನನೀ । ಪುರಮುನಕುದ್ಭಟುಡು ಪ್ರೀತಿಬೋವಡೇ ರುದ್ರ" (ಶಿ. ತ. ಸಾ. 410) 3. ಪೊಲೆಯನಂ ಪುಗಿಸಲಿಲ್ಲ ಮನೆಯೊಳಗರಸ ನಿನಗೆ ತಿಳಿವಿಲ್ಲದೊಡೆ ಕೇಳರಸ. ನಾರಾಯಣಕ್ರಮಿತರಂ ಪುಗಿಸಿದೆನೆ ಮನೆಗೆ? ಸೂರಿಭಟ್ಟರನ್ನದೆ ಪುಗಿಸಿದೆನೆ ಮನೆಯೊಳಗೆ? ಕೃಷ್ಣಪೆದ್ದಿಗಳನೊಮ್ಮೆಯು ಕರೆದು ಬಲ್ಲೆನೆ? ವಿಷ್ಣುಭಟ್ಟರನೊಮ್ಮೆಯು ಸೋಕಿಬಲ್ಲೆನೆ? ಶಿವನನವಙಾಯದ ಹೊಲೆಯರಂ ಹೊಗಿಸೆನಾನರಸ! ಶಿವಭಕ್ತನಂ ಪುಗಿಸಿದೆಂ ತಪ್ಪೆ ಹೇಳರಸ?" (ಕೆಂ. ಭೋ. ರ. ಸಂ: ಶ್ರೀ. ಹಳಕಟ್ಟಿ). "ದೇವಿಯರನಗಲಿ ಇಂತೆನ್ನೊಡನೆ ಬರ್ಪರೇ? ದೇವಿಯಾಲಿಂಗನವನುಳಿದು ನಡೆತರ್ಪರೇ? ಚಳಿಗಾಳಿ ಬಿಸಿಲಿವಂ ನೋಡದೈತಪ್ಪರೇ? ಇಳೆಗೆ ಪೊಸತಿಂಗೆ ಪೊಸತಂ ಮಾಡಿ ನೋಳ್ಪರೆ?" (ಕೆಂ. ಭೋ. ರ. ಸಂ: ಶ್ರೀ. ಹಳಕಟ್ಟಿ). 4. ಹರಿಹರನು ಏಕಾಂತರಾಮಿತಂದೆಯ ರಗಳೆಯಲ್ಲಿ, ಕೆಂಭಾವಿಯೆಂಬ ಊರಿನಲ್ಲಿ "ಭೋಗನಾಥ"ನೆಂಬ ದೇವರಿದ್ದಂತೆ ಹೇಳಿದ್ದಾನೆ. ಆ ದೇವರ ಹೆಸರನ್ನೇ ಇಟ್ಟುಕೊಂಡಿದ್ದರಿಂದ ಕೆಂಭಾವಿಯ ಶರಣನು ಕೆಂಭಾವಿಯ ಭೋಗಯ್ಯನೆನಿಸಿಕೊಂಡನು. ಆದ್ದರಿಂದ ಈತನೊಂದು ಪಕ್ಷ ವಚನಗಳನ್ನು ಬರೆದಿದ್ದರೆ ಅವುಗಳ ಅಂಕಿತ "ಭೋಗನಾಥ" ಎಂದಿರಬೇಕಾದುದು ಸರಿಯೇ. ಈ ಅಂಕಿತವನ್ನು ಶಂಕರದಾಸಿಮಯ್ಯನ "ನಿಜಗುರುಶಂಕರದೇವ" ಎಂಬ ಅಂಕಿತದೊಡನೆ ಹೋಲಿಸಿ ನೋಡಿ,

ಸುರಗಿಯ ಚೌಂಡರಾಯನಿಗಿಂತ[1] ಪ್ರಾಚೀನನು. ಬಸವನಿಗಿವನೆಂದರೆ ಬಲು ಭಕ್ತಿ.[2] ಆರ್. ನರಸಿಂಹಾಚಾರ್ಯರು ಮತ್ತು ಹಳಕಟ್ಟಿಯವರಿಬ್ಬರೂ ಮಾದಾರ ಚೆನ್ನಯ್ಯನೊಬ್ಬ ವಚನಕಾರನೆಂದೂ ಅವನ ಅಂಕಿತವು "ಕಯ್ಯುಳಿಗತ್ತಿ ಅಡಿ ಗೂಂಟಕೆಡೆಯಾಗಬೇಡ ಅಜ ನಿಜಾತ್ಮ ರಾಮರಾಮನ" ಎಂದು ಹೇಳಿರುವರು. ಚೋಳದೇಶದಲ್ಲಿ (63 ಪುರಾತನರಲ್ಲಿ ಒಬ್ಬನಾದ[A]) ಕರಿಕಾಲಚೋಳನ ಕಾಲದಲ್ಲಿ ಇದ್ದ ಈತನು ಕನ್ನಡದಲ್ಲಿ ವಚನಗಳನ್ನು ಬರೆದಿರುವನೆಂಬುದು ಅತ್ಯಂತ ಸೋಜಿಗದ ವಿಷಯವೇ ಸರಿ. ಹರಿಹರನು ಈತನ ಮೇಲೆ ಬರೆದ ರಗಳೆಯಲ್ಲಿ ಇವನ ಮೂರು ವಚನಗಳನ್ನು ಉಲ್ಲೇಖಿಸಿದಂತಿದೆ.[3]

ಕೊಂಡಗುಳಿ ಕೇಶಿರಾಜನೊಬ್ಬ ವಚನಕಾರನಿರಬೇಕೆಂದು ಆರ್. ನರಸಿಂಹಾಚಾರ್ಯರು ಹೇಳಿದ್ದಾರೆ.[4] ಹರಿಹರನು ಇವನ ಮೇಲೆ ಬರೆದಿರುವ ರಗಳೆಯಿಂದ ಆತನು ಪೂಜಾವಸರದಲ್ಲಿ "ನಿಚ್ಚಲೆಂಟುಂ ಪದ್ಯಮಂ ಸೋಮನಾಥಂಗೆ ಅಚ್ಚರಿಮಿಗಲ್ಕೆ ಪೇಳ್ವಂ ಶಿವಾನಾಥಂಗೆ" ಎಂದು ತಿಳಿದು ಬರುವುದು.

---

1. ಹರಿಹರನು ಬರೆದಿರುವ ಸುರಗಿಯ ಚಾಂಡರಾಯನ ರಗಳೆಯಲ್ಲಿ ಸುರಗಿಯ ಚಾಂಡರಾಯನು ಮಾದರ ಚೆನ್ನನನ್ನು ಪ್ರಸ್ತಾಪಿಸಿದ್ದಾನೆ: "ಚೆನ್ನನ ಮನೋಹರನೆ ಆರೋಗಿಸಲೆ ದೇವ, ಕನ್ನೆಯ ಮನೋರಥನೆ ಆರೋಗಿಸಲೆ ದೇವ" (O. R. I. K 358, ಗರಿ 86). 2. "ಶಿವಪಥವನಱಿಯದೆ ಓದಿದರೇನು? ಓದಿದ ಫಲವು ಮಾದಾರ ಚೆನ್ನಂಗಾಯಿತ್ತು" (ಬ. ವ. 143); "ನಡೆ ಚೆನ್ನ, ನುಡಿ ಚೆನ್ನ! ಎಲ್ಲಿ ನೋಡಿದಡೆ ಚೆನ್ನ! ಪ್ರಮಥರೊಳಗೆ ಚೆನ್ನ, ಪುರಾತರೊಳಗೆ ಚೆನ್ನ! ಸವಿನೋಡಿ ಅಂಬಲಿಯು ರುಚಿಯಾಯಿತೆಂದು, ಕೂಡಲಸಂಗಮದೇವಂಗೆ ಬೇಕೆಂದು ಕೈದೆಗೆದ ನಮ್ಮ ಚೆನ್ನ" (ಬ. ವ. 794). A ಶಿವತತ್ವ ಚಿಂತಾಮಣಿ 35–62. ಶಿವನಿಂದ ಹೊನ್ನಮಳೆ ಕರೆಸಿದವನಿವನೇ; ಬ.ವ. 503, 682, 740, 760. 3. ಅರಮನೆಯ ಚಾರರೇ? ತಾನೇಕೆ ಶಂಕರ? ಅರಸನೇಕೆನ್ನ ಮನೆಯೇಕೆ ಶಶಿಶೇಖರಾ? ಭಕ್ತನೆಂದಱಿಯದಿರ್ದೊಡೆ ಲೇಸು ಬದುಕುವೆಂ! ಶಿವ ಶಿವಾ ಮಹಾದೇವ ಶಿವಕೆ ಏನಪ್ಪುದೋ? ಶಿವನೆ ಬಲ್ಲಂ ವಿಚಾರಿಪೊಡೆ ಏನಪ್ಪುದೋ? ಅವಿಚಾರದಿಂದಿಂತು ಮಾಳ್ಪರೇ ಪುರಹರ? (ಚೆ. ರ.ಸಂ : ಶ್ರೀ. ಹಳಕಟ್ಟಿ); "ಏನಯ್ಯ ಚೋಳನೃಪ, ನೀನಿಂತು ಬರ್ಪರೇ? ಭಾನುಕುಲ ದರ್ಪಣನೆ ನೀನಿಂತು ಬರ್ಪರೇ? ಎನ್ನ ಕುಲಮಂ ನೋಡದಿಂತು ಬರ್ಪರೆ ಚೋಳ? ಎನ್ನ ಜಾತಿಯನಱಿಯದಿಂತು ಮಾಳ್ಪರೆ ಚೋಳ? ರಾಜ್ಯಾಂತರಂ ನರಕವೆಂಬುದಿಲ್ಲದ ಚೋಳ, ಪೂಜ್ಯನಮರಾಳಿಯೊಳಗೆನಿಸಿ ಬರ್ದುಕುವ ಚೋಳ" (ಅದೇ.); "ಕಂಡಯ್ಯ ನೀನಿಂತು ದೂರುವರೆ ಪೇಳುತಂ? ಚೋಳನಿಂ ಪಿಡಿಸಿತರಲ್ ತಪ್ಪು ಮಾಡಿದೆನೆ? ಪೇಳಯ್ಯ ನಿಮ್ಮಲ್ಲಿ ಪದವಿಯಂ ಬೇಡಿದೆನೆ? ಅಱಿಯದಂಬಲಿಯನರ್ಪಿಸಿದೊಡಿಂತಿರಿವರೆ? ಹೆರೆಸೂಡಿದನೆ ತೋರಿ ಮಾರಿ ನೆರೆ ದೂರುವರೆ? ಮೇದಿನಿಗೆ ಬೀದಿಗರುವಾಯಿತೆನ್ನಯ ಭಕ್ತಿ? ವಾದಕ್ಕೆ ಹರಲೆಯುಂ ತಂದಿಕ್ಕಿತೀ ಭಕ್ತಿ! ಇನ್ನಿಳೆಯೊಳಿರೆ!" (ಅದೇ). 4. (ಕ.ಕ.ಚ. ಭಾಗ I. ಪುಟ 185.)

ಹರಿಹರನು ಇವನ ಪದ್ಯಗಳ ಬಗ್ಗೆ ಬಹಳ ಮೆಚ್ಚಿ ಮಾತನಾಡಿದ್ದಾನೆ[1]. ಆದ್ದರಿಂದ ಈತನು ಪದ್ಯಗಳನ್ನು ಬರೆದಿರುವನೆಂಬುದೇನೋ ಖಚಿತ. ಇವನೊಂದು ಪಕ್ಷ ವಚನಗಳನ್ನು ಬರೆದಿದ್ದರೆ ಅವುಗಳ ಅಂಕಿತ "ಸೋಮನಾಥ," "ಸೌರಾಷ್ಟ್ರದೊಡಯ ಸೋಮನಾಥ" ಅಥವಾ "ಸೊಡ್ಡಳ ಪ್ರಭು" ಎಂದಿರಬೇಕು. ಏಕೆಂದರೆ ಇವನ ಪ್ರಾಣನಾಥ ಆರಾಧ್ಯದೈವವು "ಸೋಮನಾಥ"ನು. ಹರಿಹರನು ಇವನ ಮೇಲೆ ಬರೆದ ರಗಳೆಯಲ್ಲಿ ಇವನ ಆರು ವಚನಗಳನ್ನೋ ಪದ್ಯಗಳನ್ನೋ ಉಲ್ಲೇಖಿಸಿದಂತಿದೆ.[2] ಪಾಲ್ಕುರಿಕೆ ಸೋಮನಾಥನು ವಚನ

---

1. "ಪಂಚಾಕ್ಷರಾನುಬಂಧಂ ಛಂದವನುವಾಗೆ, ಪಂಚಮುಖನಾಮದಭಿಧಾನ ಬುದ್ಧಿಯದಾಗೆ, ಶಿವವಾಕ್ಯಶಬ್ದಶುದ್ಧಿವ್ಯಾಕರಣಮಾಗೆ, ಶಿವಭಕ್ತಿ ವೃತ್ತಕ್ಕಲಂಕಾರದಂತಾಗೆ, ಪದ್ಯಂಗಳಂ ಶಿವಂಗನುದಿನಂ ಪೇಳುತಂ, ಚೋದ್ಯವೆನೆ ಶಂಕರಸ್ತೋತ್ರದೊಳೆ ಬಾಳುತಂ ಇರಲ್" (ಕೇ. ರಾ. ದ. ರ. ಸಂ: ಹಳಕಟ್ಟಿ). 2. "ಸಿರಿಯ ಸಂಗಂ ಶರಣಸಂಗಕ್ಕೆ ಪಗೆಯಾಯ್ತು, ನರಸೋಲಗದಪರಾಧವು ಮರುಳು ಮಾಡಿತ್ತು. ಅಯ್ಯಯ್ಯ ಸೋಮನಾಥಯ್ಯ ಕರುಣಿಪುದೆನಗೆ, ಅಯ್ಯಲಾ ಶರಣಸದ್ಗೋಷ್ಠಿಯಂ ಕರುಣಿಪುದು, ದೇವ ಕಲ್ಯಾಣದಧಿದೈವ ತ್ರಿಪುರಾಂತಕ ದೇವ, ಮನ್ಮದ ದರ್ಪಮಥನ ದುರಿತಾಂತಕ! ಸಿರಿ ಹಾರಿ ಹೋಗಿ ನಿಮಗರ್ಚನೆಯ ಮಾಡುವೆಂ ಶರಣತತಿಪುರಜನಂ ಮೆಚ್ಚಿ ಕೊಂಡಾಡುವೆಂ" (ಅದೇ). "ಅಸಮಾಕ್ಷನೊಲಿಯೆ ಪಾಪವೇ ಪುಣ್ಯವದು, ಒಸೆದು ನೀನೊಲಿದಂಗನೀತಿಯೇ ನೀತಿಯದು, ಅಕಾರ್ಯವೇ ಕಾರ್ಯವಕ್ರಮಂ ಕ್ರಮವೆಯದು, ದುಃಕುಲಂ ಸತ್ಕುಲವಧರ್ಮವೆ ಧರ್ಮವದು" ಎಂದು ಪದ್ಯವನೋದಿ (O. R. I. K. 358, ಹರಿಹರನ ತೆಲುಗುಜೊಮ್ಮಯ್ಯನ ರಗಳೆ, ಗರಿ 110). "ಕೇಳರಸ, ನಿನ್ನ ಸಿರಿ ನಿನಗಿಕ್ಕೆ ನಿಸಿಗಿಕ್ಕೆ, ಶೂಲಿಯಣುಗರಸಂಗ ಸಂಪದವದೆನಗಕ್ಕೆ, ಒಲ್ಲೆನೊಲ್ಲೆಂ ತೆಗೆ, ಇದೇಕೆ ಬೇಡೆಂದೆನುತೆ, ಒಲ್ಲೆನೊಲ್ಲೆಂ ಭಕುತಿ ಸಿರಿಗೆ ಸರಿಯಲ್ಲೆನುತೆ" (ಕೇ. ರಾ. ದ. ರಗಳೆ ಸಂ: ಹಳಕಟ್ಟಿ), "ಹಾ ಸಿರಿಯಂ ಹಾರಿಸಿ, ಭವಿಗಳಂ ಮೀರಿಸಿ, ಸತ್ಯಶರಣರ ತೋರಿಸಿ, ಸಂಗಸುಖಲತೆಯಂ ಬೇರೂರಿಸಿ ಕರುಣಿಸಿದ ಕಂತುಮದಹರ ಸೌರಾಷ್ಟ್ರದೊಡೆಯ ಸೋಮೇಶತಂದೆ ಸೋಮನಾಥ, ಸೊಡ್ಡಳ ಪ್ರಭುವೆ" (ಅದೇ), "ಇನ್ನೊಂದವಧರಿಸಿರೇ ಎನ್ನ ಭಾಷೆಯಂ: ಪನ್ನಗಾಭರಣ ನೊಡಗೂಡುವ ನಿರಾಸೆಯಂ, ನೀವೆಲ್ಲರಾಯುಸಂಗೊಳ್ಳುದೆನಗದು ಬೇಡ; ದೇವನೊಲವಿಂ ಮೆಚ್ಚಲಿಂತು ಮಾಳ್ಪೆಂ ನೋಡ. ಒಂದು ಹರಿಗೋಲ ನಾನೀ ತಡಿಯೊಳಿಕ್ಕುವೆಂ, ಮುಂದೆಯಾ ಕಡೆಗೆ ಭರದಿಂ ಥಾಳಿಯಿಕ್ಕುವೆಂ, ನಡುವೆ ಬಾರದೆ ನಿಲಲು ಬೇಡಿ ಕೊಂಬೆಂ ಬಳಿಕ ಪೊಡವಿಗತ್ಯದ್ಭುತಂ ಮಾಡಿ ತೋರ್ಪೆಂ ಬಳಿಕ" (ಅದೇ), "ಮತ್ತೊಂದು ದೈವಮುಂಟೆಂಬುದಂ ಬಗೆದೊಡಂ, ಮತ್ತೊಂದು ಸಮಯಮುಂಟೆಂದು ತಾಂ ನುಡಿದೊಡಂ, ಎನ್ನ ಸತಿಯಲ್ಲದನ್ಯಕ್ಕೆಳಸಿ ನಿಂದೊಡಂ, ನಿನ್ನ ವರ್ಗಳಲ್ಲದನ್ಯರ್ಗಿನಿತನಿತ್ತೊಡಂ, ನುಡಿವಲ್ಲಿ ಸತ್ಯವಲ್ಲದೆ ಬೇರೆ ನುಡಿದೊಡಂ, ನಡೆವಲ್ಲಿ ನಾ ದುರಾಚಾರದಿಂ ನಡೆದೊಡಂ, ಮನಸಿನೊಳ್ ನೀನಲ್ಲದನ್ಯವಂ ನೆನೆದೊಡಂ, ಕನಸಿನೊಳ್ ನೀನಲ್ಲದನ್ಯವಂ ಕಂಡೊಡಂ ಇದು ದಿಬ್ಯ" ಮೆಂದೆನುತೆ ಹರಿಗೋಲನೇರಿದಂ (ಅದೇ), "ಸೋಮ

ಕಾರರ ಜೊತೆಗೆ ಅವನನ್ನೂ ಹೆಸರಿಸಿ ಅವರೆಲ್ಲರ ಗೀತೆಗಳನ್ನು ಗಾಯಕರು ಹಾಡುತ್ತಿದ್ದರೆಂದಿರುವುದರಿಂದ[1] ಕೊಂಡಗುಳಿ ಕೇಳಿರಾಜನು ವಚನಗಳನ್ನೂ ಬರೆದಿರುವನೆಂಬುದು ಸಂಭಾವ್ಯ.

ಈ ಪುಟದ ಅಡಿ ಟಿಪ್ಪಣಿಯಲ್ಲಿ ಕೊಟ್ಟಿರುವ ಪಂಡಿತಾರಾಧ್ಯ ಚರಿತ್ರದ ಉಲ್ಲೇಖದ ಆಧಾರದಿಂದ ಕಕ್ಕಯ್ಯನೂ ವಚನ ಕಾರನೆಂಬುದರಲ್ಲಿ ಯಾವ ಸಂಶಯವೂ ಇಲ್ಲ. ಡೋಹಾರಕಕ್ಕಯ್ಯನ ಬಗ್ಗೆ ಬಸವಣ್ಣನವರಿಗೆ ಅಪರಿಮಿತ ಭಕ್ತಿ. ಕಕ್ಕಯ್ಯನು ಮಾದರ ಚೆನ್ನಯ್ಯ ಮತ್ತು ಶ್ವಪಚಯ್ಯರಿಬ್ಬರಿಗಿತಲೂ ಕಿರಿಯನೆಂದು ಬಸವಣ್ಣನವರ ವಚನ ಒಂದರಿಂದ ನಿರ್ಧರಿಸಬಹುದು[2]. ಶಿವ ನಾಗಮಯ್ಯ (ಸಂಬಳಿನಾಗಿ ದೇವ)ನ ಮಹಿಮೆಯನ್ನು ಬಿಜ್ಜಳನಿಗೆ ವಿಸ್ತರಿಸುವ ಸಂದರ್ಭದಲ್ಲಿ ಬಸವಣ್ಣನವರು ಈ ಕಕ್ಕಯ್ಯನ ಕಥೆಯನ್ನು ಅವನಿಗೆ ಹೇಳಿ ಶಿವ ಭಕ್ತರು ಮಹಿಮಾಶಾಲಿಗಳೆಂದು ಸ್ಥಾಪಿಸಿದಂತೆ ಪಾಲ್ಕುರಿಕೆ ಸೋಮನಾಥ ನಿಂದ[3] ತಿಳಿದು ಬರುವುದು. ಶಿವನು ಕಕ್ಕನ ಕಂಕರಿಗೆ ಆಡಿದಂತೆ ಹರಿಹರನು ಭೃಂಗೀಶ್ವರನ ರಗಳೆಯಲ್ಲಿ ಹೇಳಿದಾನೆ. ಹಳಕಟ್ಟಿಯವರು ತಮ್ಮ ಪಟ್ಟಿ ಯಲ್ಲಿ "ಅಭಿನವಚೆನ್ನಮಲ್ಲಿಕಾರ್ಜುನ" ಎಂಬ ಅಂಕಿತವನ್ನು ಕೊಟ್ಟು ಅದು ಕಕ್ಕಯ್ಯನದೆಂದಿದಾರೆ.

ಹೀಗೆ ಇವರೆಲ್ಲ ಜೇಡರದಾಸಿಮಯ್ಯನಿಗಿಂತ ಹಿಂದೆ ಇದ್ದು ಗದ್ಯ (=ವಚನ ?) ಪದ್ಯಗಳನ್ನು ರಚಿಸಿದ ಶಿವಶರಣರೂ, ಜೊತೆಗೆ ಜೇಡರದಾಸಿ-ಮಯ್ಯನ ಸಮಕಾಲೀನರೆಂದು ವೀರಶೈವ ಪುರಾಣಗಳಿಂದ ತಿಳಿದು ಬರುವ ಶಂಕರದಾಸಿಮಯ್ಯ, ಢಕ್ಕೆಯ ಮಾರಯ್ಯಗಳೂ ಬಸವ ಮತ್ತು ಅಲ್ಲಮಪ್ರಭು ವಿಗಿಂತ ಹಿಂದಿದ್ದವರೇ ಆದಂತಾಯಿತು.

---

ನಾಥ, ಬಾರೈ ಬಾರ! ಮೃಡಭಕ್ತಭೀಮಭಾಳಾಕ್ಷ ಬಾರೈ ತಂದೆ! ಎನ್ನ ಸುಖನಿಧಿಯೆ ಕಾಡದೆ ಕರುಣಿಸೆಲೆ ತಂದೆ! ಚಂದ್ರಧರ ಮದನಹರ, ನಿನ್ನ ಮೊಗಮಂ ತೋರ! ಇಂದ್ರಾದಿ ಸುರನಿಕರವಂದ್ಯ ಪದಮಂ ತೋರ! ತೋರದಿರ್ದಡೆ ನಿಲುವನಲ್ಲ" (ಅದೇ).

1. "........ಬಸವಯ್ಯ, ಸೊಡ್ಡಲಬಾಚಯ್ಯ, ಚೆನ್ನಬಸವಯ್ಯ, ಮಡಿವಾಲು, ಪ್ರಭುವು, ಸತ್ತೇಶು ಚಾಮಯ್ಯ, ಯಜಗನ್ನ, ಸಕಲೇಶ, ಸಿದ್ಧರಾಮಯ್ಯ, ಯಕ್ಕಗಾರ್, ಕಲ್ಲಿ ದೇವಯ್ಯ, ದಾಸಯ್ಯ, ಶಂಕರದಾಸಯ್ಯ, ದಾಸಕೇಸಯ್ಯ, ಗಕ್ಕಯ್ಯ ಗೇಶಿರಾಜಯ್ಯ, ಮಸನಯ್ಯ, ಸಿಕ್ಕಯ್ಯ, 'ಮಾದಿರಾಜಯ್ಯಯಸಲಾರ ಮಱಿಯು ಶೈವಾಢ್ಯುಲೈನಟ್ಟಿ ಸಕಲ ಪುರಾತನ ಸದ್ಭಕ್ತ ಗೀತನಿಕರಮುಲ್ ಗಾಯಕನಿಕರಮುಲ್‌ವಾಡ" (ಪಂ.ಆ.ಚ. 1=512-516). 2. "ಹಿರಿಯಯ್ಯ ಶ್ವಪಚಯ್ಯ, ಕಿಱಿಯಯ್ಯ ಡೋಹಾರಕಕ್ಕಯ್ಯ, ಗೆಳಯ್ಯನು ನಮ್ಮ ಮಾದಾರ ಚೆನ್ನಯ್ಯನು! ಕೂಡಲಸಂಗಮದೇವಾ ನಿಮ್ಮ ಶರಣರೊಲಿ ದೆನ್ನ ಸಲಹುವರಾಗಿ" (ಬ ವ. 350). 3. ಬಸವ ಪುರಾಣಮು ಸಂ: ಬಂಡಾರು ತಮ್ಮಯ್ಯಗಾರು, ಪುಟ 521

ಈ ಶಂಕರದಾಸಿಮಯ್ಯನು ಜೇಡರದಾಸಿಮಯ್ಯನಿಗೆ ಅಹಂಕಾರ ತಲೆದೋರಿದಾಗ ಬುದ್ಧಿಗಲಿಸಿದಂತೆಯೂ, ಆ ಶಂಕರದಾಸಿಮಯ್ಯನಿಗೆ ಹಮ್ಮು ಕುಡಿವರಿದಾಗ ಅದನ್ನು ಢಕ್ಕೆಯ ಮಾರಯ್ಯನು ಚಿವುಟಿದ ಹಾಗೂ ತಿಳಿದು ಬರುವುದು.[1] ಹರಿಹರನು ಉಡುತಡಿಯ ಅಕ್ಕಮಹಾದೇವಿಯನ್ನು 'ಸಾಹಿತ್ಯನಿಧಿ' ಎಂದಂತೆ, ಕೊಂಡಗುಳಿಯ ಕೇಶಿರಾಜನನ್ನು 'ಸಾಹಿತ್ಯ ಸಾರ್ವಭೌಮ' ಎಂದಂತೆ, ಶಂಕರದಾಸಿಮಯ್ಯನನ್ನೂ "ಸಾಹಿತ್ಯಭೂಷಣ" ಎಂದು[2] ವಿಶೇಷಿಸಿರುವುದರಿಂದ ಈತನೂ ಗದ್ಯ (=ವಚನ) ಪದ್ಯಗಳನ್ನು ರಚಿಸಿರಬೇಕು.[A] [3]ಈ ಶಂಕರದಾಸಿಮಯ್ಯನು ಮೊದಲಿಗೆ ವಿಪ್ರಕುಲಾರ್ಕನಾಗಿದ್ದನು. ಆಗ ಇವನಿಗೆ 'ಗೋವಿಂದ' ಎಂಬ ಹೆಸರಿತ್ತು. ಊರು ಕಂದ ಶಿಲೆ. ನವಿಲೆಯ "ಜಡೆಯ ಶಂಕರದೇವ" ರಿಂದ ಈತನಿಗೆ ಮತ್ತು ಈತನ ಸತಿಯಾದ ಅಮ್ಮವ್ವೆಗೆ ಉಪದೇಶವಾಗಲು ಗೋವಿಂದ ದೇವನು "ಶಂಕರದಾಸಯ್ಯ"ನಾದ, ಅಮ್ಮವ್ವೆಯು "ಶಿವದಾಸಿ"ಯಾದಳು. ಹಳಕಟ್ಟಿಯವರು ಈತನ ವಚನಾಂಕಿತವು "ನಿಜಗುರು ಶಂಕರದೇವ" ಎಂದು ಕೊಟ್ಟಿದ್ದಾರೆ. ಈತನು ನವಿಲೆ, ಮುದನೂರು, ಕಲ್ಯಾಣ, ಪಿಂಬೇರ ಎಂಬೆಡೆಗಳಲ್ಲಿ ಪ್ರವಾಸಮಾಡಿ ಮರಳಿ ತನ್ನ ಪ್ರಾಣನಾಥ ಆರಾಧ್ಯ ದೈವವಾದ "ಜಡೆಯಶಂಕರ"ನ ನೆಲೆಯಾದ ನವಿಲೆ ಅಥವಾ ಮಯೂರಪುರದಲ್ಲಿ ನೆಲಸಿದನು.[3] ಢಕ್ಕೆಯ ಮಾರಯ್ಯನು ವಚನಕಾರನೆಂಬುದಕ್ಕೆ ಆಧಾರಗಳಿಲ್ಲ.

ಜೇಡರ ದಾಸಿಮಾರ್ಯನ ಹೆಂಡತಿಯಾದ ದುಗ್ಗಳೆಯೂ ವಚನಕಾರೆಳಿದ್ದಿರಬಹುದು. ಬಸವಣ್ಣನವರ ಪತ್ನಿಯಾದ ನೀಲಾಂಬಿಕೆಯು "ಬಸವಪ್ರಿಯ ಕೂಡಲಸಂಗಮದೇವ" ಎಂಬ ಅಂಕಿತವನ್ನು ತನ್ನ ವಚನಕ್ಕಿಟ್ಟುಕೊಂಡಿರುವಂತೆ, "ರಾಮನಾಥ" ಎಂಬ ಅಂಕಿತದ ಜೇಡರದಾಸಿಮಯ್ಯನ ಪತ್ನಿ ದುಗ್ಗಳೆಯು ತನ್ನ ವಚನಕ್ಕೆ "ದಾಸಯ್ಯ ಪ್ರಿಯ ರಾಮನಾಥ" ಎಂದು ಇಟ್ಟುಕೊಂಡಿರಬಹುದು. ಇಂಥ ಒಂದು ಅಂಕಿತವನ್ನು ಹಳಕಟ್ಟಿಯವರು ತಮ್ಮ ವಚನಶಾಸ್ತ್ರಸಾರದ "ಬ" ಪರಿಶಿಷ್ಟದಲ್ಲಿ ಕೊಟ್ಟು ಅದರ ಕರ್ತೃ

---

1. ಹರಿಹರನ ಶಂಕರದಾಸಿಮಯ್ಯನ ರಗಳೆ, ಸಂ: ಹಳಕಟ್ಟಿ; ಬಸವ ಪುರಾಣಮು. ಸಂ: ಬಂಡಾರುತಮ್ಮಯ್ಯಗಾರು, ಪುಟ 257–266; ಮತ್ತು ಗುಬ್ಬಿ ಮಲ್ಲಣಾರ್ಯನ ವೀರಶೈವಾಮೃತಪುರಾಣ 4–2–34. ಗುರುರಾಜಚಾರಿತ್ರ 8=56–61
2. ಶಂಕರದಾಸಯ್ಯನ ರಗಳೆ: ಸಂ. ಶ್ರೀ ಹಳಕಟ್ಟಿ. A ಈತನು ವಚನ (ಗೀತೆ) ಗಳನ್ನೂ ಬರೆದಿರುವನೆಂಬುದರಲ್ಲಿ ಸಂಶಯವಿಲ್ಲ; 6 ನೇ ಪುಟದ 1 ನೇ ಟಿಪ್ಪಣಿ ನೋಡಿ.
3. ಶಂಕರದಾಸಿಮಯ್ಯನ ರಗಳೆ. ಸಂ: ಶ್ರೀ ಹಳಕಟ್ಟಿ.

ಗೊತ್ತಿಲ್ಲವೆಂದಿದಾರೆ. ಬಹುಶಃ ಈ "ಧ್ರಾಸಯ್ಯ ಪ್ರಿಯ ರಾಮನಾಥ" ಎಂಬ ಅಂಕಿತವು ಜೇಡರ ದಾಸಯ್ಯನ ಪತ್ನಿ ದುಗ್ಗಳೆಯದೇ ಇರಬೇಕು.

ಕೊಂಡಗುಳಿ ಕೇಶಿರಾಜನ ಸಮಕಾಲೀನನೆಂದು ತಿಳಿದು ಬರುವ ತೆಲುಗು ಜೊಮ್ಮಯ್ಯನೂ ವಚನಕಾರನಿರಬೇಕು. ಹರಿಹರನು ತನ್ನ ತೆಲುಗು ಜೊಮ್ಮಯ್ಯನ ರಗಳೆಯಲ್ಲಿ ಜೊಮ್ಮಯ್ಯನ ಕೆಲವು ವಚನಗಳನ್ನು ಉಲ್ಲೇಖಿಸಿದಂತಿದೆ.[1] ಈತನ ಪ್ರಾಣನಾಥ ಆರಾಧ್ಯ ದೈವವು "ಭೀಮನಾಥ" ಎಂದು ಹರಿಹರನ ಆ ರಗಳೆಯಿಂದಲೇ ತಿಳಿದುಬರುವುದಲ್ಲದೆ, ಉಲ್ಲೇಖಿಸಿರುವ ಅವನ ವಚನಗಳಲ್ಲಿ ಆ "ಭೀಮನಾಥ" ಎಂಬ ಅಂಕಿತವೇ ಇದೆ. ಆದರೆ ಆರ್. ನರಸಿಂಹಾಚಾರ್ಯರೂ ಹಳಕಟ್ಟಿಯವರೂ ತೆಲುಗು ಜೊಮ್ಮಯ್ಯನ ಅಂಕಿತವನ್ನು "ತೆಲುಗೇಶ್ವರ" ಎಂದು ಕೊಟ್ಟಿರುವರು. ಇದು ಅಸಮರ್ಥನೀಯ ಮತ್ತು ಅಸಂಭಾವ್ಯವೆಂದು ಪುರಾತನರ ವಚನಾಂಕಿತತಂತ್ರವನ್ನು ಬಲ್ಲವರಿಗೆ ಪ್ರತ್ಯೇಕವಾಗಿ ಹೇಳಬೇಕಾಗಿಲ್ಲ.

ಬಸವಣ್ಣನವರ ಹಿರಿಯ ಸಮಕಾಲೀನರಾಗಿದ್ದ ಪ್ರಭುದೇವರಿಗಿಂತಲೂ ಸುಮಾರು ಒಂದು ಶತಮಾನದಷ್ಟು ಪ್ರಾಚೀನನಾದ ಜೇಡರ ದಾಸಿಮಯ್ಯನಿಗಿಂತಲೂ ಹೀಗೆ ಹಿಂದಕ್ಕೆ ಹಲವರು ಶಿವಶರಣರೂ ವಚನಕಾರರೂ ಇದ್ದರು. ಹರಿಹರನ ರಗಳೆಗಳ ಮತ್ತು ವೀರಶೈವ ಪುರಾಣಗಳ ಆಧಾರದಿಂದ ಅವರಲ್ಲಿ ಕೆಲವರ ಹೆಸರುಗಳನ್ನು ಸ್ಥೂಲವಾಗಿ—ಕಾಲಕ್ರಮದಲ್ಲಿ ಈ ಮುಂದಿನಂತೆ ಜೋಡಿಸಬಹುದು: ಕಾಳಿದಾಸ[A]—ಬಾಣ[B]—ಮಯೂರ[C]—ಓಹಿಲ—

---

1. ಓಸರಿಸದ ಭಾಷೆವಂತಂ ಜೊಮ್ಮಯ್ಯಂ ನಿಂದಲಗಂ ಕಿತ್ತು "ಎಲೆ ದೇವ ಭೀಮನಾಥ ನಿನಗೆ ಕಟ್ಟಿದೊರೆಯವಧಾರವಧಾರೆನ್ನ ಬಿನ್ನಪಮಂ ಪರಸಮಯದ್ವೇಷದಿಂದಿರಿದೊಡಂ, ಭಕ್ತನೆಂಬ ಗರ್ವದಿಂ ಭವಿಯಂ ಕೊಂದೊಡಂ, ಕೇಳ್ದ ಪುರಾಣವೊಪ್ಪುದಲ್ಲೆಂಬ ಸಂದೇಹದಿಂ ಮಡಿಹಿದೊಡಂ, ನಿನ್ನಮೇಲೆ ಸ್ನೇಹವಿಲ್ಲದನ್ಯಾಯದಿಂ ಪ್ರಾಣಿಯಂ ನೋಯಿಸಿದೊಡಂ, ನೀನೆ ಸಾಕ್ಷಿಯಿದೆ ದಿಬ್ಯ" ವೆಂದು ಭಾಷೆಗೊಡುತ್ತಂ (O.R.I.K. 358, ಗರಿ 110) A ಈತನು ತನ್ನ ಕಣ್ಣುಗಳನ್ನು ಕಿತ್ತುಕೊಂಡು ಶಿವನನ್ನು ಗದ್ಯ (= ವಚನ ?)ದಲ್ಲಿ ಸ್ತುತಿಸಲು ಶಿವನು ಪ್ರತ್ಯಕ್ಷನಾಗಿ ಎರಡು ಕಣ್ಣುಗಳನ್ನು ಕೊಟ್ಟ. ಆಗ "ಕೊಟ್ಟಷ್ಟನ್ನೇ ಮತ್ತೆ ಕೊಟ್ಟ ಮಹಾದಾನಿ" ಎಂದು ಕಟಕಿಯಾಡಿ ಶಿವನನ್ನು ಮೆಚ್ಚಿಸಿ ರಾಶಿರಾಶಿ ಕಣ್ಣುಗಳನ್ನು ಪಡೆದು ದೇಶದೇಶಾಂತರದ ಜಾತ್ಯಂಧರಿಗೂ ಕಣ್ಣನ್ನು ಕೊಟ್ಟ ನೇತ್ರದಾನಿ ಕಾಳಿದಾಸನಿವನು (ಪಂ. ಆ. ಚಾ. 2–107), (ಬ.ವ. 519.). B ತನ್ನೆರಡು ಕೈಗಳನ್ನು ಕತ್ತರಿಸಿಕೊಂಡು ಶಿವನನ್ನು ಗದ್ಯದಲ್ಲಿ ಸ್ತುತಿಸಿ ಅವನ್ನು ಮತ್ತೆ ಪಡೆದವನಿವನು. ಆ ಶಿವಸ್ತೋತ್ರಕ್ಕೆ 'ಬಾಣಗದ್ಯ' ವೆಂದು ಹೆಸರಾಯಿತು (ಪಂ.ಆ. ಚ. 2–96). C ಮಯೂರನು ತನ್ನ ಕುಷ್ಠವನ್ನು ನಿರ್ಮೂಲ ಮಾಡಿಕೊಳ್ಳಲು ಮಾಡಿದ ಶಿವಸ್ತೋತ್ರವು "ಮಯೂರಸ್ತವ" ವೆಂದು ಪ್ರಸಿದ್ಧವಾಗಿದೆ (ಪಂ. ಆ. ಚ. 2–96). "ಬಾಣಮಯೂರರಂತೆ ಬಣ್ಣಿಸಬಲ್ಲೆನೆ?" (ಬ. ವ. 319).

ಉದ್ಭಟ— ಹಲಾಯುಧ[A]—ಮಾದಾರಚೆನ್ನಯ್ಯ-ಶ್ವಪಚಯ್ಯ— ಸಾಮವೇದಿ— ಮಳಯರಾಜ[B]–ತೇರಸರು (1ದೇವಯ್ಯ 2 ಓಹಿಳದೇವ 3 ಕನ್ನಮರಸಿ 4 ಕಾಮುಲದೇವಿ 5 ದೇವಣ್ಣ 6 ದೇವರಸ 7 ಬೊಮ್ಮಸೆಟ್ಟಿ 8 ಪಡಿಹಾರಿ ಬಸ ವಯ್ಯ[1] 9 ಬಾಚಿದೇವ[2] 10 ಬೊಪ್ಪಿದೇವಿ 11 ನಿಜಸಂಗ[3] 12 ಸಾತ್ವಿಕ ಸಂಗಯ್ಯ 13 ಸಿಂಗಿದೇವ)—ಮಾರುಡಿಗೆ ನಾಚಯ್ಯ[4]–(ಇವನ ಶಿಷ್ಯ) ದಶಗಣದ ಸಿಂಗಿದೇವ[4]–ಮುಸುಟಿ ಚೌಂಡರಾಯ–(ಇವನನ್ನು ಸ್ಮರಿಸಿರುವ) ಬಾಹೂರು ಬ್ರಹ್ಮಯ್ಯ[5]–ವಿರೂಪಾಕ್ಷದೇವರು–(ಇವರ ಶಿಷ್ಯ) ಕೊಂಡಗೂಳಿ ಕೇಶಿರಾಜ— ತೆಲುಗ ಜೊಮ್ಮಯ್ಯ–ಡೋಹಾರಕಕ್ಕಯ್ಯ–ಕೆಂಭಾವಿ ಭೋಗಯ್ಯ –ಢಕ್ಕೆಯ ಮಾರಯ್ಯ—ಶಂಕರ ದಾಸಿಮಯ್ಯ—ಜೇಡರ ದಾಸಿಮಯ್ಯ.

---

A ಈತನು ಶಿವನನ್ನು ಪೂಜಿಸುವಾಗ "ಪೊಸಗಬ್ಬಮಂ ಗದ್ಯಪದ್ಯಂಗಳಂ" ಹೇಳುತ್ತಿದ್ದಂತೆ ಹರಿಹರನು ಅವನ ಮೇಲೆ ಬರೆದಿರುವ ರಗಳೆಯಲ್ಲಿ ಹೇಳಿದ್ದಾನೆ. B ಈತನ "ಮಲಯರಾಜೀಯ" ವೆಂಬ ಸ್ತೋತ್ರಕೃತಿಯನ್ನು ಪಾಲ್ಕುರಿಕೆ ಸೋಮನಾಥನು ಪ್ರಸ್ತಾಪಿಸಿದ್ದಾನೆ. (ಪಂ. ಆ. ಚ. 2–432). 1. ಪಂಡಿತಾರಾಧ್ಯಚರಿತ್ರ ಮತ್ತು ಗುರುರಾಜಚಾರಿತ್ರ ಎರಡರಲ್ಲಿಯೂ ತೇರಸರಲ್ಲಿನ ಈತನ ಹೆಸರು ಹೀಗೇ ಇರುವುದು. ಆದರೆ ಪಂಡಿತಾರಾಧ್ಯಚಾರಿತ್ರದಲ್ಲಿ ಇದಕ್ಕೆ "ಪಣಿಹಾರಿ ಬಸವಯ್ಯ" ಎಂಬ ಪಾಠಾಂತರ ವಿದೆ (ಪಂ. ಆ. ಚಾ. 2–85, 86). 2. ಸಿದ್ಧನಂಜೇಶನು ಈತನನ್ನು "ಹೂವಿನ ಬಾಚಿದೇವಯ್ಯ"ನೆಂದು ಕರೆದಿದಾನೆ. ಪಂಡಿತಾರಾಧ್ಯ ಚರಿತ್ರೆಯಲ್ಲಿ 'ಬಾಚಿದೇವ' ಎನ್ನುವುದಕ್ಕೆ ಬದಲಾಗಿ "ಬಾಚಿದೇವಿ" ಎಂದಿದೆ. 3. ಲಕ್ಕಣ್ಣ ಮತ್ತು ಸಿದ್ಧನಂಜರು ಕ್ರಮವಾಗಿ "ನಿಜಸಂಗವ್ವೆ," "ಮೋಳಿಗೆಯ ನಿಜ ಸಂಗವ್ವೆ" ಎಂದು ಕರೆದಿದಾರೆ. ಪಂಡಿತಾರಾಧ್ಯಚರಿತ್ರೆಯಲ್ಲಿ 'ಮೈಳಿಗೆ ನಿಜಸಂಗ' 'ಮೋಳಿಗೆ ನಿಜಸಂಗ' ಎಂಬ ಪಾಠಾಂತರಗಳಿವೆ. 4. ಈತನು ತಿಲಕಾಯಕದವನೂ, ತೇರಸರ ಸಮಕಾಲೀನನೂ ಮತ್ತು ದಶಗಣದ ಸಿಂಗಿದೇವನ (ತೇರಸರಲ್ಲಿನ ಸಿಂಗಿದೇವನೂ ಇವನೂ ಬೇರೆ ಬೇರೆ) ಗುರುವೂ ಆಗಿದ್ದನೆಂದೂ, ಆತನ ಆರಾಧ್ಯದೈವ ಮಲ್ಲಯ್ಯ, ಮಲ್ಲಿಕಾರ್ಜುನ ಅಥವಾ ಮಲ್ಲಿನಾಥ ಎಂದೂ, ಹರಿಹರನು ಅವನ ಮೇಲೆ ಬರೆದಿರುವ ರಗಳೆಯಿಂದ ತಿಳಿದುಬರುವುದು. ಹರಿಹರನು ಆ ರಗಳೆಯಲ್ಲಿ ಮಾರುಡಿಗೆ ನಾಚಯ್ಯನ ಎರಡು ವಚನಗಳನ್ನೂ ಉಲ್ಲೇಖಿಸಿ ದಂತಿದೆ. ಅದರಲ್ಲಿ ಒಂದನ್ನಿಲ್ಲಿ ಉಲ್ಲೇಖಿಸಬಹುದು :—"ತೇರಸರು ನಡೆದರಾ ಕೈಲಾಸ ಪುರದತ್ತ, ನಡೆಯಲ್ಕೆ ನಾಚಿತಂದೆಗಳಲ್ಲಿ ಕಾಣುತಂ ಕಡುನೊಂದು ಮಲ್ಲಿನಾಥಂಗೆ ಬಿನ್ನ ವಿಸುತುಂ 'ದೇವ, ಆನಿದ್ದಂತೆ ತೇರಸರನೋವರೇ ? ದೇವ, ಹಿಂದುಳಿದೆಯೆನ್ನಂ ಕಳು- ಪದಿರ್ದಪಿರೆ ? ಗೆಲ್ಲವಂಗೊಂಡರಾ ತೇರಸರು ಛಲದಿಂದೆ. ಇಲ್ಲಿ ಮರುಳಾಗಿರ್ದೆನಜ್ಞಾ- ನದಿಂ ಪಿಂದೆ ಇರಲಾರೆನಿರಲಾರೆ" ಎಂದು ಪೂರುತ್ತಮಿರೆ (O.R.I. K. 358 ಗರಿ 176). ಪಳಕಟ್ಟೆಯವರ ಪಟ್ಟಿಯಲ್ಲಿ "ನಾಚಯ್ಯ ಪ್ರಿಯ ಮಲ್ಲಿನಾಥ" ಎಂಬ ಅಂಕಿತವು ದಶಗಣದ ಸಿಂಗಿದೇವಯ್ಯನನೆಂದು ಹೇಳಿರುವುದನ್ನು ಗಮನಿಸಬೇಕು. 5 ಈತನ ಆರಾಧ್ಯದೈವ ಕಲ್ಯಾಣದ ತ್ರಿಪುರಾಂತಕ O.R.I. K. 358, ಗರಿ 180.

ಇವರಲ್ಲಿ ಕೆಲವರು ಸಂಸ್ಕೃತಗದ್ಯಪದ್ಯ ರಚಕರೂ, ಹಲವರು ಕನ್ನಡ ವಚನಕಾರರೂ ಆಗಿದ್ದರು. ಇವರ ದಿವ್ಯ ಸಾಹಿತ್ಯವನ್ನೇ[1] ಬಸವಾದಿ

---

1. ಶಿವನನ್ನು ಕುರಿತು "ಜಡೆಯಿಂ ಶ್ರೀಚರಣಂಬರ ಬಣ್ಣಿಸೆ, ತಡೆಯದೆ ನೂರುಂ ಪದ್ಯಂ ರಚಿಯಿಸೆ" ಉದ್ಭಟದೇವನಿಗೆ ಕೈಲಾಸವು ನಯನಗೋಚರವಾಯ್ತು. ಹಲಾಯುಧನು ಶಿವನನ್ನು ಪೂಜಿಸಿ "ಪೊಸಗಬ್ಬಮಂ, ಗದ್ಯಪದ್ಯಂಗಳಂ ಪೇಳ್ದು" ಒಪ್ಪುತ್ತಿದ್ದ. ಓಹಿಲಯ್ಯನ ಆರಾಧ್ಯದೈವವಾದ ಸೌರಾಷ್ಟ್ರ ಸೋಮನಾಥನ ದೇವಾಲಯದಲ್ಲಿ "ಸಮಸ್ತ ಭಕ್ತಜನಭಜಿತ ಶುದ್ಧ ಸಂಕೀರ್ತನ ಸಂಯುಕ್ತ ಗಂಭೀರಧ್ವಾನ ಪುರಾತನ ಗೀತರವಂಗಳುಂ ಬುಧನಿಕರವದನೋದ್ಗತ ಮಧುರತರ ಗದ್ಯಪದ್ಯ ಸೇವ್ಯಕಾವ್ಯ ನಾಟಕಪ್ರಸಂಗಗಳುಂ" ಭೋರೆಂದೋರಂತೆ ನೆಗಳೆ ಪೂಜೆಯಾಗುತ್ತಿತ್ತು. ಕೊಂಡಗುಳಿ ಕೇಶಿರಾಜನು ಪೆರ್ಮಾಡಿರಾಯನ ಕಲ್ಯಾಣದಲ್ಲಿ "ಶಿವಗೋಷ್ಠಿಯುರ್ಬುತಿರೆ ಛಂದದೊಳ್ ಪಾಡುವ ಪುರಾತನ ಗೀತದೊಳ್ ಕರಗುತಂ....ಶಿವನ ಪದ್ಯವನೋದಿ....ಶರಣರ ಸುಗೀತಗೋಷ್ಠಿ"ಯಲ್ಲಿರುತ್ತಿದ್ದ. ಅವನು ಬಿದಿರಕಾಯಕದ ವಂಶವರ್ಧನನೆಂಬ ಶರಣನೊಡನೆ "ಮಾತುಮಾತಿಂ ಪುರಾತನರ ಗೀತವಂಕುರಿಸೆ" ಶಿವಾನುಭವಗೋಷ್ಠಿಯಲ್ಲಿದ್ದನು; ಮತ್ತು ತೆಲುಗುಜೊಮ್ಮಯ್ಯನೊಡನೆ "ಪುರಾತನ ಗೀತಗೋಷ್ಠಿಯೊಳ್" ಕುಳಿತಿದ್ದನು. ಹಾವಿನ ಹಾಳಕಲ್ಲಯ್ಯನು "ವೇದದಿಂ ಶಾಸ್ತ್ರದಿಂ ಗೀತಮಂ ಪಾಡುತಂ" ಇದ್ದ. ಕೋವೂರ ಬ್ರಹ್ಮಯ್ಯನೂ ಮಾರುಡಿಗೆಯ ನಾಚಿತಂದೆಯೂ ಪುರಾತನರ ಗೀತದೊಳ್ ಬಾಳುತ್ತಿದ್ದರು. ಬಾಹೂರ ಬ್ರಹ್ಮಯ್ಯನು ಪೆರ್ಮಾಡಿರಾಯನ ಕಲ್ಯಾಣದಲ್ಲಿ "ತ್ರಿಪುರಾಂತಕ ಪ್ರಭುವನಾನಂದದಿಂ ಕಂಡು ತಾಳಮಂ ಕೊಂಡು ನಾದಪ್ರಿಯನುರೆ ಪಾಡಿ, ಆಳಾಪದಿಂ ಪುರಾತನರ ಗೀತಮಂ" ಪಾಡಿದ. ಬಸವನು ಶರಣರೊಡನೆ "ಲಿಂಗಾರ್ಚನೆಯಂ ಮಾಡಿ ಪ್ರಸಾದಭರಿತ ಪ್ರಮೋದಹೃದಯ ನಾಗುತಂ, ಅಂದಿನದಿನದಲವರಂ ಪಿಂಗಲಾಜಿದೆ ಪುರಾತನರ ಗೀತಗೋಷ್ಠೀರಸತರಂಗಿಣಿಯೊಳು ಬೆಳಗಪ್ಪನ್ನ ವೀಸಾಡಿ"ದ. ಬಸವನ ಮಗನಾದ ಸಿದ್ಧರಸನನ್ನು ತೊಟ್ಟಿಲಲ್ಲಿ ಮಲಗಿಸಿ "ಪುರಾತನರ ಗೀತದಿಂ ಜೋಗುಳಂಬಾಡಿ" ಸಲಹುತ್ತಿದ್ದರು. ಕಳಿಂಗ ದೇಶದ ಮಹದೇವಶೆಟ್ಟಿ ಎಂಬ ಶರಣನು ಲಿಂಗಾರ್ಚನಾತತ್ಪರನಾಗಿದ್ದಾಗ, ಒಂದು ದಿನ, "ಓರ್ವ ಮಾಹೇಶ್ವರಂ ಪುರಾತನವಿರಚಿತಗದ್ಯಪದ್ಯಂಗಳಂ ಕೇಳಿಸುತ್ತಂ, ಬಸವರಾಜನ ಗೀತದೊಳು_ಬೇಡಿಬೇಡಿದ ಶರಣಂಗೆ ನೀಡದಿರ್ದಡೆ ತಲೆದಂಡ ಕೂಡಲಸಂಗ, ಅವಧಾರು ಎಂಬ ಗೀತಮಂ" ಪಾಡಿದನು. ಬಸವಣ್ಣನವರು ಆದ್ಯರ ವಚನದ ಬಗ್ಗೆ ತಮ್ಮ ಮತ್ತು ಅವರ ಗೀತದ ಬಗ್ಗೆ ಏನೆಂದುಕೊಂಡಿದ್ದಾರೆನ್ನುವುದು ಈ ವಿಷಯದ ಬಗ್ಗೆ ಬಹಳ ಬೆಳಕನ್ನು ಚೆಲ್ಲುವುದು. ಅವರ ಮುಂದಿನ ಉಲ್ಲೇಖಗಳನ್ನು ನೋಡಿ: "ಆದ್ಯರ ವಚನ ಪರುಷ ಕಂಡಯ್ಯ! ಸದಾಶಿವನೆಂಬ ಲಿಂಗವನೆಚ್ಚಿನಂಬುವುದು. ನಂಬಲೊಡನೆ ನೀ ವಿಜಯಿ ಕಂಡಯ್ಯ! ಅಧರಕ್ಕೆ ಕಹಿ, ಉದರಕ್ಕೆ ಸಿಹಿ; ಕೂಡಲಸಂಗನ ಶರಣರ ವಚನ ಬೇವ ಸವಿದಂತೆ! (ಬ.ವ. 171)ಆದ್ಯರ ವಚನ ಪರುಷವೆಂದೆಂಬೆನು. ಆ ಪರುಷವೆನಗೆಂತು ದೊರಕೊಂಬುದಯ್ಯ ತನು-ಮನ-ಧನವ ವಿವರಿಸಿ ನುಡಿವೆ; ಸೋಂಕಿಗೆ ಸೈರಿಸಲಾರೆ, ಹೊಲೆಯರ ಮದ್ದಳೆಯಂತೆ ನುಡಿವ ಡಂಭಕನಾನಯ್ಯ, ಕೂಡಲಸಂಗಮದೇವ (ಬ. ವ. 312). ಆದ್ಯರ ವಚನ ಆದ್ಯರಿಗಾಯಿತ್ತು. ವೇದ್ಯರಿಗಲ್ಲದೆ ಸಾಧ್ಯವಾಗದು. ಕೂಡಲಸಂಗಮದೇವ, ನಿಮ್ಮ ಅನುಭಾವದಿಂದ ಎನ್ನ ಭವ ನಾಸ್ತಿಯಾಯಿತ್ತು

ಪ್ರಮಥರು 'ಆದ್ಯರ ವಚನ' ವೆಂದು[1] ಭಕ್ತಿಯಿಂದ ಕೊಂಡಾಡಿರುವುದು. ಈ "ಆದ್ಯರ ವಚನ" ಸಾಹಿತ್ಯವು ಕ್ರಿ. ಶ. 9–10 ಶತಮಾನದಷ್ಟು ಹಿಂದಿನದು. ಈಗ ನಮಗೆ ಉಪಲಬ್ಧವಿರುವ ಎಷ್ಟೋ ವಚನಗಳು ಪಂಪನ ಸಾಹಿತ್ಯಕ್ಕಿಂತ ಪ್ರಾಚೀನವೆಂದಾಗ ಯಾರಾದರೂ ಹುಸಿನಗುವನ್ನು ನಕ್ಕರೆ ಅವರಿಗೆ ನವನವೋನ್ಮೇಷಿತ ಸತ್ಯವಿಚಾರಗಳನ್ನು ಸ್ವಾಗತಿಸುವ ಪ್ರಗತಿಪರ ದೃಷ್ಟಿಯಿಲ್ಲವೆನ್ನಬೇಕಾಗುವುದು. ಜನಸಾಮಾನ್ಯದ ಜಾಗೃತಿಗಾಗಿ ಬಳಕೆಯ ಮಾತಿನಲ್ಲಿ ಬರೆದ ಸರಳ ಶೈಲಿಯ ಒಂದು ಕಾಲದ ಸಾಹಿತ್ಯವನ್ನು, ಅದೇ ಕಾಲದಲ್ಲಿ ಪಂಡಿತಮಂಡಲಿಯ ಮೆಚ್ಚುಗೆಗಾಗಿ ಆಡಂಬರದ ಕ್ಲಿಷ್ಟಶೈಲಿಯಲ್ಲಿ ಬರೆದ ಸಾಹಿತ್ಯದೊಡನೆ ಹೋಲಿಸಿ, ಮೊದಲನೆಯದು ಈಚಿನದೆಂದೂ, ಎರಡನೆಯದೇ ಪ್ರಾಚೀನವೆಂದೂ ಭ್ರಮೆಗೊಳ್ಳಬಾರದು.

ಇಷ್ಟು ಪ್ರಾಚೀನವಾದ ಗದ್ಯ-ಪದ್ಯ, ಆದ್ಯರ ವಚನ, ಪುರಾತನರ ಗೀತ ಇವುಗಳ ಸ್ವರೂಪವನ್ನೂ ಪರಸ್ಪರ ಸಾಮ್ಯ ಸಂಬಂಧವನ್ನೂ ವಿಚಾರಿಸುವುದು ಫಲಪ್ರದ.

ಕಾಳಿದಾಸಗದ್ಯ ಮತ್ತು ಬಾಣಗದ್ಯಗಳು ಸ್ತೋತ್ರ ಸಾಹಿತ್ಯದಲ್ಲಿ ಬಹಳ ಪ್ರಚಲಿತವಾಗಿದ್ದವೆಂದು ತಿಳಿದುಬರುವುದು[2]. ಈ ಬಗೆಯ ಗದ್ಯ ಹೇಗಿತ್ತೆಂಬುದನ್ನು ಕಲ್ಪಿಸಿಕೊಳ್ಳುವ ಅನುಕೂಲಕ್ಕಾಗಿ ಶ್ರೀ ರಾಮಾನುಜಾಚಾರ್ಯರ ಶರಣಾಗತಿಗದ್ಯ, ವೈಕುಂಠಗದ್ಯ, ಶ್ರೀರಂಗಗದ್ಯಗಳು ಪ್ರಸಿದ್ಧ ನಿದರ್ಶನಗಳು. ಶರಣಾಗತಿಗದ್ಯದ ಒಂದು ನುಡಿಯನ್ನು ಮುಂದೆ ಉಲ್ಲೇಖಿಸಲಾಗಿದೆ:

---

(ಬ. ವ. 842) ಹಾಲತೊಱೆಗೆಬೆಲ್ಲದ ಕೆಸಱು, ಸಕ್ಕರೆಯ ಮಳಲು, ತವರಾಜದ ನೊರೆತೆರೆಯಂತೆ ಆದ್ಯರವಚನವಿರಲುಬೇಱೆ ಭಾವಿಯ ತೋಡಿ ಉಪ್ಪುನೀರನುಂಬವನ ವಿಧಿಯಂತೆ ಆಯಿತ್ತೆನ್ನ ಮತಿ ಕೂಡಲಸಂಗಮದೇವ (ಬ. ವ. 290) ಎನ್ನ ಕಾಯವ ದಂಡಿಗೆಯ ಮಾಡಯ್ಯ. ಎನ್ನ ಸಿರವ ಸೋರೆಯ ಮಾಡಯ್ಯ. ಎನ್ನ ನರವ ತಂತಿಯ ಮಾಡಯ್ಯ. ಎನ್ನ ಬೆರಳ ಕಡ್ಡಿಯ ಮಾಡಯ್ಯ, ಬತ್ತೀಸರಾಗವ ಹಾಡಯ್ಯ, ಉರದ ಲೊತ್ತಿ ಬಾರಿಸು ಕೂಡಲ ಸಂಗಮದೇವ (ಬ. ವ. 500). ತಾಳಮಾನ ಸರಿಸವನಱಿಯೆ. ಓಜೆಬಜಾವಣೆಯ ಲೆಕ್ಕವನಱಿಯೆ. ಅಮೃತಗಣ ದೇವಗಣವನಱಿಯೆ. ಕೂಡಲ ಸಂಗಮದೇವ, ನಿನಗೆ ಕೇಡಿಲ್ಲವಾಗಿ ಆನು ಒಲಿದಂತೆ ಹಾಡುವೆ (ಬ. ವ. 494) ಕೋಟ್ಯನುಕೋಟಿ ಜಪವನು ಮಾಡಿ ಕೋಟಲೆಗೊಳ್ಳಲದೇಕೆ ಮನವೇ? ಕಿಂಚಿತು ಗೀತವೊಂದನಂತಕೋಟಿ ಜಪ! ಜಪವೆಂಬುದೇಕೆ ಮನವೇ? ಕಪಡಲ ಸಂಗನ ಶರಣರ ಕಂಡು ಆಡಿ, ಹಾಡಿ ಬದುಕು ಮನವೇ (ಬ. ವ. 275). 1. ಬ. ವ. 171, 291, 312, 842. 2. ಪಂ. ಆ. ಜ. 2–96

" ಮನೋವಾಕ್ಕಾಯೈರನಾದಿಕಾಲಪ್ರವೃತ್ತಾನಂತಾಕೃತ್ಯಕರಣಕೃತ್ಯಾಕರಣ-ಭಗವದಪಚಾರಭಾಗವತಾಪಚಾರಾಸಹ್ಯಾಚಾರರೂಪನಾನಾವಿಧಾನಂತಾಪ-ಚಾರಾನಾರಬ್ಧ ಕಾರ್ಯಾನನಾರಬ್ಧಕಾರ್ಯ್ಯಾನ್ ಕೃತಾನ್ ಕ್ರಿಯಮಾಣಾನ್ ಕರಿಷ್ಯಮಾಣಾಂಶ್ಚ ಸರ್ವಾನಶೇಷತಃ ಕ್ಷಮಸ್ವ."

ಸ್ತೋತ್ರರೂಪದ ಪದ್ಯಸಾಹಿತ್ಯವು ಮಿಕ್ಕ ರೀತಿಯ ಛಂದೋಬದ್ಧ ಸಾಹಿತ್ಯಕ್ಕಿಂತ ಹಳೆಯದು. ಜೇಡರದಾಸಿಮಯ್ಯನಿಗಿಂತಲೂ ಪೂರ್ವದಲ್ಲೇ, ಮಯೂರ ಉದ್ಭಟ ಮುಂತಾದವರು ಶತಕರೂಪದಲ್ಲಿಯೂ, ಕೊಂಡಗುಳಿಕೇಶಿ-ರಾಜ ಮುಂತಾದವರು ಅಷ್ಟಕರೂಪದಲ್ಲಿಯೂ, ಪದ್ಯರೂಪದ ಸ್ತೋತ್ರ ಸಾಹಿತ್ಯವನ್ನು ಬೆಳೆಸಿದರು. ಆ ಪದ್ಯಗಳು ಸಂಸ್ಕೃತವೃತ್ತಛಂದಸ್ಸಿನಲ್ಲಿರುತ್ತಿದ್ದವೆಂದೂ, ವ್ಯಾಕರಣ ನಿಯಮಗಳನ್ನು ಅನುಸರಿಸಿರುತ್ತಿದ್ದವೆಂದೂ ಅಲಂಕಾರಸಹಿತವಾಗಿರುತ್ತಿದ್ದವೆಂದೂ ತಿಳಿಯಬರುವುದು.[1]

ಸಂಸ್ಕೃತಗದ್ಯದಲ್ಲಿ ಹಲವು ಪ್ರಕಾರಗಳಿದ್ದು ಅವುಗಳಲ್ಲಿ ಕೆಲವು ಮಾತ್ರಾಗಣಗಳುಳ್ಳವಾದರೆ, ಮೇಲೆ ಉದಹರಿಸಿದಂತಹ ಕೆಲವು ಸ್ತೋತ್ರ ಗದ್ಯ ಪ್ರಕಾರಗಳು ಅಂತಹ ಗಣನಿಯಮವಿಲ್ಲದೆ, ಕೇವಲ ' ಛಂದೋಗಂಧಿ 'ಗಳು ಮಾತ್ರವಾಗಿರುವವು. ಪ್ರಾಚೀನ ಕನ್ನಡ ವಚನಕಾರರು ಕೇವಲ ಬಾಹ್ಯ ರಚನೆಗೆ ಅಂಥ ಎರಡನೇ ಬಗೆಯನ್ನು ಮಾದರಿಯಾಗಿಟ್ಟುಕೊಂಡು ಕನ್ನಡ ಗದ್ಯ( = ವಚನ)ವನ್ನು ಬರೆಯುವಾಗ ಭಾವತೀವ್ರತೆಯನ್ನೂ, ಭಾಷೆಯ ಸರಳತೆಯನ್ನೂ ಅವಕ್ಕೆ ಅಳವಡಿಸಿಕೊಂಡು ಭಾವಗೀತೆಯ ಮೆರುಗನ್ನು ಕೊಟ್ಟು ವಚನಗಳನ್ನು ಒಂದು ವಿಶಿಷ್ಟ ಸಾಹಿತ್ಯಪ್ರಕಾರವೆನಿಸಿದರು. ಕನ್ನಡ ವಚನ ಸಾಹಿತ್ಯದಲ್ಲಿ, ಸಂಸ್ಕೃತದ ಸ್ತೋತ್ರಗದ್ಯದಲ್ಲಿಯಂತೆ ಪ್ರಾರ್ಥನೆಯಷ್ಟಕ್ಕೇ ವಿಷಯ ವ್ಯಾಪ್ತಿಯು ಪರಿಮಿತವಾಗದೆ ತತ್ತ್ವಪ್ರತಿಪಾದನೆ, ನೀತಿಬೋಧೆ, ಸ್ವಾಂತರಂಗವೀಕ್ಷಣೆ, ಮಧುರಭಕ್ತಿ, ಕಾಯಕದ ಮಹತ್ವ, ಯೋಗಭೋಗ ಸಮನ್ವಯ ಮುಂತಾದುವೂ ಸೇರಿಕೊಂಡು ರಸಪ್ರಪೂರ್ಣವಾದವು.

ಶರಣರ ಈ ವಚನಸಾಹಿತ್ಯಪ್ರಕಾರಕ್ಕೆ ಸಂಸ್ಕೃತದಲ್ಲಿರುವ ಸ್ತೋತ್ರಗದ್ಯ-ಸಾಹಿತ್ಯವೇ ಮೂಲವೂ ಪ್ರೇರಕವೂ ಆಗಿರಬಹುದು. ಈ ಪ್ರಕಾರದ ರಚನಾ

---

1. " ನಿಚ್ಚಲೆಂಟುಂ ಪದ್ಯಮಂ ಸೋಮನಾಥಂಗೆ, ಅಚ್ಚರಿ ಮಿಗಲ್ಕೆ ಪೇಳ್ವಂ ಶಿವಾನಾಥಂಗೆ : ಪಂಚಾಕ್ಷರಾನುಬಂಧಂ ಛಂದವನುವಾಗೆ, ಪಂಚಮುಖನಾಮದಭಿಧಾನ-ಬುದ್ಧಿಯದಾಗೆ, ಶಿವವಾಕ್ಯಶಬ್ದಶುದ್ಧಿ ವ್ಯಾಕರಣಮಾಗೆ, ಶಿವಭಕ್ತಿವೃತ್ತಕ್ಕಲಂಕಾರದಂತಾಗೆ ಪದ್ಯಂಗಳಂ ಶಿವಂಗನುದಿನಂ ಪೇಳುತಂ " (ಕೇಶಿರಾಜ ರಗಳೆ ಸಂ: ಶ್ರೀ ಹಳಕಟ್ಟಿ).

ತಂತ್ರಕ್ಕೆ ತಮಿಳಿನ ಅರವತ್ತು ಮೂವರು ಪುರಾತನರಲ್ಲಿ ಕೆಲವರು ಬರೆದು ಅತ್ಯಂತ ಪವಿತ್ರಸಾಹಿತ್ಯವೆನಿಸಿಕೊಂಡಿರುವ "ಪನ್ನಿರ್ ತಿರುಮುರೈ"ಗಳಲ್ಲಿ ಎಲ್ಲಿಯೂ ಗದ್ಯವೇ ಇಲ್ಲ. ಅವೆಲ್ಲ ಸಂಸ್ಕೃತವೃತ್ತೇತರಜಾತಿಛಂದೋಬದ್ಧ ವಾದ ಕೃತಿಗಳು. ತಮಿಳುಸಾಹಿತ್ಯದಲ್ಲಿ ಮೊದಲ ಬಾರಿಗೆ ಗದ್ಯ ಕಾಣಿಸಿ ಕೊಂಡಿರುವುದು ಶಿಲಪ್ಪದಿಕಾರವೆಂಬ (2 ಅಥವಾ 3 ಅಥವಾ 5 ನೇ ಶತಕದ) ಪದ್ಯಕಾವ್ಯದ ಪ್ರಾರಂಭದಲ್ಲಿ ಮತ್ತು ಆ ಕಾವ್ಯದ ಕೊನೆಯ ಕಾದೈ (ಪರಿ-ಚ್ಛೇದ)ದ ಹಿಂದೆ ಒಟ್ಟು 50–60 ಪಂಕ್ತಿಯಷ್ಟು ಮಾತ್ರ. ತಮಿಳುಸಾಹಿತ್ಯ ದಲ್ಲಿ ಗದ್ಯವು ತಲೆದೋರಿದುದು 14 ನೇ ಶತಮಾನದಲ್ಲಿ; ಅದೂ ಹಳೆಯ ಸಂಗಂ ಸಾಹಿತ್ಯಕ್ಕೆ ಬರೆದ ಟೀಕಾರೂಪದಲ್ಲಿ ಮಾತ್ರ. ಆದ್ದರಿಂದ ಕನ್ನಡ ವಚನ ಪ್ರಕಾರಕ್ಕೆ ಬಾಹ್ಯರೂಪರಚನಾದೃಷ್ಟಿಯಿಂದ ತಮಿಳು ಸಾಹಿತ್ಯದ ಸಂಬಂಧವಿಲ್ಲವೆನ್ನಬಹುದು.

ಈ ವಚನಗಳಿಗೆ ರಾಗತಾಳಗಳ ನಿಯಮವಿಲ್ಲ. ಆದರೂ ಭಕ್ತನು ಭಾವಾವೇಶದಿಂದ ಓದುವಾಗ, ಒಂದು ವಿಧವಾದ ಸಂಗೀತಛಾಯೆ ಅವಕ್ಕೆ ಬಂದು, ಅವು ಮೊದಲು ಜನಸಾಮಾನ್ಯದಲ್ಲಿ, ಆ ಮೂಲಕ ವಚನಸಾಹಿತ್ಯ ದಲ್ಲಿ ಮತ್ತು ಆಮೇಲಣ ಹರಿಹರಾದಿಗಳ ಸಾಹಿತ್ಯದಲ್ಲೂ–'ಗೀತೆ'ಯೆಂದು ಹೆಸರುಗೊಂಡು ಪ್ರಚಲಿತವಾಗಿರಬಹುದು.* ಅಥವಾ ವಚನಗಳು ಗೀತೆ ಗಳಿಗಿಂತ ಹೆಚ್ಚಿನ ಸಂಖ್ಯೆಯಲ್ಲಿದ್ದುದರಿಂದಲೂ, ಹೆಚ್ಚು ಪ್ರಚುರವೂ ಆಗಿದ್ದುದರಿಂದಲೂ ಗೀತೆಗಳನ್ನೂ "ವಚನ"ವೆಂದೇ ಕರೆದಿರಬಹುದು. ಹೀಗೆ ವಚನಗೀತೆಗಳನ್ನು ಪ್ರತ್ಯೇಕಿಸಿ ಕರೆಯುವಾಗ ನಾಮಸಂಕರವಾಗಿರುವುದು ಸಾಧ್ಯ.[A]

ಆದರೆ ಶರಣರ ಸಾಹಿತ್ಯದಲ್ಲಿ ವಚನಪ್ರಕಾರದ ಜೊತೆಗೆ 'ಗೀತಾ' ಪ್ರಕಾರವೂ ಒಂದು ಪ್ರತ್ಯೇಕವಾಗಿತ್ತೆಂಬುದಕ್ಕೆ ಬೇಕಾದಷ್ಟು ಉಲ್ಲೇಖಗಳಿವೆ, ಮತ್ತು ಅವಕ್ಕೆ ನಿದರ್ಶನಗಳಾಗಿ ಪ್ರಾಚೀನ ಹಾಗೂ ನೂತನರ ಗೀತಗಳು

---

* "ಎರಡೆಂಬತ್ತುಕೋಟಿ ವಚನವ ಹಾಡಿ, ಹಲವ ಹಂಬಲಿಸಿತ್ತೆನ್ನ ಮನವು. ಮನ ಘನವನಱಿಯದು, ಘನ ಮನವನಱಿಯದು. ಗುಹೇಶ್ವರನೆಂಬ ಲಿಂಗವನಱಿದ ಬಳಿಕ ಗೀತವೆಲ್ಲಾ ಒಂದು ಮಾತಿನೊಳಗು (ಅ. ವ. ಚಂ. 627). A ಸರ್ವಜ್ಞನ ತ್ರಿಪದಿಗಳನ್ನು, ಮುಪ್ಪಿನ ಷಡಕ್ಷರಿಯ ರಾಗತಾಳಗಳ ಹಾಡುಗಳನ್ನು ವಚನಗಳೆಂದು ವ್ಯವಹರಿಸುತ್ತಿರುವುದನ್ನು ಈ ಸಂದರ್ಭದಲ್ಲಿ ನೆನೆಯಬೇಕು. "ಗುರುವಚನಮಂ ಹಾಡು ತಿರಲು" ಎಂಬ ರಾಘವಾಂಕನ (ಸಿ. ರಾ. ಚಾ. 4–73) ಮಾತನ್ನೂ ನೋಡಿ. (ವಚನ, ವಾಚನ = ಹಾಡು).

ಸಿಗುವುವು.[1] ಈ ವಿಧದ ಗೀತಗಳ ಪ್ರಸ್ತಾಪವು ಹರಿಹರ, ಪಾಲ್ಕುರಿಕೆ ಸೋಮೇಶ್ವರ, ಮತ್ತು ವಚನಕಾರರ ಕೃತಿಗಳಲ್ಲಿ ವಿಪುಲವಾಗಿದೆ[2] (ಪುಟ 10 ನೋಡಿ). ಈ ರೀತಿಯ ಕನ್ನಡ ಗೀತಾಸಾಹಿತ್ಯದ ಮೇಲೆ ತಮಿಳು ನಾಡಿನ ಶಿವಶರಣರ ತೇವಾರಗಳ ಪ್ರಭಾವ ಅಪರಿಮಿತವಾಗಿ ಆಗಿರುವುದು. ತಮಿಳಿನಲ್ಲಿ ಭಕ್ತಿ-ಸಾಹಿತ್ಯವನ್ನು ಬರೆದಿರುವ ಜ್ಞಾನಸಂಬಂಧರ್ ಮತ್ತು ಸುಂದರನಂಬಿ ಮುಂತಾದವರ ಹಾಡುಗಳನ್ನು-ಒಂದೊಂದನ್ನೂ—ನಿರ್ದಿಷ್ಟ ರಾಗ ತಾಳಗಳಲ್ಲಿ ಹಾಡಬೇಕೆಂಬ ನಿಯಮವಿದೆ. ಅವನ್ನು ಆ ಪ್ರಕಾರ ರಾಗಯುಕ್ತವಾಗಿ ಓದುವವರಿಗೆ ಈಗಲೂ "ಓದುವಾರ್" ಎನ್ನುವರು. 'ಪಣ್' ಎಂದರೆ ರಾಗ, ಮಟ್ಟು ಎಂದು ಅರ್ಥ. 'ಯಾಳ್' ಎಂಬ ಒಂದು ವಿಧವಾದ ತಂತ್ರೀವಾದ್ಯದ ಶ್ರುತಿಯೊಡನೆ ಒಂದು ಮಟ್ಟು ಅಥವಾ ರಾಗದಲ್ಲಿ ತಮಿಳುನಾಡಿನ ಆ ಶಿವಶರಣರ ಗೀತೆಗಳನ್ನು ಹಾಡುತ್ತಿದ್ದವರಿಗೆ "ಯಾಳ್‌ಪಾಣರ್" ಎಂದು ಹೆಸರು. ಈ ಪದವು ಬಸವಣ್ಣನವರಿಗೆ ಪರಿಚಯವಿದ್ದಂತೆ ತಿಳಿದುಬರುವುದು.[3]

ಇಂತಹ ಗೀತೆಗಳನ್ನು, ಪೂಜಾಸಮಯಕ್ಕೆ ಶಿವದೇವಾಲಯಗಳಲ್ಲಿಯೂ, ಶಿವಶರಣರು ತಮ್ಮ ಇಷ್ಟಲಿಂಗಪೂಜಾಸಂದರ್ಭಗಳಲ್ಲಿಯೂ ಮತ್ತು ಅವರು ಪರಸ್ಪರ ಶಿವಾನುಭವಗೋಷ್ಠಿಯಲ್ಲಿರುವಾಗಲೂ ಹಾಡುತ್ತಿದ್ದರು. ಶಿವಭಕ್ತರು ಶಿವದೇವಾಲಯಕ್ಕೆ ಹೋಗಿ ತಾಳವನ್ನೋ ತಂತ್ರೀವಾದ್ಯವನ್ನೋ ತೆಗೆದುಕೊಂಡು ಈ ಗೀತೆಗಳನ್ನು ಹಾಡುತ್ತಿದ್ದರು. ಹಾಡುತ್ತ ಹಾಡುತ್ತ ಕುಣಿಯುತ್ತಿದ್ದರು. ಮನೆಯಲ್ಲಿ ಮಕ್ಕಳನ್ನು ತೊಟ್ಟಿಲಲ್ಲಿ ಮಲಗಿಸಿ ಜೋಗುಳದ ಹಾಡಾಗಿ ಆ ಗೀತೆಗಳನ್ನು ಹಾಡುತ್ತಿರುವಷ್ಟು ಬಳಕೆಗೆ ಬಂದು ಜನಪ್ರಿಯವಾಗಿದ್ದವು ಅವು. ಜಂಗಮರು ಈ ಶರಣರ ಗೀತೆಗಳನ್ನು ಹಾಡಿಕೊಂಡು

---

1. ಅಕ್ಕಮಹಾದೇವಿ, ಪ್ರಭುದೇವ, ಸಕಲೇಶ ಮಾದರಸ,ಬಹುರೂಪಿಚೌಡಯ್ಯ, ದಸರಯ್ಯನ ಪತ್ನಿ ವೀರಮ್ಮ, ಗುರುಬಸವ, ಆದಯ್ಯ, ಸಿದ್ಧರಾಮ, ಬಸವೇಶ್ವರ, ಚೆನ್ನಬಸವೇಶ್ವರ, ಮುಂತಾದವರ ಗೀತೆಗಳೂ, ಯಾರವೆಂದು ಸರಿಯಾಗಿ ಗೊತ್ತಿಲ್ಲದ ಶಾಂತಮಲ್ಲೇಶ, ನಿರ್ವಾಣಿ, ನಿರ್ವಾಣಿಪ್ರಿಯ, ನಿರ್ವಾಣಪ್ರಿಯಬೋಳೇಶ್ವರ, ನಿಜಲಿಂಗ ಸಂಗ, ಮಹಾಲಿಂಗದೇವ ಮುಂತಾದ ಅಂಕಿತಗಳಿರುವ ಗೀತೆಗಳೂ ಮೈಸೂರಿನ ಪ್ರಾಚ್ಯ ಸಂಶೋಧನಾಲಯದಲ್ಲಿರುವ K. 629 ನೇ ನಂಬರಿನ ಓಲೆಯ ಗ್ರಂಥ (ಶಿವಯೋಗ ಪ್ರದೀಕೆ)ದಲ್ಲಿ ಇವೆ. 2. ಬಸವದಂಡನಾಥುಗೀತಂಬುಲು (ಪಂ. ಆ.ಚಾ. 2-132) "ಭಂಡಾರು ಬಸವನ್ನ ಭವ್ಯಗೀತ" (ಪಂ. ಆ. ಚಾ. 1-510) "ಪ್ರಾಕ್ತನ ನೂತನ ಭವ್ಯಗೀತ ಪ್ರಸೂಕ್ತುಲ" (ಪಂ.ಆ.ಚ. 1-510). 3. ವೇದಶಾಸ್ತ್ರದವರ ಹಿರಿಯರೆನ್ನೆ. ಮಾಯಾಭ್ರಾಂತಿ ಕವಿದ ಗೀತಜ್ಞರ ಹಿರಿಯರೆನ್ನೆ. ಇವರು ಹಿರಿಯರುಗಳೇ ? ಯಾಗ ನಟ್ಟುವಿಗಪಾಣರು ! (ಬ. ವ. 613).

ಊರಿಂದ ಊರಿಗೆ ಚರಮೂರ್ತಿಗಳಾಗಿ ಹೋಗುತ್ತಿದ್ದರು. ಪೂಜೆಗಿಂತ, ಸ್ತೋತ್ರವೂ, ಸ್ತೋತ್ರಕ್ಕಿಂತ ಜಪವೂ ಕೋಟ್ಯನುಕೋಟಿ ಜಪಕ್ಕಿಂತ ಒಂದಿಷ್ಟು ಗೀತೆಯನ್ನು ಹಾಡುವುದೂ ಹೆಚ್ಚು ಪುಣ್ಯಪ್ರದವೆಂಬ ಶ್ರದ್ಧೆ ಮತ್ತು ರುಚಿ ಬಸವಾದಿ ಪ್ರಮಥರ ಕಾಲಕ್ಕೆ ಬೆಳೆದು ಬಂದಿತ್ತೆನ್ನಬಹುದು.[1]

ಅಲ್ಲಮಪ್ರಭುದೇವರು ಕೋಟ್ಯಂತರ ವಚನಗಳನ್ನು ಹಾಡಿರುವುದಾಗಿ ತಿಳಿದುಬರುತ್ತದೆ.[2] ಅದರಲ್ಲಿ ನಮಗೆ ಸಿಕ್ಕಿರುವುದು ಬಹಳ ಸ್ವಲ್ಪ. ಈ ಸಿಕ್ಕಿರುವ ವಚನಗಳನ್ನು ಮೂರು ವಿಧವಾಗಿ ವಿಂಗಡಿಸಬಹುದು. (1) ಸರಳ ವಚನಗಳು, (2) ಬೆಡಗಿನ ವಚನಗಳು, (3) ಗೀತಗಳು ಅಥವಾ ಹಾಡುಗಳು. ಇವುಗಳಲ್ಲಿ ಕೊನೆಯೆರಡು ವಿಧವಾದ ವಚನಗಳನ್ನು ವಿವರಿಸುವ ಆವಶ್ಯಕತೆಯಿದೆ.

ಬೆಡಗಿನವಚನ: ಮಾಯಾದೇವಿಯು ಪ್ರೀತಿಸಲು ಅನುಕೂಲವಾಗಲೆಂದು ಅವಳ ಸಖಿಯರು ಅಲ್ಲಮನನ್ನು ಸಂಚಿನಿಂದ ಅಂತಃಪುರದಲ್ಲಿ ಒಂದೆಡೆ ಬಿಡಾರ ಮಾಡಿಸಿರುತ್ತಾರೆ. ಆದರೆ ಅಲ್ಲಮನನ್ನು ಕಾಮಪಾಶಕ್ಕೆ ಸಿಕ್ಕಿಸಿಕೊಳ್ಳಲು ತನ್ನೊ

---

1. ಬ. ವ. 275. 2. ಅ.ವ. ಚಂ. 627. ಮತ್ತು O.R.I.K. 602ನೇ ಕಾಗದದ ಪ್ರತಿಯಲ್ಲಿರುವ "ಲಿಂಗಸೂತ್ರ"ವೆಂಬ ಗ್ರಂಥದ ಕೊನೆಗೆ "ಇಂತೀ ಪರಿಯೊಳು ಸರ್ವತಂತ್ರಸ್ವತಂತ್ರ ಸರ್ವಜ್ಞ ಸರ್ವಶಕ್ತ ಸರ್ವೇಶ್ವರ ಸರ್ವಕರ್ತೃ ಗುರುಮೂರ್ತಿ ಶ್ರೀಮದಲ್ಲಮ ಪ್ರಭುದೇವರು ಸುಜ್ಞಾನನೆಂಬ ಶಿಷ್ಯನಿಗೆ ನಿರೂಪಿಸಿ ಎರಡೆಂಭತ್ತು ಕೋಟಿ ವಚನಂಗಳಡಗಿಸಿದ ಲಿಂಗಸೂತ್ರವೆಂಬ ಒಂಭತ್ತು ವಚನಂಗಳು ಸಮಾಪ್ತಗಳಾದವು." ಎಂದಿದೆ. ಲಿಂಗಸೂತ್ರವಿರುವ ಮತ್ತೊಂದು ಓಲೆಯ ಗರಿಯ ಕೊನೆಯಲ್ಲಿ "ಪ್ರಭುಸ್ವಾಮಿಯಾ ಎರಡೆಂಬತ್ತು ಕೋಟಿ ವಚನವನು ಅಡಗಿಸಿದ 'ಲಿಂಗಸೂತ್ರ' ಸಮಾಪ್ತ ಮಂಗಳ ಮಹಾ ಶ್ರೀ" ಎಂದಿದೆ. ಈ ಲಿಂಗಸೂತ್ರದಲ್ಲಿದ್ದ ಒಂಬತ್ತು ವಚನಗಳನ್ನೂ (1286-1294) ಅಲ್ಲಮನ ವಚನಚಂದ್ರಿಕೆಗೆ ತೆಗೆದುಕೊಂಡಿದೆ. ಆದರೂ ಅವು ಪ್ರಭುದೇವರ ವಚನಗಳಲ್ಲವೆನ್ನಲು ಆಸ್ಪದವಿದೆ. ಏಕೆಂದರೆ: "ಜ್ಯೋತಿರ್ಮಯಶಾಂಭವೀಜ್ಞಾನದೀಕ್ಷಾಬೋಧೆ"ಎಂಬ (O.R.I.B. 320)ಗ್ರಂಥದಲ್ಲಿ ಗುಹೇಶ್ವರ ಎಂಬ ಅಂಕಿತವಿರುವ 36 ವಚನಗಳೂ, ಮುಂದೆ ನೂರೂ ಚಿಲ್ಲರೆ ಸಂಸ್ಕೃತ ಶ್ಲೋಕಗಳೂ, ಕಡೆಯಲ್ಲಿ ಏಳೆಂಟು ತೆಲುಗು ಪದ್ಯಗಳೂ, ಇವೆ. ಈ ಗ್ರಂಥದ ಉಪೋದ್ಘಾತದ ಭಾಗದಲ್ಲಿ "ಅಲ್ಲಮಪ್ರಭುವು ಕಲ್ಯಾಣಪಟ್ಟಣದಲ್ಲಿ ಬಸವಾದಿ ಪ್ರಮಥಗಣಂಗಳಿಗೆ ಉಪದೇಶವ ಮಾಡಿದರು. ಆ ಪರಮ ರಹಸ್ಯಾರ್ಥವನು ಪಾಲ್ಕುರಿಕೆ ಸೋಮೇಶ್ವರನು ಸಂಗಯ್ಯನೆಂಬೊ ಶರಣನಿಗೆ ನೂರರವತ್ತು ವಚನವ ಮಾಡಿ ಉಪದೇಶಿಸಿದನು ಗುಹೇಶ್ವರನ ವಾಕ್ಯವನು" ಎಂದಿದೆ. ಆದ್ದರಿಂದ ಪ್ರಭುದೇವರ ವಚನಗಳ ಸಾರವನ್ನು ಸಂಗ್ರಹಿಸಲು ಪಾಲ್ಕುರಿಕೆ ಸೋಮೇಶ್ವರನು ತನ್ನವೇ ಆದ ಕೆಲವು ವಚನಗಳನ್ನೂ, ಸಂಸ್ಕೃತ ಶ್ಲೋಕಗಳನ್ನೂ, ತೆಲುಗು ಪದ್ಯಗಳನ್ನೂ ಬರೆದಿರುವನೇ ಹೊರತು, ಅವು ಪ್ರಭುದೇವರ ಕೃತಿಗಳಲ್ಲ(ವೆನ್ನಬೇಕಾಗುವುದು). ಹಾಗೆಯೇ ಲಿಂಗಸೂತ್ರವೂ ಪ್ರಭುವಚನಸಾರವನ್ನು ಸಂಗ್ರಹಿಸಿದ ಅನ್ಯಕರ್ತೃಕವಚನಗಳೇ ಹೊರತು ಪ್ರಭುದೇವರ ಕೃತಿಯಲ್ಲವೆನ್ನಬಹುದು.

ಡತಿ ಮಾಡಿದ ಪ್ರಯತ್ನಗಳೆಲ್ಲ ವಿಫಲವಾಗಿ ಅವಳು ಬೇಸತ್ತಳೆಂಬುದನ್ನು ತಿಳಿದ ಆ ಸಖಿಯರು ಈ ಸುದ್ದಿ ರಾಜನ ಕಿವಿ ಮುಟ್ಟಿ ಅನರ್ಥವಾದೀತೆಂದು ಅಲ್ಲಮನನ್ನು ಅಂತಃಪುರದಿಂದ ಹೊರಗೆಲ್ಲಿಯಾದರೂ ವಾಸಮಾಡಬೇಕೆಂದು ಸಕಳೆಯೆಂಬ ಸಖಿಯ ಮೂಲಕ ಅವನಿಗೆ ತಿಳಿಸಿದಾಗ, ಅಲ್ಲಮನು ಆ ಕಾಮಿನಿಯರ ಇಂಗಿತ ವನ್ನರಿತು, ಆದರೂ ಅದನ್ನು ಅರಿಯದವನಂತೆ ನಟಸಿ, "ಮಾಯೆಯಗಲಿದ ಬಳಿಕ ಭಾವಿಸೆ ಕಾಯವುಂಟೇ? ಪ್ರಾಣವಾಗಿಹ ವಾಯು ನಡೆವುದೆ? ಕಾಲು ಕೈ ಕಣ್ಣುಗಳು ಮಿಡುಕುವವೇ? ಬಾಯ ನುಡಿ ಬೆವಹಾರ ಬೆಸನಗಳಾಯತವು ಬಳಿಕುಂಟೆ? ಕೇಳಾ ಸಾಯದಂತಿರೆ ಸತ್ತೆ ನಾನಕಟ[1]" ಎಂದನು. ಈ ಮೇಲಣ ಮಾತಿನ ಮರೆಯ ಬೆಡಗಿನ ಸಂದಿಯಲ್ಲಿ ಶಿವತತ್ತ್ವ, ಕಾಮತತ್ತ್ವ ಎರಡೂ ಇವೆ. ಈ ಮಾರ್ಮಿಕ ರೀತಿಯ ವಚನಗಳಿಗೆ ಬೆಡಗಿನ ವಚನಗಳೆಂದು ಹೆಸರು.

ಬೆಡಗಿನ ವಚನಗಳಲ್ಲಿ ಹಲವಾರು ಪ್ರಭೇದಗಳಿವೆ. ವಿರೋಧಾಭಾಸವೇ ಅವೆಲ್ಲಕ್ಕೂ ಜೀವಾಳ. ಪ್ರಕೃತಿಗೆ, ಸಮಾಜಕ್ಕೆ, ಸಂಪ್ರದಾಯಕ್ಕೆ ವಿರುದ್ಧ ವೆಂಬಂತಹ ಗೌಣವಾದ ಅರ್ಥ ಬರುವ ಮಾತುಗಳನ್ನಾಡಿ, ಅದಕ್ಕೆ ಬಳಸಿರುವ ಪದಗಳಿಗೆ ಬೇರೆ ಒಂದು ಮುಖ್ಯವಾದ ಅಂತರಾರ್ಥವು ಬರುವಂತಾಗಿಸುವುದೇ ಇವುಗಳ ಮುಖ್ಯತಂತ್ರ. ಇಂತಹ ಪದಗಳಿಗಿರುವ ಅಂತರರ್ಥವು, ಅಥವಾ ಆ ಸಾಂಕೇತಿಕ ಪದಗಳಿಗಿರುವ ಪ್ರತ್ಯೇಕವಾದ ನಿಯತಾರ್ಥವು ಆಕಸ್ಮಿಕ-ವಾದುದಲ್ಲ; ವ್ಯಕ್ತಿಯಿಂದ ವ್ಯಕ್ತಿಗೆ ಬದಲಾಯಿಸುವ ಸ್ವಚ್ಛಂದರೀತಿಯದಲ್ಲ. ಈ ಬೆಡಗಿನ ಸಂಪ್ರದಾಯವು ಅನೂಚಾನವಾದುದು. ಮತ್ತು ಯುಕ್ತಿ ಯುಕ್ತವೂ ರೂಪಕಮೂಲವೂ ಆದುದು. ಮುಂದೆ ಕೆಲವು ನಿದರ್ಶನ ಗಳನ್ನು ನೋಡಬಹುದು: ಮೇರುಗಿರಿಯನ್ನು ಬಳಸಿಕೊಂಡು ಜಂಬೂದ್ವೀಪ ವಿರುವುದು; ಹಾಗೆಯೇ ಅಹಂಕಾರವನ್ನು ಸುತ್ತುವರಿದು ಈ ದೇಹವಿರುವುದು. ಆದ್ದರಿಂದ 'ಜಂಬೂದ್ವೀಪ'ವೆಂದರೆ ದೇಹ. ಒಂದು ಪ್ರಾಣಿಯ ಮಲ ದಿಂದಾದ ಅರಗಿಗೂ, ಒಬ್ಬ ಜೀವನ ಆಣವಾದಿ ಮಲತ್ರಯದಿಂದಾದ ದೇಹಕ್ಕೂ ಸಾಮ್ಯವಿರುವುದರಿಂದ "ಅರಗು" ಎಂದರೆ ದೇಹ. ತನುಮಧ್ಯ ದಲ್ಲಿ ಮೂಲಾಹಂಕಾರವು, ಭೂಮಧ್ಯದಲ್ಲಿ ಮೇರುವಿನಂತೆ ಇರುವುದು; ಆದು ದರಿಂದ "ಮೇರು"ವೆಂದರೆ ಮೂಲಾಹಂಕಾರ. ಕೋಳಿಯು ಪ್ರಾತಃಕಾಲ ದಲ್ಲಿ ಎದ್ದು ಉದಯವಾಯಿತೆಂಬೆಚ್ಚರಿಕೆಯನ್ನು ಊರಿಗೆಲ್ಲ ಕೊಟ್ಟು, ಧ್ವನಿ ಮಾಡುವ ಹಾಗೆ, ಪ್ರಣವವು ಮೂಲಜ್ಞಾನದಲ್ಲಿ ಸಮುದ್ಭವಿಸಿ ಶರಣನಿಗೆ ಅರಿ ವನೆಚ್ಚರಿಸಿಕೊಟ್ಟು ಸೋಹಂ ಎಂದು ಧ್ವನಿಮಾಡುತ್ತಿರುವುದರಿಂದ "ಕೋಳಿ"

---

1. ಪ್ರ. ಲಿಂ, ಲೀ. 5-70.

ಎಂದರೆ ಸತ್ಪ್ರಣವ. ಹೀಗೆ ಬೆಡಗಿನ ಪ್ರತಿಯೊಂದು ಪದಕ್ಕೂ ಒಂದು ವಿಶಿಷ್ಟವಾದ ಅರ್ಥವಿದೆ. ಮತ್ತು ಅದಕ್ಕೊಂದು ಅನೂಚಾನವಾದ ಸಂಪ್ರದಾಯವೂ ಇದೆ.

ಈ ಸಂಪ್ರದಾಯದ ಉದ್ದೇಶವು ಸಹಜ ಪ್ರವೃತ್ತಿಗೆ ಅನುಗುಣವಾದುದು. ಕುತೂಹಲವನ್ನು ಕೆರಳಿಸಲು ಅದ್ಭುತವನ್ನೋ, ಅತಿಶಯವನ್ನೋ, ವಿರೋಧಾಭಾಸವನ್ನೋ, ಅರ್ಥಾಂತರತೆಯನ್ನೋ ಅನುಸರಿಸುವುದು ಮಾನವನ ಸಂಸ್ಕೃತಿ. ಚರಿತ್ರೆಯಲ್ಲಿ ಬಹಳ ಪುರಾತನ ತಂತ್ರ. ಕುತೂಹಲದಿಂದ ಜನತೆಯ ಮನಸ್ಸನ್ನಾಕರ್ಷಿಸಿ, ಏಕಾಗ್ರವಾಗಿಸಿ, ಆಗ ಅದರ ಮೂಲಕ ಮಹಾತತ್ವವೊಂದರ ಆವಿಷ್ಕಾರವಾಗುವಂತೆ ಮಾಡಿದರೆ, ಆದ ಅನುಭವವು ಸಾಕ್ಷಾತ್ಕಾರದಷ್ಟು ದಿವ್ಯಸ್ಥಿತಿಗೇರಿ, ಆ ವ್ಯಕ್ತಿಯನ್ನೂ ದಿವ್ಯತೆಗೇರಿಸುವುದು.

ಮತ್ತು ಯೋಗಸಂಬಂಧವಾದ ವಿಷಯಗಳನ್ನು ಬೆಡಗಿನಲ್ಲಿ ಹೇಳುವುದರ ಉದ್ದೇಶವು ಆ ವಿಷಯಗಳನ್ನು ಗೋಪ್ಯವಾಗಿಡಬೇಕೆಂಬುದೇ ಆಗಿರಬಹುದು. ಹೀಗೆ ಯೋಗವಿಷಯಗಳನ್ನು ಗೋಪ್ಯವಾಗಿಡಬೇಕೆಂಬುದರಲ್ಲಿ "ಅಧಿಕಾರಿ" ಯಾದವನಿಗೆ ಮಾತ್ರ ಇದು ತಿಳಿಯಬೇಕು, ಸಂತೆಯಲ್ಲಿ ತತ್ವೋಪದೇಶವಾದಂತಾಗಬಾರದು, ಯೋಗವೆನ್ನುವುದು ಸರಿಯಾದ ಗುರುವಿನಿಂದ ಸಾಧಕನ ವೈಯಕ್ತಿಕ ಯೋಗ್ಯತೆಯನುಸಾರ ಬೋಧಿಸಲ್ಪಡದೇ ಹೋದರೆ ಸಾಧಿಸುವ ಸಾಧಕನಿಗೆ ಅನರ್ಥಗಳಾದಾವು ಎಂಬ ಎಚ್ಚರಿಕೆಯ ಸದುದ್ದೇಶವಿತ್ತೇ ಹೊರತು, ಹೊಟ್ಟೆಯ ಕಿಚ್ಚಿನ ಕ್ಷುದ್ರ ಭಾವನೆಯಿರಲಿಲ್ಲವೆಂಬುದನ್ನು ಗಮನಿಸ ಬೇಕು.[1]

ಹಾಡುಗಳು: ಅಲ್ಲಮನ ವಚನಚಂದ್ರಿಕೆಯ ಕೊನೆಯಲ್ಲಿರುವ (1295–1321) ಹಾಡುಗಳು ಛಂದಸ್ಸಿನ ದೃಷ್ಟಿಯಿಂದ ಬರೆದವಲ್ಲ; ಸಂಗೀತ ದೃಷ್ಟಿಯಿಂದ ಬರೆದವುಗಳಾದುದರಿಂದ ಅವುಗಳಲ್ಲಿ ತಾಳ ಮತ್ತು ಲಯಗಳೇ ಪ್ರಧಾನ. ಅಲ್ಲಿ ಛಂದೋನಿಯಮವನ್ನು ಛಂದಶ್ಶಾಸ್ತ್ರದೃಷ್ಟಿಯಿಂದ ಗಮನಿಸಲು ಬರುವುದಿಲ್ಲ.

ಆ ಹಾಡುಗಳೆಲ್ಲ ಮುಖ್ಯವಾಗಿ ಮಾತ್ರಾಗಣಗಳುಳ್ಳವುಗಳು. ಎಲ್ಲೋ ಒಂದೆರಡು ಹಾಡುಗಳಲ್ಲಿ[2] ಮಾತ್ರ ಅಂಶಿಗಣದ ಗತಿಯಿದ್ದಂತೆ ತೋರುವುದು.

---

1. ಕೇಲವಂ ರಾಜಯೋಗಾಯ ಹಠವಿದ್ಯೋಪದಿಶ್ಯತೇ ‖ ಹಠವಿದ್ಯಾ ಪರಂ ಗೋಪ್ಯಾ ಯೋಗಿನಾ ಸಿದ್ಧಿಮಿಚ್ಛತಾ। ಭವೇದ್ವೀರ್ಯವತೀ ಗುಪ್ತಾ ನಿರ್ವೀರ್ಯಾ ತು ಪ್ರಕಾಶಿತಾ ‖ (ಹಠಯೋಗ ಪ್ರದೀಪಿಕಾ 1–11) 2. ಅ. ವ. ಚಂ. 1318, 1319.

ಒಂದು[1] ಭಾಮಿನೀಷಟ್ಪದಿಯಲ್ಲಿದೆ. ಮತ್ತೊಂದು[2] ಚೌಪದಿ. ಇನ್ನು ಕೆಲವಲ್ಲಿ[3] ಐದುಮಾತ್ರೆಯ ಗಣದ ನಡಗೆಯಿದೆ. ಮಿಕ್ಕವುಗಳಲ್ಲಿ ಕೆಲವು ಭಾಮಿನಿ, ಕೆಲವು ಭೋಗ, ಕೆಲವು ಪರಿವರ್ಧಿನೀ ಷಟ್ಪದಿಗಳ ಲಯವನ್ನು ಹೊಂದಿವೆ.

## ಅಲ್ಲಮನ ವಚನಗಳ ಅಂಕಿತ

ತಮ್ಮ ಆರಾಧ್ಯದೈವದ ಹೆಸರನ್ನೇ ತಮ್ಮ ವಚನಗಳಿಗೆ ಅಂಕಿತವನ್ನಾಗಿಡುವುದು ವಚನಕಾರರಲ್ಲಿ ಬಹಳ ರೂಢಿಯಲ್ಲಿತ್ತು. ಬಳ್ಳಿಗಾವಿಯ "ಗೊಗ್ಗೇಶ್ವರ"ನೆಂಬ ದೇವರು ಅಲ್ಲಮನ ಆರಾಧ್ಯದೈವವೆಂದು ನಮಗೆ ಹರಿಹರನ ರಗಳೆಯಿಂದ ತಿಳಿದುಬರುವುದು. ಅಲ್ಲಮಪ್ರಭು ಹುಟ್ಟಿದಾಗ ಗೊಗ್ಗೇಶ್ವರ ಪ್ರಸಾದದ ಬೆಣ್ಣೆಯನ್ನು ತಂದವನಿಗಿಟ್ಟರು. ಈ ಅಲ್ಲಮನ ವಚನಗಳಲ್ಲಿ ಈ 'ಗೊಗ್ಗೇಶ್ವರ' ಎಂಬ ಅಂಕಿತವು ಬೇರೆ ಬೇರೆ ಓಲೆಗಳಲ್ಲಿ ಬೇರೆ ಬೇರೆ ರೂಪದಲ್ಲಿ ಕಂಡುಬರುವುದು. ಆದರೆ ಅವೆಲ್ಲ "ಗುಹೇಶ್ವರ" ಎಂಬ ಪದದ ರೂಪಾಂತರಗಳೇ ಹೊರತು ಬೇರೆಯೇನೂ ಅಲ್ಲ. ಅವು ಹೀಗಿವೆ : ಗುಹೇಶ್ವರ, ಗುಹ್ಯೇಶ್ವರ, ಗುಂಹೇಶ್ವರ, ಗೊಹೇಶ್ವರ, ಗೊಗೇಶ್ವರ, (ಗೋಗೇಶ್ವರ ∴ ಗೊಗ್ಗೆಶ್ವರ).

ಈ ಎಲ್ಲ ಅಂಕಿತಗಳ ಮೂಲರೂಪ "ಗುಹೇಶ್ವರ" ಎಂಬುದೇ. ಇದಕ್ಕೆ ವಚನಕಾರರ ಮತ್ತು ವ್ಯಾಖ್ಯಾನಕಾರರ ಸಮ್ಮತಿಯೂ ಇದೆ[4]. ಇದಕ್ಕೆ ಅರ್ಥ : ದೇಹಕ್ಕೆ ಒಡೆಯ ; ಗೂಢ, ನಿರಾಕಾರ, ಅವ್ಯಕ್ತ, ಅತೀತ ('ಕೆಲವು ಪಾರಿಭಾಷಿಕಗಳ ವಿವರಣೆಯು'ಲ್ಲಿ "ಮಹಾಘನವಸ್ತು" ನೋಡಿ). "ಗುಹೇಶ್ವರ"ದ ಜೊತೆಗೆ ಅಲ್ಲಮನ ಹೆಸರೂ ಸೇರಿಕೊಂಡು "ಗುಹೇಶ್ವರಲ್ಲಯ್ಯ" ಎಂಬ ಸೋಽಹಂಭಾವದ ಸೂಚನೆಯ ಅಂಕಿತವೂ ಹಲವೆಡೆ ಬಳಕೆಯಾಗಿದೆ[5]. ಮತ್ತೆ ಸ್ವತಂತ್ರ ಗುಹೇಶ್ವರ, ಅಪ್ರಮಾಣ ಗುಹೇಶ್ವರ, ಗುರುಗುಹೇಶ್ವರ ಎಂಬ ಸವಿಶೇಷಣಾಂಕಿತಗಳೂ ಸಿಗುವವು[6]. ಹಳಕಟ್ಟಿಯವರ 'ವಚನಕಾರರ ಅಂಕಿತಗಳ ಪಟ್ಟಿ'ಯಲ್ಲಿ "ಗುಹೇಶ್ವರಪ್ರಿಯ ನಿರಾಳಲಿಂಗ" ಎಂಬ ಒಂದು ಅಂಕಿತವು

---

1. ಅ. ವ. ಚಂ. 1320. 2. ಅ. ವ. ಚಂ. 1321. 3. ಅ. ವ. ಚಂ. 1296, 1297, 1304, 1305, 1315, 1316, 1317, ಇತ್ಯಾದಿ. 4. "ಐದರ ಗುಹೆಯೊಳಗೆ ಗುಹೇಶ್ವರನಾದೆ" (ಮನುಮುನಿಗುಮ್ಮಟಯ್ಯಗಳ ವಚನ : ಚೆನ್ನಂಜೇದೇವರು ಸಂಗ್ರಹಿಸಿದ ಆಚರಣೆವಚನ 227). "ದೇಹವೆಂಬ ಗುಹೆಗೆ ಈಶ್ವರನೆನಿಸಿಕೊಂಡು ಮಹಾ ಘನಲಿಂಗವು" (ಲಿಂ. ಲೀ. ವಿ. ಚಾರಿತ್ರ ಪುಟ 414). 5. ಅ. ವ. ಚಂ. 860, 865, 869, 1253, 1254. 6. ಅ. ವ. ಚಂ. 56, 370, 423,

ನಮ್ಮ ಕುತೂಹಲವನ್ನು ಕೆರಳಿಸಿ, ಆತನ ಆ ಅಂಕಿತದ ಪ್ರಿಯಶಿಷ್ಯನಾಗಿರಬಹುದೋ ಎನಿಸುವುದು.

## ಮೂಲಗಳು

ಅಲ್ಲಮಪ್ರಭುದೇವರ ವಚನಗಳು ನಾಲ್ಕು ವಿಧವಾದ ಮುಖ್ಯ ಮೂಲಗಳಲ್ಲಿ ಸಿಗುವವು: (1) ಷಟ್ಸ್ಥಲಾನುಕ್ರಮವಾಗಿ ಜೋಡಿಸಿ, ಅವಕ್ಕೆಲ್ಲ ವ್ಯಾಖ್ಯಾನವನ್ನು ಬರೆದು, ವೀರಶೈವಸಿದ್ಧಾಂತಪ್ರತಿಪಾದನೆಗೆ ಕ್ರಮವೇರ್ಪಟ್ಟಿರುವ ವಚನಗಳು. ಇವು ಸಿದ್ಧಾಂತಪ್ರತಿಪಾದನೆಗೆ ಅತ್ಯಂತ ಆವಶ್ಯಕವಾದ ಓರಣವಾದ ಜೋಡಣೆಯಲ್ಲಿವೆ. ಮೊದಲನೆಯ ಮೂಲವಾದ ಈ ರೀತಿಯ ಪ್ರಭುದೇವರ ವಚನಗಳನ್ನು ಸಂಗ್ರಹಿಸಿದ, ಮತ್ತು ಅವುಗಳನ್ನು ಒಂದು ವ್ಯವಸ್ಥಿತ ರೀತಿಯಲ್ಲಿ ಜೋಡಿಸಿ, ಅವಕ್ಕೆ ವ್ಯಾಖ್ಯಾನ ಬರೆದು, ಅವು ಸುಲಭ ಗಮ್ಯವಾಗುವಂತೆ ಮಾಡಿದ ಕೀರ್ತಿ ಮೊದಲು ಮಹಲಿಂಗನಿಗೆ ಸಲ್ಲಬೇಕಾದುದು. (ಈ ಮೂಲದ ವಿಚಾರವನ್ನು 27ನೇ ಪುಟದಲ್ಲಿ ನೋಡಿ) (2) ಶೂನ್ಯ ಸಂಪಾದನೆ (3) ಹಲವರ ವಚನಗಳನ್ನು ಒಂದೆಡೆ ಸೇರಿಸಿದ ರಾಶಿ ಮೂರನೆಯದು. (4) ಶರಣರ ಜೀವನಚರಿತ್ರಾತ್ಮಕವಾದ ವೀರಶೈವಪುರಾಣಗಳು ನಾಲ್ಕನೆಯ ಮತ್ತು ಕೊನೆಯ ಮುಖ್ಯ ಮೂಲ (ಇದರ ವಿವರಕ್ಕೆ 25ನೇ ಪುಟ ನೋಡಿ).

ಎರಡನೆಯ ಮೂಲ ಶೂನ್ಯಸಂಪಾದನೆ: ಇದು ಪ್ರಭುದೇವರನ್ನು ಕೇಂದ್ರಜ್ಯೋತಿರ್ನಾಯಕನನ್ನಾಗಿಟ್ಟುಕೊಂಡು, ಅವನಿಂದ ಆಕರ್ಷಿತರಾದ ಹಲವು ಜನ ಸಾಧಕರನ್ನೂ, ಸಿದ್ಧಂಮನ್ಯರನ್ನೂ ತನ್ನ ಬೆಳಕಿನ ತುಣುಕಿನ ಭಣಿತೆಗಳಿಂದ ಉದ್ದೀಪಿಸಿ ಉದ್ಧರಿಸಿದ ತಾರಕಸನ್ನಿವೇಶಗಳನ್ನು ವಚನರಚಿತ ಸಂಭಾಷಣೆಗಳಲ್ಲಿ ಚಿತ್ರಿಸಿರುವ ಅಪೂರ್ವಕೃತಿಯಿದು. ಇಂತಹ ಕೃತಿಯನ್ನು ಮೊದಲಿಗೆ ರಚಿಸಿದವನು ಶಿವಗಣಪ್ರಸಾದಿ ಮಹದೇವಯ್ಯ. ಆಮೇಲೆ ಅದನ್ನು ಗುಮ್ಮಳಾಪುರದ ಸಿದ್ಧಲಿಂಗದೇವರು, ತದನಂತರ ಗೂಳೂರು ಸಿದ್ಧವೀರಣ್ಣೊಡಯರು ಸಂಸ್ಕರಿಸಿದ್ದಾರೆ. ಅಲ್ಲಮನ ವಚನಗಳನ್ನು ಸಂಗ್ರಹಿಸಿ ಸಂಸ್ಕರಿಸುವಾಗ ಈ ಕೊನೆಯಾತನ ಶೂನ್ಯಸಂಪಾದನೆಯೂ ಒಂದು ಮುಖ್ಯವಾದ ಆಕರ.

ಶೂನ್ಯಸಂಪಾದನೆಯ ವಚನಗಳ ಬಗ್ಗೆ ಮತ್ತು ಶೂನ್ಯಸಂಪಾದನೆಯಿಂದ ವಚನಗಳನ್ನು ಸಂಗ್ರಹಿಸಿರುವಂತೆ ಕಂಡುಬರುವ ಇತರ ವಚನಸಂಕಲನಗ್ರಂಥಗಳಲ್ಲಿನ ವಚನಗಳ ಬಗ್ಗೆ ಒಂದು ಎಚ್ಚರಿಕೆಯಿರಬೇಕು. ಅವುಗಳಲ್ಲೇನಾದರೂ ಸಂಭಾಷಣೆಗೆ ಹೊಂದಿಕೊಳ್ಳುವ 'ಸಂಬೋಧನೆ'ಗಳೂ, ಆ ಸಂಭಾಷಣೆಗಳ ವಿಷಯವಾದ ಶರಣರ ಹೆಸರುಗಳೂ ಇದ್ದರೆ ಅವು ಮೂಲವಚನಕ್ಕೆ ಸೇರಿದ ಭಾಗ

ಗಳಲ್ಲವೆಂದೂ, ಅವನ್ನು ಆಮೇಲೆ ಶೂನ್ಯಸಂಪಾದನಕಾರರಾದ ಮಹದೇವಯ್ಯ ಮುಂತಾದವರು ಸೇರಿಸಿರುವರೆಂದೂ ನೆನಪಿನಲ್ಲಿಡಬೇಕು. ಶೂನ್ಯಸಂಪಾದನೆಗಳಲ್ಲಿಯಂತೆ ಅಲ್ಲಮಪ್ರಭುದೇವರೊಡನೆ ಮಿಕ್ಕ ಶರಣರ ಸಂಬಂಧವಾಗಿ ನಡೆದ ಘಟನೆಗಳು ವಾಸ್ತವಿಕವಾಗಿ ಜರುಗಿದವೆಂದೇ ಭಾವಿಸಿದಾಗ್ಯೂ, ಆ ಸನ್ನಿವೇಶದಲ್ಲಿ ಆ ಶರಣರ ನಡುವೆ ನಡೆದಿರಬಹುದಾದ ಸಂಭಾಷಣೆಯ ವಿವರಗಳಲ್ಲಿ ಬಹುಭಾಗ ಶೂನ್ಯ ಸಂಪಾದನಕಾರರ ಕಲ್ಪನೆಯನ್ನು ಮಾತ್ರ ಅವಲಂಬಿಸಿದೆ. ಅವುಗಳಲ್ಲಿ ಔಚಿತ್ಯವಿರುವುದಾದರೂ, ಅವು ಚಾರಿತ್ರಕವೆನಿಸಿಕೊಳ್ಳುವಷ್ಟು ಯಥಾವತ್ತಾದವುಗಳಲ್ಲ. ಆ ಸಂದರ್ಭಕ್ಕೆ ಬಳಸಿಕೊಂಡಿರುವ ವಚನಗಳಲ್ಲಿನ ವಸ್ತು ಅಥವಾ ಭಾವ ಅದಲುಬದಲಾಗಿಲ್ಲವಾದರೂ, ಸಂಭಾಷಣೆಗೆ ಹೊಂದಿಕೊಳ್ಳಲು ಬೇಕಾದ ಸಂಬೋಧನೆಗಳೂ, ಮತ್ತು ಸಂಭಾಷಣೆ ಮಾಡುವಾಗ ಯಾವ ಶರಣರ ಬಾಯಿಂದ ಆ ವಚನ ಹೊರಹೊಮ್ಮಿತೆಂದು ಸಂಪಾದನಕಾರನು ಭಾವಿಸಿದ್ದನೋ ಅವರ ಹೆಸರುಗಳೂ ಶೂನ್ಯಸಂಪಾದನಕಾರರಿಂದ ಆ ವಚನಕ್ಕೆ ಸೇರಿಸಲ್ಪಟ್ಟಿರುವುದರಿಂದ—ನಿಷ್ಕೃಷ್ಟವಾಗಿ ಹೇಳುವುದಾದರೆ—ಅವು ಪ್ರಕ್ಷಿಪ್ತಗಳೆನ್ನಲೇಬೇಕಾಗುವುದು. ಇಂಥವಕ್ಕೆ ಮುಂದೆ ಕೆಲವು ಉದಾಹರಣೆಗಳನ್ನು ಕೊಟ್ಟಿದೆ :—

| ಬ. ವ. | ಶೂ. ಸಂ. |
|---|---|
| 1. ಕೂಡಲಸಂಗಯ್ಯ, ಈ ನಿಮ್ಮನುಭಾವವ ಮಾತಿನ ಮಥನವೆನ್ನಬಹುದೆ ? (358 ಬ.ಹೆ.ವ.) (ಸರ್ವಪುರಾತನರ ವಚನಗಳ ಕಟ್ಟಿಂದ ಉದ್ಧೃತ) | 1. ಕೂಡಲಸಂಗಮದೇವ, ನಿಮ್ಮನುಭಾವವ ಮಾತಿನ ಮಥನವೆಂದು ನುಡಿಯಬಹುದೇ ಪ್ರಭುವೇ ? |
| 2. ಕೂಡಲಸಂಗಮದೇವಯ್ಯ, ನಿಮ್ಮ ಮಹಾನುಭಾವಮಥನದಿಂದ ಎನ್ನಲ್ಲಿ ನಿಜವ ನೆಲೆಗೊಳಿಸಾ ! (ಲಿಂ. ಲೀ. ವಿ.ಚಾ. ಉದ್ಧೃತ)(ಬ.ಹೆ.ವ.147) | 2. ಕೂಡಲಸಂಗಮದೇವಯ್ಯ, ನಿಮ್ಮ ಮಹಾನುಭಾವರ ಮಥನದಿಂದ ಎನ್ನಲ್ಲಿ ನಿಜವ ನೆಲೆಗೊಳಿಸಾ ಪ್ರಭುವೆ. |
| 3. ನಾನಿದಕ್ಕಂಜೆ ಕೂಡಲಸಂಗಮದೇವ (ಬ.ಹೆ.ವ. 129) (ಸಿಂಗಿರಾಜ ಪುರಾಣೋದ್ಧೃತ) | 3. ಕೂಡಲಸಂಗಮದೇವಯ್ಯ,ಮಡಿವಾಳ ಮಾಚಿತಂದೆಯ ಕೃಪೆಯುಳ್ಳನ್ನಕ್ಕರ ನಾನಂಜೆನು. |
| 4. ಇಂದೆನ್ನ ಮನೆಗೆ ಪ್ರಮಥರು ಬಂದಹರೆಂದು ಗುಡಿತೋರಣವ ಕಟ್ಟಿ, ಷಡುಸಮ್ಮಾರ್ಜನೆಯ ಮಾಡಿ, ರಂಗವಾಲಿಯನಿಕ್ಕಿ 'ಉಘೇ ಚಾಂಗು ಭಲಾ' ಎಂಬೆ, ತಮ್ಮ ಒಕ್ಕುದನಿಕ್ಕಿ ಸಲಹುವರಾಗಿ ಕೂಡಲಸಂಗನ ಶರಣರು (ಬ.ವ 376) | 4. ಮನದೊಡೆಯ ಮನೆಗೆ ಬಂದರೆ ಕನಕದ ತೋರಣವ ಕಟ್ಟಿ, ಷಡುಸಮಾರ್ಜನೆಯ ಮಾಡಿ ರಂಗವಾಲಿಯನಿಕ್ಕಿ 'ಉಘೇ ಚಾಂಗು ಭಲಾ' ಎಂಬೆ ಕೂಡಲಸಂಗಮದೇವ, ನಿಮ್ಮ ಶರಣ ಪ್ರಭುದೇವರು ಬಂದರೆ ಉಬ್ಬಿಕೊಬ್ಬಿ ನಲಿದಾಡುವೆ. |

ಇವುಗಳ ಜೊತೆಗೆ ಶೂನ್ಯಸಂಪಾದನೆಯ ವಚನವೊಂದು ಚೆನ್ನಂಜೇದೇವರು ಸಂಕಲಿಸಿದ ಮಿ. ಸ್ತ್ರೋ. (ವಚನ 33) ದಲ್ಲಿ ಪಡೆದಿರುವ ರೂಪಾಂತರವನ್ನು ಗಮನಿಸಿ:

| ಶೂನ್ಯಸಂಪಾದನೆ | ಮಿಶ್ರಸ್ತ್ರೋತ್ರ |
|---|---|
| ಕೂಡಲಸಂಗಮದೇವಯ್ಯ, ಚೆನ್ನ ಬಸವಣ್ಣನ ಕರುಣದಿಂದೆ ಮಡಿವಾಳನೆಂಬ ಪರುಷ ಸಾಧ್ಯವಾಯಿತ್ತಯ್ಯ ಎನಗೆ (ಬ. ಹೆ. ವ. 196) | ಕೂಡಲಸಂಗಮದೇವಯ್ಯ, ಚೆನ್ನಬಸವಣ್ಣನ ಕರುಣದಿಂದೆ ಮಡಿವಾಳನೆಂಬ ಪರುಷ ಸಾಧ್ಯವಾಯಿತ್ತಲ್ಲಾ ಪ್ರಭುವೆ (ಮಿ. ಸ್ತ್ರೋ. 33) |

ಶೂನ್ಯಸಂಪಾದನೆಯ ಕರ್ತೃಗಳಿಂದಾಗಿರುವ ಈ ಬಗೆಯ ಸಾಂದರ್ಭಿಕ ಪ್ರಕ್ಷಿಪ್ತಗಳು ಕೇವಲ ಬಸವೇಶ್ವರನ ವಚನಗಳಿಗೆ ಮಾತ್ರ ಪರಿಮಿತವಾಗದೆ ಸಾರ್ವತ್ರಿಕವಾಗಿವೆ.

ಪ್ರಭುದೇವರ ವಚನಗಳು ಶೂನ್ಯಸಂಪಾದನೆಯಲ್ಲಿ ಪಡೆದಿರುವ ಆಂಶಿಕ ರೂಪಾಂತರಗಳನ್ನು "ಅಲ್ಲಮನ ವಚನಚಂದ್ರಿಕೆ"ಯ ಪಾಠಾಂತರಗಳಿಂದ ತಿಳಿಯಬಹುದು.

ಮೂರನೆಯ ಮೂಲದ ಮೊದಲನೆಯ ಪ್ರಭೇದ: ಎಲ್ಲ ವಚನಕಾರರ ವಚನಗಳಿಗೂ ಸಮಾನ ಸ್ಥಾನವಿದ್ದು ಅವನ್ನು ಸ್ಥಲಾನುಕ್ರಮದಲ್ಲಿ ಜೋಡಿಸಿ, ಅವಕ್ಕೆ ವ್ಯಾಖ್ಯಾನ ಬರೆದು, ಭಕ್ತಿಕಾಂಡ (ಷಟ್‌ಸ್ಥಲಮಾರ್ಗ) ವನ್ನು ವಿವರಿಸಿರುವ ಗ್ರಂಥಗಳು. ಇವುಗಳಲ್ಲಿ ನಾಲ್ಕು ಪ್ರಕಾರ:

(i) ಕಲ್ಲುಮಠದ ಪ್ರಭುದೇವರ ಲಿಂಗಲೀಲಾವಿಲಾಸ ಚಾರಿತ್ರ.

(ii) ಶಿವಪುರಾಣಗಳ ಆಧಾರಗಳೊಡನೆ ಅದೇ ಭಕ್ತಿಮಾರ್ಗವನ್ನು ವಿವರಿಸಲು ಏಕೋತ್ತರ ಶತಸ್ಥಲಾನುಕ್ರಮದಲ್ಲಿ ಶರಣರ ವಚನಗಳನ್ನು ಅಳವಡಿಸಿರುವ ಗುಬ್ಬಿ ಮಲ್ಲಣಾರ್ಯನ ಗಣಭಾಷಿತರತ್ನಮಾಲೆ. [ಅಮರಗುಂಡದ ಮಲ್ಲೇಶ್ವರಾಚಾರ್ಯ—ಶೂಲವನೇರಿದ ಗುರುಭಕ್ತ—ಮಲ್ಲಿಕಾರ್ಜುನ ಪಂಡಿತ—ನಾಗನಾಥಾರ್ಯ—ಅಮರಗುಂಡಾಚಾರ್ಯ—ಗುಬ್ಬಿಯ ಮಲ್ಲಣಾಚಾರ್ಯ (ಈತನೇ ಗಣಭಾಷಿತ ರತ್ನಮಾಲೆಯ ಕರ್ತೃ) ಇವನ ಮೊಮ್ಮಗ—ಮಲ್ಲಣಾರ್ಯ (ಈತನು ವೀರಶೈವಾಮೃತ ಪುರಾಣದ ಕರ್ತೃ).]

(iii) ಮಹಲಿಂಗನ ಏಕೋತ್ತರ ಶತಸ್ಥಲ. ಅಲ್ಲಮನ ವಚನಚಂದ್ರಿಕೆಯಲ್ಲಿ ಮೊದಲಿಂದ 694 ವಚನಗಳಿಗೆ ವ್ಯಾಖ್ಯಾನವನ್ನು ಬರೆದಿರುವವನೂ, ಈ ಏಕೋತ್ತರ ಶತಸ್ಥಲವನ್ನು ಸಂಕಲನ ಮಾಡಿರುವವನೂ ಒಂದೇ ವ್ಯಕ್ತಿ. ಈತನು ತನಗೆ ಆಗ್ಗೆ ದೊರೆತ ಪ್ರಭುದೇವರ ವಚನಗಳನ್ನೆಲ್ಲ ಒಂದೆಡೆ

ಸೇರಿಸಿ, ಷಟ್ಸ್ಥಲಾನುಕ್ರಮದಲ್ಲಿ ವಿಂಗಡಿಸಿ ವ್ಯಾಖ್ಯಾನ ಬರೆದ. ಆಮೇಲೆ ಮಿಕ್ಕ ಹಲವಾರು ವಚನಕಾರರ ವಚನಗಳನ್ನೂ ಮತ್ತೆ ತನಗೆ ದೊರೆತ ಪ್ರಭುದೇವರ ವಚನಗಳನ್ನೂ ಸೇರಿಸಿ, ಏಕೋತ್ತರ ಶತಸ್ಥಲಾನುಕ್ರಮದಲ್ಲಿ ವಿಂಗಡಿಸಿ ಕೊಟ್ಟಿದ್ದಾನೆ. ಈತ ಹುಲಿಗೆಱೆಯವನು. ವಚನಸಂಕಲನಕಾರರಲ್ಲಿ ಇವನು ಅತ್ಯಂತ ಪ್ರಾಚೀನನಾಗಿರುವುದರ ಜೊತೆಗೆ, ಈತನ ಗುರುಪರಂಪರೆ[1] ಯಲ್ಲಿ ಉರಿಲಿಂಗಪೆದ್ದಿ, ವಿಶ್ವೇಶ್ವರಪೆದ್ದಿ ಎಂಬೀರ್ವರು ಪ್ರಸಿದ್ಧ ವಚನಕಾರರಾಗಿದ್ದರು. ಆದ್ದರಿಂದಲೇ ಈತನ ವಚನಸಂಕಲನಗಳು ಹೆಚ್ಚು ವಿಶ್ವಾಸಾರ್ಹ.

(iv) ಸಿದ್ಧಲಿಂಗನ ಏಕೋತ್ತರಶತಸ್ಥಲ :—ಇದರಲ್ಲಿ ಬರುವ ಪ್ರಭುದೇವರ ವಚನಗಳೂ, ಹಾಡು (ಗೀತೆ) ಗಳೂ, ಮಹಲಿಂಗನ ಏಕೋತ್ತರ ಶತಸ್ಥಲದಲ್ಲಿಯೂ ಅದೇ ಪರಿವಿಡಿಯಲ್ಲಿ ಪಾಠವ್ಯತ್ಯಾಸವಿಲ್ಲದೆ ಸಿಗುವವು. ಆದ್ದರಿಂದ ಇದು ಮಹಲಿಂಗನ ಏಕೋತ್ತರ ಶತಸ್ಥಲದ ಅತ್ಯಂತಸಂಕ್ಷಿಪ್ತ ಸ್ಥೂಲ ರೂಪವೇ ಆಗಿದೆಯೆಂದು ಹೇಳಬಹುದು.

ಮೂರನೆಯ ಮೂಲದ ಎರಡನೆಯ ಪ್ರಭೇದ: ಒಂದು ನಿರ್ದಿಷ್ಟ ವಿಷಯದ ಬಗ್ಗೆ ಇರುವ–ಹಲವು ವಚನಕಾರರ–ವಚನಗಳನ್ನು ಒಳಗೊಂಡ ಸಂಕಲನ

---

1. (ಮಹಲಿಂಗನ ಏಕೋತ್ತರಶತಸ್ಥಲದ ಆದಿಅಂತ್ಯಗಳಲ್ಲಿನ ಒಕ್ಕಣೆ :–) ಪರಶಿವ—ನಂದಿಕೇಶ್ವರ—ದೂರ್ವಾಸ—ಸ್ವಯಂಭು ತ್ರಿಣೇತ್ರದೇವರು—ಉರಿಲಿಂಗಪೆದ್ದಣ್ಣಗಳು—ವಿಶ್ವೇಶ್ವರ ಪೆದ್ದಣ್ಣಗಳು (ಪ್ರಭುದೇವರ ಷಟ್ಸ್ಥಲದ ವಚನಗಳ ಪ್ರತಿಯ ಆರಂಭದಲ್ಲಿ ಸರ್ವೇಶ್ವರದೇವರು ಎಂದಿದೆ)—ಸದಾಶಿವದೇವರು (ಪ್ರಭುದೇವರ ಷಟ್ಸ್ಥಲದ ವಚನಗಳ ಪ್ರತಿಯ ಆರಂಭದಲ್ಲಿ ವಿಶ್ವೇಶ್ವರದೇವ ಪೆದ್ದಣ್ಣಗಳು ಎಂದಿದೆ)–ಸಂಹಿತೆಯ ಕಾಳಿದಾಸಭಟ್ಟರು–ಸರ್ವೇಶ್ವರದೇವರು (ಪ್ರಭುದೇವರ ಷಟ್ಸ್ಥಲದ ವಚನಗಳ ಪ್ರತಿಯ ಆರಂಭದಲ್ಲಿ ಸದಾಶಿವದೇವರು)–ಪ್ರಣಮಿದೇವರು–ಈಶಾನ್ಯ(ನ?)ದೇವರು-ಚೆನ್ನಿದೇವರು (ಪ್ರಭುದೇವರ ಷಟ್ಸ್ಥಲದ ವಚನಗಳ ಪ್ರತಿಯ ಆರಂಭದಲ್ಲಿ ಮೋನಿದೇವರು)—ಚೆನ್ನಸೋಮಯ್ಯದೇವರು–ಬಾಗಿಯ ಬಂಕನಾಥದೇವರು–ಶಂಕರದೇವರು–ಗಂಗಾಧರದೇವರು–ಬಂಕನಾಥದೇವರು–ಪುರಾಣದಮಾಯಿದೇವಪಂಡಿತರು–ಬಂಕಯ್ಯದೇವರು– ಮಹಾಲಿಂಗದೇವರು–ಕುಮಾರ ಬಂಕನಾಥದೇವರು–ಭಕ್ತಿಭಂಡಾರಿಜಕ್ಕಣ್ಣ (ಈತನಿಗೋಸ್ಕರವೇ ಮಹಾಲಿಂಗದೇವರು ಷಟ್ಸ್ಥಲವನ್ನು ಪ್ರಭುದೇವರ ವಚನಗಳಿಂದ ಸಂಕಲ್ಪಿಸಿ ಸುಲಲಿತವಾಕ್ಯಾಮೃತವಾಗಿ ಆ ವಚನಗಳನ್ನು ಟೀಕಿಸಿಯೂ, ಮತ್ತು ಅದೇ ಷಟ್ಸ್ಥಲವನ್ನು ಬಸವರಾಜದೇವರು ಮುಖ್ಯವಾದ ಅಸಂಖ್ಯಾತ ಮಹಾಗಣಂಗಳ ಪರಮ ವಾಕ್ಯಾಮೃತವಾದ ವಚನಗಳ ಪ್ರತ್ಯೇಕಸಂಕಲನ (ಏಕೋತ್ತರಶತಸ್ಥಲ) ವನ್ನು ಮಾಡಿಯೂ ತನ್ನ ಪ್ರಶಿಷ್ಯನಾದ ಜಕ್ಕಣ್ಣನಿಗೆ ಪರಮಾರ್ಥತತ್ವಬೋಧೆಯನ್ನು ಬೋಧಿಸಿದನು.

ಗ್ರಂಥಗಳು : ಇವುಗಳಲ್ಲಿ ಚೆನ್ನಂಜೇದೇವರು ಮಾಡಿರುವ ಸಂಕಲನಗಳು ಬಹಳ ಮುಖ್ಯವಾದುವು. ಇವುಗಳು: ಕ್ರಮವಾಗಿ ಬೇರೆ ಬೇರೆ ಶರಣರು ಬಸವಣ್ಣನನ್ನು ಕುರಿತು ಆಡಿದ ಭಕ್ತಿ ಗೌರವದ ವಚನಗಳಿರುವ "ಬಸವ ಸ್ತೋತ್ರದ ವಚನ ಗಳು,"* ಶರಣರು ಒಬ್ಬರನ್ನೊಬ್ಬರು ಪ್ರಸ್ತಾಪಿಸಿ ಸ್ತುತಿಸಿರುವ ವಚನಗಳ ಸಂಕಲನವಾದ "ಮಿಶ್ರ ಸ್ತೋತ್ರದ ವಚನಗಳು"*, ಮತ್ತು ವೀರಶೈವದ ಆಚರಣೆಯ ಸಂಬಂಧವಾದ ಶರಣರ ವಚನಗಳ ಸಂಕಲನ ರೂಪವಾದ "ಆಚ ರಣೆಯ ವಚನಗಳು"*. ಇವುಗಳ ಜೊತೆಗೆ ಅವಿದಿತನೊಬ್ಬನಿಂದ ಸಂಕಲನ ವಾಗಿರುವ "ಬಿರುದಾವಳಿ ಸ್ತೋತ್ರದ (ಶಿವಪ್ರಾರ್ಥನಾರೂಪವಾದ) ವಚನ ಗಳು" ಮತ್ತೊಂದು ಸಂಕಲನ.

ಮೂರನೆಯ ಮೂಲದ ಮೂರನೇ ಪ್ರಭೇದ : ಹಲವು ವಚನಕಾರರ ತಮಗೆ ಸಿಕ್ಕಿದಷ್ಟು ವಚನಗಳನ್ನು ಒಬ್ಬರದಾದ ಮೇಲೆ ಮತ್ತೊಬ್ಬರದನ್ನು ಜೋಡಿಸಿ ಸಂಗ್ರಹಿಸಿರುವ ಆಕರಗಳು ಹಲವಿವೆ. ಅವುಗಳಲ್ಲಿ ಅಲ್ಲಮನ ವಚನ ಚಂದ್ರಿಕೆಗೆ ಬಳಸಿಕೊಂಡಿರುವಂಥವು :—(i) "ಮೂರುಸಾವಿರ ವಚನಗಳ ಕಟ್ಟು." ಇದರಲ್ಲಿ ಹಲವು ವಚನಕಾರರ[1] ವಚನಗಳ ಜೊತೆಗೆ "ಪ್ರಭುದೇವರ ಸಂಪಾದನೆಯ ವಚನಗಳು" ಎಂಬ ಶೀರ್ಷಿಕೆಯಲ್ಲಿ ಬೇರೆ ಬೇರೆ ಶೂನ್ಯ ಸಂಪಾದನೆಗಳಿಂದ ಸಂಗ್ರಹಿಸಿದ ಹಲವು ವಚನಗಳಿವೆ[2]. ಈ ಸಂಕಲನಕಾರನು ತನ್ನ ಸಂಕಲನ ಗ್ರಂಥದ ಕೊನೆಗೆ "ಸಂಪಾದನೆ ಬೋಳ ಬಸವೇಶ್ವರ ದೇವರು ಮುಖ್ಯವಾದ ಬೋಳಚೆನ್ನಮಲ್ಲಿಕಾರ್ಜುನ ದೇವರು, ಸಂಪಾದನೆಯ ಮುಗ್ಧ ಸಂಗಯದೇವರು ಮುಂತಾದ ಎಲ್ಲಾ ಶಿವಶರಣರುಗಳ ಪಾದಪದ್ಮಂಗಳಿಗೆ ನಮೋ ನಮೋ" ಎಂದಿದ್ದಾನೆ.

ಇದೇ "ಮೂರು ಸಾವಿರ ವಚನಗಳ ಕಟ್ಟು" ಎಂಬ ಗ್ರಂಥದ ಇನ್ನೊಂದು

---

* ಇಲ್ಲಿನ ಪ್ರಭುದೇವರ ವಚನಗಳಿಗೂ ಗೂಳೂರು ಸಿದ್ಧವೀರಣ್ಣೊಡೆಯರ ಶೂನ್ಯಸಂಪಾದನೆಯಲ್ಲಿನ ಆ ವಚನಗಳಿಗೂ ಬಹಳ ಸಾಮ್ಯವಿದೆ. ಮತ್ತು ಅವು ಒಂದೇ ಕ್ರಮದಲ್ಲಿವೆ. 1. ಕೋಲಶಾಂತಯ್ಯ, ಮಧುವಯ್ಯ, ಬಿಬ್ಬಿಬಾಚಯ್ಯ, ಮೆಱೆಮಿಂಡಯ್ಯ, ಅರಿವಿನ ಮಾರಿತಂದೆ, ಶಿವಲೆಂಕಮಂಚಣ್ಣ, ಥಕ್ಕೆಯ ಬೊಮ್ಮಣ್ಣ, ಮನುಮುನಿಗುಮ್ಮಟ ದೇವ, ಕಲ್ಯಾಣದ ವಚನಭಂಡಾರಿ ಶಾಂತರಸ, ಅಂಬಿಗರ ಚೌಡಯ್ಯ, ಉರಿಲಿಂಗದೇವ, ಏಲೇಶ್ವರಕೇತಯ್ಯ, ಮಾದಾರಧೂಳಯ್ಯ, ಮೋಳಿಗಯ್ಯ ಪ್ರಸಾದಿ ಭೋಗಣ್ಣ, ಅವಸರದ ರೇಚಣ್ಣ, ಬಾಹೂರ ಬೊಮ್ಮಣ್ಣ, ತುಱುಗಾಹಿ ರಾಮಣ್ಣ, ಮಹಾದೇವಿಯಮ್ಮ, ದಾಸೋಹದ ಸಂಗಣ್ಣ, ನಗೆಯ ಮಾರಿತಂದೆ, ಸಗರದ ಬೊಮ್ಮಣ್ಣ, ಗುಪ್ತಮಂಚಣ್ಣ, ಸುಂಕದ ಬಂಕಣ್ಣ, ಆದಯ್ಯ. 2. O.R.I. K. 648 (ಗರಿ 65–79) ನೋಡಿ.

ಪ್ರತಿಯಲ್ಲಿ[1] ಹಿಂದಿನ ಪ್ರತಿಯಲ್ಲಿನ ವಚನಗಳೆಲ್ಲವೂ ಇದ್ದು, ಜೊತೆಗೆ ಆ ಪ್ರತಿಯ ಕೊನೆಯಲ್ಲಿ ಆ ವಚನಕಾರರ ಮತ್ತ್ರಷ್ಟಷ್ಟು ಹೊಸ ವಚನಗಳು ಕ್ರಮವಾಗಿ ಸೇರ್ಪಡೆಯಾಗಿವೆ.

ಈ ಮೇಲಣ ಎರಡು ಆಕರಗಳಿಂದ ಸಿಗುವ ಪ್ರಭುದೇವರ ವಚನಗಳೆಲ್ಲ ಇನ್ನೊಂದು ಕಾಗದದ ಪ್ರತಿಯಲ್ಲೂ[2] ಹೆಚ್ಚು ಕಡಿಮೆ ಅದೇ ಪರಿವಿಡಿಯಲ್ಲಿ ಪಾಠವ್ಯತ್ಯಾಸವಿಲ್ಲದೆ ದೊರೆಯುವವು.

ಇದೇ ಗುಂಪಿಗೆ ಸೇರುವ ಇನ್ನೊಂದು ಉಪಮೂಲವೆಂದರೆ—ಪ್ರೊ. ಡಿ. ಎಲ್. ನರಸಿಂಹಾಚಾರ್ಯರ ಬಳಿಯಿರುವ "ವಚನಸಾರ"ವೆಂಬ ಓಲೆಯ ಗ್ರಂಥ. ಅದರಲ್ಲಿ ಹಲವರ[3] ವಚನಗಳ ಜೊತೆಗೆ ಅಕಾರಾದಿಯಲ್ಲಿ ಜೋಡಿಸಿದ ಪ್ರಭುದೇವರ ವಚನಗಳು ಮೇಲೆ ಮೇಲೆ ಹೇರಳವಾಗಿ ಸಿಗುವವು. O.R.I. K 499 ನೇ ಓಲೆಯ ಗ್ರಂಥದಲ್ಲೂ ಮೇಲೆ ಹೇಳಿದ ವಚನಸಾರದ ಪರಿವಿಡಿಯಲ್ಲೇ ಪ್ರಭುದೇವರ ವಚನಗಳು ಸಿಗುತ್ತವೆ. ಆದರೆ ಮೊದಲದೆಯದರಲ್ಲಿನ

---

1. O. R. I. ನಲ್ಲಿದ್ದ ಪರಸ್ಥಳದ ಪ್ರತಿ. ಅಧಿಕವಚನಗಳಿರುವ ಇದರ ಪರಿಶಿಷ್ಟದಲ್ಲಿ ಪ್ರಭುದೇವರ ನಲವತ್ತೇಳು ವಚನಗಳಿವೆ. ಈ ಎಲ್ಲ ವಚನಗಳೂ—ಐದು ವಚನಗಳು ಹೊರತಾಗಿ O.R.I. K. 499 ನೇ ಪ್ರತಿಯಲ್ಲಿ ಅದೇ ಕ್ರಮದಲ್ಲಿ ಪಾಠವ್ಯತ್ಯಾಸವಿಲ್ಲದೆ ದೊರೆಯುತ್ತವೆ. ಈ ವಚನಗಳೇ ಬಹುಮಟ್ಟಿಗೆ "ವಚನಸಾರ" ದಲ್ಲಿಯೂ ದೊರೆಯುತ್ತವೆ. O.R.I. K. 648 ರಲ್ಲಿ (ಮೂರು ಸಾವಿರ ವಚನಗಳ ಕಟ್ಟಿನಲ್ಲಿ)ನ 4, 10, 11, 12, 17, 18, 19, 20ನೇ ವಚನಕಾರರನ್ನು ಬಿಟ್ಟು, ಮತ್ತು ಮೈದುನ ರಾಮಣ್ಣ, ದಾಸೋಹಿ ದಾಸಣ್ಣ ಎಂಬಿಬ್ಬರು ವಚನಕಾರರನ್ನು ಸೇರಿಸಿಕೊಂಡು, ಆ ವಚನಕಾರರ ನಾಮಕ್ರಮದಲ್ಲಿಯೇ ಅವರ ಬೆಡಗಿನ ವಚನಗಳನ್ನು ಕೊಟ್ಟು ಆಮೇಲೆ, ವೈದ್ಯ ಸಂಗಣ್ಣ, ಘಟ್ಟವಾಳಯ್ಯ, ಗಾಣದ ಕನ್ನಪ್ಪ, ಬಹುರೂಪಿ ಚೌಡಯ್ಯ, ಬೊಕ್ಕಸದ ಚಿಕ್ಕಣ್ಣ, ಗೋರಕ್ಷ, ಕಂಭದ ಮಾರಿತಂದೆ, ರಕ್ಕಸದ ಬೊಮ್ಮಣ್ಣ, ಕದಿರೇ ರೆಮ್ಮವ್ವೆ, ಕನ್ನದ ಮಾರಿತಂದೆ, ಕಲಕೇತಯ್ಯ, ಕಾಮವಟ್ಟದ ಭೀಮಣ್ಣ, ಉಗ್ಗಡಿಸುವ ಘಟ್ಟಿದೇವಯ್ಯ, ವೀರಗೊಲ್ಲಾಳ, ಅನಾಮಿಕನಾಚಯ್ಯ, ತೆಲುಗೇಶಮಸಣಯ್ಯ, ಬಳ್ಳೇಶ ಮಲ್ಲಯ್ಯ, ಹೊಡೆಹುಲ್ಲಬಂಕಣ್ಣ, ಒಕ್ಕಲಿಗಮುದ್ದಯ್ಯ, ಕೀಲಾರದ ಭೀಮಣ್ಣ, ಬಾಚಿ ಕಾಯಕದ ಬಸವಣ್ಣ, ಸೂಜಿಕಾಯಕದ ರಾಮಿತಂದೆ, ಕನ್ನಡಿಕಾಯಕದ ಅಮ್ಮಿದೇವಯ್ಯ, ಮಲಹರಕಾಯಕದ ಚಿಕ್ಕದೇವಯ್ಯ, ಹಡಪದಪ್ಪಣ್ಣ ಇಷ್ಟು ಜನರ ಕೆಲ ಕೆಲವು ಬೆಡಗಿನ ವಚನಗಳನ್ನೂ ಈ ಕಾಗದದ ಕಡತ (O.R.I.K.B. 448) ದಲ್ಲಿ ಕೊಟ್ಟಿದೆ. ಇದರಲ್ಲಿ ಒಟ್ಟು 400 ಬೆಡಗಿನ ವಚನಗಳೂ ಅವಕ್ಕೆ ವ್ಯಾಖ್ಯಾನವೂ ಇವೆ. ಈ ವ್ಯಾಖ್ಯಾನವು ಸಿಂಗಳದ ಸಿದ್ಧಬಸವರಾಜದೇವರದಿರಬಹುದು.
2. O.R.I.K.A. 294.
3. ಚೆನ್ನಬಸವಣ್ಣ, ಅಕ್ಕಮಹಾದೇವಿ, ಹಾವಿನ ಹಾಳಕಲ್ಲಯ್ಯ, ಬಹುರೂಪಿ ಚೌಡಯ್ಯ, ಗಜೇಶ್ವರ ಮಸಣಯ್ಯ, ಉರಿಲಿಂಗದೇವ, ಜೇಡರ ದಾಸಯ್ಯ, ಮುಕ್ತಾಯಕ್ಕ, ಸಿಮ್ಮಲಿಗೆ ಚೆಂದಯ್ಯ, ಅಂಬಿಗಚೌಡಯ್ಯ, ಸಿದ್ಧರಾಮ, ಸಕಳೇಶಮಾದರಸ ಮುಂತಾದವರು.

ವಚನಗಳೆಲ್ಲ ಇದರಲ್ಲಿ ಸಿಗುವುದಿಲ್ಲ. ಮತ್ತು ಅದರಲ್ಲಿಲ್ಲದ ಕೆಲವು ವಚನಗಳೂ ಇದರಲ್ಲಿವೆ. ಆದುದರಿಂದ ಇವೆರಡಕ್ಕೂ ಒಂದೇ ಮೂಲದಿಂದ ವಚನ ಸಂಗ್ರಹಣೆಯ ಕಾರ್ಯ ನಡೆದಿರಬಹುದು. ಈ ಪ್ರತಿಯ ಕೊನೆಗಿರುವ ಒಕ್ಕಣೆಯಿಂದ ಇದು ಎಲಹಂಕನಾಡಪ್ರಭು ಮುಮ್ಮುಡಿಕೆಂಪಯ್ಯಗೌಡರಿಗೆ ಮಂಗಳವಾಗಲೆಂದು ವೆಂಕಟಪತಿಯೆಂಬವನು ಶಾರ್ವರಿಸಂವತ್ಸರ ಮಾಘ ಬಹುಳ 14 (ಅಂದರೆ ಕ್ರಿ.ಶ. 1161)ರಲ್ಲಿ ಬರೆದದ್ದು ಎಂದು ತಿಳಿದುಬರುವುದು.

ನಾಲ್ಕನೇ ರೀತಿಯ ಮುಖ್ಯ ಮೂಲ: ಶಿವಕವಿಗಳು ಶಿವಶರಣರ ಮೇಲೆ ಕಾವ್ಯಗಳನ್ನು ಬರೆಯುವಾಗ ಆ ಶರಣರು ವಚನಕಾರರಾಗಿದ್ದರೆ ತಮ್ಮ ಆ ಕಾವ್ಯಗಳಲ್ಲಿ ಅದನ್ನು ಸೂಚಿಸುವುದಲ್ಲದೆ, ಅವರ ವಚನಗಳನ್ನು ಸಂದರ್ಭೋಚಿತವಾಗಿ ಉಲ್ಲೇಖಿಸಿಯೂ ಇದ್ದಾರೆ[1]. ನಮ್ಮಲ್ಲಿ ಈ ಸಂಪ್ರದಾಯವನ್ನು ಪ್ರವರ್ತಿಸಿದವರು ಹರಿಹರ, ರಾಘವಾಂಕ ಮತ್ತು ಪಾಲ್ಕುರಿಕೆ ಸೋಮನಾಥ. ಈ ಸತ್‌ಸಂಪ್ರದಾಯವನ್ನು ಮುಂದೆ ಬಂದ ಶಿವಕವಿಗಳೆಲ್ಲರೂ ಪರಿಪಾಲಿಸಿರುವರು. ಈಚಿನವನಾದ ಎಳಂದೂರು ಹರೀಶ್ವರ ಕವಿಯೂ ಪ್ರಭುದೇವರ

---

1. "ಬಸವ ಬಾರೈ ಮರ್ತ್ಯಲೋಕದೊಳಗೆ ಭಕ್ತರುಂಟೆ, ಹೇಳಯ್ಯ? ಮತ್ತಾರು ಇಲ್ಲಯ್ಯ, ಮತ್ತಾರು ಇಲ್ಲಯ್ಯ, ಮತ್ತಾರು ಇಲ್ಲಯ್ಯ! ನಾನೊಬ್ಬನೇ ಭಕ್ತನು, ಮರ್ತ್ಯಲೋಕದೊಳಗಣ ಭಕ್ತರೆಲ್ಲರೂ ಜಂಗಮಲಿಂಗ ನೀನೆ ಅಯ್ಯ, ಕೂಡಲಸಂಗಮದೇವ" (ಬ. ವ. 893) ಎಂಬುದನ್ನು ಮುಂದಿನದರೊಡನೆ ಹೋಲಿಸಿ—"ಬಸವ, ಮರ್ತ್ಯಮುನಂದು ಬಕ್ತುಲು ಗಲರೇ? ಯೆಸಕಮ್ಮೆ ಸಂಸಾರಮಿಷ್ಟಮೇ .ನೀಕು? ನನಿಯಾನತಿಚ್ಚುಡುನದ್ದೇವು ಹೃದಯವನಜಸ್ಥುಡಗು ಬಸವಂಡಿಟ್ಲುಲನಿಯೆ 'ಮಂದುನಕೈನನು ಮರ್ತ್ಯಲೋಕಮುನನಿಂದುಶೇಖರುಭಕ್ತುಡೆಂದುನು ಲೇಡು, ಭಕ್ತುಂಡ ನೇನಜೂ, ಭಕ್ತುಲಿಂದಱುನು, ಭಕ್ತಾತ್ಮ, ಮೀ ಸ್ವರೂಪಂಬುಕಾವುನನು" (ತೆ.ಬ.ಪು. ಪುಟ 119). "ಕಟ್ಟಿದೆ ಒಱೆಯ, ಬಿಟ್ಟೆ ಜನ್ನಿಗೆಯರ; ಮುಟ್ಟೆ ಬಂದಿಱುವರೆ ಓಸರಿಸುವನಲ್ಲ. ಓಡದಿರು, ಓಡದಿರು! ನಿಮ್ಮ ಶರಣರ ಮನೆಯ ಬಿರುದಿನ ಅಂಕಕಾಱ, ಓಡದಿರು, ಓಡದಿರು ಎಲೆ ಎಲೆ ದೇವಾ, ಎಲೆ ಎಲೆ ಸ್ವಾಮೀ, ಎಲೆ ಎಲೆ ಹಂದೇ ಕೂಡಲಸಂಗಮದೇವ" (ಬ. ವ. 700) "ದಾಸನಂತೆ ತವನಿಧಿಯ ಬೇಡುವವನಲ್ಲ; ಚೋಳನಂತೆ ಹೊನ್ನ ಮಳೆಯ ಕಱೆಸೆಂಬವನಲ್ಲ. ಅಂಜದಿರು, ಅಂಜದಿರು ಅವರಂದದವ ನಾನಲ್ಲ! ಎನ್ನ ತಂದೆ ಕೂಡಲಸಂಗಮದೇವ, ಸದ್ಭಕ್ತಿಯನೆ ಕರುಣಿಸೆನಗೆ" (ಬ. ವ. 760) ಇವನ್ನು ಮುಂದಿನ ಭಾಗಗಳೊಡನೆ ಹೋಲಿಸಿ—"ಅಂಜದಿರಂಜದಿರು ದೇವ. ಪರೀಕ್ಷೆಗೆ ತೆಱಹಿಲ್ಲಂ, ಕಟ್ಟಿದೆನೊರೆಯ, ಬಿಟ್ಟೆ ಜನ್ನಿಗೆಯ. ಓಡದಿರೋಡದಿರು ಶರಣರ ಮನೆಯ ಬಿರುದಿನಂಕಕ್ಕೆ ಹಿಮ್ಮೆಟ್ಟದಿರಲೆ ದೇವ, ಎಲೆ ತಂದೆ, ಎಲೆಲೆ ಹಂದೆ ಕೂಡಲ ಸಂಗಸ್ವಯವಾಗು ಸ್ವಯವಾಗು ಎಂಬ ಗೀತ" (ಬ.ದೇ.ರ. ಸ್ಥಲ 12, ಪಂಕ್ತಿ 28–32) "ಚಾ! ಪಂದ! ಪಂದ! ಯೋಡಕುಮೋಡುಕುಮೋರೋರಿ ಸಂಗ! ಯೋಡಕುಮೋಡಕುಮೊಕಟಿಯುನ್ನೊಲ್ಲನೆಱುಗವೇ ಸತ್ಯಮಾಹೇಶ್ವರುಲಿಂಡ್ಲ ನೆಱ್ಱಿಯಂಕಕಾನಿನಿ ನಿಜಗತಿ

ಜೀವನ ಚರಿತ್ರೆಯನ್ನು ಬರೆಯುವಾಗ—(ಹರಿಹರ), ರಾಘವಾಂಕ, ಚಾಮರಸ ಮುಂತಾದವರಂತೆ—ಪ್ರಭುದೇವರ ವಚನಗಳನ್ನು ಸಂದರ್ಭೋಚಿತವಾಗಿ ಷಟ್ಪದಿಗೆ ತಿರುಗಿಸಿಕೊಂಡಿದಾನೆ[1]. ಹೀಗೆ ಶರಣರ ಕಥೆಗಳನ್ನು ಹೇಳುವಾಗ ಆ ಶರಣರ ವಚನಗಳನ್ನೇ ಅವರ ಬಾಯಿಂದ ಆಡಿಸಿದ್ದಾರೆ. ಇಂತಹ ಸಂದರ್ಭ ಗಳಲ್ಲಿ ಕವಿಯು ಬಳಸಿರುವ ಮಾತುಗಳು ಸ್ವಲ್ಪ ಹೆಚ್ಚಿರಬಹುದು ಅಥವಾ ಪದಗಳು ಸ್ವಲ್ಪ ಬೇರೆಯಾಗಿರಬಹುದು. ಆದರೆ ಅವು ಶರಣರ ಮೂಲವಚನಾ ರ್ಥಕ್ಕೆ ಬಾಧಕವಾಗಲಿ ವಿರೋಧಕವಾಗಲಿ ಆಗವು. ಹಲವೆಡೆ ಕವಿಗಳು ತಮ್ಮ ತಮ್ಮ ಕಾವ್ಯಗಳಲ್ಲಿನ ಶರಣರ ಬಾಯಿಂದ ಆಡಿಸಿರುವ ಮಾತುಗಳು ಈಗ ಪ್ರಕಟವಾಗಿರುವ ಆಯಾ ಶರಣರ ವಚನಗಳಲ್ಲಿ ಕಂಡುಬರದಿದ್ದರೆ, ಅವು ನಮಗೆ ಇನ್ನೂ ಸಿಕ್ಕಿಲ್ಲವೆಂದಷ್ಟನ್ನು ಮಾತ್ರ ನಿರ್ಣಯಿಸಬಹುದೇ ಹೊರತು ಆ ಅರ್ಥದ ವಚನವನ್ನು ಆ ಶರಣನು ಹಾಡಿಲ್ಲವೆನ್ನುವುದು ಸಾಹಸವಾದೀತು. ಅಷ್ಟೇ ಅಲ್ಲದೆ ವಚನಕಾರರಾದ ಶರಣರ ಜೀವನಚರಿತ್ರೆಯನ್ನು ಮತ್ತು ತತ್ವ ಗ್ರಂಥಗಳನ್ನು ಬರೆಯಲು ತಮಗೆ ಆ ಶರಣರ ವಚನಗಳೇ ಆಧಾರವೆಂದು ಹಲವರು ಕವಿಗಳು ಸ್ಪಷ್ಟವಾಗಿ ಹೇಳಿಕೊಂಡಿದಾರೆ[2].

ಹೀಗೆ ಕವಿಗಳು ಪುರಾತನ–ನೂತನ ಶರಣರ ವಚನಾಮೃತಸಾರವನ್ನು

---

ನನ್ನು ? ದಾಸಯ್ಯವಲೆ ನಿನ್ನುದವನಿಧಿವೇಡ (ತೆ.ಬ.ಪು. ಪುಟ 102, 103, 106, 107). "ಕಾಳಿಂಗನ ಕಂಕಣದಿಂದ ಮುನ್ನ, ತ್ರಿಪುರಸಂಹಾರದಿಂದ ಮುನ್ನ, ಹರಿ ವಿರಿಂಚಿಗಳಿಂದ ಮುನ್ನ, ಉಮೆಯ ಕಲ್ಯಾಣದಿಂದ ಮುನ್ನ, ಮುನ್ನ, ಮುನ್ನ ಮುನ್ನ ! ಆಳು ನಾನು, ಆಳ್ದ ನೀನು ಕೂಡಲ ಸಂಗಮ ದೇವ. (ಬ.ವ. 2 ಮತ್ತು ಸಿಂ.ಪು. ಪುಟ 16, ವಚನ 6) ಇದನ್ನು ಕಾಲಕೂಟಮುಗುತ್ತುಕಕು ರಾಕಮುನ್ನ, ಕ್ರಾಲುಪುರಂಬುಲು ಗಾಲಕಮುನ್ನ, ಗೌರಿವಿವಾಹಂಬು ಗಾಕಟಮುನ್ನ, ಯಾರನಜಾಂಡಂಬುಲಲರಕಮುನ್ನ, ತಿವಿರಿ ಮೂರ್ತುಲು ನೆನ್ಮಿದಿಯು ಲೇಕಮುನ್ನ, ಭುವಿ ಹರಿಬ್ರಹ್ಮಲು ಪುಟ್ಟಕಮುನ್ನ ಯಟಮುನ್ನ ಯಟಮುನ್ನ ಯಟಮುನ್ನ, ಮುನ್ನ, ಇಟ ನೀವು ನಾಸ್ವಾಮಿ ವೇನು ನೀಬಂಟು" (ತೆ. ಬ. ಪು. ಪುಟ 102, 103, 106, 107.) ಎಂಬುದರೊಡನೆ ಹೋಲಿಸಿ ನೋಡಿ. 1. "....ಆನು ಜಂಗಮವೆ ? ಆನು ಹಿರಿಯನಾದೆನಲ್ಲದೆ, ಆನು ಜಂಗಮವೆ ? ಒಡಲಿಲ್ಲದಾತ ಬಸವಣ್ಣ, ಪ್ರಾಣವಿಲ್ಲದಾತ ಬಸವಣ್ಣ ; ಬಸವಣ್ಣನಾಗಿ ಹುಟ್ಟಿಸದೆ ಎನ್ನ ಪ್ರಭುವಾಗಿ ಹುಟ್ಟಿಸಿದೆ ಗುಹೇಶ್ವರ" (ಅ. ವ. ಚ. 895) ಇದನ್ನು "ಶಿವಂ ಕೈಲಾಸಕರಸು, ಮಹಶಾಂತ ಬಸವೇಶ ನೀ ಭೂಲೋಕಕರಸು ; ಮತ್ತೆಂತೆಂಬೆ ಹರಸು ನಿನ್ನಾಂಗೆನ್ನ ಪುಟ್ಟಿಸದೆ ಸತತ ಪ್ರಭುವಾಗಿ ಬರಿದೆ ಇಂತೇಕೆ ಹುಟ್ಟಿಸಿದ ಎಂದು ಶೂನ್ಯಾಂಗನತಿ ಚಿಂತಿಸಲು" (ಪ್ರ. ಪು. 7–273) ಇದರೊಡನೆ ಹೋಲಿಸಿ ನೋಡಿ. 2. "ಸಕಲ ಪುರಾತನಭಕ್ತಗೀತಾರ್ಥಸಮಿತಿಯೇ ಮಾತೃಕಗಾಕಬೂರಿತಂಬೈಯೊಪ್ಪು ಪೂಸಲಲೋನ ದಾರಂಬುಕ್ರಿಯಬುರಾತನಭಕ್ತನಿತತಿಚರಿತಲಲೋಪಲ ಸಂಧಿಲ್ಲ ಬಸವ ಚರಿತಮೇ ವರ್ಣಿಂತು ಸತ್ಕೃತಿಯನಗ" (ತೆ.ಬ.ಪು. ಪುಟ 9). "ಈ ಕಥಾಗರ್ಭ

ಕಥಾರೂಪವಾಗಿ, ಹೃದ್ಯವಾಗಿ ಪ್ರಚಾರ ಪಡಿಸುವುದರ ಜೊತೆಗೆ, ಆಯಾ ಶರಣರ ವಚನಸಂಪತ್ತು ಅವರವರ ಜೀವನಾಮೃತದ ನವನೀತವೆನ್ನುವುದನ್ನೂ ಮನದಟ್ಟು ಮಾಡಿಕೊಟ್ಟರು. ಈ ವಿಧವಾಗಿ ಭಾವರೂಪದಲ್ಲಿ ಉಲ್ಲಿಖಿತವಾಗಿರುವ ವಚನಗಳನ್ನು ಪ್ರಸ್ತುತ ಗ್ರಂಥಸಂಪಾದನೆಗೆ ಬಳಸಿಕೊಂಡಿಲ್ಲ.

ಆದರೆ, ಮೇಲೆ ಹೇಳಿದಂತಹ ಕಾವ್ಯಗಳಲ್ಲಿ[1] ಯಥಾವತ್ತಾಗಿ ಮತ್ತು ಸಮಗ್ರವಾಗಿ ಉಲ್ಲಿಖಿತವಾಗಿರುವ ಪ್ರಭುದೇವರ ವಚನಗಳನ್ನೆಲ್ಲ ಪ್ರಸ್ತುತ ಸಂಸ್ಕಾರಣಕ್ಕಾಗಿ ಬಳಸಿಕೊಂಡು ಪಾಠಾಂತರಗಳನ್ನು ಕೊಡಲಾಗಿದೆ.

ಷಟ್ಸ್ಥಲದ, ಅಂದರೆ ಅಲ್ಲಮನ ವಚನಚಂದ್ರಿಕೆಯ ಮೊದಲ 694 ವಚನಗಳನ್ನು ಸಂಸ್ಕರಣ ಮಾಡಲು ಮೈಸೂರಿನ ಪ್ರಾಚ್ಯ ಸಂಶೋಧನಾಲಯದಲ್ಲಿರುವ ಪ್ರಭುದೇವರ ಷಟ್ಸ್ಥಲದ ಟೀಕಿನ ವಚನಗಳ ಏಳು ಪ್ರತಿಗಳನ್ನೂ, ಶ್ರೀಯುತರುಗಳಾದ ಡಿ. ಎಂ. ಬಸಪ್ಪನವರು, ಬಸವರಾಜಶಾಸ್ತ್ರಿಗಳು, ಚಿದಾನಂದಮೂರ್ತಿಯವರು —ಇವರು ಮಮತೆಯಿಂದ ಕೊಟ್ಟ ಮೂರು ಪ್ರತಿಗಳನ್ನೂ ಬಳಸಿಕೊಂಡಿದ್ದೇನೆ. ಇವುಗಳಲ್ಲಿ ಶ್ರೀ ಡಿ. ಎಂ. ಬಸಪ್ಪ[2]ನವರ ಮತ್ತು ಶ್ರೀ ಚಿದಾನಂದ ಮೂರ್ತಿ[3]ಯವರ ಪ್ರತಿಗಳೂ ಜೊತೆಗೆ ಪ್ರಾಚ್ಯ ಸಂಶೋಧನಾಲಯದ K 449[4], K 657[5] ನಂಬರಿನ ಎರಡು ಪ್ರತಿಗಳೂ ಅಸಮಗ್ರ.

---

ಕಲ್ಪಿತವೆಂತೆನಲು ಬೊಮ್ಮದಾಕರ್ಷಣಂ ಪ್ರಣವವಾ ಪ್ರಣವಪ್ರಾಪ್ತಿಯ ವಿವೇಕ ಪಂಚಾಕ್ಷರಾ, ಪಂಚಾಕ್ಷರಿಯ ಮಹೋನ್ನತಿ ವೇದವಾ ವೇದದ ಸಾಕಾರಸ್ಮೃತಿಯಾ ಸ್ಮೃತೀತಿಹಾಸೋಪಸಿಷದ್ವಾಕ್ಯತಾತ್ಪರ್ಯಶಾಸ್ತ್ರಾಗಮಪುರಾಣಗಳೇಕಾರ್ಥವಾದವಾದ್ಯರ ವಚನಸಿದ್ಧಿ ಸಾರೋದ್ಧಾರ ಶಾಸನವಿದು" (ಸಿಂ. ಪು. 1–10). "ಆದ್ಯರ ವಚನಾಮೃತಮಂ ಸ್ವಯದಿಂದೀಂಟಿಸಿ ದಣ್ಣನೆ ದಣಿಯುತ ನಿಯತೋತ್ಸವದಿಂದುಸಿರ್ದಂ ಸತ್ಕಾವ್ಯವ ಸಲೆ ಹರಿದೇವಂ" (ಪ್ರ. ಪು. 1–54). "ಗುರುವಚನದಮೃತಮಂ, ಶ್ರುತಿಪುರಾಣಾಗಮದ ಪರಮಾರ್ಥದಮೃತಮಂ, ವರಪುರಾತನವಚನಪರಿಯಾಯದಮೃತಮಂ ಶಿವ ತಾಂತ್ರಿಕರು ಪೇಳ್ದ ಸಿದ್ಧಾಂತವೆನಿಪಮೃತಮಂ ಪರಮಾನುಭವದನುಭವಗೋಷ್ಠಿಯಮೃತದೊಳು ಬೆರಸಿ ಮಥನಿಸೆ ಪಡೆದ ಲಕ್ಕಣ್ಣ ದಂಡೇಶ ಧರಿಸಿಪ್ಪ ತತ್ತ್ವಚಿಂತಾಮಣಿ (ಶಿ.ತ.ಚಿಂ.ಮ. 1–10). 1. ಮುಖ್ಯವಾಗಿ ಪ್ರಭುಲಿಂಗಲೀಲೆ, ಮತ್ತು ಸಿಂಗಿರಾಜ ಪುರಾಣ. 2. ಇವರ ಪ್ರತಿಯು ಅಲ್ಲಮನ ವಚನಚಂದ್ರಿಕೆಯಲ್ಲಿರುವ ಮೊದಲ 433 ವಚನಗಳವರಿಗೆ ಮಾತ್ರ ಇದ್ದು ಮಿಕ್ಕುದು ಲುಪ್ತವಾಗಿದೆ. 3. ಇವರ ಪ್ರತಿಯಲ್ಲಿ ಮಧ್ಯೆ ಮಧ್ಯೆ ಹಲವು ಕಡೆ ಮತ್ತು ಕೊನೆಯಲ್ಲಿ ಹಲವು ವಚನಗಳು ಲುಪ್ತವಾಗಿವೆ. 4. ಅಲ್ಲಮ್ಮನ ವಚನಚಂದ್ರಿಕೆಯಲ್ಲಿರುವ 631 ನೇ ವಚನದವರಿಗೆ ಮಾತ್ರವೇ ಈ ಗ್ರಂಥವಿದ್ದು ಮುಂದಿನ ಭಾಗ ಲೋಪವಾಗಿದೆ. 5. ಈ ಗ್ರಂಥದ ಆದಿಅಂತ್ಯಭಾಗಗಳೆರಡೂ ಇಲ್ಲ. ಅಲ್ಲಮನ ವಚನಚಂದ್ರಿಕೆಯಲ್ಲಿನ 479–673 ವಚನಗಳಷ್ಟು ಭಾಗ ಮಾತ್ರ ಉಪಲಬ್ಧವಾಗಿದೆ.

ಮೇಲೆ ಹೇಳಿದ ಪ್ರತಿಗಳಲ್ಲಿ ಪ್ರಾಚ್ಯ ಸಂಶೋಧನಾಲಯದ K.A. 104 ಮತ್ತು K.A. 109ನೇ ಪ್ರತಿಗಳು[1] ಮತ್ತು ಶ್ರೀ ಬಸವರಾಜಶಾಸ್ತ್ರಿಗಳ ಪ್ರತಿ ಕಾಗದದವು. ಆದರೂ ಪಾಠಾಂತರಗಳ ದೃಷ್ಟಿಯಿಂದ ಅವು ಗಮನಾರ್ಹ ವಾಗಿವೆ. K.A. 104+109ನೇ ಪ್ರತಿಯಲ್ಲಿ ಅಕ್ಷರಸ್ಖಾಲಿತ್ಯಗಳಿದ್ದಾಗ್ಯೂ ಆ ಪ್ರತಿಕಾರನು ಇಟ್ಟುಕೊಂಡಿದ್ದ ಮೂಲಪ್ರತಿಯು ಉತ್ತಮವಾದುದೆನ್ನಲು ಅವಕಾಶವಿದೆ. ಆದ್ದರಿಂದ ಅದನ್ನೇ ಪ್ರಸ್ತುತ ಗ್ರಂಥದ ಸಂಪಾದನೆಗೆ ಮೂಲ ಪ್ರತಿಯನ್ನಾಗಿ ಸ್ವೀಕರಿಸಿ ಮಿಕ್ಕ ಪ್ರತಿಗಳಿಂದ ಪಾಠಾಂತರಗಳನ್ನು ಗುರುತಿಸಲಾಗಿದೆ.

ಅಲ್ಲಮನ ವಚನಚಂದ್ರಿಕೆಯಲ್ಲಿ ಆದ್ಯಂತವಾಗಿರುವ ಎಲ್ಲ ವಚನಗಳನ್ನೂ ಸಂಸ್ಕರಿಸಲು ಮೇಲೆ ಹೇಳಿದ ಷಟ್ಸ್ಥಲದ ಪರಿವಿಡಿಯ ವಚನಗಳ ಪ್ರತಿಗಳ ಜೊತೆಗೆ, ಬೇರೆ ಬೇರೆ ವಚನಕಾರರ ವಚನಗಳನ್ನು ಒಂದೆಡೆ ಸಂಕಲನ ಮಾಡಿರುವ–ಸಂಕಲನ ಗ್ರಂಥಗಳನ್ನೂ ಉಪಯೋಗಿಸಿಕೊಂಡಿದ್ದೇನೆ. ಅವುಗಳಲ್ಲಿ ಹಿಂದೆ ಹೆಸರಿಸದೆ ಉಳಿದಿರುವ ಕೆಲವು ಆಕರಗಳಾವುವೆಂದರೆ ಪ್ರಾಚ್ಯಸಂಶೋಧನಾಲಯದಲ್ಲಿರುವ K. 75,[2] K. 450,[3] K. 468, K. 499, K. 648. ಮತ್ತು K.B. 602[4].

ಪ್ರಸ್ತುತ ಗ್ರಂಥಸಂಕಲನಕ್ಕೆ ಮತ್ತು ಸಂಸ್ಕರಣಕ್ಕೆ ಉಪಯೋಗಿಸಿಕೊಂಡಿರುವ ಈ ಎಲ್ಲ ಮೂಲಗಳಿಂದಲೂ, ಪ್ರತಿಗಳಿಂದಲೂ, ಪಾಠಾಂತರಗಳನ್ನು ಗುರುತಿಸುವಾಗ, ಮಹಲಿಂಗನ ವ್ಯಾಖ್ಯಾನವಿರುವ ಪ್ರಭುದೇವರ ಷಟ್ಸ್ಥಲದ ವಚನಗಳ ಪ್ರತಿಗಳ ಪಾಠಾಂತರಕ್ಕಿಂತ ಮಿಕ್ಕ ಪ್ರತಿಗಳ ಮತ್ತು ಮೂಲಗಳ

---

1. ಈ ಎರಡು ಪ್ರತಿಗಳೂ ಒಂದೇ ಗ್ರಂಥದ ಎರಡು ಭಾಗಗಳು. 2. ಈ ಪ್ರತಿಯಲ್ಲಿ ಪ್ರಭುದೇವರ ಷಟ್ಸ್ಥಲದ ವಚನಗಳಲ್ಲದೆ ಮತ್ತೆ ಬೇರೆ ಬೇರೆ ವಚನ ಸಂಕಲನಗಳೂ ಇವೆ. ಇದರ 113ನೇ ಗರಿಯಿಂದ ಚೆನ್ನಂಜೇದೇವರು ಸಂಕಲಿಸಿದ "ಆಚರಣೆಯ ವಚನ" ಪ್ರಾರಂಭವಾಗಿ ಆ ವಿಭಾಗದಲ್ಲಿ ಒಟ್ಟು 140 ವಚನಗಳಿವೆ. ಮುಂದೆ "ಸಂಬಂಧದ ವಚನ"ಗಳು ಎಂಬ ವಿಭಾಗದಲ್ಲಿ ಒಟ್ಟು 121 ವಚನಗಳಿವೆ (ಮೇಲಣ ಎರಡು ವಿಭಾಗದ ಒಟ್ಟು 261 ವಚನಗಳನ್ನು ನನ್ನ ಬಳಿಯಿರುವ ಒಂದು ಓಲೆಯ ಗ್ರಂಥದಲ್ಲಿ "ಆಚರಣೆಯ ವಚನ"ಗಳೆಂಬ ಒಂದೇ ವಿಭಾಗದಲ್ಲಿ ಸೇರಿಸಿ ಕೊಟ್ಟಿದೆ). ಮುಂದೆ 124ನೇ ಗರಿಯಿಂದ "ಬಸವೇಶ್ವರನ ಸ್ತೋತ್ರದ ವಚನ"ಗಳೂ, "ಮಿಶ್ರಸ್ತೋತ್ರದ ವಚನ"ಗಳೂ ಇವೆ. ಜೊತೆಗೆ ಮಹಲಿಂಗನ ಏಕೋತ್ತರಶತಸ್ಥಲವೂ ಇದೆ. 3. ಇದರಲ್ಲಿ ಪ್ರಭುದೇವರ ಷಟ್ಸ್ಥಲದ ವಚನಗಳ ಜೊತೆಗೆ ಮಹಲಿಂಗನ ಏಕೋತ್ತರಶತಸ್ಥಲವೂ ಇದೆ. 4. "ಗುಂಹೇಶ್ವರ" ಎಂಬ ಅಂಕಿತದ ಪ್ರಭುದೇವರ (?) ಒಂಬತ್ತು ವಚನಗಳಿರುವುದು ಈ ಕಾಗದದ ಪ್ರತಿಯಲ್ಲೇ.

ಪಾಠಾಂತರವು ಉತ್ತಮವೆಂದು ತೋರಿಬಂದರೂ, ಬಹುಮಟ್ಟಿಗೆ ಅದನ್ನು ಪಾಠವಾಗಿ ಸ್ವೀಕರಿಸಿಲ್ಲ. ಏಕೆಂದರೆ ಪ್ರಭುದೇವರ ವಚನಗಳನ್ನು ಹೆಚ್ಚು ಸಂಖ್ಯೆಯಲ್ಲಿ ಮೊದಲ ಬಾರಿಗೆ ಸಂಗ್ರಹಿಸಿದವನು ಮತ್ತು ಅವಕ್ಕೆ ಟೀಕೆ ಬರೆದವನು ಮಹಲಿಂಗನೇ. ಮೇಲಾಗಿ ಈತನು ವಚನಕಾರರಿದ್ದ ಗುರುಪರಂಪರೆಗೆ ಸೇರಿದವನು. ಆದುದ್ಧರಿಂದ ಆತನ ಸಂಪ್ರದಾಯದ ಪ್ರತಿಗಳಲ್ಲಿನ ಉತ್ತಮವಾದ ಪಾಠಾಂತರಗಳನ್ನೇ ಸ್ವೀಕರಿಸಿದ್ದೇನೆ. ಈ ಮೂಲಕ ಮಹಲಿಂಗನಿಗೆ ಸಿಕ್ಕಿದ ಪ್ರಭುದೇವರ ವಚನಗಳ ಮೂಲರೂಪವನ್ನು ಖಚಿತಗೊಳಿಸುವುದೇ ನನ್ನ ಪ್ರಸ್ತುತ ಸಂಸ್ಕರಣದ ಉದ್ದೇಶವಾಗಿದೆ.

ಈ ಗ್ರಂಥ ಸಂಸ್ಕರಣಕ್ಕಾಗಿ ಬಳಸಿಕೊಂಡ ಮಾತೃಕೆಗಳ ಪರಸ್ಪರ ಸಾದೃಶ್ಯ ಸಂಬಂಧವನ್ನು ಈ ಕೆಳಗಣ ರೇಖಾಕೃತಿಯಿಂದ ಮನಗಾಣಬಹುದು :—




## ಸಂಕೇತಗಳ ವಿವರ

ಪಾಠಾಂತರಗಳ ಮುಂದೆ ಬಳಸಿರುವ ಸಂಕೇತಗಳ ಪರಿಚಯ :

1. ವಚನದಲ್ಲಿರುವ ಪಾಠವನ್ನೇ ಪಾಠಾಂತರವಾಗಿ ಕೊಟ್ಟು ಅದರ ಮುಂದೆ ಯಾವುದಾದರೂ ಸಂಕೇತವಿದ್ದರೆ, ಆ ವಚನವು ಯಾವ ಪಾಠವ್ಯತ್ಯಾಸವೂ ಇಲ್ಲದೆ ಯಥಾವತ್ತಾಗಿ ಆ ಸಂಕೇತಸೂಚಿತ ಆಕರದಲ್ಲಿಯೂ ಕಂಡು ಬರುವುದೆಂದು ಭಾವಿಸಬೇಕು. ಉ : ಮೊದಲನೇ ವಚನದ 'ಶಿಲೆಯೊ' ಎಂಬ ಪಾಠಕ್ಕೆ 'ಶಿಲೆಯೊ' ಎಂದೇ ಪಾಠಾಂತರ ಕೊಟ್ಟಿದೆ. ಅದರ ಮುಂದೆ 'ಲಿ'

ಎಂಬ ಸಂಕೇತವಿದೆ. ಹಾಗೆಂದರೆ–ಆ ವಚನವು 'ಲಿಂಗಲೀಲಾವಿಲಾಸ ಚಾರಿತ್ರ' ದಲ್ಲಿ ಯಾವ ಪಾಠವ್ಯತ್ಯಾಸವೂ ಇಲ್ಲದೆ ಸಿಕ್ಕುವುದೆಂದು ಅರ್ಥ.

2. ಪಾಠಾಂತರದ ಸಂಖ್ಯೆಯ ಮುಂದೆ '×' ಚಿಹ್ನೆಯಿದ್ದರೆ, ಅದರ ಹಿಂದಿರುವ ಅಂಕಿಯಿಂದ ಸೂಚಿತವಾಗುವ ಪಾಠವು ಆ ಮುಂದಣ ಸಂಕೇತ ಸೂಚಿತ ಪ್ರತಿಯಲ್ಲಿ ಇಲ್ಲವೆಂದೂ, '+' ಚಿಹ್ನೆಯಾದ ಮೇಲೆ ಯಾವುದಾದರೂ ಪಾಠಾಂತರವಿದ್ದರೆ, ಅದರ ಹಿಂದಿರುವ ಅಂಕಿಯಿಂದ ಸೂಚಿತವಾಗುವಷ್ಟು ಪಾಠದ ಜೊತೆಗೆ + ಚಿಹ್ನೆಯಿಂದ ಮುಂದಿರುವ ಭಾಗವೂ ಸೇರಿಕೊಂಡಷ್ಟು ಪಾಠಾಂತರವು ಮುಂದಣ ಸಂಕೇತ ಸೂಚಿತ ಪ್ರತಿಯಲ್ಲಿದೆಯೆಂದು ತಿಳಿಯ ಬೇಕು. ಉ : ಮೂರನೇ ಪುಟದ ಹತ್ತನೇ ವಚನ ನೋಡಿ. "18× (ಹಬಟ)" ಎಂದರೆ, 'ನೀ' ಎಂಬ ಮಾತು ಆವರಣ ಚಿಹ್ನೆಯೊಳಗಿರುವ ಸಂಕೇತ ಸೂಚಿತ ಪ್ರತಿಗಳಲ್ಲಿ ಇಲ್ಲವೆಂದು ಅರ್ಥ. ಮುಂದೆ ಹನ್ನೆರಡನೇ ವಚನ ನೋಡಿ. "7+ ವೆಲ್ಲ (ಶೂ)" ಎಂದರೆ, ಶೂನ್ಯಸಂಪಾದನೆಯಲ್ಲಿ "ಲೋಕವೆಲ್ಲ" ಎಂದಿದೆ ಯೆಂದರ್ಥ.

3. ಒಂದು ಪಾಠಾಂತರದ ಮುಂದೆ ಯಾವುದಾದರೂ ಪ್ರತಿಯ ಸಂಕೇತಾಕ್ಷರವನ್ನು ಎರಡು ಸಲ ಕೊಟ್ಟು ಅವುಗಳ ಮುಂದೆ 'ವ್ಯಾ' ಎಂದಿದ್ದರೆ ಆ ಸಂಕೇತಸೂಚಿತಪ್ರತಿಯಲ್ಲಿನ ಆ ವಚನದಲ್ಲಿಯಷ್ಟೇ ಅಲ್ಲದೆ, ಆ ಪ್ರತಿಯಲ್ಲಿ ಆ ವಚನಕ್ಕಿರುವ ವ್ಯಾಖ್ಯಾನದಲ್ಲಿಯೂ ಆ ಪಾಠಾಂತರವೇ ಸಿಕ್ಕುವುದೆಂದು ತಿಳಿಯ ಬೇಕು. ಉ : 617 ನೇ ವಚನ ನೋಡಿ : "5× (ಟಟವ್ಯಾ)" ಎಂದರೆ 'ಇದ ನಾನಱಿಯೆನಯ್ಯ' ಎಂಬ ಮಾತು 'ಟ' ಪ್ರತಿಯ ಆ ವಚನದಲ್ಲೂ, ಆ ಪ್ರತಿಯಲ್ಲಿ ಅದಕ್ಕೆ ಬರೆದಿರುವ ವ್ಯಾಖ್ಯಾನದಲ್ಲೂ ಇಲ್ಲವೆಂದು ಅರ್ಥ.

4. ಒಂದು ಪಾಠಾಂತರದ ಮುಂದೆ ಯಾವುದಾದರೂ ಪ್ರತಿಯ ಸಂಕೇತಾಕ್ಷರವನ್ನು ಒಂದೇ ಸಲ ಕೊಟ್ಟು ಅದರ ಮುಂದೆ 'ವ್ಯಾ' ಎಂದಿದ್ದರೆ, ಆ ಪಾಠಾಂತರವು ಆ ಸಂಕೇತಸೂಚಿತಪ್ರತಿಯ ಆ ವಚನದಲ್ಲಿ ಇಲ್ಲದೆ, ಅದಕ್ಕೆ ಆ ಪ್ರತಿಯಲ್ಲಿ ಬರೆದಿರುವ ವ್ಯಾಖ್ಯಾನದಲ್ಲಿ ಮಾತ್ರ ಇದೆಯೆಂದು ತಿಳಿಯ ಬೇಕು, ಉ : ಹದಿನೈದನೇ ವಚನ ನೋಡಿ, "3 ಕೋಱಿಯ (ಚವ್ಯಾಬಟ)" ಎಂದಿದ್ದರೆ, 'ಚ' ಪ್ರತಿಯ ಆ ವಚನದಲ್ಲಿನ 'ಕೋಱಿ'ಗೆ 'ಕೋಱಿ' ಎಂದೇ ಪಾಠವಿದ್ದು ಆ ಪ್ರತಿಯಲ್ಲಿ ಆ ವಚನಕ್ಕೆ ಬರೆದಿರುವ ವ್ಯಾಖ್ಯಾನದಲ್ಲಿ ಮಾತ್ರ "ಕೋಱಿಯ" ಎಂಬ ಪಾಠಾಂತರವಿದೆಯೆಂದುಕೊಳ್ಳಬೇಕು.

ಪಾರಿಭಾಷಿಕ ಪದಸೂಚಿಯಲ್ಲಿ ಮತ್ತು ಅಲ್ಲಿಂದ ಮುಂದಿನ ಭಾಗದಲ್ಲಿ ಬಳಸಿರುವ ಚಿಹ್ನೆಗಳ ಪರಿಚಯ :

'ಪಾರಿಭಾಷಿಕಪದಸೂಚಿ'ಯಲ್ಲಿ 'ಅದ್ವೈತ' ನೋಡಿ: (ನಿರ್ವಿಕಲ್ಪಿತದ–) ಎಂದು ಇದೆ. ಅದನ್ನು 'ನಿರ್ವಿಕಲ್ಪಿತದ ಅದ್ವೈತ' ಎಂದು ಓದಿಕೊಳ್ಳಬೇಕು. 'ಅನಾಸ್ತಿ (× ನಾಸ್ತಿ)' ಎಂದಿದ್ದರೆ ಅವು ಪರಸ್ಪರ ವಿರುದ್ಧಾರ್ಥ ಸೂಚಕ ಪದಗಳೆಂದು ತಿಳಿಯಬೇಕು. "ಸೃಷ್ಟಿ" ಎಂಬ ಪದವನ್ನು ನೋಡಿ: ಅಲ್ಲಿ, ಸಹಜ > ನಿರಾಲಂಬ > ನಿರಾಳ > ನಿರವಯ ಇತ್ಯಾದಿಯಾಗಿದೆ. ಹಾಗೆಂದರೆ ಸಹಜದಿಂದ ನಿರಾಲಂಬವೂ, ನಿರಾಲಂಬದಿಂದ ನಿರಾಳವೂ, ನಿರಾಳದಿಂದ ನಿರವಯವೂ ಉತ್ಪತ್ತಿಯಾಯಿತೆಂದು ಅರ್ಥ. ಕೊನೆಯಲ್ಲಿ ಹೇಳಿದ ಈ > ಅಥವಾ ಈ < ಚಿಹ್ನೆಯು ಎರಡು ಪದಗಳ ಮಧ್ಯೆ ಇದ್ದರೆ ಅವು ಆ ಪದಗಳ ಜನಕ ಜನ್ಯ ಸಂಬಂಧವನ್ನು ಸೂಚಿಸುವುದು. ಉ: 'ಕಪ್ಪರ (< ಖರ್ಪರ)' ಎಂದಿದ್ದರೆ 'ಖರ್ಪರ'ದಿಂದ 'ಕಪ್ಪರ' ಎಂಬ ಪದ ಬಂದಿದೆಯೆಂದು ಅರ್ಥ, ಇತ್ಯಾದಿ.

ಪ್ರಭುದೇವರ ವಚನಗಳನ್ನು ಸಂಕಲನಮಾಡಿ ಸಂಸ್ಕರಣಗೊಳಿಸಿ "ಅಲ್ಲಮನ ವಚನ ಚಂದ್ರಿಕೆ"ಯಾಗಿಸಲು ಬಳಸಿಕೊಂಡಿರುವ ಓಲೆಯ ಮತ್ತು ಕಾಗದದ ಪ್ರತಿಗಳಿಗೆ ಕೊಟ್ಟಿರುವ ಸಂಕೇತಗಳು:

| | |
|---|---|
| ಕ | K. 75 |
| ಚ | K. A. 104 + K. A. 109 |
| ಜ | K. A. 294 |
| ಟ | K. 364 |
| ತ | K. 449 |
| ದ | K. 450 |
| ಧ | K. 468 |
| ನ | K. 499 |
| ಯ | K. 648 |
| ರ | K. 657 |
| ಲ | K. 662 |
| ಲಿ | ಲಿಂಗಲೀಲಾವಿಲಾಸ ಚಾರಿತ್ರ |
| ವ | ವಚನಸಾರ |
| ಶೂ | ಶೂನ್ಯಸಂಪಾದನೆ |
| ಸ್ವ | ಸ್ವಂತಪ್ರತಿ |
| ಸಿ | ಸಿಂಗಿರಾಜಪುರಾಣ |
| ಹ | ಹಳಕಟ್ಟಿಯವರಪ್ರಭುದೇವರ ವಚನಗಳು |
| ಆ.ವ. | ಆಚರಣೆಯ ವಚನ |
| ಏ | ಸಿದ್ಧಲಿಂಗನ ಏಕೋತ್ತರಶತಸ್ಥಲ |
| ಐ | ಮಹಲಿಂಗನ ಏಕೋತ್ತರಶತಸ್ಥಲ |
| ಓ | ಸ್ವಂತಪ್ರತಿ |
| ಗ | ಗಣಭಾಷಿತ ರತ್ನಮಾಲೆ |
| ಚಿ | ಶ್ರೀ ಚಿದಾನಂದಮೂರ್ತಿಯವರ ಪ್ರತಿ |
| ಡಿ | ಶ್ರೀ. ಎಂ. ಡಿ. ಬಸಪ್ಪನವರ ಪ್ರತಿ |
| ಪ್ರ | ಪ್ರಭುಲಿಂಗಲೀಲೆ |
| ಬ | ವಿದ್ವಾನ್ ಬಸವರಾಜ ಶಾಸ್ತ್ರಿಗಳ ಪ್ರತಿ |
| ಮೂ | ಮೈಸೂರು ಪ್ರಾಚ್ಯ ಸಂಶೋಧನಾಲಯದಲ್ಲಿದ್ದ 'ಮೂರು ಸಾವಿರ ವಚನಗಳ' ಕಟ್ಟಿನ ಪರಸ್ಥಳದ ಪ್ರತಿ. |

'ಅಲ್ಲಮನ ವಚನ ಚಂದ್ರಿಕೆ' ಯಲ್ಲಿನ ಅಧಿಕ ವಚನಗಳನ್ನು ಸಂಕಲನ ಮಾಡಲು ಬಳಸಿಕೊಂಡಿರುವ ಮೂಲಗಳು ಮತ್ತು ಅವುಗಳಿಂದ ತೆಗೆದುಕೊಂಡಿರುವ ವಚನಗಳ ಸಂಖ್ಯಾವಿವರ:

| | | |
|---|---|---|
| 1 | ಮೂರು ಸಾವಿರ ವಚನಗಳ ಕಟ್ಟು (ಪರಸ್ಥಳದ ಪ್ರತಿ) ಅಧಿಕ ಭಾಗ | 695–699 |
| 2 | ಮಹಲಿಂಗನ ಏಕೋತ್ತರಶತಸ್ಥಲ | 700–714 |
| 3 | ಗಣಭಾಷಿತ ರತ್ನಮಾಲೆ | 715–734 |
| 4 | ಲಿಂಗಲೀಲಾ ವಿಲಾಸಚಾರಿತ್ರ | 735–784 |
| 5 | ವಚನಸಾರ | 785–891 |
| 6 | ಬಿರುದಾವಳಿಸ್ತೋತ್ರದ ವಚನಗಳು | 892–893 |
| 7 | ಬಸವಸ್ತೋತ್ರದ ವಚನಗಳು | 894–912 |
| 8 | ಮಿಶ್ರಸ್ತೋತ್ರದ ವಚನಗಳು | 913–919 |
| 9 | ಆಚರಣೆಯ ವಚನಗಳು | 920–931 |
| 10 | ಶೂನ್ಯಸಂಪಾದನೆ | 932–1166 |
| 11 | K 499 | 1167–1188 |
| 12 | K 648 | 1189–1251 |
| 13 | ಪ್ರಭುಲಿಂಗಲೀಲೆ | 1252–1273 |
| 14 | ಸಿಂಗಿರಾಜಪುರಾಣ | 1274–1275 |
| 15 | ಗಣಭಾಷಿತ ರತ್ನಮಾಲೆ | 1276–1280 |
| 16 | ಮಹಲಿಂಗನ ಏಕೋತ್ತರಶತಸ್ಥಲ | 1281–1284 |
| 17 | ಸಿದ್ಧಲಿಂಗನ ಏಕೋತ್ತರಶತಸ್ಥಲ | 1285–1285 |
| 18 | ಲಿಂಗಸೂತ್ರ | 1286–1294 |
| 19 | ಸಿದ್ಧಲಿಂಗನ ಏಕೋತ್ತರಶತಸ್ಥಲ | 1295–1312 |
| 20 | K 629 ( = ಶಿವಯೋಗಪ್ರದೀಪಿಕೆ) | 1313–1321 |

## ಅಲ್ಲಮನ ಪರಂಪರೆ

ವೀರಶೈವದಲ್ಲಿ ಗಣಂಗಳು ಪರಮಪೂಜ್ಯರು. ಈ ಪೂಜ್ಯರನ್ನು ವೀರಶೈವ ಗ್ರಂಥಗಳಲ್ಲಿ ಎಂಟು ಗಣಗಳಾಗಿ ವಿಂಗಡಿಸಿದ್ದಾರೆ: 1 ಪ್ರಮಥಗಣ 2 ರುದ್ರಗಣ 3 ಯೋಗಾಚಾರ್ಯಗಣ 4 ತ್ರಿಷಷ್ಠಿ ಪುರಾತನಗಣ 5 ಷೋಡಶಗಣ 6 ದಶಗಣ 7 ತ್ರಯೋದಶಗಣ 8 ಬಸವಾದಿಪ್ರಮಥಗಣ. ಈ ಮೇಲಣ ಗಣಗಳ ವಿಭಾಗಕ್ರಮಕ್ಕೆ ಕಾಲಕ್ರಮವೂ ಸ್ವಲ್ಪಮಟ್ಟಿಗೆ ಆಧಾರವಾಗಿರಬಹುದು. "ಅಲ್ಲಮಪ್ರಭುಸಂಪ್ರದಾಯದ ಸಲ್ಲಲಿತ ಸನ್ಮಾರ್ಗ[1]"ಕ್ಕೆ

---

1. (ಪ್ರ. ಲಿಂ. ಲೀ 1–8)

ಯೋಗಾಚಾರ್ಯಗಣವೇ ಪ್ರವರ್ತಕವೆಂದು ಹೇಳಲವಕಾಶವಿದೆ[A]. ಈ ಯೋಗಾಚಾರ್ಯರು 28 ಜನರಿದ್ದಾರೆ.[1] ಇವರನ್ನು ಪಾಲ್ಕುರಿಕೆ ಸೋಮನಾಥನೇ ಯೋಗಾಚಾರ್ಯರೆಂದು ಕರೆದಿರುವುದು ; ಶಿವಪುರಾಣದಲ್ಲಿ 'ಯೋಗೇಶ್ವರ'ರೆಂದೂ, ಶಿವತತ್ವ ಚಿಂತಾಮಣಿಯಲ್ಲಿ 'ವೃಷಭಾಚಾರ್ಯ'ರೆಂದೂ, ಗುರುರಾಜ ಚಾರಿತ್ರದಲ್ಲಿ 'ವೃಷಭಯೋಗಾಚಾರ್ಯ'ರೆಂದೂ ಕರೆದಿದೆ. 'ವೃಷಭಯೋಗಾಚಾರ್ಯ' ಮತ್ತು 'ಜಂಗಮ' ಈ ಎರಡೂ ಪರ್ಯಾಯಪದಗಳೆಂದು ನಿರ್ಣಯಿಸಲವಕಾಶವಿದೆ.[2] ಪ್ರತಿಯೊಂದು ದ್ವಾಪರಯುಗಾಂತ್ಯದಲ್ಲಿಯೂ ಒಬ್ಬ ವ್ಯಾಸನು ಮೊದಲು ಹುಟ್ಟುವನೆಂದೂ, ಆ ಸಮಯಕ್ಕೇ ಕಲಿಯುಗದಾದಿಯಲ್ಲಿ ಶಿವನ ಒಂದು (ಇಪ್ಪತ್ತೆಂಟು ಯೋಗಾಚಾರ್ಯರಲ್ಲಿ ಒಬ್ಬೊಬ್ಬರ) ಅವತಾರವಾಗುವುದೆಂದೂ ಶಿವಪುರಾಣದಲ್ಲಿ ಹೇಳಿದೆ.[3] ಬಸವ ಮತ್ತು ಪ್ರಭು–ಈ ಭಕ್ತ ಜಂಗಮರೀರ್ವರ ಅವತಾರದ ಸಂಬಂಧವಾಗಿಯೂ, ವೀರಶೈವ ಪುರಾಣಗಳಲ್ಲಿ ಮತ್ತು ವಚನಗಳಲ್ಲಿ, ಇದೇ ರೀತಿಯನ್ನು ಹೋಲುವ ಭಕ್ತಜಂಗಮ ಅವತಾರ ವ್ಯವಸ್ಥೆಯಿರುವಂತೆ ನಿರೂಪಿತವಾಗಿದೆ[4]. ಮತ್ತು ಶಿವತತ್ವ ಚಿಂತಾಮಣಿಯಲ್ಲಿ, ಭಕ್ತನಾದ ಬಸವನೂ, ಜಂಗಮನಾದ ಪ್ರಭುವೂ ಜೊತೆ ಜೊತೆಯಾಗಿ ಅವತರಿಸುವರೆಂದು ಹೇಳುವಾಗ, ಶಿವನು ಜೈಗೀಷವ್ಯ, ಲೋಕಾಕ್ಷಿ, ದಧಿವಾಹನ, ಗುಹಾವಾಸ, ಲಕುಲೀಶ, ದೂರ್ವಾಸ, ಪ್ರಭು ಎಂಬ ಅವತಾರಗಳನ್ನು ಎತ್ತುವುದಾಗಿ ಹೇಳಿದೆ.[5] ಶಿವಪುರಾಣ ಮತ್ತಿತರೆಡೆ ಹೇಳಿರುವ 28 ಜನ ಯೋಗೇಶ್ವರರಲ್ಲಿ ಅಥವಾ ಯೋಗಾಚಾರ್ಯರಲ್ಲಿ ಜೈಗೀಷವ್ಯಾದಿಗಳು ಇರುವ

---

A The Supreme ಪಾಶುಪತವ್ರತ is also called ಜ್ಞಾನಂ. It is described by ಶಿವ himself, in the form of ಯೋಗಾಚಾರ್ಯ to disciples in the recurring ಯುಗs. (Saisvism in South India By C. V. N. ಪುಟ 256) 1. (1) ಶ್ವೇತ (2) ಸುತಾರ (3) ದಮನ (4) ಸುಹೋತ್ರ (5) ಕಂಕ (6) ಲೋಕಾಕ್ಷ (7) ಜೈಗೀಷವ್ಯ (8) ದಧಿವಾಹನ (9) ಋಷಭ (10) ? (11) ತಪ (12) ಅತ್ರಿ (13) ಬಲಿ (14) ಗೌತಮ (15) ವೇದಶಿರಸ್ಸು (16) ಗೋಕರ್ಣ (17) ಗುಹಾವಾಸಿ (18) ಶಿಖಂಡಿ (19) ಜಟಾಮಾಲಿ (20) ಅಟ್ಟಹಾಸ (21) ದಾರುಕ (22) ಲಾಂಗಲೀಭೀಮ (23) ? (24) ಶೂಲಿ (25) ಮುಂಡೀಶ್ವರ (26) ಸಹಿಷ್ಣು (27) ಸೋಮಶರ್ಮ (28) ಲಕುಲಿ (ಶಿವಪುರಾಣ, ಭಾಗ 7 ಶತರುದ್ರ ಸಂಹಿತೆ 4 ನೇ ಅಧ್ಯಾಯ) 2. ಶಿ.ತ.ಚಿ. 29 ನೇ ಸಂಧಿ. 3. ಶಿವಪುರಾಣ, ಭಾಗ 7 ಶತರುದ್ರ ಸಂಹಿತೆ 5–52. 4. ಶಿ.ತ.ಚಿ, 29=13–22 ; ಸಿಂ.ರಾ.ಪು. ಪುಟ 18 ; ಅ. ವ. ಚಂ. 1207. 5. ಶಿ.ತ.ಚಿ. 29=13–22.

ರಾದುದರಿಂದ, ಪ್ರಭುದೇವನ ಪರಂಪರೆಯ ಮೂಲವು ಯೋಗಚಾರ್ಯಗಣ ದಲ್ಲಿದೆಯೆನ್ನಬಹುದು. ಈ ಯೋಗೇಶ್ವರರ ಶಿಷ್ಯರ ಸಾಮಾನ್ಯ ಲಕ್ಷಣದ ವರ್ಣನೆ[1] ಯೊಂದನ್ನು ಗಮನಿಸಿದರೆ ಪಾಶುಪತಕ್ಕೂ ವೀರಶೈವಕ್ಕೂ ಇರುವ ನಿಕಟ ಸಂಬಂಧವು ಸ್ಪಷ್ಟವಾಗುವುದಲ್ಲದೆ, 'ಪ್ರಭುದೇವರ ಸಂಪ್ರದಾಯದ ಸಲ್ಲಲಿತ ಸನ್ಮಾರ್ಗ'ದ ಸ್ಥೂಲರೂಪರೇಖೆಯೂ ಕಾಣಬರುವುದು. ಇದು ಸ್ಪಷ್ಟವಾಗ ಬೇಕಾದರೆ ಕೆಲವು ಯೋಗೇಶ್ವರರು ಮಾಡಿದ ಉದ್ಧಾರ ಕಾರ್ಯಗಳನ್ನು (ಶಿವಪುರಾಣ ಮತ್ತು ಶಿವತತ್ತ್ವ ಚಿಂತಾಮಣಿಗಳ ಪ್ರಕಾರ) ಗಮನಿಸೋಣ: ಜೈಗೀಷವ್ಯನು ಯೋಗಶಾಸ್ತ್ರವು ಬೇರೂರುವಂತೆ ಮಾಡಿದನು, ಮತ್ತು ಬಂದ ಭಕ್ತರಿಗೆ ಸಂಸಾರಭಯವನ್ನು ಬಿಡಿಸಿದನು.[2] ಸ್ವಾಯಂಭು ಮನುವಿನ ಕಾಲದಲ್ಲಿ ನಂದಿಕೇಶ್ವರನು ಶಿಲಾದಜನಾಗಿ ಅವತರಿಸಿ ಭಕ್ತನಾದಾಗ, ಶಿವನು ಜೈಗೀಷವ್ಯ ನೆಂಬ ಜಂಗಮವಾಗಿ ಅವತರಿಸಿ ಬಂದು, ತತ್ತ್ವಬೋಧೆಯನ್ನು ಮಾಡಿ, ಸಾಯುಜ್ಯವನ್ನು ಕುರುಣಿಸುವನು.[3] ಋಷಭನೆಂಬ ಯೋಗೇಶ್ವರನು, ಸಾರಸ್ವತ ವ್ಯಾಸನು ಬೋಧಿಸಿದ ನಿವೃತ್ತಿ ಮಾರ್ಗವನ್ನು ಪ್ರಚಾರ ಮಾಡಿದನು:[4] ಮತ್ತು ತನ್ನ ಶಿಷ್ಯರ ಸಹಾಯದಿಂದ ಯೋಗಶಾಸ್ತ್ರವು ದೃಢವಾಗಿ ನಿಲ್ಲುವಂತೆ ಮಾಡಿದನು. ರೈವತನೆಂಬ 5 ನೆಯ ಮನುವಿನ ಕಾಲದಲ್ಲಿ ನಂದಿಕೇಶ್ವರನು ದಾರುಕ ನೆಂಬ ಭಕ್ತನಾಗಿ ಅವತರಿಸಿದಾಗ, ಶಿವನು ಲಕುಲೀಶ ಎಂಬ ಜಂಗಮವಾಗಿ ಬಂದು, ಸದ್ಭಕ್ತರಲ್ಲಿ ಭೇದವನ್ನು ಬಿಡಿಸಿ, ತತ್ತ್ವಾರ್ಥಧರ್ಮಗಳನ್ನು ಬೋಧಿಸಿ, ಶಿವಭಕ್ತಿ ಮಾರ್ಗವನ್ನು ತೋರಿದನಂತೆ.[5] ವೈವಸ್ವತನೆಂಬ ಏಳನೆಯ ಮನುವಿನ ಕಾಲದಲ್ಲಿ ನಂದಿಕೇಶ್ವರನು ವೃಷಭನೆಂಬ ಭಕ್ತನಾಗಿ ಅವತರಿಸಿದಾಗ, ಶಿವನು ಪ್ರಭುವೆಂಬ ಜಂಗಮವಾಗಿ ಬಂದು ಶಿವಧರ್ಮವನ್ನು ಸಾರಿದನು.[6]

ಈ ಸಮಾಲೋಕನದಿಂದ ನಾವು ಬಸವ ಮತ್ತು ಅಲ್ಲಮಪ್ರಭು ಇವರ

---

1. "ಏತೇ ಪಾಶುಪತಾಶಿಷ್ಯಾ ಭಸ್ಮೋದ್ಧೂಲಿತ ವಿಗ್ರಹಾಃ। ರುದ್ರಾಕ್ಷಮಾಲಾ ಭರಣಾಃ ತ್ರಿಪುಂಡ್ರಾಂಕಿತ ಮಸ್ತಕಾಃ। ಶಿಷ್ಯಾ ಧರ್ಮರತಾಸ್ಸರ್ವೇ ವೇದವೇದಾಂಗ ಪಾರಗಾಃ। ಲಿಂಗಾರ್ಚನಾರತಾ ನಿತ್ಯಂ ಬಾಹ್ಯಾಭ್ಯಂತರತಃ ಸ್ಥಿತಾಃ॥ ಭಕ್ತ್ಯಾ ಮಯಿ ಚ ಯೋಗೇನ ಧ್ಯಾನನಿಷ್ಠಾ ಜಿತೇಂದ್ರಿಯಾಃ।" (ಶಿವಪುರಾಣ—ಶತರುದ್ರ ಸಂಹಿತೆ 5–54, 55 56). 2. (ಶಿವಪುರಾಣ). 3. ಶಿ. ತ. ಚಿ. 29–13. 4. ಭಕ್ತನಾದ ಬಸವನಿಗೂ, ಜಂಗಮವಾದ ಅಲ್ಲಮಪ್ರಭುದೇವರಿಗೂ ಇದ್ದ ಸಂಬಂಧವನ್ನು ಊಹಿಸಲು ಶಿವಪುರಾಣದ ಈ ವರ್ಣನೆಯು ಸಹಕರಿಸುವುದು. ಮತ್ತು ಈ ಸಂದರ್ಭದಲ್ಲಿ ಋಷಭ ನನ್ನು "ಪ್ರಭು" ಎಂದು ಶಿವಪುರಾಣದಲ್ಲಿ ಕರೆದಿರುವುದು ವಿಶೇಷ ಗಮನಾರ್ಹವಾಗಿದೆ (ಶಿವಪುರಾಣ, ಭಾಗ ಏಳು, ಶತರುದ್ರಸಂಹಿತೆ, 4 ನೇ ಅಧ್ಯಾಯ 34–45). 5. ಶಿ. ತ. ಚಿ. 29–17. 6. ಶಿ. ತ. ಚಿ. 29–19

ಕಾರ್ಯಕ್ಷೇತ್ರಗಳ ವೈಶಿಷ್ಟ್ಯವನ್ನೂ, ಅಲ್ಲಮಪ್ರಭುವಿನ ಉದ್ಧಾರಕಾರ್ಯದ ಸ್ವರೂಪವನ್ನೂ ಕುರಿತು ಒಂದು ಖಚಿತವಾದ ನಿರ್ಣಯಕ್ಕೆ ಬರಲು ಸಾಧ್ಯ. ಬಸವೇಶ್ವರನು ತನ್ನ ಪ್ರಭಾವಕ್ಕೊಳಗಾದ ಜನರ ಮನದಲ್ಲಿ ಭಕ್ತಿಯನ್ನು ಅರಳಿಸುವ ಜ್ಯೋತಿಸ್ವರೂಪವಾದ ಮೂಲ ವಿಗ್ರಹವಾದರೆ, ಅಲ್ಲಮಪ್ರಭುದೇವನು ಆ ಭಕ್ತಿಗೆ ಪ್ರೇರಕವೂ ಪೂರಕವೂ ಆದ 'ಜ್ಞಾನ'ವನ್ನು, ದೇಶ ದೇಶಗಳಲ್ಲಿ ದೂರದೂರದಲ್ಲಿರುವ ಮುಮುಕ್ಷುಗಳ ಮಾರ್ಗದರ್ಶನಕ್ಕಾಗಿ ಪ್ರಸರಿಸಲು ಜಂಗಮರಶ್ಮಿರೂಪಿಯಾಗಿರುವ ಉತ್ಸವ ಮೂರ್ತಿಯಾದಾತನು. ಅವನು ಸಾಧಿಸಿದ ಸಿದ್ಧಿ ಮತ್ತು ಉಪದೇಶಿಸಿದ ಪರಮಾರ್ಥವು 'ಸೋಹಂ'ಜ್ಞಾನ. ಅದನ್ನು ಸಾಕ್ಷಾತ್ಕಾರ ಮಾಡಿಕೊಳ್ಳಲು ಹೇಳಿದ ಮಾರ್ಗ "ಯೋಗ"[1].

## ಅವತಾರ

ಕೈಲಾಸದಲ್ಲಿನ ನಿರ್ಮಾಯ[2]ನೆಂಬ ಶರಣನೊಬ್ಬನು ಹೆಣ್ಣೊಂದನ್ನು ಕಾಮಿಸಿದ ಕಾರಣದಿಂದ ಶಾಪಹತನಾಗಿ, ಭೂಲೋಕಕ್ಕೆ ಅವತರಿಸಿ ಅಲ್ಲಮನೆನಿಸಿಕೊಂಡಂತೆ ಹರಿಹರನ ಪ್ರಭುದೇವರ ರಗಳೆಯಿಂದ ತಿಳಿಯಬರುವುದು. ಲಕ್ಕಣ್ಣ ದಂಡೇಶನು ಈ ಶಾಪಪ್ರಸಂಗಕ್ಕೆ ಒಂದು ಸನ್ನಿವೇಶ[3]ವನ್ನು ಕಲ್ಪಿಸಿದ್ದಾನೆ: "ಶಿವಾದ್ವೈತ ವಿದ್ಯಾನುಭಾವಸಂಭವ ಷಟ್ಸ್ಥಲೋದ್ಧಾರ ವೀರಶೈವ ವ್ರತ" ವನ್ನು ಭೂಲೋಕದಲ್ಲಿ ಪ್ರಚುರಪಡಿಸಲು ನಂದೀಶ್ವರನೇ ಸಮರ್ಥನೆಂದು ಅವನನ್ನು ಶಿವನು ಮೇಲುಗಟ್ಟಿ ಮಾತನಾಡಿ ಭೂಲೋಕದಲ್ಲಿ ಅವತರಿಸೆಂದು ಕಳಿಸುವಾಗ, 'ನಿರ್ಮಾಯ' ನೆಂಬವನು ಅದನ್ನು ಆಕ್ಷೇಪಿಸುವನು. ಅದಕ್ಕೆ ಶಿವನು ಆ ನಿರ್ಮಾಯನನ್ನು ಝುಂಕಿಸಿ "ನಿನಗೆ ನಿರ್ಮಾಯನೆಂಬ ಬಿರುದೇಕೆ? ನಿನ್ನನುವ ನಾನಱಿಯೆನೇ? ಸಲ್ಲದ ಬಿರುದ ತೊಡರಿಕೊಂಡರಿಯದವರೊಡನೆ ನುಡಿವ ಮಾತಿಲ್ಲಿ ಬೇಡ. ಎಲ್ಲರ ಗುಣಂಗಳಂ ಬಲ್ಲೆ ನಾಂ" ಎಂದು ಸಂಕಲ್ಪಿಸಿದ ಮಾತ್ರದಿಂದಲೇ ಕಮನೀಯಮೋಹನ ಮಾಯಾರೂಪವೊಂದು ಪ್ರತ್ಯಕ್ಷವಾಯ್ತು. ಅದನ್ನು ನಿರ್ಮಾಯನು ಕಂಡು ಮೋಹಪರವಶನಾಗಿ ನಟ್ಟ ನೋಟದಿಂದ ನೋಡುತ್ತಿದ್ದುದನ್ನು ಪರಶಿವನು ಗಮನಿಸಿ ನಕ್ಕು "ಮಾಯಾವಿಲಾಸದ

---

1. ಕೇವಲಂ ರಾಜಾಯೋಗಾಯ ಹಠವಿದ್ಯೋಪದಿಶ್ಯತೇ ॥....ಅಲ್ಲಾಮಃ ಪ್ರಭುದೇವಶ್ಚ ಘೋಡಾಚೋಲೀ ಚ ಟಿಂಟಿಣಿಃ । ಭಾನುಕೀ ನಾರದೇವಶ್ಚ ಖಂಡಃ ಕಾಪಾಲಿಕಸ್ತಥಾ ॥ ಇತ್ಯಾದಯೋ ಮಹಾಸಿದ್ಧಾ ಹಠಯೋಗ ಪ್ರಭಾವತಃ । ಖಂಡಯಿತ್ವಾ ಕಾಲದಂಡಂ ಬ್ರಹ್ಮಾಂಡೇ ವಿಚರಂತಿ ತೇ ॥ (ಹಠಯೋಗ ಪ್ರದೀಪಿಕಾ 1—2, 8, 9).
2. ಇವನಿಗೆ ಮಾಯಾಕೋಳಾಹಳ ಎಂಬ ಹೆಸರೂ ಉಂಟು. 3. ಶಿ.ತ.ಚಿ, 29=34—41

ನೋಟ ನಿನಗಾಯ್ತು, ಧರೆಯೊಳವತರಿಸಿ, ಮಾಯೆಯ ಗೆಲಿದು, ಭಕ್ತರಿಗೆ ತತ್ತ್ವೋಪದೇಶವಿತ್ತು, ವೀರಶೈವಮತಾಚಾರದೊಳು ಷಟ್ಸ್ಥಲಬ್ರಹ್ಮಯೋಗದೊಳು ಸುಸ್ಥಿರಸಮಾಧಿಯನೆಯ್ದಿ ಬಾ" ಎಂದನಂತೆ. ಈ ಶಾಪಪ್ರಸಂಗದ ಕಾಳಿಮಚ್ಛಾಯೆಯಿಂದ ಅಲ್ಲಮಪ್ರಭುದೇವನ ವ್ಯಕ್ತಿತ್ವವು ಮಸುಕಾಗುವುದೆಂಬ ಭಯದಿಂದಲೇನೋ, ಈಚಿನ ಕೆಲವು ಪುರಾಣಕಾರರು ಶಾಪಪ್ರಸಂಗವನ್ನು ಅಲ್ಲಗಳೆದರು[1], ಇನ್ನು ಕೆಲವರು ಅದನ್ನು ಪ್ರಸ್ತಾಪಿಸದೆ ಹಾಗೇ ಕೈಬಿಟ್ಟರು,[2] ಮತ್ತೆ ಕೆಲವರು ಅಲ್ಲಮನು ನಿರ್ಮಾಯನೆಂಬ ಶರಣನಲ್ಲವೇ ಅಲ್ಲ ಅವನು ಪರಶಿವನ ನೇರವಾದ ಅವತಾರವೆಂದೂ ಹೇಳಿದರು.[3]

ಅಲ್ಲಮ ಪ್ರಭುವು ದ್ವಾಪರ–ತ್ರೇತಾ–ಕೃತಯುಗಗಳಲ್ಲಿ ಕ್ರಮವಾಗಿ ಅನಿಮಿಷ, ಶೂನ್ಯಕಾಯ, ಸ್ಥೂಲಕಾಯ ಎಂಬ ಅವತಾರಗಳನ್ನೆತ್ತಿದನೆಂದು ಹಲವು ಪುರಾಣಗಳಲ್ಲಿ ಹೇಳಿದೆ.[4]

## ಜನಕ—ಜನನೀ —ಜನ್ಮ ಭೂಮಿ

"ಬಳ್ಳಿಗಾವಿ"ಯಲ್ಲಿ ಅಲ್ಲಮನು ಹುಟ್ಟಿದನೆಂದು ಹರಿಹರನು ಹೇಳುತ್ತಾನೆ*. ಪ್ರಭುಲಿಂಗಲೀಲೆಯಿಂದ ಇದು ಬನವಸೆಯ ಬಳಿಯಿದ್ದಿತೆಂದು ತಿಳಿಯಬರುವುದು. ಆದ್ದರಿಂದಲೇ ಅದನ್ನು 'ಬನವಸೆ ಬಳ್ಳಿಗಾವಿ' ಎಂದು

---

1. ಶೂನ್ಯಸಂಪಾದನೆ, ಸಂ: ಶ್ರೀ ಭೂಸನೂರುಮಠ, ಪುಟ 3; ಈ ವಿಷಯವಿರುವ ಆ ವಚನ ಚೆನ್ನಬಸವಣ್ಣನವರದೆಂಬಂತೆ ಶೂನ್ಯಸಂಪಾದನೆಯಲ್ಲಿ ಹೇಳಿದೆ. ಆದರೆ ಇದರಲ್ಲಿ ಯಾವ ಅಂಕಿತವೂ ಇಲ್ಲ. ಈ ವಚನಾರ್ಥವನ್ನೇ ಸ್ಥೂಲವಾಗಿ ಒಳಗೊಂಡಿರುವ ಚೆನ್ನಬಸವಣ್ಣನವರ ವಚನವೊಂದರಲ್ಲಿ (ಸಿ. ಪು. ಪುಟ 18 ನೋಡಿ) ಶಾಪಪ್ರಸಂಗವನ್ನು ಪ್ರಸ್ತಾಪಿಸಿಯೂ ಇಲ್ಲ, ಅಲ್ಲಗಳೆದೂ ಇಲ್ಲ. 2. ಪ್ರ.ಪು. 2=3-59. ಪ್ರಭುದೇವರ ಟೀಕಿನ ವಚನಗಳ ಕೆಲವು ಪ್ರತಿಗಳಲ್ಲಿ 'ಪ್ರಭುದೇವರ ಪಿಂಡಸಂಭವ ಗದ್ಯ' ಎಂಬ ಭಾಗವಿದ್ದು ಅದರಲ್ಲಿ ಪ್ರಭುದೇವರ ಅವತಾರಕ್ಕೆ ಸಂಬಂಧಿಸಿದ ಶಾಪ-ಪ್ರಸಂಗವನ್ನೂ, ಕಾಮಲತೆಯ ಪ್ರಸಂಗವನ್ನೂ ಕುರಿತ ಪ್ರಸ್ತಾಪವಿದೆ. ಕೆಲವು ಪ್ರತಿಗಳಲ್ಲಿ ಈ ಭಾಗವಿಲ್ಲ; ಉ: "ಟ" "ಓ" "ಚಿ" ಪ್ರತಿಗಳು. 3. ಪ್ರ. ಲಿಂ. ಲೀ 6-7. 4. ಸಿಂ. ಪು. 4-3; ಪ್ರ. ಪು. 2-57; ಅಲ್ಲಮನ ವಚನ ಚಂದ್ರಿಕೆ 1251. *ಮುಂದೆ ಬಂದ ಪುರಾಣಕಾರರೆಲ್ಲರೂ ಇದನ್ನು ಒಪ್ಪಿಕೊಂಡಿದ್ದಾರೆ. ಈ ಸ್ಥಳದ ಬಗ್ಗೆ ಸಿಂಗಿರಾಜಪುರಾಣದ ಉಲ್ಲೇಖವನ್ನು ಗಮನಿಸಿ: "ವೃಷಭನಾ ನದಿನದಂಗಳೊಳಾಡಿಬರುತ ಬಂದೆಶವಡೆದ ಕೃಷ್ಣವೇಣಿಯ ಮಲಪ್ರಹರಿಗಳ ದೆಶೆಯೊಳಾನಂದದಿಂದಿರುತಿರುತ ತದ್ದಕ್ಷಿಣಾಪ್ರಾಂತಠಾಣದಲ್ಲಿ ಪೆಸರೇಕಚಕ್ರ ದ್ವಿಚಕ್ರಪುರ ಪಗರಟಿಗೆ ಪೆಸರು ಯುಗಭೇದ ಬಲಿಗ್ರಾಮವೆಂಬಾಪುರದ ಪಸರಿಸಿದ ಪೊಳಲೊಳಾಡುತ್ತ ಸುಖಮಿರಲು (ಸಿಂ. ಪು. 3-47).

ಚಾಮರಸನು ವಿಶೇಷಿಸಿ ಕರೆದಿದ್ದಾನೆ.[1] ಬನವಸೆ ಮತ್ತು ಬಳ್ಳಿಗಾವಿಗಳೆರಡೂ ಬೆಳುವಲದೇಶ[2]ದಲ್ಲಿದ್ದುವೆಂದು ಪ್ರಭುದೇವರ ಪುರಾಣದಿಂದ ಗೊತ್ತಾಗುವುದು.[3] ಅಲ್ಲಮನ ತಂದೆಯಾದ ನಿರಹಂಕಾರನು ಬಳ್ಳಿಗಾವಿಗೆ ರಾಜನಾಗಿದ್ದನೆಂಬಂತೆ ಪ್ರಭುದೇವರ ಪುರಾಣದಲ್ಲಿ ಹೇಳಿದೆ. ಬಹುಶಃ ಈ ಹೇಳಿಕೆಗೆ ತನ್ನ ಕಥಾ-ನಾಯಕನ ತಂದೆಯು ರಾಜನಾಗಿರಲೆಂಬ ಚಾಪಲ್ಯವೇ ಕಾರಣವೆಂದು ತೋರುತ್ತದೆ. ಹರಿಹರನು ತನ್ನ ಪ್ರಭುದೇವರ ರಗಳೆಯಲ್ಲಿ ಅಲ್ಲಮನ ತಂದೆ (ತಾಯಿ)ಯ ಹೆಸರನ್ನು ಹೇಳದಿದ್ದರೂ, ಅವನು ನಾಗವಾಸ (ಅಂತಃಪುರ)ದ† ಅಧಿಪತಿಯಾಗಿದ್ದನೆಂದು ಸ್ಪಷ್ಟವಾಗಿ ಹೇಳಿದ್ದಾನೆ. ಪ್ರಭುಲಿಂಗಲೀಲೆಯಲ್ಲಿ

---

1. ಪ್ರ.ಲಿಂ.ಲೀ. 6–11. 2. ಈ ಎರಡನೇ ಬೆಳವಲ ನಾಡು ಕೊಡಗುರಾಜ್ಯದ ಹತ್ತಿರವಿರುವುದೆಂದು ತಿಳಿಯಬರುವುದು (ಪ್ರ. ಪು. 7–114). ಆಗ್ಗೆ ಅದನ್ನು "ಚೆತ್ತ ಬೆಳವಲ ದೇಶ" ವೆಂದು ಕರೆಯುವ ರೂಢಿಯಿತ್ತೆಂದೂ ಗೊತ್ತಾಗುವುದು (ಪ್ರ. ಪು. 3–8). †ಸಾಮಾನ್ಯವಾಗಿ ನಟ್ಟುವ ಜಾತಿಯವರನ್ನು ನಾಗವಾಸಾಧಿಪತಿಯನ್ನಾಗಿ ನೇಮಿಸಿಕೊಳ್ಳುತ್ತಿದ್ದರು (ಪ್ರ. ಲಿಂ. ಲೀ. 5–16). ಸಂಗೀತಶಾಲೆ ಮತ್ತು ನಾಟ್ಯಶಾಲೆಗಳಿರುವ ಅಂತಃಪುರದ ವಿಭಾಗಕ್ಕೆ ನಾಗವಾಸವೆಂದು ಹೆಸರು (ಅದೇ 5–32, 38). ಈ ಹುದ್ದೆಗೆ 'ನಾಗವಾಸದ ನೆರವಿ ಬಿಂದದ ಬೋವಗಾರಿಕೆ' ಎಂಬ ಹೆಸರೂ ಇತ್ತು (ಪ್ರ. ಲಿಂ. ಲೀ. 5–17). ಅಂತಃಪುರದವರಿಗೆ ಭರತವಿದ್ಯಾದ್ಯಖಿಲ ಕಲೆಗಳನ್ನು ಕಲಿಸುವುದೇ ಅವನ ಕರ್ತವ್ಯ (ಅದೇ 5–18). ದೇವಾಲಯಾದಿ ಪವಿತ್ರ ಸ್ಥಳಗಳಲ್ಲಿ ಅಂತಃಪುರದವರಿಂದ ನೃತ್ಯಾದಿ ಪ್ರದರ್ಶನಗಳು ನಡೆವಾಗ, ಈ ನಾಗವಾಸಾಧಿಪತಿಯು ಅದಕ್ಕೆ ವ್ಯವಸ್ಥೆ ಮಾಡಬೇಕಾಗಿತ್ತು (ಅದೇ 5–72). ಅಂತಃಪುರದವರು ನಾಟ್ಯಕ್ಕೆ ನಿಂತಾಗ ಮದ್ದಳೆ (ಮುರಜ, ಮೃದಂಗ)ಯನ್ನು ಹಿಡಿದು "ಗೀತ ಪ್ರಬಂಧಾದ್ಯ ಜಾತಿಯನ್ನು ನುಡಿಸಬೇಕಾಗಿತ್ತು (ಪ್ರ. ಪು. 5–38, 122). ನಾಟ್ಯ ಮತ್ತು ಸಂಗೀತ ಶಾಸ್ತ್ರಗಳಲ್ಲಿ ಈ ನಾಗವಾಸಾಧಿಪತಿಯು ಎಷ್ಟೇ ಪರಿಣತಿಯನ್ನು ಪಡೆದಿದ್ದರೂ, ಅವನ ಸ್ಥಾನಮಾನವು ಸಮಾಜದಲ್ಲಿ ಅಷ್ಟು ಗೌರವಾರ್ಹವಾದುದಾಗಿರಲಿಲ್ಲವೆನ್ನಬಹುದು (ಅದೇ 5–25, 32, 35, 36). ಇವನ ಉಡಿಗೆತೊಡಿಗೆಗಳ ಬಗ್ಗೆಯೂ ವಿವರಗಳಿವೆ: ಕಾಲಿಗೆ ಝುಣರು ಝುಣರೆನ್ನುವ ಹೊಂಬೊಡರು, ಉಟ್ಟ ಪಟ್ಟೆಯ ಕಾಸೆ, ಹೊಂಬಟ್ಟೆಯ ನಡುಕಟ್ಟು, ಮುಡ್ಡಿಯ ಮೇಲೆ ರಾರಾಜಿಸುವ ಐದಂಗುಲ ಅಗಲದ ಕಟಿಸೂತ್ರ, ಕನಕಮುಡಿನೇವಳ, ಮಡಿಲ ವೀಳೆಯ, ನೆಲದ ಮೇಲೆಳಲುವ ಶೋಣ ಪೈಠಣೆಯ ಪೈರಣೆ, ನಸು ಹೊದೆ ದೊಲ್ಲಿ, ದಾಳಿಂಬದ ಹೂವಿನಂತೆ ಮೈಯಲ್ಲಿ ಅಳವಟ್ಟ ಚಿಂದಿ, ಬೆನ್ನಲ್ಲಿರುವ ಮದ್ದಳೆಯ ಮೇಲೆ ಕಟ್ಟಿದ ಕೊಣಸು, ಹೆದ್ದೊಡರ ಸರಪಳಿಗಳಲ್ಲಿ ನೇಲುವ ಬಾವುಲಿಯ ಬೊಂಬೆ, ಹತ್ತು ಬೆರಳಿಗೂ ಹತ್ತು ಉಂಗುರ, ಮಣಿಯ ಸರ, ತಾಯಿತ, ರತ್ನಖಚಿತವಾದ ಚಿನ್ನದ ತಾಳಿಯ ಪದಕ, ಕಿವಿಗಳಲ್ಲಿ ಹೊಳೆಯುವ ನೀಲ ಮುತ್ತಿನ ಕಟಕು, ಬೆಡಗಿನ ಬೊಟ್ಟು, ತುಱುಬುಚಿಮ್ಮುರಿ, ಚುಕ್ಕೆ ಇತ್ಯಾದಿ. (ಪ್ರ. ಲಿಂ. ಲೀ. 5=6–8) ಮತ್ತು (ಪ್ರ. ಪು. 5=25–27).

ಯಾದರೋ ಇದೊಂದನ್ನೂ ವಿವರವಾಗಿ ಪ್ರಸ್ತಾಪಿಸದೆ "ಭಕ್ತಿಭಾವುಕರೆಲ್ಲ ರೊಳಗಭಿವಂದ್ಯನಾಗಿ ಸಮಸ್ತಭ್ಯಾಗದಲಿ ಬಲ್ಲಿದ"ನಾಗಿದ್ದನೆಂದು ಮಾತ್ರ ಹೇಳಿಬಿಡುತ್ತಾನೆ.[1]

ಈ ಮೇಲಣ ಯಾವ ಕಾವ್ಯಗಳಿಂದಲೂ ನಮಗೆ ನಿರಹಂಕಾರನು ಮೊದಲಿಗೆ ಯಾವ ಊರಿನವನೆಂಬುದು ತಿಳಿಯ ಬರುವುದಿಲ್ಲ. ನಿರಹಂಕಾರನು ಮೊದಲಿಗೆ ಕರುವೂರಿನವನಿದ್ದು, ಆ ಮೇಲೆ ಅಲ್ಲಿಂದ ಬಳ್ಳಿಗಾವಿಗೆ ಬಂದು ಅಂತಃಪುರದ ಅಧಿಕಾರಿಯಾಗಿ ನೆಲಸಿದನೆಂದು ಊಹಿಸಲು ಅವಕಾಶವಿದೆ.[2] ಈ ಕರುವೂರು ಬಳ್ಳಿಗಾವಿಗೆ ಬಹಳ ಹತ್ತಿರವಿದ್ದಿರ ಬೇಕು. ನಿರಹಂಕಾರನು ಪುತ್ರ-ಕಾಮ್ಯದಿಂದ ತಪಸ್ಸು ಮಾಡಲು "ಕರುವೂರ ಪೆರ್ಮಲೆ"ಗೆ ಸತಿಯೊಡನೆ ಹೋಗುತ್ತಾನೆ.[3] ಕರುವೂರ ಬಳಿಯ ಆ ಬೆಟ್ಟಕ್ಕೆ "ಕರಿಮಲೆ" ಎಂದು ಹೆಸರು.[3]

## ಜನನ—ಬಾಲ್ಯ—ಯೌವನ

ನಿರಹಂಕಾರ ಸುಜ್ಞಾನದೇವಿ[4]ಯರಿಗೆ ನಿರ್ಮಾಯನು ಮಗನಾಗಿ ಹುಟ್ಟುತ್ತಾನೆ. ಹುಟ್ಟಿದ ಶಿಶು "ಲಿಂಗದಂಘ್ರಿಯೊಳೆ ನೋಟಂ ಮಿಕ್ಕು" ಕಣ್ದೆರೆಯುತ್ತದೆ.[5] "ಅಲ್ಲಮ"[6] ಎಂದು ನಾಮಕರಣವಾಗುತ್ತದೆ.

ಮಗುವಿಗೆ ಏಳು ವರ್ಷವಾಗಲು "ವೇದಾಗಮ ಪುರಾಣ ಶಾಸ್ತ್ರಾದಿಗಳು ಕಂತುಕಲೆಭೇದ ಭರತಂ ವೀಣೆ ರಾಗಮತ್ಯಂತ ಚೌಷಷ್ಟಿವಿದ್ಯೆಗಳು ನೆನೆದಾ

---

1. ಪ್ರ.ಲಿಂ.ಲೀ. 6–11; 2. ಕರುಊರ ನಿರಹಂಕಾರ ಸುಜ್ಞಾನದೇವಿಯ ಬಸಿರಲ್ಲಿ ಬಂದನೆನ್ನಬಹುದೇ ಪ್ರಭುದೇವರ (ಮಿ. ಸ್ತೋ. 75). ಈ ವಚನದ ಕರ್ತೃವಾದ ಘಟ್ಟಿವಾಳಯ್ಯನು ಪ್ರಭುದೇವರ ಸಮಕಾಲೀನನೆಂಬಂತೆ ಶೂನ್ಯ ಸಂಪಾದನೆಯಲ್ಲಿದೆ (ಶೂ. ಸಂಪಾದನೆ, ಸಂ. ಶ್ರೀ ಭೂಸನೂರುಮಠ, ಪುಟ 305–319) ಮತ್ತು (ಅ. ವ. ಚಂ. 1247, 1248, 1249). 3. ಪ್ರ. ಪು. 3–128, 129. 4. ಈಕೆಗೆ ಅಲ್ಲಮನನ್ನು ಹೆರುವ ಹೊತ್ತಿಗೆ ಕಡೆಯಪಕ್ಷ 30 ವರ್ಷ ವಯಸ್ಸಾಗಿತ್ತು (ಪ್ರ. ಪು. 3–45). 5. (ಪ್ರ. ದೇ. ರಗಳೆ). ಹೀಗೆ ಹುಟ್ಟಿದ ಮಗುವಿನ ಕೈಯಲ್ಲಿ ಒಂದು ಲಿಂಗವಿದ್ದುದನ್ನು ತಾಯಿತಂದೆಗಳು ಕಂಡು, ಆ ಲಿಂಗವನ್ನು ತೆಗೆದು ನವರತ್ನದ ಸಜ್ಜೆಯಲ್ಲಿ ಮೂರ್ತಿಗೊಳಿಸಿದರಂತೆ (ಪ್ರ. ಪು. 4–7). 6. ಪ್ರಾಚೀನರು ಈ ಹೆಸರಿಗೆ ಮಾಡಿರುವ ನಿರ್ವಚನವನ್ನು ಗಮನಿಸಿ: "ಬಲ್ಲೊಡೀ ಶಿಶುವೇತಜಹೊಳಗಿಹನಲ್ಲ, ಹೊಱಗಹನಲ್ಲ, ಭಾವಿಸಲಿಲ್ಲದಿರುತಿಹನಲ್ಲ....ಎಲ್ಲ ಜಾಡ್ಯದ ಜಂಜಡಂಗಳನಲ್ಲ-ವೆನಿಸುವ ಬಾಲಕ" (ಪ್ರ. ಲಿಂ. ಲೀ. 6–29), "ಬಿರುದಿನ ಬಿಂಕಕಾಱರ ವಾಸಿಗರ-ನಲ್ಲೆಸುವಲ್ಲಮನು (ಅದೇ 5–13); ಮತ್ತು (ಪ್ರ. ಪು. 3–138)ನ್ನು ನೋಡಿ.

ಕ್ಷಣಂ ಬಂದವು.[1] ತಂದೆಯಾದ ನಿರಹಂಕಾರನು ನಾಗವಾಸಾಧಿಪತಿಯಾದುದ ರಿಂದ ಆತನ ಮನೆಯ ವಾತಾವರಣದಿಂದಲೂ, ಕೊಟ್ಟ ಶಿಕ್ಷಣದಿಂದಲೂ, ಎಲ್ಲಕ್ಕಿಂತ ಹೆಚ್ಚಾಗಿ, ಆನುವಂಶಿಕ ಸಂಸ್ಕಾರದಿಂದಲೂ ಅಲ್ಲಮನು ತನ್ನ ಎಳೆ ಹರೆಯದಲ್ಲೇ ಮೃದಂಗದ ಮಹಾವಿದ್ಯೆಯಲ್ಲಿ ವಿಶೇಷವಾಗಿ ನಿಷ್ಣಾತನಾದನು[2].

ಹರಿಹರನ ಪ್ರಕಾರ—ಯೌವ್ವನಿಗನಾದ ಅಲ್ಲಮನನ್ನು ಪ್ರೀತಿಸಿದ, ಅಷ್ಟೇ ಅಲ್ಲದೆ, ಅವನೊಡನೆ ಸಾಂಸಾರಿಕಸುಖಜೀವನವನ್ನು ಹಲವು ವರ್ಷ ಗಳ ಕಾಲ ಅನುಭವಿಸಿದ ಕಾಮಲತೆಯೆಂಬವಳು ಅದೇ ಬಳ್ಳಿಗಾವಿಯವಳು,* ಧನದತ್ತನೆಂಬವನ ಮಗಳು. ಇವಳು ಜ್ವರ ಬಂದು ಸತ್ತ ಮೇಲೆ "ಮನದೊಳಲ್ಲ- ಮನು ಅತಿ ವಿರಕ್ತಿಯಂ ಕೈಕೊಂಡು"[3], ಕಣಿಗಲೆಯ ವನದ ಭೂಗರ್ಭಶಿವಾಲ ಯದಲ್ಲಿದ್ದ ಅನಿಮಿಷಯೋಗಿಯಿಂದ ಶಿವಲಿಂಗವನ್ನು ಪಡೆದು "ಪೋಗುತಿರ್ದಂ ಲಿಂಗವೆತ್ತಿತ್ತಲೊಯ್ದತ್ತ."

ಮುಡಿ ಸಡಿಲಿದುದನಱಿಯನೊಡನೆ ಬರ್ಪರನಱಿಯ
ಅಡವಿಯೂರೆಂದಱಿಯನಾಳಿಗೊಳ್ಪರನಱಿಯ

ಹೀಗೆ ಅಲ್ಲಮನು ದಟ್ಟವಾದರಣ್ಯವನ್ನು ಪ್ರವೇಶಿಸಿ ಎಷ್ಟು ಕಾಲ ತಪಸ್ಸು ಮಾಡಿದನೋ! ಅವನ ಈ ಸಾಧಕಜೀವನದ ಘಟ್ಟವು ನಮಗೆ ಎಳ್ಳಷ್ಟೂ ಯಾವ ಮೂಲದಿಂದಲೂ ತಿಳಿದುಬರುವುದಿಲ್ಲ. ಅಲ್ಲಮನ ಜೀವನಮಾನದ ಈ ಘಟ್ಟವು ಅದೆಷ್ಟು ಗೂಢತಮವೋ, ಅಷ್ಟೇ ಗಹನವೂ ಗಂಭೀರವೂ ಆದುದು. ಈ ಅನಿರ್ವಚನೀಯವಾದ ಸಾಧನೆಯಿಂದ ಬುದ್ಧನೂ ಸಿದ್ಧನೂ ಆದ ಅಲ್ಲಮನು

---

1. (ಪ್ರ.ಪು. 4–13); ಮತ್ತು ಪ್ರ.ಲಿಂ.ಲೀ. 6–33 ನೋಡಿ. 2. ಪ್ರ.ದೇ. ರಗಳೆ. *ಚಾಮರಸಾದಿಗಳ ಪ್ರಕಾರ ಈಕೆ ಬನವಸೆಯವಳು. ಕಾಮಲತೆಯ ಸಂಬಂಧವು ಅಲ್ಲಮನಿಗೆ ಲವಲೇಶವೂ ಇರಲಿಲ್ಲವೆನ್ನಿಸಲೋಸುಗ ಚಾಮರಸಾದಿಗಳು ಆಕೆಯ ಹೆಸರನ್ನು ಬದಲಾಯಿಸಿ 'ಮಾಯೆ' ಎಂದರು. ಮತ್ತು ಅಲ್ಲಮನು ಹುಟ್ಟಿದ ಊರಿನಲ್ಲಿಯೇ ಹುಟ್ಟಿದಾಕೆಯುನ್ನು ಬನವಸೆಯಲ್ಲಿ ಹುಟ್ಟಿದವಳೆಂದು ಕಟ್ಟಿದರು. ಜೊತೆಗೆ ಚಾಮರಸ ನಂತೂ ಹರಿಹರನ ಈ ಕಾಮಲತೆಯ ಪ್ರಸಂಗವನ್ನು ಬಹಳ ಕಟುವಾಗಿ ಟೀಕಿಸಿ ಅಲ್ಲಗಳೆದಿದ್ದಾನೆ: "ಲಲಿತನಿರ್ಮಳ ಚಂದ್ರಕಾಂತದ ಶಿಲೆಯ ಹತ್ತಿರ ಲತೆಯ ದಾವಾ ನಳನು ಕೊಳಲಾ ಜ್ವಾಲೆಯಾ ಶಿಲೆಯೊಳಗೆ ತೋರ್ಪಂತೆ, ತಿಳಿಯಲಱಿಯದ ಜನಕೆ ಮಾಯೆಯ ತಳಿತ ಕಾಮಜ್ವಾಲೆಯಲ್ಲಮನೊಳಗೆ ಪ್ರತಿಬಿಂಬಿಸಿದುದಾತನೆ ಕಾಮಿ- ಯೆಂಬಂತೆ" (ಪ್ರ. ಲಿಂ. ಲೀ. 7–25). ಈ ಮೇಲಣ ಪದ್ಯದಲ್ಲಿ 'ಮಾಯೆ'ಗೆ ಪರ್ಯಾಯವಾದ "ಕಾಮಲತೆ" ಎಂಬ ಹೆಸರನ್ನು ಕತ್ತರಿಸಿ ಲತೆ-ಕಾಮ ಎಂದು ಹಿಂದುಮುಂದು ಮಾಡಿ ಹರಿಹರನನ್ನು ಗೂಢವಾಗಿ ಗೇಲಿಮಾಡಿದ್ದಾನೆ ಚಾಮರಸ. 3. ಅ. ವ. ಚಂ. 11, 1276 ನೋಡಿ.

ಲೋಕೋದ್ಧಾರಕ್ಕಾಗಿ ಬಸವಾದಿ ಪ್ರಮಥರನ್ನೂ, ಮುಮುಕ್ಷುಗಳನ್ನೂ, ಮುಗ್ಧರನ್ನೂ ಕಂಡು ಎಚ್ಚರಿಸಿ, ಸಾಧನೆಯಲ್ಲಿ ತೊಡಗಿಸಿ, ಕರುಣಿಸಿ ಕೊನೆಗೆ ಶ್ರೀಪರ್ವತಾಭಿಮುಖನಾಗಿ ಕದಳಿಯಲ್ಲಿ ಕಣ್ಮರೆಯಾಗುತ್ತಾನೆ.

ಹೀಗೆ ಹರಿಹರನ ಪ್ರಕಾರ ಅಲ್ಲಮನು ಕಾರಣಪುರುಷನಾದರೂ ಸಂಸಾರಿಯಾಗಿದ್ದು, ಅವನ ಸಂಸಾರವನ್ನು ದುರ್ವಿಧಿಯು ಸೂರೆಗೊಂಡಮೇಲೆ, ನಿವೃತ್ತಿಮಾರ್ಗಾವಲಂಬಿಯಾಗಿ ಸಿದ್ಧಿಯನ್ನು ಪಡೆದನು. ಆದರೆ ಎಳಂದೂರು ಹರೀಶ್ವರನ ಪ್ರಕಾರ ಅಲ್ಲಮನು ತನ್ನ ಹನ್ನೆರಡನೇ ವಯಸ್ಸಿನವನಾದ ಮೇಲೆ[1], ಚಾಮರಸನ ಪ್ರಕಾರ ಚಿಕ್ಕಂದಿನಲ್ಲೇ, ತಂದೆ ತಾಯಿಯರನ್ನೂ ಮನೆಮಠವನ್ನೂ ಬಿಟ್ಟು ಚರಮೂರ್ತಿಯಾಗಿ "ಪರಮತತ್ವ ನಿರೂಪಣೆಯ ವಿಸ್ತರಿಸಲುದ್ಯೋಗಿಸು"ವನು.[2] ಚಾಮರಸ ಮತ್ತು ಎಳಂದೂರು ಹರೀಶ್ವರರ ಪ್ರಕಾರ ಅವನು ಯಾರನ್ನೂ ಪ್ರೀತಿಸುವುದೂ ಇಲ್ಲ, ಮದುವೆಯಾಗುವುದೂ ಇಲ್ಲ. ಗುರುಮೂರ್ತಿಯಾಗಿ ಲೋಕೋದ್ಧಾರಕ್ಕಾಗಿ ಪಾದಯಾತ್ರೆಯನ್ನು ಕೈಕೊಂಡ ಅಲ್ಲಮಪ್ರಭು ಬನವಸೆಗೆ ಬಂದಾಗ ಮಮಕಾರ ಮೋಹಿನೀದೇವಿಯರ ಪುತ್ರಿಯಾದ ಮಾಯಾದೇವಿಯು ಅವನನ್ನು ಮಧುಕೇಶ್ವರನ ದೇವಾಲಯದಲ್ಲಿ ಕಂಡು ಮೋಹಿಸುತ್ತಾಳೆ. ಆ ವೇಳೆಗೆ ಅಲ್ಲಮನ ಕೀರ್ತಿ ದಶದಿಕ್ಕಿಗೂ ಕುಡಿವರಿದಿರುತ್ತದೆ; "ಅಲ್ಲಮಪ್ರಭುವೆಂದೆನಿಸಿಕೊಂಬವನು ತಾ ಪ್ರತ್ಯಕ್ಷ ಪರಬೊಮ್ಮ" ಎಂದು ಲೋಕವೆಲ್ಲ ಅವನನ್ನು ಭಕ್ತಿಯಿಂದ ಹೊಗಳುತ್ತಿತ್ತು. ಹೀಗೆ ಪರಬ್ರಹ್ಮಸ್ವರೂಪಿಯಾದವನು ಮಾಯೆಗೆ ಸಿಲುಕಿಯಾನೇ? ಆತ ಮಾಯಾತೀತ![3] ಈ ಪ್ರತಿಮಾವಿಧಾನದಲ್ಲಿ ಅಲ್ಲಮನ ಜೀವನವು ಚಿತ್ರಣಗೊಂಡಿದೆ ಚಾಮರಸಾದಿಗಳ ಭಕ್ತಿ ಮತ್ತು ಶಾಂತರಸವರ್ಣಸಿಕ್ತ ಕುಂಚದಿಂದ.

## ಅಲ್ಲಮನ ಗುರು ಅನಿಮಿಷಯೋಗಿ

ಚಾಮರಸ ಮುಂತಾದವರು ತಮ್ಮ ಭಕ್ತಿಯ ಪರವಶತೆಯಲ್ಲಿ ಅಲ್ಲಮನು

---

1. ಪ್ರ. ಪು. 4–16; 5-5, 6.; 2. ಪ್ರ. ಲಿಂ. ಲೀ. 6–36. ಅಲ್ಲಮನ ವಚನ ಚಂದ್ರಿಕೆ 865 ನೇ ವಚನವೇನಾದರೂ ಈ ಹೇಳಿಕೆಗೆ ಪೋಷಕವಾದೀತೇನೋ ನೋಡಿ. 3. ಅ. ವ. ಚಂ. 239, 1254 ನೋಡಿ. "ಈಕೆ(ಮಾಯೆ)ಯಂಗವನಜಿಡು ನಾವಿನ್ನೇಕೆ ಸದಮಲಸತ್‌ಸ್ವರೂಪವ ಕಾಕರಿಗೆ ಕಾಣಿಸುವುದನುಚಿತವೆನುತೆ ತನ್ನೊಳಗೆ ಸಾಕೆನುತೆ ನಟ್ಟುವಿಗತನವನು ಸೂಕುತಲಿ ಮದ್ದಳೆಯ ತಾನೊಡೆಹಾಕಿ ನಗುತಲಿ ಹೋದನಲ್ಲಮನಖಿಳಜಗವಜಿಃಯೆ (ಪ್ರ. ಲಿಂ. ಲೀ. 7–37) ಮತ್ತು ಪ್ರ. ಪು. 5–124 ನೋಡಿ.

ಆಜನ್ಮಸಿದ್ಧನೆಂದು ಹೇಳಿದರೇನು ? ಆ ಅಲ್ಲಮನು ತನ್ನ ವಚನಗಳಲ್ಲಿಯೇ ತಾನು ತನ್ನ ಗುರುವನ್ನು ಕಂಡುದನ್ನು ಹಲವಾರು ಕಡೆ ಭಕ್ತಿಯಿಂದ ಸ್ಮರಿಸಿ ಕೊಂಡಿರುವನಲ್ಲದೆ, ತನ್ನ ಗುರುಪರಂಪರೆಯನ್ನೂ ಸ್ಪಷ್ಟವಾಗಿ ಹೇಳಿಕೊಂಡಿದಾನೆ*. ಹರಿಹರನೊಬ್ಬನೇ ಈ ವಿಷಯವನ್ನು ವಾಸ್ತವಿಕವಾಗಿ—ಯಾವ ಪೂರ್ವಗ್ರಹ ಪೀಡೆಯೂ ಇಲ್ಲದೆ—ಹೇಳಿರುವವನು. ಅಲ್ಲಮನು ಗುರುವನ್ನು ಕಂಡು ಅನುಗ್ರಹೀತನಾದ ಆ ಅದ್ಭುತ ದಿವ್ಯ ಸನ್ನಿವೇಶವನ್ನು ಹರಿಹರನು ತನ್ನ ಪ್ರಭುದೇವರ ರಗಳೆಯಲ್ಲಿ ಯಥಾವತ್ತಾಗಿ ವಿವರಿಸಿರುವನು. ಆ ಸಂದರ್ಭದ ಅವನ ಒಂದೊಂದು ಮಾತಿಗೂ ಪ್ರಭುದೇವರ ವಚನಗಳಿಂದಲೇ ಆಧಾರವನ್ನು ಒದಗಿಸಬಹುದು.[1] ಆದ್ದರಿಂದ ಅದನ್ನೇ ಮುಂದೆ ನೋಡೋಣ:

ನಲ್ಲೆಯಾದ ಕಾಮಲತೆಯು ಮಹಾಜ್ವರ ಹತ್ತಿ ಕೈಲಾಸವಾಸಿಯಾಗಲು ಅಲ್ಲಮನಿಗೆ ವಿಶ್ವವೆಲ್ಲ ಶೂನ್ಯವಾಗಿ ಕಂಡಿತು. ಮರುಗಿ ಮನವೆತ್ತಿಕ್ಕಿದಂತಾಗಿ ಪರಿತಂದು, ಬಳ್ಳಿಗಾವಿಯ ಪುರದ ಹೊರಗಣ ಕಣಿಗಿಲೆಯ ತೋಟಕ್ಕೆ ಬಂದು, ಒಂದೆಡೆ ಕುಳಿತು, ಚಿಂತೆಯಲ್ಲಿ ಮುಳುಗಿ, ಅನ್ಯಮನಸ್ಕನಾಗಿ ಉಂಗುಟದಿಂದ ನೆಲವನ್ನು ಚಿಮ್ಮುತ್ತಿರುವಾಗ, ಒಂದು ಚಿನ್ನದ ಕಳಶದ ತುದಿಯು ಕಣ್ಣಿಗೆ ಕಾಣಿಸಿತು. ಚಕಿತನಾದ ಅಲ್ಲಮನು ತನ್ನ ಕೈಲಾದಷ್ಟನ್ನು ಅಗೆದು, ಅಗೆಯಲಾರದೆ ಬಿಟ್ಟು, ಓಡಿ ಬಂದು ಆ ಊರಿನರಸನಿಗೆ—ಎಲ್ಲವನ್ನೂ ತಿಳಿಸಿದನು. ರಾಜನು ಸ್ವತಃ ಕಣಿಗಿಲೆಯ ವನಕ್ಕೆ ಬಂದು, ಆ ಪ್ರದೇಶವನ್ನು ಅಗೆಯುವಂತೆ ಸಾವಿರಾರು ಜನಕ್ಕೆ ಆಜ್ಞಾಪಿಸಿದ. ಅಗೆದಂತೆಲ್ಲ "ಕಳಶದಿಂ ಕೆಳಗೆ ಸೂತ್ರಿಕ ಸಿಂಹಮಂಟಪದ ವಳಯವಿರ್ಕೆಲದ ವೃಷಭಾಂಕಿತ ಶಿವಾಲಯದ ತುದಿವೊದಲ್" ಕಾಣಬಂದಿತು. ಆಗ ರಾಜನು ಆ ದೇವಾಲಯದ ಸುತ್ತ ಪ್ರದಕ್ಷಿಣೆ ಬಂದು, ಭಕ್ತಿಯಿಂದ ಆದರ ಬಾಗಿಲಲ್ಲಿ ನಿಂತು "ಕದವ ತೆರೆದು ಒಳಹೊಕ್ಕು ನೋಡುವ ಸಾಮರ್ಥ್ಯವುಳ್ಳವರುಂಟೆ? ಹೆದರದೆ ಇದರೊಳಗೇನಿದೆಯೆಂದು ನೋಡಬಲ್ಲವರುಂಟೆ?" ಎಂದು ಕೇಳಿದನು. ಯಾರೂ ಮುಂದೆ ಬರಲಿಲ್ಲ. ಆಗ ಅಲ್ಲಮನು "ಸತಿ ಕಾಮುಲತೆಯಿಲ್ಲ ಇನ್ನೇಕೆ ದೇಹದ ದುರಾಶೆಯಿದು ಸುಡು" ಎಂದು ಮನದೊಳಗೆ ನಿಶ್ಚೈಸಿ, ಭಸಿತವನ್ನು ಮೈಗೆಲ್ಲ ಬಳಿದುಕೊಂಡು, ಶಿವನೇ ಶರಣೆಂದು ನೂಕಿ ನಿರ್ಮಿದೊತ್ತಿ ಒಂದು ಕದವನ್ನು ತೆಗೆದು ಒಳಹೊಕ್ಕನು. ಹೊಕ್ಕೊಡನೆಯೇ ಅವನ ಬಗೆಯೇ ಬೇರಾಯಿತು—ಲೋಕವಾರ್ತೆಯನ್ನೆಲ್ಲ ನೆರೆ ಮರೆತು, ನಡೆದು ಮುಂದಿದ್ದ ಮಹಾಲಿಂಗದಂಘ್ರಿಗೆರಗಿ, ಪಕ್ಕದಲ್ಲಿ ನೋಡುತ್ತಾನೆ—ಅಲ್ಲೇ

---

*ಅ. ವ. ಚಂ. 1005. 1. ಅ. ವ. ಚಂ. 751, 752, 852, 932–936, 940, 1067.

ಅನಿಮಿಷಯ್ಯನಿದ್ದನು. ಅವನು ಚಲಿಸದಲುಗದೆ ನಿಶ್ಚಲವಾಗಿದ್ದನು. ಬಳಿಯಲ್ಲೇ ಬತ್ತಿಯಿಲ್ಲದ ಎಣ್ಣೆಯಿಲ್ಲದ ದೀಪ್ತಿ ಬೆಳಗುತ್ತಿತ್ತು. ಸುತ್ತಲೂ ಶಿವಕಳೆಯ ತಂಬೆಳಗು ತೊಳಗುತ್ತಿತ್ತು. ಆ ದಿವ್ಯ ಪ್ರಕಾಶದಲ್ಲಿ ಆ ಅನಿಮಿಷಯ್ಯನು ಕೈಕಾಲುಗಳ ಉಗುರು ಬಳ್ಳಿಯಂತೆಯೂ, ಅಂಗೈಗಳು ಚಿಗುರಂತೆಯೂ, ಬಿಟ್ಟ ಕಣ್ಣುಗಳು ಅರಳಿದ ಹೂಗಳಂತೆಯೂ, ಕೈಯ ಲಿಂಗವು ಅಮೃತರಸಫಲದಂತೆಯೂ ಇದ್ದು, ಆತನು ಕಲ್ಪವೃಕ್ಷದಂತೆ ಅಲ್ಲಮನ ಕಣ್ಣಿಗೆ ಕಾಣಿಸಿದ. ಆ ಮಹಾಗುರುವನ್ನು ಅಲ್ಲಮನು ಸ್ತುತಿಸಿ, ಕೈನೀಡಿ ನಿಂತಿರಲು ಆ ಅನಿಮಿಷಯ್ಯನು* ಅಲ್ಲಮನನ್ನು ಕಾರಣಿಕನೆಂದೂ, ತನಗೆ ತನುವಿನ ತೊಡಕು ಸಾಕೆಂದೂ ನಿಶ್ಚೈಸಿ, ಒಡ್ಡಿದ ಅಲ್ಲಮನ ಅಂಗೈಯಲ್ಲಿ ಲಿಂಗವನ್ನಿಟ್ಟು ಪ್ರಾಣವನ್ನು ಬಿಟ್ಟನು. ಆ ಲಿಂಗದ ಸೋಂಕಿಂದ ಅಲ್ಲಮನು ಪುಳಕಿತನಾಗಿ, ದೇವಾಲಯ

---

*ಅಲ್ಲಮನ ಗುರುವಾದ ಈ ಅನಿಮಿಷಯ್ಯನ ವೃತ್ತಾಂತವು ಬಹಳ ಕುತೂಹಲಕಾರಿಯಾಗಿದೆ: ಅನಿಮಿಷನೆಂಬವನಿಂದ ಅವಮಾನಿತನಾದ ವೃಷಭನು ಮುನಿಸಿನಿಂದ ಕೈಲಾಸವನ್ನು ಬಿಟ್ಟು "ಕೃಷ್ಣವೇಣಿಯ ಮಲಪ್ರಹರಿಗಳ ಪ್ರದೇಶದ ದಕ್ಷಿಣಕ್ಕಿರುವ ಬಲಿಗ್ರಾಮ (ಶಿಕಾರಿಪುರ ತಾಲೂಕಿನ ಬಳ್ಳಿಗಾ[ಮ]ವಿ)ಕ್ಕೆ ಬಂದುಬಿಡುವನು. ಇವನನ್ನು ಮತ್ತೆ ಕೈಲಾಸಕ್ಕೆ ಬರುವಂತೆ ಮಾಡುವ ಒಂದು ಉಪಾಯವನ್ನು ಮಹಾಕಾಯನೆಂಬವನು ಹೇಳುವನು. ಅದರ ಪ್ರಕಾರ ಅನಿಮಿಷನೇ ಭೂಮಿಯಲ್ಲವತರಿಸಿ, ವೃಷಭನ ಹೃತ್ಕಮಲಸ್ಥಪ್ರಾಣಲಿಂಗವನ್ನು ತನ್ನ ವಶಪಡಿಸಿಕೊಳ್ಳಬೇಕಾಯಿತು. ಈ ಹಂಚಿಕೆಯ ಪ್ರಕಾರ ಅನಿಮಿಷನು ಪಟ್ಟದಕಲ್ಲಿನಲ್ಲಿ ತ್ರೈಲೋಕ್ಯಚೂಡಾಮಣೀಶನಿಗೂ ಮಹಾಲೇಖೆಗೂ ಮಗನಾಗಿ ಹುಟ್ಟಿ ವಸುದೀಪ್ಯನೆಂದು ಹೆಸರು ಪಡೆಯುವನು. ಪ್ರಾಪ್ತವಯಸ್ಕನಾದಾಗ ಇವನೊಂದು ಸಲ ಮಹಾವೇಗಶಾಲಿಯಾದ ತುಂಟು ಕುದುರೆಯೊಂದರ ಮೇಲೆ ಕುಳಿತು, ದಾರಿತಪ್ಪಿ, ವೃಷಭನಿಳಿದುಕೊಂಡಿದ್ದ ಬಳ್ಳಿಗಾವಿಯ ಬಳಿ ಬರುತ್ತಾನೆ. ವಸುದೀಪ್ಯನಿಗೆ ಬಹಳ ಬಾಯಾರಿಕೆಯಾಯಿತು. ಆದರೆ ಲಿಂಗದರ್ಶನವಾಗುವವರಿಗೆ ನೀರೂ ಕುಡಿಯುವಂತಿಲ್ಲ—ಅಂಥದೊಂದು ವ್ರತವನ್ನವನು ಕೈಗೊಂಡಿದ್ದನು. ಹೀಗೆ ಲಿಂಗದರ್ಶನಕ್ಕಾಗಿ ಕಾತರಿಸಿ, ಹಂಬಲಿಸಿ, ಅರಸಿ ಅಲೆಯುತ್ತಿರಲು, ದೂರದಲ್ಲಿ ಒಂದು ವೃಷಭ ಕಾಣುವುದು. ಅದರ ಮೈಮೇಲಣ ಲಿಂಗಮುದ್ರೆಯನ್ನಾದರೂ ದರ್ಶನ ಮಾಡಿಕೊಂಡು ನೀರನ್ನು ಕುಡಿಯೋಣವೆಂದು ಸಮೀಪಿಸಲು, ಆ ವೃಷಭದ ಮೇಲೆ ಲಿಂಗಮುದ್ರೆಯೂ ಇರುವುದಿಲ್ಲ. ಆಗ ವಸುದೀಪ್ಯನು ಹತಾಶನಾಗಿ "ಇನ್ನೇತಕೀ ಘಟದಾಶೆ" ಎನ್ನುವಷ್ಟರಲ್ಲಿ, ವೃಷಭನು ಅವನಿಗೆ ಕರುಣಿಸಿ, ತನ್ನ ಆತ್ಮಸ್ಥ ಜ್ಯೋತಿರ್ಲಿಂಗವನ್ನು ದರ್ಶನ–ಸ್ಪರ್ಶನ–ಪೂಜನಕ್ಕೆಂದು ಅವನ ಕೈಗಿತ್ತು, ತಾನು ಸ್ವಲ್ಪಕಾಲ ಆರಾಡಿಕೊಂಡು ಬರಲು ಹೋಗುವನು. ಇತ್ತ ವಸುದೀಪ್ಯನು ಆ ಲಿಂಗವನ್ನು ನಿಮಿಷಾರ್ಧವೂ ಬಿಡದೆ ನಟ್ಟನೋಟದಿಂದ ನೋಡುತ್ತಿದ್ದುದರಿಂದ ಮತ್ತೆ ಅವನು 'ಅನಿಮಿಷ' ನೆನಿಸಿಕೊಂಡು ಭೂತಳದಲ್ಲಿ ಸಮಾಧಿಸ್ಥನಾಗಿಬಿಡುವನು. ... ಅವನನ್ನು ಹುಡುಕಿ

ದಿಂದ ಹೊರಬಂದು, ಯಾರಿಗೂ ಏನನ್ನೂ ಹೇಳದೆ, "ಪೋಗುತಿರ್ದಂ ಲಿಂಗ ವೆತ್ತೆತ್ತಲೊಯ್ದತ್ತ."

ಹೀಗೆ ಹರಿಹರನೂ, ಆ ಮೇಲೆ ಚಾಮರಸ, ಎಳಂದೂರು ಹರೀಶ್ವರರೂ ಅಲ್ಲಮನು ಅನಿಮಿಷಯ್ಯನನ್ನು ಕಂಡ ಸಂದರ್ಭವನ್ನು ಪ್ರಸ್ತಾಪಿಸಿರುವರು. ಆದರೆ ಹರಿಹರನೊಬ್ಬನೇ ಅನಿಮಿಷ ಮತ್ತು ಅಲ್ಲಮರ ನಿಜವಾದ ಈ ಗುರು ಶಿಷ್ಯ ಸಂಬಂಧವನ್ನರಿತು, ಒಪ್ಪಿಕೊಂಡು, ವಾಸ್ತವಿಕಾಂಶಗಳ ಆಧಾರದ ಮೇಲೆ ಸಹಜವಾಗಿ ನೂತನಾಡಿರುವವನು. ಚಾಮರಸ ಮತ್ತು ಎಳಂದೂರು ಹರೀಶ್ವರರೀರ್ವರ ಪ್ರಕಾರ ಗೊಗ್ಗಯ್ಯನೆಂಬ ಒಬ್ಬ ತೋಟಗಾರನಿಗೆ ಕರ್ಮ-ಮಾರ್ಗಕ್ಕಿಂತ ಶಿವಯೋಗಮಾರ್ಗವೇ ಮೇಲೆಂಬುದನ್ನು ನಿದರ್ಶನದ ಮೂಲಕ ಮನದಟ್ಟು ಮಾಡಿಕೊಡಲು ಅಲ್ಲಮನು ಅವನ ಕೈಲಿ ನೆಲವನ್ನಗೆಸಿ ಭೂಗರ್ಭಶಿವಾಲಯಲದಲ್ಲಿದ್ದ ಅನಿಮಿಷಯ್ಯನನ್ನು ಅವನಿಗೆ ತೋರಿರುವುದ ರಿಂದ, ಅನಿಮಿಷಯ್ಯನು ಅಲ್ಲಮನಿಗೆ ಕೇವಲ ಒಂದು ನಿದರ್ಶನಸಾಮಗ್ರಿ ಯಾಗಿದ್ದಾನೆ. ಇವರ ಪ್ರಕಾರ ಅನಿಮಿಷ-ಅಲ್ಲಮರಿಗೆ ಗುರುಶಿಷ್ಯ ಸಂಬಂಧ ವಿಲ್ಲ[1]. ಇದು ಪ್ರಭುದೇವನ[2] ಮತ್ತು ಅವನ ಸಮಕಾಲೀನ ಹಲವು ವಚನ ಕಾರರ[3] ಅಭಿಪ್ರಾಯಕ್ಕೆ ತೀರ ವಿರುದ್ಧ. ಆದರೂ ಆ ಕವಿಗಳು ತಮ್ಮ ಕಥಾ ನಾಯಕನು "ಯಾರ ಮಗನೂ ಅಲ್ಲ, ಯಾರ ಶಿಷ್ಯನೂ ಅಲ್ಲ" ಎಂಬಂತೆ "ದೇವಾನಾಂಪ್ರಿಯ"ಮಾರ್ಗದಲ್ಲಿ ತಮಗಿಷ್ಟ ಬಂದಂತೆ ಶರಣರ ಕಥೆಗಳನ್ನು ಅಸ್ತವ್ಯಸ್ತಮಾಡಿರುವುದು ಖಂಡನೀಯ ಮತ್ತು ಅನನುಕರಣೀಯ.

---

ಕೊಂಡು ಬಂದ ಅವನ ಆಪ್ತರು "ಅಲ್ಲಿಯೇ ಶಿಲಾತಲಂಗೊಳಿಸಿ ಸೂಕ್ಷ್ಮಾಲಯಂಗಟ್ಟಿ ಮುಣ್ಮುಚ್ಚಿದರು." ಬಳ್ಳಿಗಾವಿಯ ಬಳಿ ಹೀಗೆ ಭೂಗರ್ಭದಲ್ಲಿ ಸಮಾಧಿಸ್ಥನಾಗಿದ್ದ ಅನಿಮಿಷಯ್ಯನನ್ನೇ ಅಲ್ಲಮನು ಕಂಡದ್ದು (ಸಿಂ. ಪು. ಪುಟ 28-48). ಅನಿಮಿಷನಿಗೆ ವೃಷಭನು ಲಿಂಗವನ್ನು ಕೊಟ್ಟುದರಿಂದ, ವೃಷಭನು ಅನಿಮಿಷನ ಗುರುವಾದ. ಮುಂದೆ ವೃಷಭನ ಅವತಾರವೆಂದು ಪ್ರಖ್ಯಾತನಾದ ಬಸವನನ್ನು—ಆ ಅನಿಮಿಷನಿಂದ ಲಿಂಗವನ್ನು ಪಡೆದ ಅಲ್ಲಮನು ತನ್ನ ಗುರುವಿನ ಗುರುವೆಂದೂ, ಪರಮಗುರುವೆಂದೂ ವಚನಗಳಲ್ಲಿ ಹೇಳಿಕೊಂಡಿರುವುದರ ರಹಸ್ಯವಾದರೂ ಈ ಮೇಲಣ ಕಥೆಯಿಂದ ಸ್ಪಷ್ಟವಾಗುವುದು.

1. (ಪ್ರ. ಲಿಂ. ಲೀ. 11-18), (ಪ್ರ. ಪು. 7-129, 134). 2. ಅ. ವ. ಚಂ. 904, 905 ಇತ್ಯಾದಿ. 3. "ಅನಿಮಿಷಂಗೆ ಲಿಂಗವ ಕೊಟ್ಟಾತ ಬಸವಣ್ಣನು. ಆ ಲಿಂಗ ನಿನಗೆ (ಅಲ್ಲಮನಿಗೆ) ಸೇರಿತ್ತಾಗಿ ಬಸವಣ್ಣನ ಸಂಪ್ರದಾಯದ ಕಂದನು ನೋಡಾ ನೀನು" (ಚೆನ್ನಬಸವಣ್ಣನ ವಚನ—ಚೆ. ದೇ. ಸಂಕಲಿಸಿದ ಬಸವ ಸ್ತೋತ್ರದಿಂದ ಉದ್ಧೃತ, ವಚನ 31). ಮತ್ತು ಸಿಂ.ಪು. ಪುಟ 49, ವಚನ 1, 2, 3 ನೋಡಿ.

ಅಲ್ಲಮಪ್ರಭುವೇ ತನ್ನ ಗುರುಪರಂಪರೆಯನ್ನು ಸ್ಪಷ್ಟವಾಗಿ ಹೇಳಿಕೊಂಡಿದಾನೆ : ಅನಾದಿಗಣನಾಥ—ಆದಿಗಣನಾಥ—ಅಧ್ಯಾತ್ಮಗಣನಾಥ—ಆತ್ಮಗಣನಾಥ—ವ್ಯೋಮಸಿದ್ಧಗಣನಾಥ—ಬಸವಗಣನಾಥ—ಅನಿಮಿಷಗಣನಾಥ—ಅಲ್ಲಮಪ್ರಭುಗಣನಾಥ.[1] ಆದುದರಿಂದ ನವನಾಥರ ಸಂಪ್ರದಾಯಕ್ಕೆ ಸೇರಿದವನಿವನೆಂದು ಕೆಲವರು ಹೇಳುವುದು ಕೇವಲ ಕಾಲ್ಪನಿಕ ಮತ್ತು ಅವಿಚಾರಿತ-ರಮಣೀಯ. ಅಲ್ಲಮಪ್ರಭುವಿಗಾಗಲಿ ಮಿಕ್ಕ ಶರಣರಿಗಾಗಲಿ ನವನಾಥಸಿದ್ಧರ ಬಗ್ಗೆ ಗುರುವೆಂಬ ಗೌರವಭಾವನೆಯಿದ್ದಂತೆ ತೋರುವುದಿಲ್ಲ.[2] ಮತ್ಸ್ಯೇಂದ್ರನೇ ಅನಿಮಿಷಯ್ಯನೆಂಬುದಂತೂ ಬಾಲಭಾಷೆ.[3]

## ಪಾದಯಾತ್ರೆ—ಐಕ್ಯ

ಅಲ್ಲಮನು ಆಸೇತು ಹಿಮಾಚಲ ಸಂಚರಿಸಿ[4] ನಾನಾ ವಿಧವಾದ ಜನಕ್ಕೆ ಅವರವರ ಭವರೋಗದ ವೈವಿಧ್ಯವನ್ನು ಗೊತ್ತು ಹಚ್ಚಿ, ತಕ್ಕ ವಚನಾಮೃತದ ಅನುಪಾನದೊಡನೆ ಅವರಿಗೆ ಆಧ್ಯಾತ್ಮಿಕ ಚಿಕಿತ್ಸೆಯನ್ನು ನಡೆಸಿ, ಅವರು ನಿತ್ಯರಾಗುವಂತೆ ಮಾಡಿದನು. ಯಾವ ಸಂದರ್ಭದಲ್ಲೂ ಅವನು ಪರಮತಖಂಡನೆಯನ್ನಾಗಲಿ ದ್ವೇಷವನ್ನಾಗಲಿ ಮಾಡದೆ ಕೇವಲ ತಾತ್ವಿಕವಿಚಾರಗಳನ್ನೇ, ನಿಶಿತವಾದರೂ ಕೃಪಾರಸಸಿಕ್ತ ವಚನಧಾರೆಯಿಂದ, ಅವರ ಭಾವಶರೀರಕ್ಕೆ ಧಾರೆಯೆರೆದು ಅವರನ್ನು ಮಹಾನುಭಾವರನ್ನಾಗಿ ಮಾಡಿದನು. ಪರಮತಖಂಡನೆಯನ್ನು ಮಾಡದೆ ಕೇವಲ ರಚನಾತ್ಮಕ ಮಾರ್ಗದಲ್ಲಿ ಜನತೆಯನ್ನು ಬಿಡುಗಡೆಯ ಕಡೆಗೆ ಕೊಂಡೊಯ್ದ ಈ ಮಹನೀಯನಂಥವರು ಕೇವಲ ವಚನಕಾರರಲ್ಲಿಯಷ್ಟೇ ಅಲ್ಲ, ಇಡೀ ಭಾರತದ ಧರ್ಮಚರಿತ್ರೆಯಲ್ಲೇ ಹಲವರಿಲ್ಲ. ಈ ದೃಷ್ಟಿಯಿಂದ ಈ ಅಲ್ಲಮನ ಅಪೂರ್ವ ಪ್ರೇಮವಾಣಿಯ ತರಂಗಯಾತ್ರಾಪಥವನ್ನು ಗುರುತಿಸೋಣ :

ಬಳ್ಳಿಗಾವಿ—ಬನವಸೆ—ರಾಮೇಶ್ವರ—ಕೊಡುಗುರಾಜ್ಯ—(ಮತ್ತೆ) ಬಳ್ಳಿ

---

1. ಅ. ವ. ಚಂ. 1005. 2. ಅ.ವ.ಚಂ. 331, 724. ಮತ್ತು ಚಿ. ದೇ. ಸಂಕಲಿಸಿದ ಬ. ಸ್ತೋ. 47 ನೋಡಿ. 3. ಗೋರಕ್ಷನ ಗುರು ಮಚ್ಛೇಂದ್ರನೆಂದೂ ಅವನು (ಮಚ್ಛೇಂದ್ರನು) ಚುನ್ನಗುಣಕೊಳಗಾದನೆಂದೂ ಹೇಳಿ ಅಲ್ಲಮಪ್ರಭು ಗೋರಕ್ಷನಿಗೆ ದೇಹದ ಅನಿತ್ಯತೆಯನ್ನು ಬೋಧಿಸಿದಂತೆ ಎಳಂದೂರು ಹರೀಶ್ವರನು ಚಿತ್ರಿಸಿದ್ದಾನೆ. (ಪ್ರ.ಪು. 8–121). ಹೀಗೆ ನವನಾಥಸಿದ್ಧರಿಗೂ ಅಲ್ಲಮನಿಗೂ ಗುರುಶಿಷ್ಯ ಸಂಬಂಧವಿಲ್ಲವೆಂಬುದು ಸಂಪ್ರದಾಯದಿಂದಲೂ ಸಿದ್ಧವಾದ ವಿಷಯ. 4. ಅ. ವ. ಚಂ. 1123 ನೋಡಿ.

ಗಾವಿ—ಅಡಕ[1]—ಸೊನ್ನಲಾಪುರ—ಕಲ್ಯಾಣ—ಕಾಶಿ—ಕೇದಾರ—ಗಯಾ—ನೇಪಾಳ—ಹಿಮಾಲಯ—ಹಿಮಾಲಯದ ಆ ಕಡೆ—ಶ್ರೀಶೈಲ—(ಮತ್ತೆ) ಕಲ್ಯಾಣ[2]—(ಮತ್ತೆ) ಶ್ರೀಶೈಲ—ಕದಳಿ[3].

ಕದಳಿಯಲ್ಲಿ ಅದೃಶ್ಯವಾದ ಆ ಮಾನವದೇವನು ನಡೆದು ತೋರಿದ ಪದ್ಧತಿಯು ಕೈವಲ್ಯ ಮಾರ್ಗವಾಗಿ ಇಂದಿಗೂ ಅಚ್ಚಳಿಯದೆ ಕಾಣಬರುತ್ತಿದೆ; ನುಡಿದು ಬೋಧಿಸಿದ ವಾಣಿ ಅಭಯವಚನಮುದ್ರಿಕೆಯಾಗಿ ಸ್ಪಷ್ಟವಾಗಿ ಕೇಳಬರುತ್ತಿದೆ.

---

1. ಅಜಗಣ್ಣನ ಸಹೋದರಿಯಾದ ಮುಕ್ತಾಯಿಯನ್ನು ಸಂತೈಸಿದ ಸ್ಥಳ. 2. ಮೊದಲನೆಯ ಸಲ ಇವನು ಕಲ್ಯಾಣಕ್ಕೆ ಬಂದುದಕ್ಕೂ, ಎರಡನೆಯ ಸಲ ಬಂದುದಕ್ಕೂ 12 ವರ್ಷಗಳ ಅಂತರವಿದೆ. 3. ಐಕ್ಯವಾದ ಸ್ಥಳ. "ಉರುತರದ ಶ್ರೀಪರ್ವತಾಗ್ರ ತಟದೊಳಗೊಂದು ಪರತರದ ತ್ರೈಕೂಟಸ್ಥಾನವುಂಟದರ ಮೇಲ್ನಿರುತದಿಂ ಕಾಣಬಾರದ ಕದಳಿ ರಂಜಿಸುವುದದರ ಪರಿಮಧ್ಯದೊಳಗಂ ಪರಮಪ್ರಕಾಶ ಶತದಳಪದ್ಮ, ಪದ್ಮದೊಳ-ವಿರಳಾತ್ಮಕಂ ಶೂನ್ಯಲಿಂಗ ರಾಜಿಪುದಲ್ಲಿ ಉರಿ ಉಂಡ ಕರ್ಪುರದಂತಾಗು"ವುದೇ ಈ ಮಹನೀಯನ ಐಕ್ಯ (ಪ್ರ. ಪು. 8-82; 9-271)



ಅಡಕ - ಅಡಿಗಂಟಿ ಗ್ರಾಮ -

## ಪೀಠಿಕೆಗೆ ಬಳಸಿಕೊಂಡಿರುವ ಕೆಲವು ಗ್ರಂಥಗಳಿಗೆ ಕೊಟ್ಟಿರುವ ಸಂಕೇತಗಳು

| | |
|---|---|
| ಶಿವತತ್ವಸಾರ | ಶಿ. ತ. ಸಾ. |
| ಕೆಂಭಾವಿಭೋಗಯ್ಯನ ರಗಳೆ | ಕೆಂ. ಭೋ. ರ. |
| ಓರಿಯಂಟಲ್ ರಿಸರ್ಚ್ ಇನ್ಸ್ಟಿಟ್ಯೂಟಿನಲ್ಲಿರುವ ಓಲೆಯ ಪ್ರತಿ | O.R.I.K. |
| ,, ಕಾಗದದ ಪ್ರತಿ | O.R.I.K.A. |
| ,, ,, | O.R.I.K.B. |
| ಬಸವೇಶ್ವರನ ಷಟ್ಸ್ಥಲದ ವಚನಗಳು (ಸಂ: ಶ್ರೀ ಬಸವನಾಳ್) | ಬ. ವ. |
| ಚೆನ್ನಯ್ಯನ ರಗಳೆ | ಚೆ. ರ. |
| ಕರ್ಣಾಟಕ ಕವಿಚರಿತ್ರೆ | ಕ. ಕ. ಚ. |
| ಕೇಶಿರಾಜ ದಣ್ಣಾಯಕರ ರಗಳೆ | ಕೇ. ರಾ. ದ. ರ. |
| ಪಂಡಿತಾರಾಧ್ಯ ಚರಿತ್ರೆ (ಪಾಲ್ಕುರಿಕೆ ಸೋಮನಾಥ) ಸಂ : ಶ್ರೀ ಚಿಲುಕೂರಿ ನಾರಾಯಣರಾವ್ | ಪಂ. ಆ. ಚ. |
| ಅಲ್ಲಮನ ವಚನ ಚಂದ್ರಿಕೆ | ಅ. ವ. ಚಂ. |
| ಸಿದ್ಧರಾಮಚಾರಿತ್ರ | ಸಿ. ರಾ. ಚಾ. |
| ಪ್ರಭುಲಿಂಗಲೀಲೆ | ಪ್ರ. ಲಿಂ. ಲೀ. |
| ಲಿಂಗಲೀಲಾ ವಿಲಾಸ ಚಾರಿತ್ರ | ಲಿಂ.ಲೀ.ವಿ.ಚಾ. |
| ಹೆಚ್ಚಿಗೆ ದೊರೆತ ಬಸವೇಶ್ವರನ ವಚನಗಳು | ಬ.ವ.ಹೆ. ; ಬ.ಹೆ.ವ. |
| ಚೆನ್ನಂಜೇ ದೇವರು ಸಂಕಲಿಸಿದ ಮಿಶ್ರ ಸ್ತೋತ್ರದ ವಚನ | ಮಿ. ಸ್ತೋ. |
| ಚೆನ್ನಂಜೇದೇವರು ಸಂಕಲಿಸಿದ ಬಸವಸ್ತೋತ್ರದ ವಚನ | ಬ. ಸ್ತೋ. |
| ತೆಲುಗು ಬಸವಪುರಾಣ (ಪಾಲ್ಕುರಿಕೆ ಸೋಮನಾಥ) ಸಂ: ಶ್ರೀ ಬಂಡಾರು ತಮ್ಮಯ್ಯಗಾರು | ತೆ. ಬ. ಪು. |
| ಬಸವರಾಜದೇವರ ರಗಳೆ | ಬ. ದೇ. ರ. |
| ಪ್ರಭುದೇವರ ಪುರಾಣ (ಎಳಂದೂರು ಹರೀಶ್ವರ) | ಪ್ರ. ಪು. |
| ಸಿಂಗಿರಾಜ ಪುರಾಣ | ಸಿ. ಪು. |
| ಶಿವತತ್ವ ಚಿಂತಾಮಣಿ (ಲಕ್ಕಣ್ಣದಂಡೇಶ) | ಶ. ತ. ಚಿಂ. ಮ. |

ಕಾಳೆಗದ ಕಥೆಯಲ್ಲ, ವಿಷಯಗ
ಳೇಳಿಗೆಯ ವಿಧಿಯಲ್ಲ, ಹೊಟ್ಟೆಯ
ಹೂಳಲಿಕೆ ಹಿಂಸೆಯನು ಮಾಡುವ ಹೊಲಬು ತಾನಲ್ಲ ;
ಕಾಳೆಗವು ಕರಣದಲ್ಲಿ, ಸುರತದ
ಕೀಲು ಕುಂಡಲಿಯಲ್ಲಿ, ತೃಪ್ತಿಯ
ದಾಳಿ ಗಗನದೊಳೆಂದು ಪೇಳುವುದೀ ಸುಬೋಧೆಯಲಿ

[ಪ್ರಭುಲಿಂಗಲೀಲೆ 1–12]

# ಅಲ್ಲಮನ ವಚನ ಚಂದ್ರಿಕೆ

---

## ಪಿಂಡಸ್ಥಲ

[1]ಶಿಲೆಯೊ[1]ಳಗಣ ಪಾವಕನಂತೆ, ಉದಕದೊಳಗಣ ಪ್ರತಿಬಿಂಬದಂತೆ, ಬೀಜದೊಳಗಣ ವೃಕ್ಷದಂತೆ, ಶಬ್ದದೊಳಗಣ ನಿಶ್ಶಬ್ದದಂತೆ, ಗುಹೇಶ್ವರ, ನಿಮ್ಮ ಶರಣ ಸಂಬಂಧ.

2

ಕಲ್ಲೊಳಗಣ ಕಿಚ್ಚು ಉರಿಯ[2]ಬಲ್ಲುದೆ[2]? ಬೀಜದೊಳಗಣ ವೃಕ್ಷ ಉಲಿಯ[2]ಬಲ್ಲುದೆ[2]? ತೋಱ[3]ಲಿಲ್ಲಾಗಿ[3] ಬೀಱಲಿ[4]ಲ್ಲಾ[4]ರಿಗೆಯು. ಗುಹೇಶ್ವರ, [5]ನಿಮ್ಮ[5] ನಿಲವನನುಭವಸುಖಿ [6]ಬಲ್ಲ[6].

3

ಜಲದೊಳ[7]ಗಿದ್ದ[7] ಕಿಚ್ಚು ಜಲವ ಸುಡದೆ ಜಲವು ತಾನಾ[8]ಗಿ[8]ದ್ದಿತ್ತು ನೋಡಾ! ನೆಲೆಯನಱಿದು ನೋಡಿಹೆನೆಂದಡೆ ಅದು ಜಲವು ತಾನಲ್ಲ. ಕುಲದೊಳಗಿದ್ದು ಕುಲವ ಬೆರಸದೆ ನೆಲೆಗೆಟ್ಟು ನಿಂದುದನಾರು ಬಲ್ಲರು? ಹೊಱಗೊಳಗೆ ತಾನಾಗಿದ್ದು ಮತ್ತೆ ತಲೆದೋಱದಿಪ್ಪುದು, ಗುಹೇಶ್ವರ, ನಿಮ್ಮ ನಿಲವು ನೋಡಾ.

4

ನೆಲದ ಮಱೆಯ ನಿಧಾನದಂತೆ, ಮುಗಿಲ ಮಱೆಯಲಡಗಿ[9]ದ[9] ಮಿಂಚಿನಂತೆ, ಬಯಲ ಮಱೆಯಲಡಗಿ[9]ದ[9] ಮರೀ[10]ಚಿಯಂ[10]ತೆ, ಕಂಗಳ ಮಱೆಯಲಡಗಿ[9]ದ[9] ಬೆಳಗಿನಂತೆ, ಗುಹೇಶ್ವರ, ನಿಮ್ಮ ನಿಲವು.

## ಪಿಂಡ ಜ್ಞಾನಸ್ಥಲ

5

ಆದಿ[11]ಯಾಧಾರವಿಲ್ಲ[11]ದಂದು, ಹಮ್ಮು ಬಿಮ್ಮುಗಳಿಲ್ಲದಂದು, ಸುರಾಳ

---

1. ಕಲ್ಲೊ (ಶೂ) ಶಿಲೆಯೊ (ಲಿ) 2. ದಂತೆ (ಬಟ) 3. ಲಿಲ್ಲವಾಗಿ (ಟ) 4. ಲ್ಲವಾ (ಟ) 5. ನಿಂದ (ಬಚ) 6. ಬಲ್ಲ (ವ) 7. ಗಿದ್ದು (ಬ) ಗಣ (ತಲಿ) 8. ಗಿ ಇ (ಬಟ) ಗಿಯೆ ಇ (ಲಿಡಿಹ) 9. ದ್ದ (ಹತಲಡಿ) 10. ಚನಂ (ಹಲಿ ತದಲ), ಚಕನಂ (ಡಿ) 11. ಯ ಆಧಾರವಿಲ್ಲ (ಟ) ಆಧಾರವಿಲ್ಲ (ಬ) ಅನಾದಿಯಿಲ್ಲ (ಗ)

ನಿರಾಳ[1]ವಿಲ್ಲ[1]ದಂ[2]ದು[2], ಸಚರಾಚರ[3]ವೆಲ್ಲ[3] ರಚನೆಗೆ ಬಾರದಂದು [4]ಗುಹೇಶ್ವರ, ನಿಮ್ಮ ಶರಣನುದಯಿಸಿದನಂದು.[4]

## 6

ನಾದಬಿಂದುಗಳಿಲ್ಲದಂದು ನಿರ್ಭಯನೆಂಬ ಗಣೇಶ್ವರನು. ಉತ್ಪತ್ತಿ ಸ್ಥಿತಿ ಲ[5]ಯವಿಲ್ಲ[5]ದಂದು ಅಕ್ಷಯನೆಂಬ ಗಣೇಶ್ವರನು. [6]ಓದು[6] ವೇದಂಗಳಿಲ್ಲದಂದು ಓಂಕಾರನೆಂಬ ಗಣೇಶ್ವರನು. ಯುಗ[7]ಜುಗಂಗಳಿಲ್ಲ[7]ದಂದು ಊರ್ಧ್ವಮುಖ ನೆಂಬ ಗಣೇಶ್ವರನು. ಗುಹೇಶ್ವರಲಿಂಗವಿಲ್ಲದಂದು [8]ನಿರ್ಮಾಯ[8]ನೆಂಬ ಗಣೇಶ್ವರನು.

## 7

ಅಯ್ಯ, ಜಲ–ಕೂರ್ಮ–[9]ಗಜ[9]–ಫಣಿಯ ಮೇಲೆ ಧರೆ ವಿಸ್ತರಿಸಿ ನಿಲ್ಲ ದಂದು, ಗಗನವಿಲ್ಲದಂದು, ಪವನನ ಸುಳುಹಿಲ್ಲದಂದು, ಅಗ್ನಿಗೆ ಕಳೆದೋಱದಂದು ತರುಗಿರಿತೃಣ[10]ಕಾಷ್ಠಾದಿ[10]ಗಳಿಲ್ಲದಂದು, ಯುಗಜುಗಮಿಗಿಲೆನಿಸಿದ ಹದಿನಾಲ್ಕು ಭುವನ ನೆಲೆಗೊಳ್ಳದಂದು, ನಿಜವನಱಿ[11]ದಿಹೆ[11]ನೆಂಬ ತ್ರಿಜಗಾಧಿಪತಿಗಳಿಲ್ಲ ದಂದು ತೋಱುವ ಬೀಱುವ [A]ಭಾ[A][12]ವ[12]ದಲ್ಲಿ ಭರಿತ ಅಗಮ್ಯ ಗುಹೇಶ್ವರ [13]ಲಿಂಗವು[13].

## 8

[B]ಅಯ್ಯ, ನೀನು ನಿರಾಳನಿರ್ಮಾಯನಾಗಿ[14]ಪ್ಪೆ[14]ಯಾಗಿ, ಆಕಾ[15]ಶ[15] ಪ್ರಕಾ[16]ಶವಿಲ್ಲ[16]ದಂದು, ಸಾಕ್ಷಿಸಭೆಗಳಿಲ್ಲದಂದು, ಸಚರಾಚರವೆಲ್ಲ ರಚನೆಗೆ ಬಾರದಂದು,[B] ಆಧಾರದೊಳಗಣ ವಿಭೂತಿ[17]ಯನೆ[17] ತೆಗೆದು ಭೂಮಿಯ

---

1. ಗಳಿಲ್ಲ (ಟ) 2. ದು ಶೂನ್ಯ ನಿಶ್ಶೂನ್ಯವಿಲ್ಲದಂದು (ಶೂಗ) 3. ಗಳೆಲ್ಲ (ಟ) 4. ಗುಹೇಶ್ವರ, ನೀನೊಬ್ಬನೇ ಇದ್ದೆಯಲ್ಲಾ ಇಲ್ಲದಂತೆ (ಗಲಿ) ಗುಹೇಶ್ವರನ ಶರಣನುದಯಿಸಿದನಂದು (ಶೂಪ್ರ) ಗುಹೇಶ್ವರ ನೀನೆ ಲಿಂಗ ಸಂಗನ ಬಸವಣ್ಣನೇ ಭಕ್ತ (ಸಿ) 5. ಯಂಗಳಿಲ್ಲ (ಶೂ) 6. ಓದುವ (ಟ) 7. ಜುಗವಿಲ್ಲ (ಹಡಿತ) 8. ನಾನು ನಿರ್ಮಾಯ (ಚವ್ಯಾ ಟವ್ಯಾ) 9. ಜಗ (ಟ) 10 ಕಾಷ್ಠಂ (ಕಚದಹ) 11. ದೆ (ತಲಡಿ) [A]ಪರಿಭಾ (ಬ) 12. ವದ ಪರಿಭಾವ (ಓಕಚದ) ವದಪರಿಯ ಭಾವ (ಸ್ವಡಿಟತಲ) ವದ ಪರಿಯ ಆ ಭಾವ (ಚವ್ಯಾಟ ವ್ಯಾಚಿ) 13. ನಿರಾಳವು (ಡಿಬ). [B]ನಿರಾಳ ನಿರ್ಮಾಯ ನಾಗಿ ಆಕಾರನಿರಾಕಾರವಿಲ್ಲದಂದು ಸಾಕ್ಷಾತ್‌ಸಭೆಯಿಲ್ಲದಂದು (ಸಿ) 14. ರುತ್ತಿದ್ದೆ (ಗ) 15. ಶದ (ಹ) 16. ಶಂಗಳಿಲ್ಲ (ಗ) 17. ಯಂ (ಸ್ವಡಿಸಿ ತಲ)

[1]ನೆಲೆಗೊಳಿಸಿ[ಸೆ ?][1], ಪಂಚಾ[2]ಶತ್ಕೋಟಿ[2] [A]ವಿಸ್ತೀ[3]ರ್ಣ[3]ಭೂಮಂಡಲಕ್ಕೆ ಸುತ್ತಿ ಹರಿದವು ಸಪ್ತ[4]ಸಾಗರಂ[4]ಗಳು.[A] ಎಂಬತ್ತಾಱು ಕೋಟಿ[5]ಯುಂ[5] ತೊಂಬ[6]ತ್ತೇಳು[6]ಲಕ್ಷ [7]ಕಾಲ[7]—[B]ಭುವನಮಂಡಲಕ್ಕೆ ಉದಯ; ಬ್ರಹ್ಮಾಂಡ[B], [8]ಐ[8]ವತ್ತಾಱು ಕೋಟಿ [C]ತಾರಾಮಂಡಲವೆಂದಡೆ. ಬೆಳಗಿತೋಱಿದ ಹನ್ನೆರಡು ಜ್ಯೋತಿಯ; ನಿಲಿಸಿ ತೋಱಿದ ಹದಿನಾಲ್ಕು ಭುವನವ[C]! ಈ ಜಗದ ಜಂಗುಳಿ[9]ಯ[9] ಕಾವ ಗೋ[10]ವಳ[10] ತಾನಾಗಿ, [11]ಚೌರಾಸಿ[11] [12]ಲಕ್ಷ[12] ಜೀವ ರಾಶಿಗಳಿಗೆ [13]ರಾಶಿವಾಳ[13] ತಾನಾಗಿ, [D]ಸಕಲದ ಅಳಿವಿನ [14]ಉಳಿವಿನ ನಿಂದ[14] ನಿಜದ ನಿಲವ ನೋಡಿ ಕಂಡೆನು; ಗುಹೇಶ್ವರ, ನಿಮ್ಮ ಶ್ರೀಪಾದಕ್ಕೆ ನಮೋ ನಮೋ ಎನುತಿರ್ದೆನು.[D]

9

ತಲೆಯಿಲ್ಲದ ತಲೆಯಾತಂಗೆ ಕರುಳಿಲ್ಲದ ಒಡಲು ನೋಡಾ! [15]ಆ ನಲ್ಲ[15]ಂಗೆ ಅಂಗವಿಲ್ಲದ ಅಂಗನೆ ಸತಿಯಾಗಿಪ್ಪಳು. ಇವರಿಬ್ಬರ ಬಸಿಱಲ್ಲಿ ಹುಟ್ಟಿದ [16]ಳೆಮ್ಮ[16] ತಾಯಿ. ನಾ ಹುಟ್ಟಿ ತಾಯ ಕೈವಿಡಿದು ಸಂಗವ ಮಾಡಿ ನಿರ್ದೋಷಿಯಾದೆನು ಕಾಣಾ ಗುಹೇಶ್ವರ.

10

ಎನ್ನ ನಾನಱಿಯ[17]ದಂದು ಮುನ್ನ[17] ನೀನೇನಾಗಿದ್ದೆ ಹೇಳಾ ? ಮುನ್ನ [18]ನೀ[18]ಬಾಯ ಮುಚ್ಚಿಕೊಂಡಿದ್ದೆಯೆಂಬುದ ನಾ ನಿನ್ನ ಕಣ್ಣಿಂದ ಕಂಡೆನು.

---

1. ಮೇಲೆ ನೆಲೆಗೊಳಿಸಿ (ಚಿಟ) ನೆಲೆಗೊಳಿಸಿದ (ಟವ್ಯಾ) 2. ಶತಕೋಟಿ (ಬಚಿಡಿ ಟಸಿ) ಶತ್ಕೋಟಿಯೋಜನದ (ಗ) [A]ಭೂಮಂಡಲವನ್ನು ಸುತ್ತುಹರಿಸಿದ ಸಪ್ತ ಸಾಗರಂಗಳ (ಸಿ) 3. ರ್ಣದ (ಟ) 4. ಸಮುದ್ರಂ (ತಲಬಹ) 5. ಯು (ಸಿಹಡಿ ಚತಲ) × (ಚಿಗ) 6. ತ್ತಾಱು (ಸಿ) 7. ತಾಳು (ಸಿ) [B]ಭುವನಕ್ಕೆ (ಸಿ) 8. (ಟ) ಆರು (ತಡಿಹಗಬ) ಅಱು (ಚಲಸಿ) [C]ಯೋಜನದುದಯದಲ್ಲಿ ವರಖೇಚರ ಭೂಚರದಲ್ಲಿ ನಿಲಿಸಿದನೀರೇಳು ಭುವನಂಗಳ ತಾರತಮಂಥ ಉಂಟೆಂದಡೆ ಬೆಳಗಿತೋಱಿದ ಹನ್ನೆರಡು ಜ್ಯೋತಿಯ ಯೋಜನಭೋಜನದಲ್ಲಿ ಹುಟ್ಟಿದ ಭಾಜನವಾದ ಬೊಬ್ಬುಳಿಯಾದ (ಸಿ) 9. × (ಓ) 10. ವಾಳ (ಕಚದಓ) ವ (ಸಿ) ರಾಶಿವಾಲ (ಬ) 11. ಚವುರಾಶಿ (ಹತ) ಎಂಬತ್ನಾಲ್ಕು (ಗ) ಚತುರಾಶೀತಿ (ಸಿ) ಚೌರಾಶಿ (ಕಚದ) 12. ಲಕ್ಷ ಯೋನಿಮುಖ (ಸಿ) 13. ರಾಸಿವಾಳ (ಕಡಿಟ) ರಾಶಿವಾಳುಕ (ಸಿ) ರಾಶಿವಾಳಕ (ಗಲ) 14. ಉಳಿವಿನಿಂದ (ಗ) [D]ಸಕಲ ಅಳಿವು ಉಳಿವಿನೊಳಗೆ ಒಬ್ಬನೇ ಉಳಿದಿರ್ದು ನೋಡಿ ಕಂಡು ನಿಂದ ಪೂರ್ವಾಚಾರಿ ಗುಹೇಶ್ವರನ ಶರಣ ಸಂಗನ ಬಸವಣ್ಣನ ಶ್ರೀ ಪಾದಕ್ಕೆ ನಮೋ ನಮೋ ಎಂಬೆ (ಸಿ) 15. ಅನಲ (ಹಬತ) 16. ಳೆಂದು (ಚ) 17. ದ ಮುನ್ನ (ಲಿ) 18. × (ಹಬಟ)

ಎನ್ನ ನಾನಱಿದ ಬಳಿಕ, ಇನ್ನು ನೀ ಬಾ[1]ಯ್ದೆ[1]ಱಿದು ಮಾತನಾಡಿದರೆ, ಅದನೆನ್ನ ಕಣ್ಣಿಂದ ಕಂಡು ನಾಚಿದೆ ನೋಡಾ! ಎನ್ನ ಕಾಬ ನಿನಗೆ, ನಿನ್ನ ಕಾಬ ಎನಗೆ ಸಂಚದ [2]ನೋಟ[2] ಒಂದೆ ನೋಡಾ! ಗುಹೇಶ್ವರ, ನಿನ್ನ ಬೆಡಗಿನ ಬಿ[3]ನ್ನಾ[3]ಣ[4]ವನ[4]ಱಿದೆ ನೋಡಾ.

11

[5]ಮಾಯದ[5] ಬಲೆಯಲ್ಲಿ ಸಿಲುಕಿದ ಮರುಳ ನಾನೆಂದಱಿದ ಪರಿಯ ನೋಡಾ! ಲಿಂಗವೆಂದಱಿದ ಪರಿಯ ನೋಡಾ! ತನ್ನ ವಿನೋದಕ್ಕೆ ಬಂದು ನಿಶ್ಚಿಂತ ನಿರಾಳ ಗುಹೇಶ್ವರನೆಂದಱಿದ ಪರಿಯ[6]ನೋಡಾ[6]!

## ಮಾಯಾವಿಲಾಸ ವಿಡಂಬನ ಸ್ಥಲ

12

ಕಾಯದ ಮೊದಲಿಂಗೆ ಬೀಜವಾವುದೆಂದಱಿಯದೀ [7]ಲೋಕ.[7] ಇಂದ್ರಿಯಂಗಳು ಬೀಜವಲ್ಲ; [8]ಆ ಕಳಾಭೇದವಲ್ಲ[8]; ಸ್ವಪ್ನ ಬಂದೆಱಿಗಿತ್ತಲ್ಲಾ! ಇದಾವಂ[9]ಗೂ ಶುದ್ಧ[9] ಸುಯಿಧಾನವಲ್ಲ ಕಾಣಾ ಗುಹೇಶ್ವ[10]ರ.[10]

13

[11]ಅಂಡಜ[11]ವೆಂಬ ತತ್ತಿಯೊಡೆದು, [12]ಪಿಂಡ[12] ಪಲ್ಲಟವಾಗಿ, ಗಂಡ ಗಂಡರನಱಿಸಿ ತೊಳಲಿ ಬಳಲು[13]ತ್ತೈ[13]ದಾರೆ. [14]ಖಂಡ[14]ಮಂಡಲದೊಳಗೆ ಕಂಡೆನೊಂದು ಚೋದ್ಯವ. ಕಂದನ ಕೈಯ ದರ್ಪಣವ ಪ್ರತಿಬಿಂಬ ನುಂಗಿತ್ತು. ದಿವಾರಾತ್ರಿ [15]ಉ[15]ದಯದ ಬೆಳಗನು ಕತ್ತಲೆ ನುಂಗಿತ್ತು. ಗುಹೇಶ್ವರನಲ್ಲಿಯೇ ನಿರ್ವಯಲಾಯಿತ್ತು.

14

ರಕ್ಕಸಿಗಿಬ್ಬರು ಮಕ್ಕಳು, ತೊಟ್ಟಿಲ ಮೇಲೈವರು. ರಕ್ಕಸಿ ಬಾಣತಿಯಾದರೆ ಮಕ್ಕಳಿಗಿನ್ನೆಂತೋ ?! ತೊಟ್ಟಿಲ ತೂಗುವೆ, ಜೋಗುಳ[16]ವಾ[16]ಡುವೆ! ರಕ್ಕಸಿಬಾಣತಿಯ ತೊಟ್ಟಿಲು ನುಂಗಿತ್ತು. ಇದೇನು ಹೇಳಾ ಗುಹೇಶ್ವ[17]ರ[17].

---

1. ಯತೆ (ಬಟ) ಯಿದೆ (ಚತ) 2. ನೋವು (ಚ) 3. ನ್ನ (ಹ) 4. ವ (ತಲ) 5. ಮಾಯೆಯ (ಹ) 6. ನೋಡಾ (ಲಿ) 7. + ವೆಲ್ಲ (ಶೂ) 8. ಕಳಾಭೇದ ಬೀಜವಲ್ಲ (ವ) 9. ಗೆ ತಿಳಿಯಬಾರದಾಗಿ ಶುದ್ಧ (ಶೂ) ಗೆ ಶುದ್ಧ (ವ) ಗೆಯೂ ಶುದ್ಧ (ಟ) 10. ರ (ಲಿ) 11. ಅಂಡ (ಬಟ) 12. ಬಂಡ (ತ) 13. ತ್ರಿ (ಹ) 14. ಕಂಡ (ಡಿತಲ) 15. ಯು (ಚಬಡಿತಲ) ಯ ಉ (ಟ) 16. ವಪಾ (ತ) 17. ರ (ಶೂ).

15

ಗಗನದ ಮೇಲೊಂ[1]ದು ಅಭಿನವ[1] ಗಿಳಿ ಹುಟ್ಟಿ, ಸಯುಸಂಭ್ರಮದಲ್ಲಿ ಮನೆಯ ಮಾಡಿತ್ತು. ಒಂದು ಗಿಳಿ ಇಪ್ಪತ್ತೈದು ಗಿಳಿಯಾಯಿತ್ತು. ಬ್ರಹ್ಮನಾ ಗಿಳಿಗೆ [2]ಪಂಜರ[2]ವಾದ; ವಿಷ್ಣುವಾ ಗಿಳಿಗೆ [3]ಕೊಱ[3]ಕೂಳಾವ; ರುದ್ರನಾ ಗಿಳಿಗೆ [4]ತಾ ಕೋಳಾದ.[4] ಇಂತೀ ಮೂವರ ಮುಂದಣ ಕಂದನ ನುಂಗಿ ದೃಷ್ಟನಾಮನಷ್ಟವಾಯಿತ್ತು [5]ಇದೆಂತೋ[5] ಗುಹೇ[6]ಶ್ವರ[6].

16

[7]ನೆಲದ ಬೊಂಬೆಯ ಮಾಡಿ[7], ಜಲದ ಬಣ್ಣವನುಡಿಸಿ, ಹಲವು ಪರಿ [8]ಯಾಶ್ರಿ[8]ಮದಲ್ಲಿ ಉಲಿವ ಗೆಜ್ಜೆಯ ಕಟ್ಟಿ, ವಾಯುವನಲನಸಂಚಕ್ಕೆ ಅರಳೆಲೆಯ ಶೃಂಗಾರವ ಮಾಡಿ, ಆಡಿಸುವ ಯಂತ್ರವಾಹಕನಾರೋ?! ಬಯಲ ಕಂಭಕ್ಕೆ ತಂದು, [9]ಸಯವೆಂದು[9] ಪರವ [10]ಕಟ್ಟಿದಡೆ[10], ಸಂಯುವಧ್ವಯುವಾಯಿತ್ತು. [11]ಏನೆಂಬೆ[11] ಗುಹೇಶ್ವರ.

17

ಇಪ್ಪತ್ತೈದು ತಲೆಯೊಳಗೆ [12]ಮೊಲೆಯೇಳು[12], ಮುಖವೆಂಟು! ಹದಿನಾಲ್ಕು ಬಾಯಿ, ನೂಱಪ್ಪತ್ತು ಕೋ[13]ಱ[13]ದಾಡೆ. ಹೃದಯದಲ್ಲಿ ಹುದಗಿ[14]ದ್ದ[14]ಗ್ನಿಯ ತೆಗೆದು ಮುದ್ದಾ[15]ಡಿಸಿ[15], ಧ್ವನಿಯ ಧರ್ಮವ ನುಂಗಿ, ಮನದ ಬ[16]ಣ್ಣ[16]ಗಳಡಗಿ, ಹೆತ್ತ ತಾಯಿ ಮಗನ ನುಂಗಿ, ಶಿಶು ತಾಯ ಬೆಸಲಾಗಿ, ಗುಹೇಶ್ವರನೆಂಬ ನಿಲವ ಅಂಗೈಯ ಮೊಲೆ ನುಂಗಿತ್ತು.

18

ಜಂಬೂದ್ವೀಪದ [17]ವ್ಯ[17]ವಹಾರಿ ಖಂಡಭಂಡವ ತುಂಬಿ ಕುಂಭಿನಿಯು ದರದ ಮೇಲೆ ಪ[18]ಸ[18]ರವನಿಕ್ಕಿದ. [19]ಉಷ್ಣ ತೃಷೆ[19]ಘನವಾಗಿ, ಕಡಲೇಳು

---

1. ದಭಿನ್ನವ (ಹ) 2. ಹಜ್ಜರ (ಕ) ಹಂಜರ (ಬಚಟತದಲಶೂಹ) 3. ಕೊಱೆಯ (ಚವ್ಯಾಬಟ) 4. ಕೋಳುವೋದ (ಹ) ಕೋಳಾದ (ಟ) ತಾ ಕೋಳುವೋದ (ಚಡಿವ್ಯಾತಲ) ತಾ ಕೋಳೋದ (ಕ) ಕೋಳ್ಯಾದ (ಚಿ) ತಾ ಕೋಲಾದ (ಸ್ವಬಶೂ) ತಾ ಕೋಳಾದ (ಓ) 5. ಇದೇನು ಹೇಳಾ (ಹ) ಕಾಣಾ (ಶೂ) 6. ಶ್ವರ (ಲಿ) 7. ನೆಲದ ಬೊಂಬೆಗೆ (ಹ) ನೆಳಲ ಬೊಂಬೆಯಮಾಡಿ (ವ) 8. ಯಆ (ಟ ಯಾಶ್ರ (ಹಭಶೂ) 9. ಸ್ವಯವಾಗಿ (ಶೂ) ಸ್ವಯವೆಂದು (ಲಿಟ) 10. ನೆಲೆಗೊಳಿಸಿದರೆ (ಶೂತಡಿಲ) 11. ಕಾಣಾ (ಶೂ) ಏನೆಂಬೆ ಹೇಳಾ (ವ) 12. ಏಳು ಮೊಲೆ (ಹಚಬಡಿತಲ) 13. ಱ (ಬಟಚತಡಿದ) 14. ದಆ (ಟಲ) ರ್ದಅ (ಲಿ) ರ್ದ (ಚ) ದ (ಬಹಡಿ) 15. ಡಿ (ಹ) 16. ಣ್ಣಂ (ಚ) 17. ಬೆ (ಹ) 18. ಸಾ (ಹ) 19. ಊಷ್ಮತೃಷ್ಣೆ (ಲತದ) ಉಷ್ಣ ತೃಷ್ಣೆ (ಶೂಬಡಿಹ).

ಸಮುದ್ರವ ಕುಡಿದು, ನೀರಡಸಿ[1]ದಾತ[1] ಆಱಲುಗೊಂಡು ಬೆಱಗಾದ. ಶಿಶು ತಾಯ ಹೆಣನ ಹೊತ್ತುಕೊಂಡು, ಹೆಸರ ಹೇಳುತ್ತೈದಾನೆ. ಗುಹೇಶ್ವರ[2]ನೆಂಬ[2] ನಿಲವ ವಸುಧೆ[3]ಯಾ[3]ಕೃತಿ ನುಂಗಿತ್ತು.

19

ಭೂಮಿಯ ಕಠಿಣವವ[4]ನು[4], ಆಕಾಶದ ಮೃದುವ[4]ನು[4] ತಿಳಿವ ಗಮನ [5]ವಲ್ಲಿ[5] [6]ಯೆ[6]ನಿಂದಿತ್ತು. ಉದಕದೊಳಗೆ ಹುಟ್ಟಿದ ತೃ[7]ಷ್ಣೆ[7] ಉದಕ ವನಱಿಸಿತ್ತಲ್ಲಾ ! ಒಳಗೆ ಸತ್ತು ಹೊಱಗೆ ಆಡುತ್ತದೆ. ಗುಹೇಶ್ವರ [8]ಬೆಱಗಾಗಿ ಅ[8]ಲ್ಲಿಯೆ [9]ನಿಂದನು.[9]

20

ಭೂಮಿಯಾಕಾಶವೊಂದು ಜೀವ[10]ನದುದರ. ಅಲ್ಲಿ[10] ಘನ[11]ವೇನು[11] ಘನವೆನ್ನದವಂಗೆ ? [12]ಅಲ್ಲಿ[12] ಕಿಱು[13]ದೇನು[13] ಕಿಱುದೆನ್ನದವಂಗೆ ? ಆ ಘನವು [14]ಮನಕ್ಕೆ[14] ಗಮಿಸಿದರೆ ಇನ್ನು ಸರಿಯುಂಟೆ ಗುಹೇಶ್ವರ ?

21

ಬ್ರಹ್ಮಪಾಶ, ವಿಷ್ಣುಮಾಯೆಯೆಂಬ ಬಲೆಯ ಬೀಸಿ, ಹೊನ್ನು–ಹೆಣ್ಣು–[15]ಮಣ್ಣು[15] ತೋಱು, ಮುಕ್ಕಣ್ಣನಾಡಿದ [16]ಬೇಂಟೆ[16]ಯ. ಆಶೆಯೆಂಬ [17]ಕು[17]ಟುಕನಿಕ್ಕಿ ಹೇಸದೆ ಕೊಂದೆಯಲ್ಲಾ ಗುಹೇ[18]ಶ್ವರ[18] ? !

22

ಬ್ರ[19]ಹ್ಮ[19] ಘನ[20]ವೆಂದಡೆ[20] ಬ್ರಹ್ಮನ ನುಂಗಿತ್ತು ಮಾಯೆ ! ವಿ[21]ಷ್ಣು[21] ಘನ[20]ವೆಂದಡೆ[20] ವಿಷ್ಣುವ ನುಂಗಿತ್ತು ಮಾಯೆ ! [22]ರುದ್ರ[22] ಘನ [20]ವೆಂದಡೆ[20] ರುದ್ರನ ನುಂಗಿತ್ತು ಮಾಯೆ. ತಾ ಘನವೆಂದಡೆ ತನ್ನ ನುಂಗಿತ್ತು ಮಾಯೆ. ಸರ್ವವು ನಿನ್ನ ಮಾಯೆ. [23]ಒಬ್ಬ[23]ರನೊಳಕೊಂಡಿತ್ತೆ ಹೇಳಾ ಗುಹೇಶ್ವರ.

---

1. × (ಶೂ) 2. ನ (ಶೂ) 3. ಯ (ಲ) 4. ನೂ (ಟ) 5. ದಲ್ಲಿ (ಹ) 6. × (ಟ) 7. ಷೆ (ಚ) 8. ಅ (ಟ) ನ (ಶೂ) 9. ನಿಂದನು (ಲಿ) 10. ನದುದರದಲ್ಲಿ (ತ) ನುದರ ಅಲ್ಲಿ (ಹ) 11. ವನು (ಹ) 12. (ಟತ) 13. ದನು (ಹ) 14. ಮನಮನಕ್ಕೆ (ದ) 15. ಮಣ್ಣು (ಚ) ಮಣ್ಣೆಂಬ ಭ್ರಾಂತಿಯ (ಹ) 16. ಬೇಟೆ (ಗ) 17. ಗು (ಹಬವ) 18. ಶ್ವರ (ಲಿ) 19. ಹ್ಮನ (ಪ್ರ) 20. ವೆಂಬೆನೆ (ಬಹಪ್ರ) 21. ಷ್ಣುವ (ಪ್ರ) 22. ರುದ್ರನ (ಪ್ರ) 23. ಒಬ್ಬರನ್ನೊಬ್ಬ (ಹ)

23

ದೇವ[1]ರೆಲ್ಲರ[1] ಹೊಡೆತಂದು ದೇವಿಯ[2]ರೊಳಗೆ[2] ಕೂಡಿತ್ತುಮಾಯೆ! ಹರಹರಾ, ಮಾಯೆಯಿದ್ದೆಡೆಯ ನೋಡಾ?! ಶಿವಶಿವಾ, ಮಾಯೆಯಿದ್ದೆಡೆಯ ನೋಡಾ! ಎರಡೆಂಬ[3]ತ್ತು[3]ಕೋಟಿ ಪ್ರಮಥಗಣಂಗಳು, ಅಂಗಾಲ ಕಣ್ಣವರು, ಮೈಯೆಲ್ಲ ಕಣ್ಣವರು, ನಂದಿವಾಹನರುದ್ರರು ಇವರೆಲ್ಲರು ಮಾಯೆಯ [4]ಕಾಲ[4] ಗಾಹಿನ ಸರ[5]ಮಾಲೆ[5] ಕಾಣಾ ಗುಹೇಶ್ವರ.

24

ಆಡಂಬರದೊಳಗಾಡಂಬರವಿದೇನೋ? ಹಾಱಿತ್ತು ಬ್ರಹ್ಮನೋಲಗ, ಕೆದಱಿತ್ತಿದೇನಯ್ಯ? ಸಾರು ಸಾರೆನುತ್ತ, [6]ವಿಷ್ಣು ಅಜನ[6] ನುಂಗಿ[7], ರುದ್ರ ಯೋನಿಯೊಳಡಗಿತ್ತದೇನೋ?[7] ಬೇರಿಲ್ಲದ ಮರ, ನೀರಿಲ್ಲದ ನೆಳ[8]ಲೊಳಗೆ[8] [9]ತೋಱಿದ[9] ಪ್ರತಿಬಿಂಬವ [10]ನಾ[10]ನೇನೆಂಬೆ ಗುಹೇಶ್ವರ.

25

ಚಂದ್ರಮನೊಳಗಣ ಎರಳೆಯ ನುಂಗಿದ ರಾಹುವಿನ [11]ನೋಟವು[11] ಅಂದಂ[12]ದಿಂಗೆ[12] ಬಂದು ಕಾಡಿತ್ತು ನೋಡಾ! ಒಂದಱ ತಲೆಯೊಂದಱ [13]ಬಸಿಱು[13] ಅಂದಂ[12]ದಿಂಗೆ[12] ಬಂದು ಕಾಡಿತ್ತು ನೋಡಾ! ನಂದಿ ನಂದಿಯ ನುಂಗಿ[14]ಬಂದುದು[14] ಮಹೀತಳಕ್ಕಾಗಿ ಇಂದು[15]ರವಿ[15] ಗಡಣವ [16]ನಾ[16]ನೇನೆಂಬೆ ಗುಹೇಶ್ವರ.

26

ಊರ ಮಧ್ಯದ ಕಣ್ಣ ಕಾಡಿ[17]ನೊ[17]ಳಗೆ ಬಿದ್ದೈದಾವೆ ಐದು ಹೆಣನು. ಬಂದು ಬಂದು ಅಳುವರು ಬಳಗ ಘನವಾದ ಕಾರಣ. ಹೆಣನೂ ಬೇಯದು, ಕಾಡೂ [18]ನಂ[18]ದದು, ಮಾಡ ಉರಿಯಿತ್ತು ಗುಹೇಶ್ವರ.

27

ಹುಲಿಯ [19]ಬೆನ್ನಿನಲ್ಲಿ[19] ಒಂದು ಹುಲ್ಲೆ ಹೋಗಿ ಮೇದು ಬಂದೆನೆಂದರೆ [20]ಇದ[20]ಕಂಡು ಬೆಱಗಾದೆ! ರಕ್ಕಸಿಯ ಮನೆಗೆ ಹೋಗಿ ನಿದ್ರೆಗೆಯ್ದು ಬಂದೆ

---

1. ರನ್ನೆಲ್ಲರ (ಹ) 2. ರೊಳು (ಹ) 3. ತ್ತೆರಡು (ಬ) 4. ಕಾಲು (ಬಹಪ್ರ) 5. ಮಾಲೆಯಾದರು (ಟ) 6. ವಿಷ್ಣುವಜನ (ಚಡಿಬತಲ) 7. ಆಜರುದ್ರಯೋನಿ ಯೊಳಡಗಿದನಿದೇನೋ(ವ) 8. ಲಲ್ಲಿ(ಶೂ) 9. ತಾಱಿ [ = ಱ ?]ದ (ವ) 10. (ಶೂ) 11. ಹಿಂದಣ ನೋಟ (ವ) 12. ದಿಗೆ (ಚಟತಲವ) 13. ಬಸಿಱು ಒಂದಱ ಕಂಗಳ ನೋಟ (ವ) 14. ಬಂದು (ಟ) 15. ರವಿಯ (ವ) 16. ×(ವ) 17. ಯೊ (ಕ) 18. ನೊಂ (ಹ) 19. ಬೆನ್ನಲ್ಲಿ (ಬಟದ) 20. ಅದ (ಟ)

ನೆಂದರೆ ಇದ ಕಂಡು ಬೆಱಗಾದೆ. ಜವನ ಮನೆಗೆ ಹೋಗಿ, ಸಾಯದೆ, ಬದುಕಿ ಬಂದೆನೆಂದರೆ [1]ಇದ[1] ಕಂಡು ಬೆಱಗಾದೆ ಗುಹೇಶ್ವರ.

28

ಹೃದಯಕಂದದ ಮೇಲೆ ಹುಟ್ಟಿತ್ತು. [2]ಹರಿದು[2] ಹಬ್ಬಿ ಕೊಬ್ಬಿ ಹಲವು ಫಲವಾಯಿತ್ತು ನೋಡಿರೇ! ಪರಿಪರಿಯ ಫಲಂಗಳನು ಬೇಡಿದವರಿಗಿತ್ತು, ಆ ಫಲವ ಬಯಸಿದವರು ಜಲದೊಳಗೆ ಬಿದ್ದರೆ, ನೋಡಿ ನಗುತ್ತಿದ್ದೆ[3]ನು[3] ಗುಹೇಶ್ವರ.

29

ಪಂಚಾಶ[4]ತ್ಕೋ[4]ಟಿ [5]ಭೂ[5]ಮಂಡಲವನೊಂದು ತಲೆಯಿಲ್ಲದ [6]ಮುಂಡ[6] ನುಂಗಿತ್ತ ಕಂಡೆನು. [7]ತಲಹಿಲ್ಲದೆ[7]ಕಂಡು ಬೆಱಗಾದೆನು. ನವಖಂಡ ಮಂಡಲ ಭಿನ್ನವಾದಂದು, ಆ ತಲೆಯ ಕಂಡವರುಂಟೆ ಗುಹೇಶ್ವರ?

30

ಅರಗಿನ ಪುತ್ಥಳಿಯನು[8]ರಿ[8]ಕೊಂಡಡೆ ಉದಕ ಬಾಯಾಱಿ [9]ಬಳಲುತ್ತಿದೆ.[9] [10]ಅಗೆಯಿಂ[10]ಭೋ! ಭಾವಿ[11]ಯನಗೆಯಿಂ[11] ಭೋ! [12]ಅಗೆ[12]ದಾತ ಸತ್ತ, ಭಾವಿ ಬತ್ತಿತ್ತು. ಇದು ಕಾರಣ [13]ನೆಱೆ[13] ಮೂಱು [14]ಲೋಕ[14] ಬಱುಸೂಱೆ ವೋಯಿತ್ತು ಗುಹೇಶ್ವರ.

31

ಅಂಗದ ಕೊನೆಯ ಮೇಲಣ ಕೋಡಗ [15]ಕೊಂಬಿಂಗೆ[15] ಹಾಱಿ[16]ತ್ತು ಅ[16]ಯ್ಯ! A[17]ಒಂದು[17]ಸೋಜಿಗA: ಕೈಯ ನೀಡಲು ಮೈಯೆಲ್ಲವ ನುಂಗಿತ್ತು! ಒಯ್ಯನೆ ಕರೆದಡೆ, [18]ಮುಂದೆ[18]ನಿಂದಿತ್ತು. [19]ಮುಯ್ಯಾಂತಡೆ[19] ಬಯಲಾ [20]ಯಿತ್ತು[20] ಗುಹೇಶ್ವರ.

---

1. ಅದ (ಟ) 2. ಹಿರಿದು (ತ) 3. × (ಡಿಹಟ) 4. ತಕೋ (ಟಬ) 5. ವಿಸ್ತೀರ್ಣಭೂ (ಶೂ) 6. ಮುಂಡ ಬಂದು (ಶೂ) 7. ತಲೆಯಿಲ್ಲದ (ಹಬ) ತಲೆಯಿಲ್ಲದೆ ನಾನು (ಶೂ) ತಲೆಯಿಲ್ಲದೆ (ಟ) 8. ಱಿ (ಟ) 9. ತ್ತದೇನೋ (ಶೂ) ತ್ತಿದೇನೋ (ಬ) ಬಳಲುತ್ತದೆ (ಟ) 10. ಅಗಿಂ (ಹ) ಅಗೆಯಿ (ಬಚಿ) 11. ಎನಗಿಂ (ಹ) ಯನಗೆಯಿ (ಬಚಿ) 12. ಭಾವಿಯನಗಿ (ಶೂ) ಭಾವಿಯನಗೆ (ಡಿ) 13. × (ಶೂ) 14. ಲೋಕವೆಲ್ಲವೂ (ಶೂ) 15. ಕೊಂಬೆಗೆ (ಶೂ) ಕೊಂಬೆಕೊಂಬೆಗೆ (ಚಿ) 16. ತ್ರ(ಶೂ) 17. Aಒಂದು ಚೋದ್ಯವ ನೋಡಾ (ಶೂ) × (ಬಟ) 18. ಮುಂದೆ ಬಂದು (ಶೂ) 12. ಮೆಯ್ಯುಂತಡೆ (ಹ) 20. ದುದು (ಟ)

32

ಭೂತಭೂತವ ಕೂಡಿ ಅ[1]ದ್ಭು[1]ತವಾಯಿತ್ತು! ಕಿಚ್ಚು [2]ಕೋಡಿತ್ತು.[2] ನೀರು ನೀರಡಸಿತ್ತು. ಉರಿ ಪವನ[3]ದೋಷ[3]ದೊಳಗಿದ್ದು ವಾಯುವಿಮ್ಮಡಿ [4]ಸಿತ್ತು[4] [3]ಕಂಡೆ[3] ಗುಹೇಶ್ವರ.

33

ಅಡವಿ[5]ಯೊಳಗೆ[5] ಕಳ್ಳರು ಕಡ[6]ವಸದ[6] ಸ್ವಾಮಿಯನು [7]ಹುಡುಕಿ[7] ಹುಡುಕಿ ಅಱಸು[8]ತ್ತೈದಾರೆ.[8] ಸೊಡರು ನಂದಿ ಕಾಣದೆ, [A]ಅನ್ನಪಾನದ ಹಿರಿಯರೆಲ್ಲರು [B]ತಮ್ಮ ತಾವಱಿಯದೆ[B], ಅಧರಪಾನವನುಂಡು [B]ತೇಗಿ[B], ಸುರಾಪಾನವ ಬೇಡುತ್ತೈದಾರೆ. ಅರಿದ ಹಾರುವನೊಬ್ಬನು ಅರಿದ ತಲೆಯ ಹಿಡಿದುಕೊಂಡು[A] [C]ಅಧ್ಯಾ[9]ತ್ಮ[9]ವಿಕಾರದ ನೆತ್ತ[10]ರ[10C] ಕುಡಿದನು [D]ನೋಡಾ[D] ಗುಹೇಶ್ವರ.

34

ಮುಗಿಲ ಬಣ್ಣದ ಪಕ್ಷಿ, ಮಗನ ಕೈಯ ಅರಗಿಳಿ. ಗಗನ[ದ] ಕೋಲಂಬಿನಲ್ಲಿ ಸ್ವಪ್ನದ ಸಿಲವನು ತೆಗೆದಚ್ಚವ[11]ರಾ[11]ರೋ? ಉಪಮಿಸ[12]ಬಾರದು.[12] ಜಾಗ್ರತ್‌ಸ್ವಪ್ನ ಸುಷುಪ್ತಿಯ ನಡುವೆ ತ್ರಿಜಗವಾಯಿತ್ತು. [13]ಜಗಜ್ಜ್ಯೋತಿ[13], ನಿನ್ನ ಮಾಯೆಯನೇನೆಂಬೆನು ಗುಹೇಶ್ವರ.

35

ಕಡಲ ನುಂಗಿದ ಕಪ್ಪಿನ [14]ಪರಿಭವ[14]ನವಸಾಸಿರ! ಸಿಡಿಲು ಹೊಯ್ದ ಬಯಲಿಂಗೆ ಬಣ್ಣವುಂಟೆ? ಕಂಗಳ ಮುಂದಣ ಕನಸು, ಹಿಂಗಿದ ತುಂಬಿಯ ಪರಿಮಳ! ಅಂಗವಿಲ್ಲದ ರೂಹಿಂಗೆ ಸಂಗವುಂಟೆ? ಇದೇನೋ? ಗಗನದ ಹಣ್ಣನೆ ಕೊಯ್ದು ಮುಗುದೆ ರುಚಿಯನಱಿಯಳು. ಹಗರಣ[15]ದ[15]ಮ್ಮಾವಿನ ಹಯನು ಸಯವಪ್ಪುದೇ ಗುಹೇ[16]ಶ್ವರ.[16]

36

ಮಾಯದ ಕೈಯಲ್ಲಿ ಓಲೆ ಕಂಠವ ಕೊಟ್ಟರೆ, [17]ಲಗುನವಿಗುನವ[17] ಬರೆಯಿತ್ತು ನೋಡಾ! ಅರಗಿನ ಪುತ್ಥಳಿಗೆ ಉರಿಯ ಸೀರೆಯನುಡಿಸಿದರೆ ಅದು

---

1. ದ್ಭೂ (ತ) 2. ಕೂಡಿತ್ತು (ಹಡಿಲ) ಕೊಂಡಿತ್ತು (ಟ) ಕಿಚ್ಚ ಕೂಡಿತ್ತು (ಶೂ) 3. × (ಶೂ) 4. ಸಿದ್ದುದ (ಹ) 5. ಯೊಳಗಿರುವ (ಹಕತ) 6. ವರದ (ಹ) 7. ಹುಡು (ಟ) 8. ತ್ತಲಿದ್ದಾರೆ (ಹ) ತ್ತಲೈದಾರೆ (ಬಡಿ) A× (ವ) B× (ಶೂಬ) C ಆಧ್ಯಾತ್ಮಕರುನ ನೆತ್ತರ (ವ) 9. ತ್ಮದ (ಹ) 10. ರವ (ಪ) D (ವಶೂ) 11. ನಾ (ಡಿಹಲ) 12. ಬಾರದ ನಿಲವು (ಟ) 13. ಜಗಂಜ್ಯೋತಿ (ಕಬಡಿಚತವಲ) 14. ಪರಿ (ಪ್ರ) 15. ದಳ (ಟ) 16. ಶ್ವರ (ಪ್ರ) 17. ಲಘುನವಿಗನವ (ಕಚದ) ಲಘುವಿನ ವಿಘುನವ (ಹ) ಲಗುನವಿಗನವ (ತ) ಲಘುಲಘುವೆನೆ (ಚ)

ಸಿರಿಯ ಸಿಂಗಾರವಾಯಿತ್ತು ನೋಡಾ! ಅಂಬರದೊಳಗಾಡುವ ಗಿಳಿ ಪಂಜರದೊಳಗಣ ಬೆಕ್ಕ ನುಂಗಿ, ರಂಭೆಯ ತೋಳಿಂದಗಲಿ[1]ತ್ತು ನೋಡಾ[1] ಗುಹೇಶ್ವರ.

37

ಹಿರಿದಪ್ಪ ಜಲಧಿಯ ಮಡುವಿನೊಳಗೆ ಕರಿಯ ಕಬ್ಬಿಲ ಜಾಲವ ಬೀಸಿದ ನೋಡಯ್ಯ. ಅರಿದ ತಲೆಯೈದು, ಅರಿಯದ ತಲೆಯೈದು, ಕರಿಯ ತಲೆಯೈದು ಮುಂದೈದಾವೆ ನೋಡಯ್ಯ! ಕರಿಯ ಕಬ್ಬಿಲ ಜಾಲವ ಹೊತ್ತುಕೊಂಡು ಹೋದರೆ, [2]ನೆತ್ತರೋಕುಳಿಯಾ[2]ಡಿತ್ತ ಕಂಡೆನು ಗುಹೇ[3]ಶ್ವರ.[3]

38

ಕೋಣನ [4]ಕೊಂಬಿನ[4] ತುದಿಯಲ್ಲಿ ಏಳುನೂಱಿಪ್ಪತ್ತು [5]ಸೇದೆ[5]ಯ ಭಾವಿ. ಭಾವಿಯೊಳಗೊಂದು ಬಗ[6]ರಿ[6]ಗೆ. ಬಗ[6]ರಿ[6]ಗೆಯೊಳಗೊಬ್ಬ ಸೂಳೆ ನೋಡಯ್ಯ! ಆ ಸೂಳೆಯ ಕೊರಳಲ್ಲಿ ಏಳುನೂಱಿಪ್ಪ[7]ತ್ತಾ[7]ನೆ ನೇಱುತ್ತ ಕಂಡೆ ಗುಹೇಶ್ವರ.

39

ಹುಲಿಯ ತಲೆಯ ಹುಲ್ಲೆ, ಹುಲ್ಲೆಯ ತಲೆಯ ಹುಲಿ; [8]ಈ[8] ಎರಡಱ ನಡು ಒಂದಾಯಿತ್ತು! ಹುಲಿಯಲ್ಲ, ಹುಲ್ಲೆಯಲ್ಲ! ಕೆಲದಲೊಂದು ಬಂದು ಮೆಲುಕಾ[9]ಡಿತ್ತು ನೋಡಾ[9]. ತಲೆಯಿಲ್ಲದ ಮುಂಡ ತಱಗೆಲೆಯ [10]ಮೇದರೆ[10] ಎಲೆ ಮಱೆಯಾಯಿ[11]ತ್ತು[11] ಗುಹೇಶ್ವರ.

40

ಕರೆಯದೆ ಬಂದುದ, ಹೇಳದೆ ಹೋದುದ[12]ನಾರೂ ಅಱಿಯರಲ್ಲಾ[12]! ಅಂದಂ[13]ದಿಗೆ[13] ಬಂದ ಪ್ರಾಣಿಗಳು ಆರೂ ಅಱಿಯರಲ್ಲಾ! ಗುಹೇಶ್ವರಲಿಂಗ ಉಣ್ಣದೇ ಹೋದುದನಾರೂ ಅಱಿಯರಲ್ಲಾ!

41

ಆಯಿತ್ತೆ ಉದಯಮಾನ. ಹೋಯಿತ್ತೆ ಅಸ್ತಮಾನ. ಅಳಿದವಲ್ಲಾ [14]ನೀರ[14]ಲಾದ ನಿರ್ಮಿತಂಗಳೆಲ್ಲವೂ! ಕತ್ತಲೆಗವಿಯಿತ್ತು ಮೂಱುಲೋಕದೊಳಗೆ. ಇದಱಚ್ಚುಗವೇನು ಹೇಳಾ ಗುಹೇಶ್ವರ.

---

1. ತ್ತೆ (ತಲ) ತ್ತು (ಬಟ) 2. ನೇತ್ರದಲೋಕುಳಿಯಾ (ಕಚಟದ) ನೆತ್ರದಲೋಕುಳಿಯೂ (ಡಿಬತಲ) ನೇತ್ರದಲೋಕುಳಿಯನಾ (ಶೂ) 3. ಶ್ವರ (ವ) 4. ಕೋಡಿನ (ಡಿಹತಲ) 5. ಸೆದೆ (ತ) ಸೇದಿ (ಹಚಟ) 6. ರ (ಟ) 7. ತ್ತು ಆ (ಶೂ) 8. × (ಕಚದಶೂ) 9. ಡುತ್ತಿದ್ದಿತ್ತು (ಶೂ) 10. ಮೆದ್ದರೆ (ಬಚ) 11. ತ್ತು ಕಾಣಾ (ತಲಡಿ) 12. ನಾರು ಬಲ್ಲರಯ್ಯ (ವ) 13. ದಿಂಗೆ (ಕಚಹದ) 14. ನೀರಿ (ಚ) ಗಿರ (ಹ)

42

ಕಾಲುಗ[1]ಳೆರಡೂ[1] ಗಾಲಿ ಕಂಡಯ್ಯ! ದೇಹವೆಂಬು[2]ದೊಂ[2]ದು ತುಂಬಿದ ಬಂಡಿ [3]ಕಂಡ[3]ಯ್ಯ! ಬಂಡಿಯ ಹೊಡೆ[4]ವವ[4]ರೈವರು ಮಾನಿಸರು! ಒಬ್ಬರಿಗೊಬ್ಬರು ಸಮವಿಲ್ಲಯ್ಯ! ಅದಱಿಚ್ಛೆಯನಱಿದು ಹೊಡೆಯದಿದ್ದರೆ ಅದಱಚ್ಚು ಮುಱಿಯಿತ್ತು ಗುಹೇಶ್ವರ.

43

ಆರ[5]ಕ್ಕೆ[5]ಯ ಸಿರಿಗೆ [A]ಆರ[5]ಕ್ಕೆ[5][A] ಚಿಂತಿಸುವರು. ಆರ[5]ಕ್ಕೆ[5]ಯ ಬಡತನಕ್ಕೆ [A]ಆರ[5]ಕ್ಕೆ[5][A] ಮಱುಗುವರು. [6]ಇದಾರ[5]ಕ್ಕೆ[5] ಆರಕ್ಕೆ? [B]ಇದೇನಕ್ಕೆ[B] [C]ಏನಕ್ಕೆ[C]?[6] ಮಾಯದ ಬೇಳುವೆ ಹುರುಳಿಲ್ಲ! ಕೊಂದು ಕೂಗಿತ್ತು ನೋಡಾ ಗುಹೇಶ್ವರ.

44

[7]ತೋಟವ[7] ಬಿತ್ತಿದರೆಮ್ಮವರು; ಕಾಹ ಕೊಟ್ಟರು ಜವನವರು! ನಿತ್ಯವಲ್ಲದ ಸಂಸಾರ ವೃಥಾ ಹೋಯಿತ್ತಲ್ಲಾ! ಗುಹೇಶ್ವರ[8]ನಿಕ್ಕಿದ[8] ಕಿಚ್ಚು ಹೊತ್ತಿಕ್ಕಲುಂಟು, ಅಟ್ಟು[9]ಣ್ಣ[9]ಲಿಲ್ಲ.

45

ನಿರ್ಣಯವನಱಿಯದ ಮನವೇ ದುಗುಡವನಾಹಾ[10]ರಂ[10]ಗೊಂಡೆಯಲ್ಲಾ! ಮಾಯಾಸೂತ್ರವಿದೇನೋ? ಕಂಗಳೊಳಗಣ ಕತ್ತ[11]ಲೆ[11]ತಿಳಿಯದಲ್ಲಾ! ಬೆಳಗಿನೊಳಗಣ ಶೃಂಗಾರ ಬಳಲು[12]ತ್ತಿದೆ[12] ಗುಹೇಶ್ವರ.

## ಸಂಸಾರ ಹೇಯಸ್ಥಲ

46

ಸಂಸಾರವೆಂಬ ಹೆಣ ಬಿ[13]ದ್ದಿ ರೆ[13] ತಿನಬಂದ ನಾಯ ಜಗಳವ ನೋಡಿರೇ! ನಾಯ ಜಗಳವ ನೋಡಿ [14]ಹೆಣನೆದ್ದು[14] ನಗು[15]ತ್ತಿ[15]ದೆ. ಗುಹೇಶ್ವರನೆಂಬ ಲಿಂಗವಲ್ಲಿಲ್ಲ ಕಾಣಿ[16]ರೇ[16]!

---

1 ಳೆಂಬವು (ಚಟದಚಿಚಿ) 2. × (ಬಡಿತ) 3. ನೋಡ (ಕಚಟದ) 4. ವ(ಚಿಟ) 5. × (ಟ) [A]ಆರಕ್ಕೆಯ (ಸ್ವ) 6. ಇದಾರಕ್ಕಾರಕ್ಕೆ ಯೇನಕ್ಕೇನಕ್ಕೆ (ಡಿತ) ಇದಾರಕ್ಕೆ ಅದಾರಕ್ಕೆ ಇದೇನಕ್ಕೆ ಏನಲ್ಕೆ (ದ) [B]ಏನಕ್ಕೆ (ಓಚಿಸ್ವಟ) [C]ಇದೇನಕ್ಕೆ (ಕ) 7. ತೋಱವ (ಚ) ತೊಟ್ಟವ (ಕ) 8. ನೀನಿಕ್ಕಿದ (ಚಿ) 9. ಣ (ಕಚಟ) 10. ರ (ಹತ) ರವ (ಬ) 11. ಲೆಯು (ವ) 12. ತಿದ್ದೂದೆ (ಚವ) ತ್ತೃದೂದೆ (ಚವ್ಯಾದ) ತ್ತಿದ್ದುದೆ (ಕ) 13. ದ್ದಿರಲು (ಬಟ) ದ್ದರೆ (ಕ) 14. ಹೆಣ (ಕಬಚಡಿಟತಲ ಶೂ) 15. ತಿ (ಸ್ವ) 16. ರಯ್ಯ (ಶೂ)

47

ಹಳ್ಳ[1]ದೊಳಗೊಂದು ಹುಳ್ಳಿ[1] ಬರುತ್ತಿರಲು, ನೊರೆತೆರೆಗಳು [2]ತಾಗಿದ ವಲ್ಲಾ[2]! ಸಂಸಾರವೆಂಬ ಸಾಗರದೊಳ[3]ಗೆ[3] ಸುಖ ದುಃಖಂಗಳು [2]ತಾಗಿದ ವಲ್ಲಾ[2]! [A]ಇದಕ್ಕಿದು [4]ಮೂರ್ತಿ[4]ಯಾದ ಕಾರಣ, ಪ್ರಳಯವಾಯಿತ್ತು[A] ಗುಹೇಶ್ವರ.

48

ಮಾನದ [5]ತೋರಿಹ ಆವಿಂಗೆ[5] [6]ಕೊಳಗದ[6] [7]ತೋರಿಹ[7] ಕೆಚ್ಚಲು. [8]ತಾಳ ಮರದುದ್ದ[8]ವೆರಡು ಕೋಡು [9]ನೋಡಾ[9]! ಅದನಱಸ ಹೋಗಿ ಆಱು ದಿನ; ಅದು ಕೆಟ್ಟು ಮೂರು ದಿನ. ಅಘಟಿತ[10]ಘಟಿತ[10] ಗುಹೇಶ್ವರ, ಅಱಸುವ [11]ಬಾರೈ[11].

49

ಆನೆಯ ಹೆಣ [12]ಬಿದ್ದಿರೆ[12] ಕೋಡಗ ಮುದ್ದಾಡಿ[13]ಸಿತ್ತ ಕಂಡೆ.[13] ಕಾಡೊಳಗೊಬ್ಬ ಸೂಳೆ ಕರೆಕರೆದೊತ್ತೆಯ ಕೊಂಬುದ [14]ಕಂಡೆ.[14] ಹಾಳೂರೊಳಗೆ [15]ನಾಯ[15] ಜಗಳವ [16]ಕಂಡೆ.[16]. ಇದೇನು ಸೋಜಿಗ ಹೇಳಾ ಗುಹೇಶ್ವರ.

50

ಕುಲದಲಧಿಕನು ಹೋಗಿ ಹೊಲೆಗೇರಿಯಲ್ಲಿ ಮನೆಯ ಕಟ್ಟಿದರೆ ಕುಲ [17]ಕೆಡದೆಯಿಪ್ಪ[17] ಪರಿಯ ನೋಡಾ! ಆತನ ಕುಲದವರೆಲ್ಲರು ಮುಖವ

---

1. ದೊಳು ಉರುಳಿ (ಗವ) ದೊಳಗೆ ಹುಳ್ಳಿ (ಬಶೂ) 2. ತಾಗದಿಪ್ಪವೇ (ಶೂವಗ) 3. ಗೆ ಮುಳುಗಾಡುತ್ತಿರ್ಪ ಪ್ರಾಣಿಗಳಿಗೆ (ಶೂ ವ) Aಇದು ಕಾರಣ ಮೂರ್ತಿಯಾದುದಕ್ಕೆ ಪ್ರಳಯ ತಪ್ಪದು ಕಾಣಾ (ಶೂ) ಇದು ಕಾರಣರೂಪಾದ ಜಗಕ್ಕೆ ಪ್ರಳಯ (ಗ) ಇದು ಕಾರಣ ರೂಪಾದ ಜಗಕ್ಕೆ ಪ್ರಳಯವಾಯಿತ್ತು (ವ) 4. ಮೂರುತಿ (ಬಟ) 5. ತೋಱಿಹ ಆವಿಂಗೆ (ಚ) ತೋರಿಹ ಆವಿಂಗೆ (ಚಿಓ) ತೊರೆಯಾವಿಂಗೆ (ಹ) ತೋರಿಯ ಆವಿಂಗೆ (ಚವ್ಯಾ) ತೋರಿಹ ಆಕಳಿಗೆ (ಶೂ) ತೊರಿಯ ಆವಿಂಗೆ (ವಸ್ತಲ) ತೊರೆ ಆವಿಂಗೆ (ತ) 6. ಕೊಳದ (ಟ) 7. ತೊರಿಯ (ಪಲ) ತೋರಿಯ (ಚವ್ಯಾ) ತೊಱಿಹ (ಚ) ತೋರಿಹ (ಶೂಓಚಿಸ್ವಟ) ತೊರೆಯ (ಹ) 8. ತಾಳ ಮರದುದ್ದಿಯ (ಲ) ತಾಳಮರದುದ್ದಿಹ (ತಹಬಶೂ) ತಾಳ-ದ್ದದ (ಚಿ) 9. × (ಶೂಬ) 10. × (ವ) 11. ಬಾರೈ ತಲೆಹೊಲದಲ್ಲಿ (ವ) ಬಾರಯ್ಯ (ತ) 12. ಬಿದ್ದರೆ (ಬಡಿಹ) 13. ಸಿತ್ತ ಕಂಡೆನಯ್ಯ (ತಲಬಡಿಹ) ಸಿತಕಂಡೆನಯ್ಯ (ಟ) 14. ಕಂಡೆನಯ್ಯ (ಟಬಡಿತಲ) 15. ನಾಯಿ (ಕಟಬತಲ) 16. ಕಂಡೆನಯ್ಯ (ತ) 17. ಗೆಡದೆ ಇಪ್ಪ (ಹ) ಕುಲಗೆಡದಿಪ್ಪ (ಟಓಸ್ವಚಿ)

[1]ನೋಡಲೊಲ್ಲದೈದಾರೆ.[1] ಕುಲವುಳ್ಳವರೆಲ್ಲರು ಕೈವಿಡಿದರು. ಕುಲಗೆಟ್ಟ [2]ವನೆಂದು[2] ತಿಳಿದು, ವಿಚಾರಿಸಲು, ಹೊಲಗೆಟ್ಟ ಹೋಯಿತ್ತು ಕಾಣಾ ಗುಹೇಶ್ವರ.

## ಗುರುಕರುಣಸ್ಥಲ

### 51

ಕಂಡುದ ಹಿಡಿಯಲೊಲ್ಲದೆ, ಕಾಣದುದನಱಸಿ [3]ಹಿಡಿದಹೆ[3][4]ನೆಂದರೆ[4] ಸಿಕ್ಕದೆಂಬ ಬಳಲಿಕೆಯ ನೋಡಾ! ಕಂಡುದನೆ ಕಂಡು, ಗುರುಪಾದವ ಹಿಡಿ ವಲ್ಲಿ, ಕಾಣದುದ ಕಾಣಬಹುದು [5]ಗುಹೇಶ್ವರ.[5]

### 52

ಕೃತಯುಗದಲ್ಲಿ ಶ್ರೀಗುರು ಶಿಷ್ಯಂಗೆ ಬಡಿದು ಬುದ್ಧಿಯ ಕಲಿಸಿದರೆ, ಆಗಲಿ ಮಹಾಪ್ರಸಾದವೆಂ[6]ದೆ[6]ನಯ್ಯ! [A]ತ್ರೇತಾಯುಗದಲ್ಲಿ ಶ್ರೀಗುರು ಶಿಷ್ಯಂಗೆ ಬೈದು ಬುದ್ಧಿಯ ಕಲಿಸಿದರೆ, ಆಗಲಿ ಮಹಾಪ್ರಸಾದವೆಂ[6]ದೆ[6]ನಯ್ಯ! ದ್ವಾಪರದಲ್ಲಿ ಶ್ರೀಗುರು ಶಿಷ್ಯಂಗೆ ಝುಂಕಿಸಿ ಬುದ್ಧಿಯ ಕಲಿಸಿದರೆ, ಅಗಲಿ ಮಹಾಪ್ರಸಾದವೆಂ[6]ದೆ[6]ನಯ್ಯ! [A]ಕಲಿಯುಗದಲ್ಲಿ ಶ್ರೀಗುರು ಶಿಷ್ಯಂಗೆ ವಂದಿಸಿ ಬುದ್ಧಿಯ ಕಲಿಸಿದರೆ, ಆಗಲಿ ಮಹಾಪ್ರಸಾದವೆಂ[6]ದೆ[6]ನಯ್ಯ! ಗುಹೇಶ್ವರ ನಿಮ್ಮ ಕಾಲದ ಕಟ್ಟಳೆಯ ಕಲಿತನಕ್ಕೆ [7]ನಾ[7] ಬೆಱಗಾದೆನು.

### 53

ಅಯ್ಯ, ನೀನೆನಗೆ ಗುರುವಪ್ಪಡೆ, ನಾ ನಿನಗೆ ಶಿಷ್ಯನಪ್ಪಡೆ, ಎನ್ನ [8]ಕರ ಣಾದಿ[8] ಗುಣಂಗಳ ಕಳೆದು, ಎನ್ನ ಕಾಯದ ಕರ್ಮವ ತೊಡೆದು, [B]ಎನ್ನ ಪ್ರಾಣನ ಧರ್ಮವ [9]ಸಿಲಿಸಿ[9][B], ನೀನೆನ್ನ ಕಾಯದಲಡಗಿ, ನೀನೆನ್ನ ಪ್ರಾಣದ ಲಡಗಿ, ನೀನೆನ್ನ ಭಾವದಲಡಗಿ, ನೀನೆನ್ನ ಕರಸ್ಥಲಕ್ಕೆ ಬಂದು ಕಾರುಣ್ಯವ ಮಾಡು ಗುಹೇಶ್ವರ.

### 54

ಅಟ್ಟ[10]ತ್ತೊ[10]ಂದು, ಓಡಿತ್ತೊಂದು, ಮುಟ್ಟ ಹಿಡಿಯಿತ್ತೊಂದು. ಅಟ್ಟಾ ಟಕೆಯಲ್ಲಿ ಅರಿದಾವು[11]ದು[11]? ಹಸು ಮಾಣಿಕ್ಯವ ನುಂಗಿ ಬ್ರಹ್ಮೇತಿಗೊಳಗಾ

---

1. ನೋಡದಾದರು (ಟ) ನೋಡಲೊಲ್ಲದೆಯಿದ್ದರೆ (ತ) ನೋಡಲೊಲ್ಲದಿಧಾರೆ (ಲ) 2. ನೆಂಪು (ತ) 3. ಹಿಡಿದಿಹೆ (ಚತಹ) ಹಿಡಿದೆ (ಶೂ) ಹಿಡಿವಹೆ, (ಟ) ಹಿಡಿದಹೆ (ಕದಲ) 4. ನೆಂದು (ಶೂ) 5. ಕಾಣಾ ಗುಹೇಶ್ವರ (ಟತಲಿಶೂ) 6. ದೇ (ತ) A× (ಕ) 7. ನಾನು (ಕದಟಡಿಹತಲ) 8. ಕಾಯಕರಣಾದಿ (ಚ) B× (ಬಡಿ) 9. ತೊಡೆದು (ಕಚಟದ) 10. ತೊಂ (ಕ) 11. ದೋ (ಟ)

ಯಿತ್ತು. ಮೂರ್ತಿಯಾದುದೆ ಅಮೂರ್ತಿ[1]ಯಾಯಿತ್ತು.[1] ಅಮೂರ್ತಿಯಾದುದೆ ಮೂರ್ತಿ[1]ಯಾಯಿತ್ತು.[1] ಇದನೆಂತು [2]ತೆಗೆಯ[2] ಬಹು[3]ದು ? ಇ[3]ದನೆಂತು ಕೊಳಬಹುದು ? ಅಗಮ್ಯ ಅಗೋಚರ ! ಕಾಯವು ಲಿಂಗದಲಡಗಿ, ಪ್ರಾಣ[4]ವು[4] ಲಿಂಗದಲಡಗಿ. ನೀನೆನ್ನ ಕರಸ್ಥಲ[5]ದೊಳಗೆ[5] ಮೂರ್ತಿಗೊಂಡು ಕಾರಣ್ಯವ ಮಾಡು ಗುಹೇಶ್ವರ.

55

ಕಾಣದುದನಱಿಸುವರಲ್ಲದೆ, ಕಂಡುದನಱಿಸುವರೇ [6]ಹೇಳಾ ?[6] ಘನಕ್ಕೆ ಘನವಾದ ವಸ್ತು ತಾನೆ ಗುರುವಾದ, ತಾನೆ ಲಿಂಗವಾದ, ತಾನೆ ಜಂಗಮವಾದ, ತಾನೆ ಪ್ರಸಾದವಾದ, ತಾನೇ ಮಂತ್ರವಾದ, [7]ತಾನೆ ಯಂತ್ರವಾದ,[7] ತಾನೆ ಸಕಲ ವಿದ್ಯಾಸ್ವರೂಪನಾದ; ಇಂತಿ[8]ವೆಲ್ಲ[8]ವನೊಳಕೊಂಡು ಎನ್ನ ಕರಸ್ಥಲಕ್ಕೆ [9]ಬಂದು[9] ಇನ್ನು ನಿರ್ವಿಕಾರ [10]ಗುಹೇಶ್ವರ.[10]

56

ಕಸ್ತುರಿಯ ಮೃಗ ಬಂದು ಸುಳಿಯಿ[11]ತ್ತಯ್ಯ[11] ! ಸಕಲ ವಿಸ್ತಾರದ [12]ರೂಹು[12] ಬಂದು ನಿಂದಿತ್ತ[13]ಯ್ಯ[13]. ಆವ ಗ್ರಹ ಬಂದು ಸೋಂಕಿತ್ತೆಂದಱಿಯೆನಯ್ಯ. ಆವ ಗ್ರಹ ಬಂದು ಹಿಡಿಯಿತ್ತೆಂದಱಿಯೆನಯ್ಯ ! ಹೃದಯ ಕಮಲ ಮಧ್ಯದಲ್ಲಿ [14]ಗುರು[14]ವನಱಿದು [15]ಪೂಜಿಸಿ[15] ಗುರು ವಿಖ್ಯಾತನೆಂ[A]ಬುದ ನಾನಱಿದೆನಯ್ಯ[A] [16]ಗುರುಗುಹೇಶ್ವರನಲ್ಲಿ[16] ಹಿಂದಣ ಹುಟ್ಟ[17]ಱ[17]ತು ಹೋದುದ ಕಂಡೆನಯ್ಯ.

57

ಎಣ್ಣೆ ಬತ್ತಿ [B][18]ಪಣಿತೆ[18] ಕೂಡಿ[B] ಜ್ಯೋತಿಯ ಬೆಳಗಯ್ಯ. [C]ಅಸ್ಥಿ [19]ಮಾಂಸ[19]ದೇಹ ಪ್ರಾಣ[20]ನಿಷ್ಪ್ರಾ[C]ಣ[20]ವಾಯಿತ್ತು. ದೃಷ್ಟಿವರಿದು ಮನ

---

1. ಯಾದುದು (ಡಿತಲ) 2. ಕೊಳ (ಕ) 3. ದಿ (ಟ) 4. ವೂ (ಟ) 5. ದೆ (ಲ) 6. × (ಶೂ) 7. ತಾನೆ ತಂತ್ರವಾದ ತಾನೆ ಯಂತ್ರವಾದ (ಪ್ರ) 8. × (ಶೂ) ದನೆಲ್ಲ (ಲಿ) 9. ಬಂದ ಬಳಿಕ (ಡಿಹಟ) 10. ಕಾಣಾ ಗುಹೇಶ್ವರ (ಲಿಬಶೂತ) 11. ತ್ತಲ್ಲಾ (ಹಕಡಿಚದಲ) ತ್ತಲ್ಲಯ್ಯ (ಬ) 12. ರೂಪು (ಲಿಬವಶೂ) 13. ಲ್ಲಯ್ಯ (ತಲಡಿಹಟ) 14. ಶ್ರೀಗುರು (ಶೂ) 15. ಕಂಡು ಪೂಜಿಸಿ (ಶೂ) A ದನಱಿದೆ ನೋಡಾ (ಶೂ) ದಱಿದೆ (ವ) 16. ಗುಹೇಶ್ವರಲಿಂಗದಲ್ಲಿ (ಟಲಿಶೂ) ಗುಹೇಶ್ವರನಲ್ಲಿ (ಕತಲಪವಡಿ) 17. ಱಿ (ತ) 18. ಪ್ರಣಿತೆ (ಡಿಕಟಲಹ) B ಯಿಂದ (ವ) C ಅಸ್ಥಿ ಮಾಂಸನ ಪ್ರಾಣನಿಂ ಪ್ರಾ (ವ) 19. ಮಾಂಸದ (ಬಟಹವ್ಯಾ) 20. ನಿಃಪ್ರಾಣ (ಲಹಬಕಟದ)

[1]ಮುಟ್ಟಿದ[1] ಪರಿ[2]ಯಿನ್ನೆಂತೋ[2]? ಮುಟ್ಟಿ ಲಿಂಗವ [3]ಕೊಂಡಡೆ[3] ಕೆಟ್ಟಿತ್ತು ಜ್ಯೋತಿಯ ಬೆಳಗು. [4]ಇದು ಕಷ್ಟವೆಂದಱಿದೆನು ಗುಹೇಶ್ವರ.[4]

58

ಪಾತಾಳದಿಂದತ್ತ ಮಾತ ಬಲ್ಲವರಿಲ್ಲ. ಗಗನದಿಂ[5]ದ[5] ಮೇಲೆ ಅನುಭಾ[6]ವ[6] ತಾನಿಲ್ಲ. ಒಳಗಣ ಜ್ಯೋತಿಯ ಬೆಳಗ ಬಲ್ಲವರಿಲ್ಲ. ಹೊಱಗಣ ಹೊಱ[7]ಗನು[7] ಅಱಿಯಬಲ್ಲವರಿಲ್ಲ. ಹಿಂದಣ ಹಿಂ[8]ದನು[8], ಮುಂದಣ ಮುಂದನೂ, ತಂದೆ ತೋಱಿದನು ನಮ್ಮ ಗುಹೇಶ್ವರನು.

59

ಎತ್ತಣ ಮಾಮರ? ಎತ್ತಣ ಕೋಗಿಲೆ? ಎತ್ತಣಿಂದೆತ್ತ ಸಂಬಂಧ ವಯ್ಯ? ಬೆಟ್ಟದ ನೆಲ್ಲಿ[9]ಯ[9]ಕಾಯಿ, ಸಮುದ್ರ[10]ದೊಳಗಣ[10] ಉಪ್ಪು, ಎತ್ತಣಿಂದೆತ್ತ ಸಂಬಂಧವಯ್ಯ? ಗುಹೇಶ್ವರಲಿಂಗಕ್ಕೆಯು [11]ಎನಗೆಯೂ[11] ಎತ್ತಣಿಂದೆತ್ತ ಸಂಬಂಧವಯ್ಯ?

60

ಕಾಣಬಾರದ [12]ಲಿಂಗವು[12] ಕರಸ್ಥಲಕ್ಕೆ ಬಂದರೆ ಎನಗಿದು ಸೋಜಿಗ. ಎನಗಿದು ಸೋಜಿಗ. ಆಹುದೆನಲಮ್ಮೆನು, ಅಲ್ಲೆನಲಮ್ಮೆನು; ಗುಹೇಶ್ವರ ಲಿಂಗ [13]ನಿರಾಳ[13] ನಿರಾಕಾರ—[14]ಬಯಲು ಆಕಾರವಾದರೆ.[14]

61

ಆದಿಯ ಮುಟ್ಟಿ ಬಂದ ಶರಣಂಗೆ ಬಂಧವಿಲ್ಲಯ್ಯ. ಜನ್ಮಕೋಟಿ [15]ಕ್ರೂರ[15]ಕರ್ಮವ ಮಾಡಿದವಂಗೆ [16]ಸೊಂ[16]ಕಿನ ಸೊಬಗ [17]ಹೇಳಲಿಕ್ಕೆ[17], ಅಂಗದಲ್ಲಿ ಲಿಂಗ ಸೋಂಕಿದ ಶರಣಂಗೆ ಕಾಯದೊಳಗುಳ್ಳ ಕರಣಂಗಳು ಕಳಾ ಕುಳ ಕಳಾಭೇದವಯ್ಯ. ಸುಖದ [16]ಸೊ[16]ಂಕಿನ ಸೊಬಗ ಇನ್ನಾರಿಗೆಯೂ ಹೇಳಲಿಲ್ಲ ಗುಹೇಶ್ವರ.

---

1. ಮುಟ್ಟದ (ಟಟವ್ಯಾ) 2. ಯೆಂತೋ (ಬವ) 3. ಕಂಡೆ (ವ) 4. ಕಷ್ಟ ವಾಯಿತ್ತು ಗೊಗೇಶ್ವರ ಎನಗಿನ್ನೆಂತೋ (ವ) 5. ದಾ (ಲ) 6. ವಿ (ಕಬಟದ) 7. ಗುವನು (ಲಿ) 8. ದುವನು (ಲಿ) ನೆ (ತಶೂ) 9. × (ಲಿ) 10. ದ (ಲಿ) 11. ನಮಗೆಯೂ (ಟಬಲಿ) 12. ಲಿಂಗ (ಟಲಿ) ಲಿಂಗವೆನ್ನ (ಶೂ) 13. × (ಶೂ) 14. ಸಾಕಾರನಾಗಿ ಎನ್ನ ಕರಸ್ಥಲಕ್ಕೆ ಬಂದರೆ ಹೇಳಲಮ್ಮೆ ಕೇಳಲಮ್ಮೆ (ಶೂ) 15. ಕೃತ (ತ) 16. ಸೋಂ (ಕಲಿ) 17. ಹೇಳಲಿಕೆ (ತಲಟ) ಹೇಳಲಿಲ್ಲ ಕೇಳಲಿಲ್ಲ ಕೇಳಾ (ಲಿ) ಹೇಳಲಿಲ್ಲ (ಲಿವ್ಯಾ)

62

ಜ್ಯೋತಿಯೊಳಗಣ ಕರ್ಪುರಕ್ಕೆ, ಅಪ್ಪುವಿ[1]ನ ಕೈಯಲ್ಲಿ[1]ಪ್ಪ [2]ಉಪ್ಪುವಿಂಗೆ[2], ಶ್ರೀಗುರುವಿ[1]ನ ಹಸ್ತದೊಳಗಿ[1]ಪ್ಪ ಶಿಷ್ಯಂಗೆ, [3]ಈ ಮೂಱಕ್ಕೆಯು[3] [4]ಬೇಱೆ[4] [5]ಕ್ರಿಯಾ[5]ವರ್ತ[6]ನೆ[6]ಯುಂಟೆ ಗುಹೇಶ್ವರ?

63

ಗುರುಶಿಷ್ಯಸಂಬಂಧವನ[7]ಱಸ[7]ಲೆಂದು ಹೋದರೆ, ತಾನೆ ಗುರುವಾದ, ತಾನೆ ಶಿಷ್ಯನಾದ, ತಾನೆ ಲಿಂಗ[8]ವಾದ.[8] ಗುಹೇಶ್ವರ, ನಿಮ್ಮ ಶರಣನ ಕಾಯದ ಕೈಯಲ್ಲಿ ಲಿಂಗವ ಕೊಟ್ಟರೆ ಭಾವ ಬತ್ತಲೆಯಾಯಿತ್ತು.

## ಭಕ್ತಸ್ಥಲ

64

ಭವಿಯ ತಂದು ಭಕ್ತನ ಮಾಡಿ, ಪೂರ್ವಾಶ್ರಯವ ಕಳೆದ ಬಳಿಕ, [9]ಮರಳಿ ಪೂರ್ವವನೆತ್ತಿ[9] [10]ನುಡಿದ[10] ಗುರುದ್ರೋಹಿಯ ಮಾತ ಕೇಳಲಾಗದು. ಹೆಸರಿಲ್ಲದ ಲಿಂಗಕ್ಕೆ ಹೆಸರಿಡುವ ಲಂಗದ್ರೋಹಿಯ ಮಾತ ಕೇಳಲಾಗದು. ಪೂರ್ವದಲ್ಲಿ ನಾಮವಿಲ್ಲದ ಗುರು, ಹೆಸರಿಲ್ಲದ ಲಿಂಗ, ಹೆಸರಿಲ್ಲದ ಶಿಷ್ಯ; ಇಂತೀ ತ್ರಿವಿಧಸ್ಥಲವನಱಯದೆ ಕೆಟ್ಟರು ಗುಹೇಶ್ವರ.

65

ಬೆವಸಾಯವ ಮಾಡಿ ಮನೆ[11]ಯ[11] ಬೀಯಕ್ಕೆ ಬತ್ತವಿಲ್ಲದಿದ್ದರೆ ಆ ಬೆವಸಾಯದ [12]ಘೋರವೇತಕಯ್ಯ[12]? ಕ್ರಯವಿಕ್ರಯವ ಮಾಡಿ ಮನೆ[A]ಯ [13]ಸಂಚು[13] ನಡೆಯದನ್ನಕ್ಕ[A] ಆ ಕ್ರಯವಿಕ್ರಯದ [12]ಘೋರವೇತಕಯ್ಯ[12] ಒಡಯನನೋಲೈಸಿ ತನುವಿಂಗೆ ಅಷ್ಟಭೋಗವ ಪಡೆಯದಿದ್ದರೆ ಆ ಓಲಗದ [12]ಘೋರವೇತಕಯ್ಯ[12]? ಭಕ್ತನಾಗಿ ಭವಂನಾಸ್ತಿಯಾಗದಿದ್ದರೆ ಆ ಉಪದೇಶವ ಕೊಟ್ಟ ಗುರು, ಕೊಂಡ ಶಿಷ್ಯ, ಇವರಿಬ್ಬರ ಮನೆಯಲ್ಲಿ ಮಾರಿ ಹೊಗಲಿ, [14]ಗುಹೇಶ್ವರಲಿಂಗವತ್ತಲೆ ಹೋಗಲಿ.[14]

---

1. ನೊಳಗಿ (ಶೂ) 2. ಉಪ್ಪಿಂಗೆ (ಚಿಟಕಲಶೂ) 3. × (ಶೂ) 4. ಬೇಱೆ ಬೇಱೆ (ಟಶೂ) 5. ಕ್ರೀ (ಬ) 6. ನ (ಟ) 7. ಱಯ (ಡಿ) 8. ವಾದ ತಾನೆ ಜಂಗಮವಾದ (ಲಿ) 9. ಪೂರ್ವಾಶ್ರಯವನೆತ್ತಿ (ಡಿತಲ) ಪೂರ್ವವನೆತ್ತಿ (ಬ) 10. ನುಡಿವ (ಕಟಬಡಿತಲ) 11. ಗೆ (ಬ) 12 ಗೊರವೇಕಯ್ಯ (ಡಿಹ) ಗೊಡವೆಯೇಕಯ್ಯ (ತಲ, Aಗೆ ಸಂಚಕ್ಕೆ ಬಿಯ್ಯ ಮಿಗದಿರ್ದ್ದಡೆ(ಬ) 13. ಸಂಚ (ಡಿಕಟದಲ) ಸಂಚವ (ದ) 14. ಗುಹೇಶ್ವರ (ಹ)

66

ಮೇರುವ ಸಾರಿದ ಕಾ[1]ಗೆ[1] ಹೊಂಬಣ್ಣವಾಗದಿದ್ದರೆ ಆ ಮೇರು [2]ವಿಂ[2]ದತ್ತಣ [3]ಹುಲುವೊರಡಿಯೆ[3] ಸಾಲದೆ? ದೇವ, ನಿಮ್ಮ ಪೂಜಿಸಿ ದಾವತಿಗೊಂಬಡೆ, ಆ ದಾವತಿಯಿಂದ [4]ಮುನ್ನಿನ[4] ವಿಧಿಯೇ ಸಾಲದೆ? ಗುಹೇಶ್ವರ, ನಿಮ್ಮ ಪೂಜಿಸಿ ಸಾವಡೆ, ನಿಮ್ಮಿಂದ ಹೊಱಗಣ [5]ಜ[5]ವನೆ ಸಾಲದೆ?

67

ಕಾಳರಕ್ಕಸಿಗೊಬ್ಬ [6]ಮಗ[6] ಹುಟ್ಟಿ, ಕಾಯದ ರಾಶಿಯ ಮೊಗೆವುತ್ತ ಸುರಿಯುತ್ತಲಿದ್ದನಯ್ಯ! ಕಾಳರಕ್ಕಸಿಯ ಮೂಗುಮೊಲೆಯ ಕೊಯ್ದು, ದೇವ ಕನ್ನಿಕೆಯ [7]ಮಱೆ[7]ಹೊಕ್ಕು, [8]ಬಾಯ[8] ತುತ್ತಿಲ್ಲವನು ಉಣಲೊಲ್ಲದೆ ಕಾ[9]ಱಃ[9]ದಡೆ [10]ಆತನೆ[10] ಭಕ್ತನೆಂಬೆ, ಗುಹೇಶ್ವರ.

68

ರಾಜಸಭೆ ದೇವಸಭೆಯೊಳಗೆ ದೇವರಾಜಪೂಜಕರೆಲ್ಲಾ ಮುಖ್ಯರಿಗೆ ಗುರುವಿನ ಕರುಣ. [11]ಇದ[11] ಬಲ್ಲರೆ ಅಯ್ಯ ಪೂಜಕರೆಲ್ಲರು? [12]ಇಂತಹ[12] ಪರಿಗಳ ಕಂಡು ಬೆಱಗಾದೆ; ಗುಹೇಶ್ವರ, ಇವರೆಲ್ಲಾ ಸಂಸಾರವ್ಯಾಪಕರು.

69

ಅಕ್ಷರವ ಬಲ್ಲೆವೆಂದು ಅಹಂಕಾರವೆಡೆಗೊಂಡು ಲೆಕ್ಕಗೊ[13]ಳ್ಳ[13]ರಯ್ಯ. ಗುರುಹಿರಿಯರು ತೋಱಿದ ಉಪದೇಶದಿಂದ ವಾಗದ್ವೈತ[14]ವ[14] ಕಲಿತು ವಾದಿಪರಲ್ಲದೆ, ಆಗುಹೋಗೆಂಬುದನಱಿಯರು; [15]ಭಕ್ತಿಯನಱಿಯರು; ಮುಕ್ತಿಯನಱಿಯರು; ಯುಕ್ತಿಯನಱಿಯಿರು[15]. ಮತ್ತೂ ವಾದಿಗೆ[16]ಳಸು[16]ವರು: ಹೋದರು, ಗುಹೇಶ್ವರ, ಸಲೆ ಕೊಂಡ ಮಾಱಿಂಗೆ.

70

ಐದು ಮುಖದಂಗನೆಗೆ ಹದಿನೈದು ದೇಹ ನೋಡಾ! ಆ ಅಂಗನೆಯ ಮನೆಯೊಳಗಿದ್ದು, ತಾವಾರೆಂಬುದನಱಿಯದೆ, ಬಾಯಿಗೆ ಬಂದಂತೆ ನುಡಿವರು; ಗುಹೇಶ್ವರ, [17]ಸಿಮ್ಮ[17]ನಱಿಯದ ಜಡರುಗಳು.

---

1. ಕೆ (ತ) 2. ವೆಯಿ (ಕಚದಲ) 3. ಮೊರಡಿ (ಡಿತಲ) 4. ಮುಂದಣ (ಟ) 5. ಜೀ (ಬತ) 6. ಮಗು (ಲ) 7. ಮಱಿಯ (ಬಟ) 8. ಬಾಯಾರಿ (ತ) 9. ರಿ (ಡಿ) 10. ಆತನ (ಬಟ) 11. ವಿದ (ಕಚ) 12. ಇಂಥಾ (ಟ) 13. ಳ (ಟ) 14. ವನೆ (ಟ) 15. ಯುಕ್ತಿಯನಱಿಯರು ಮುಕ್ತಿಯಱಿಯರು ಭಕ್ತಿಯನಱಿಯರು (ಡಿಹ) ಭಕ್ತಿಯನಱಿಯರು ಯುಕ್ತಿಯನಱಿಯರು ಮುಕ್ತಿಯನಱಿಯರು (ಕದ) 16. ಳೆನಿಸು (ಟಕ) 17. ನಿಮ್ಮ ನಿಜವ (ಟ)

2

71

ಎಣ್ಣೆ ಬೇಱೆ[3], ಬತ್ತಿ ಬೇಱೆ[3]; ಎರಡೂ ಕೂಡಿ ಸೊಡರಾಯಿತ್ತು! ಪುಣ್ಯ ಬೇಱೆ[3], ಪಾಪ ಬೇಱೆ[3]; ಎರಡೂ ಕೂಡಿ ಒಡಲಾಯಿತ್ತು. ಮಿಗಬಾರದು, ಮಿಗದಿರಬಾರದು. ಒಡಲಿಚ್ಛೆಯ ಸಲಿಸದೆ ನಿಮಿಷವಿರಬಾರದು. ಕಾಯಗುಣ ವಳಿದು, ಮಾಯಾಜ್ಯೋತಿ ವಾಯುವ ಕೂಡದ ಮುನ್ನ, ಭಕ್ತಿಯ ಮಾಡ [1]ಬಲ್ಲಾತನೇ[1] ದೇವ, ಗುಹೇಶ್ವರ.

72

ಹೊನ್ನು ಮಾಯೆಯೆಂಬರು, [2]ಹೊನ್ನು ಮಾಯೆಯಲ್ಲ[2]. ಹೆಣ್ಣು ಮಾಯೆಯೆಂಬರು, [2]ಹೆಣ್ಣು ಮಾಯೆಯಲ್ಲ[2]. ಮಣ್ಣು ಮಾಯೆಯೆಂಬರು, [2]ಮಣ್ಣು ಮಾಯೆಯಲ್ಲ[2]. [3]ಮನದ[3] ಮುಂದಣ ಆಶೆಯೇ ಮಾಯೆ ಕಾಣಾ ಗುಹೇಶ್ವರ.

73

[4]ಕಳ್ಳ[4]ಗಂಜಿ ಕಾಡ ಹೊಕ್ಕಡೆ, ಹುಲಿ [A]ತಿಂಬು[5]ದ[5][A] ಮಾ[6]ಬು[6]ದೆ? ಹುಲಿಗಂಜಿ ಹುತ್ತವ ಹೊಕ್ಕಡೆ, ಸರ್ಪ [B]ತಿಂಬು[5]ದ[B5] ಮಾ[6]ಬು[6]ದೆ? ಕಾಲ[C]ಕ್ಕ[C]ಂಜಿ ಭಕ್ತನಾದಡೆ, ಕರ್ಮ [7]ತಿಂಬು[5]ದ[5] [7] ಮಾ[6]ಬು[6]ದೆ? ಇಂತೀ ಮೃತ್ಯುವಿನ ಬಾಯ ತುತ್ತಾದ ವೇಷಡಂಬಕರನೇನೆಂಬೆ, ಗುಹೇಶ್ವರ?

74

ಐದು ಸರ್ಪಂಗಳಿಗೆ ತನುವೊಂದು, ದಂತವೆರಡು. ಸರ್ಪ [8]ಕಡಿದು[8] ಸತ್ತ ಹೆಣನು ಸುಳಿದಾಡುವುದ ಕಂಡೆ. ಈ ನಿತ್ಯವನಱಿಯದ ಠಾವಿನಲ್ಲಿ ಭಕ್ತಿ ಯೆಲ್ಲಿಯದೋ ಗುಹೇಶ್ವರ?

75

ಹುಟ್ಟಿದಲ್ಲಿ[9]ಯೆ[9] ಹೊಂದುವುದೆಲ್ಲರಿಗೆಯೂ ಸ್ವಭಾವ, ಪುಣ್ಯ ಪಾಪವೆಲ್ಲ ರಿಗೆಯೂ ಸ್ವಭಾವ, ಮಹಾಶಿವತತ್ತ್ವದಲ್ಲಿ ಹುಟ್ಟಿದ ಭಕ್ತರು ಆಗಮತತ್ತ್ವ [10]ದಲ್ಲಿ[10] ಹೊಂದಿದಡೇನು? ಆ ಪುಣ್ಯಪಾಪ[11]ವಿಲ್ಲಾಗಿ[11] ಅವರು ಮಹಾನು ಭಾವರು. ಆದಡೇನು ಲೋಕದ ಪರಿಯೆ ಅಲ್ಲ. ಇದ ಲೋಕದ ಪರಿಯೆಂಬ ಆಜ್ಞಾನಿಗಳನೇನೆಂಬೆನು ಗುಹೇಶ್ವರ.

---

1. ಬಲ್ಲಡೆ ಆತನೆ (ಲಟಬಲಿ) ಬಲ್ಲಡಾತನೆ (ಡಿಕ) ಬಲ್ಲರಾತನೆ (ದ) 2. × (ಹಡಿಲ) 3. ಹೊನ್ನು ಮಾಯೆಯಲ್ಲ, ಹೆಣ್ಣು ಮಾಯೆಯಲ್ಲ, ಮಣ್ಣು ಮಾಯೆಯಲ್ಲ ಮನದ (ಹಡಿಲ) 4. ಕಳ್ಳಂ (ದ) A ತಿನ್ನದೆ (ಪ್ರ) 5. ದು (ಲಡಿಟ) 6. ಞ್ಬ (ದಪ್ರ) B ಕಚ್ಚದೆ (ಪ್ರ) C ಗಂ (ಬ) 7. ತಿನ್ನದೆ (ಪ್ರ) 8. ಕಚ್ಚಿ (ಬಟ) 9. × (ಟ) 10. ದಲ್ಲಿಯೇ ([illegible]) 11. [illegible] (ಟ)

76

ಆರೂ ಇಲ್ಲ[1]ದಾ[1]ರಣ್ಯದೊಳಗೆ ಮನೆಯ ಕಟ್ಟಿದರೆ, ಕಾಡುಗಿ[2]ಚ್ಚು ಎ[2]ದ್ದು ಬಂದು ಹತ್ತಿತ್ತಲ್ಲಾ! ಆ ಉರಿಯೊಳಗೆ ಮನೆ ಬೇವಲ್ಲಿ ಮನೆ ಯೊಡಯ[3]ನೆತ್ತ[3] ಹೋದನೋ? [4]ಆ[4] ಉರಿಯೊಳಗೆ ಬೆಂ[5]ದ[5] ಮನೆ [6]ಬೇಗೆ[6] ಯಾಗದುದ ಕಂಡು ಮನೆಯೊಡಯನಳಲುತ್ತ ಬಳಲುತ್ತೈದಾನೆ, ಗುಹೇಶ್ವರ, ನಿಮ್ಮ ಒಲವಿಲ್ಲದ [7]ತಾವ[7] ಕಂಡು, ಮನದಲ್ಲಿ ಹೇಸಿ ತೊಲಗಿದೆನಯ್ಯ.

77

ಅಣೋರಣೀಯಾನ್ ಮಹತೋ ಮಹೀಯಾನ್ ಎಂಬ [8]ಶ್ರುತಿ[8] ಹುಸಿ! [9]ಲಿಂಗವಿದ್ದ[9] ತಾ[10]ವಿಂಗೆ[10] ಪ್ರಳಯವುಂಟೆ? [A11]ಭಕ್ತರ[A] ಭಾವ ದಲ್ಲಿಪ್ಪನಲ್ಲದೆ ಮತ್ತೆಲ್ಲಿಯೂ ಇಲ್ಲ ಗುಹೇಶ್ವ[B]ರ[B11].

78

[12]ಪ[12]ಣಿತೆಯೂ ಇದೆ, ಬತ್ತಿಯೂ ಇದೆ. ಜ್ಯೋತಿ[13]ಯು[13] ಬೆಳಗುವಡೆ ತೈಲವಿಲ್ಲದೆ [14]ಪ್ರಭೆ ತಾನೆಲ್ಲಿಯದೋ[14]? ಗುರುವಿದೆ, ಲಿಂಗವಿದೆ; ಶಿಷ್ಯನ [15]ಸುಜ್ಞಾನವಂಕುರಿಸದನ್ನಕ್ಕರ[15] ಭಕ್ತಿ[16]ಯೆಲ್ಲಿಯದೋ?[16] ಸೋಹವೆಂಬುದ ಕೇಳಿ, ದಾಸೋಹವ [17]ಮಾಡದಿದ್ದರೆ[17], ಅತಿಗಳೆ[18]ದನು[18] ಗುಹೇಶ್ವರ.

79

[19]ಘನತರ[19]ಚಿತ್ರದ ರೂಹ ಬರೆಯ ಬಹುದಲ್ಲದೆ, ಪ್ರಾಣವ ಬರೆಯ ಬಹುದೇ? ಅಯ್ಯ, ದಿವ್ಯಾಗಮಂಗಳು ಹೇಳಿದ [B20]ಕ್ರಿಯೆ[20]ಯಲ್ಲಿ[B] ದೀಕ್ಷೆಯ ಮಾಡಬಹುದಲ್ಲದೆ, ಭಕ್ತಿಯ ಮಾಡಬಹುದೆ? ಅಯ್ಯ, ಪ್ರಾಣ[21]ವಹ[21]

---

1. ದ ಆ (ಟ) 2. ಚ್ಚೆ (ಟ) 3. ಎತ್ತ (ಬಟ) 4. × (ಬಟಲ) 5. ದು (ಬ) 6. ದೆಗೆ (ಹ) ಥೆಗೆ (ಲ) ಚ್ಛೇಗೆ (ಸ್ವ) ಥೇಗೆ (ಬಡಿದಟ) ಯೆಡೆಗೆ (ತ) ಬೇಗೆ (ಚಿಓಚ) 7. ತಾವ (ಕ) 8. ಶೃತಿಪ್ರಮಾಣ (ತ ) 9. ಶಿವನಿದ್ದ (ಗ) 10. ವಿನಲ್ಲಿ (ಡಿತಲ) A ಸದ್ಭಕ್ತರ (ಏ) B ರ ಲಿಂಗವು (ಏ) 11. ಸದ್ಭಕ್ತ ಸದಾಚಾರವೆಲ್ಲಿಪ್ಪುದು ಅಲ್ಲಿಪ್ಪುದಲ್ಲದೆ ಮತ್ತೆಲ್ಲಿಯೂ ಇಲ್ಲ ಕಾಣಾ ನಮ್ಮ ಗುಹೇಶ್ವರಲಿಂಗವು (ಗ) 12. ಪ್ರ (ಚಿಓಡಿಸ್ವತಲ) 13. ಯ (ಬಡಿಲ) 14. ಎಂತಪ್ಪುದಯ್ಯ (ಶೂ) 15. ಜ್ಞಾನೋ ದಯವಾಗದನ್ನಕ್ಕರ (ಶೂ) ಸುಜ್ಞಾನೋದಯವಾಗದನ್ನಕ್ಕರ (ಡಿತಲ) 16. ಯೆಂತಳ ವಡುವುದಯ್ಯ (ಶೂ) 17. ವೊಂದದಿದ್ದರೆ (ದ) ಮಾಡದಡೆ (ಬ) 18. ದೆನು ನೋಡಾ (ಬಟ) ವೆ (ಡಿತಲ) ದೆನು (ಕವ) ದೆ ನಾನು (ಶೂ) 19. ಘನತರದ (ದ) 20. ಕ್ರೀ (ಕಟದ) Bಕ್ರೀಯಲು (ಬಡಿಲ) 21. ವಾಹ (ಲ)

ಭಕ್ತಿಯ ತನ್ಮಯ ನೀನು; ಈ ಗುಣವುಳ್ಳಲ್ಲಿ ನೀನಿಹೆ; ಇಲ್ಲದಲ್ಲಿ ನೀನಿಲ್ಲ; ಗುಹೇಶ್ವರ.

80

ಗಂಡಗಿಂದ [1]ಮುನ್ನ[1] ಹೆಂಡತಿ ಹುಟ್ಟಿ, ಗಂಡಗಿಂದ ಕಿಱಿಯಳಾದಳು. ಆ ಹೆಂಡ[2]ತಿ[2] ಒಡಹುಟ್ಟಿದ[3]ಳಾದ[3]ಳೆಂಬುದ ಕೇಳಿ ಆ ಗಂಡ ಸಂಗವ ಮಾಡಿದಡೆ ಇಬ್ಬರಿಗೊಂದು ಮಗು ಹುಟ್ಟಿತ್ತಲ್ಲಾ! [4]ಆ[4] ಹುಟ್ಟಿದ ಮಗುವ ತಾಯಿ ಮುದ್ದಾಡಿಸಿದಡೆ, ತಾಯ ತಕ್ಕೈಸಿತ್ತಿದೇನು ಹೇಳಾ? [5]ತಾಯೆದ್ದು[5], ಪತಿ-ಭಕ್ತಿಯ ಮಾಡಿತ್ತ ಕಂಡು, ಗುಹೇಶ್ವರಲಿಂಗಕ್ಕೆ ಭಕ್ತಿ ಪರಿಣಾಮವಾಯಿತ್ತು.

81

ಮುನ್ನಿನ ಪರಿಯಂತುಟಲ್ಲ, ಆದಡಿಂತಹುದೇ? ಆಗದಡಿಂತಾಯಿತ್ತು. ಹಲವು [6]ಪರಿಯ[6] ಬಯಕೆ ತಾರ್ಕ[7]ಣೆ[7]ಯಾಂದತೆ ಗುಹೇಶ್ವರಲಿಂಗವು ತನುವ ತನ್ನತ್ತಲೊಯ್ದನು.

82

ಕಾಯಕ್ಕೆ ಮಜ್ಜನ, ಪ್ರಾಣಕ್ಕೆ [8]ಓಗರ;[8] ಇ[9]ವ[9] ಮಾಡಲೆ ಬೇಕು. ಸುಳಿವ ಸುಳುಹುಳ್ಳನ್ನಕ್ಕ ಇ[9]ವ[9] ಮಾಡಲೆ ಬೇಕು. ಗುಹೇಶ್ವರನೆಂ[10]ಬ[10] ಆತ್ಮನುಳ್ಳನ್ನಕ್ಕರ ಭಕ್ತಿಯ ಮಾಡಲೇ ಬೇಕು.

83

ಬಂದ ಬಟ್ಟೆಯ ನಿಂದು ನೋಡದೆ, ಬಂದ ಬಟ್ಟೆಯ ಕಂಡು [11]ಸುಖಿಯಾದೆ.[11] ನಿಂದ ನಿಲವ ಮುಂದುಗೆಡಿಸಿ, ನಿಂದ ನಿಲವ ಮುಂದುಗೊಂಡಿತ್ತು. ತಂದೆ ಮಕ್ಕಳ ಗುಣ [12]ಒಂದು[12] ಭಾವದಲಡಗಿ, [13]ಸಂದಿಲ್ಲದ[13] ಕಾಲೊಳಗೆ ಕೈ ಮೂಡಿತ್ತು. ಒಂದನೆ ಹಿಡಿದು, ಒಂದನೆ ಬಿಟ್ಟರೆ, ಇಂದು ನಮ್ಮ ಗುಹೇಶ್ವರನ ಸದ್ಭಕ್ತಿಯಾಯಿತ್ತೈ ಸಂಗನ ಬಸವಣ್ಣ.

84

ತಂದೆಯ ಸದಾಚಾರ ಮಕ್ಕಳದೆಂಬರು. ಗುರುಮಾರ್ಗಾಚಾರ ಶಿಷ್ಯನದೆಂಬರು. ಮೇಲು[14]ಸಂಕ್ರಿಯ[14] ಕಾಣರು ನೋಡಾ! ತತ್ತ್ವದ ಮೇಲು

---

1. ಮುನ್ನವೇ (ಟ) 2. ತಿಯೆ (ಚವ್ಯಾಟ) 3. × (ಟ) 4. × (ಬಟಲಿ) 5. ತಾಯಿಯೆದ್ದು (ಲಿ) 6. ದೆಸೆಯ (ಶೂ) 7. ಣ್ಣೆ (ತ) ಣ್ಯ (ಬ) 8. ಜಾಗರ (ತ) 9. ದ (ಕಚದ) 10. ಬ ಲಿಂಗಕ್ಕೆ (ಡಿಲ) 11. ಸುಖಿಯಾಗದೆ (ಟ) 12. ವೊಂದೆ (ಡಿತಲ) 13. ಸಂದಿಲ್ಲ (ಚ) 14. ಸಂಜೆಯ (ತ)

ಪಂಕ್ತಿ[1]ಯ[1]ತ್ತಲೆ ಉಳಿಯಿತ್ತು. ಕತ್ತಲೆಯ ಮಱೆಯಲ್ಲಿ ಕಾಣರು ನೋಡಾ! ತತ್ತ್ವದ ಹಾದಿಯನು, ಭಕ್ತಿಯ ಭೇದವನು ಇವರೆತ್ತ ಬಲ್ಲರು, ಗುಹೇಶ್ವರ.

85

ಅದ್ವೈತವ ನುಡಿದು ಅಹಂಕಾರಿಯಾದೆನಯ್ಯ. ಬ್ರಹ್ಮವ ನುಡಿದು [2]ಭ್ರ[2]ಮಿತನಾದೆನಯ್ಯ. ಶೂನ್ಯವ ನುಡಿದು ಸುಖದುಃಖಕ್ಕೆ ಗುಱಿಯಾದೆನಯ್ಯ. ಗುಹೇಶ್ವರ, ನಿಮ್ಮ ಶರಣ ಸಂಗನ ಬಸವಣ್ಣನ [A]ಸಾನ್ನಿಧ್ಯದಿಂ[3]ದಾ[3]ನು[A] ಸದ್ಭಕ್ತನಾದೆನಯ್ಯ.

86

ಹಳೆಗಾಲದಲೊಬ್ಬ ಪುರುಷಂಗೆ ಎಳೆಯ ಕನ್ನಿಕೆಯ ಮದುವೆಯ ಮಾಡಲು, ಕೆಳದಿಯರೈವರು ನಿಬ್ಬಣ ಬಂದರು. [4]ಹಸೆ[4]ಯ ಮೇಲೆ ಮದವಣಿಗನ ತಂದು ನಿಲಿಸಲೊಡನೆ, ಶಶಿವದನೆ ಬಂದು ಕೈವಿಡಿದಳು. ಮೇಲುದಾಯದ [5]ಲೊ[5]ಬ್ಬ ಸತಿ ಕಣ್ಣ ಸನ್ನೆಯ ಮಾಡುತ್ತಿರಲು, ಕೂಡೆ ಬಂದ ನಿಬ್ಬಣಗಿತ್ತಿಯರೆಲ್ಲಾ [6]ಹೆಂಡಿರಾದರು[6]. ದೂರವಿಲ್ಲದ [7]ಗಮನಕ್ಕೆ[7], [8]ದಾರಿ[8] ಪಯಣ ಹಲವಾಯಿತ್ತು. ಸಾರಾಯ ನಿರ್ಣಯವನೇನೆಂಬೆ ಗುಹೇಶ್ವರ.

87

ದೇವ ಕಂಡಾ, ಭಕ್ತ ಕಂಡಾ, ಮರಳಿ ಮರಳಿ ಶರ[9]ಣೆಂಬ[9] ಕಂಡ! ಹೋಯಿತ್ತಲ್ಲಾ ಭಕ್ತಿ ಜಲವ ಕೂಡಿ. ಸಾವನ್ನಕ್ಕರ [10]ಸರಸ[10] ಉಂಟೆ ಗುಹೇಶ್ವರ.

88

[11]ಮುಂದು[11]ಜಾವದಲೆದ್ದು, ಲಿಂಗದಂಘ್ರಿಯ ಮುಟ್ಟಿ, ಸುಪ್ರಭಾತ [12]ಸಮುಯದಲ್ಲಿ[12] [13]ಶಿವಭಕ್ತರ[13] ಮುಖವ ನೋಡುವುದು. ಹುಟ್ಟಿದುದ [14]ಕ್ಕಿದೆ[14] ಸಫಲ ನೋಡಾ! ಸತ್ಯವಚನವಿಂತೆಂದುದು. [B]ಇ[15]ವಿಲ್ಲ[15]ದವರ [16]ನಾನೊಲ್ಲೆ[16] ಗುಹೇಶ್ವರ.[B]

---

1. ಯಿ (ಬದಲಕಚ) 2. ಶ್ರ (ತ) ನಾನು ಭ್ರ (ಲ) A ಸಾಹಿತ್ಯದಿಂದಾನು (ತ) 3. ದನಾ (ಟ) 4. ಹಾಸೆ (ತ) 5. ವೊ (ಚ) 6. ಹಿಂಡಾದರು (ಟ) ಹಿಂದಾದರು (ಟವ್ಯಾ) 7. ಮನಕ್ಕೆ (ಚ) 8. ದಾರಿಯ (ಡಿಹಕತ) ಹಾದಿಯ (ಟ) 9. ಣನೆಂಬ (ಟ) 10. ಸರ (ಕಚತದಲಡಿ) 11. ಮುಂದೆ (ಟ) 12. ದಲೆದ್ದು (ಶೂ) 13. ಸದ್ಭಕ್ತರ (ಹಡಿತಲ) 14. ಕ್ಕಿವೆ (ಚ) ಕ್ಕೆ (ಟಶೂ) Bಇವನೊಲ್ಲದವರನೊಲ್ಲೆ ಕಾಣಾ ಗುಹೇಶ್ವರ(ಟ) 15. ವಲ್ಲ (ಚ) ದಿಲ್ಲ (ಹತಡಿ) 16. ಕಂಡಡೆ ನಾನೊಲ್ಲೆ (ಹತಲ) ನೊಲ್ಲೆ (ಶೂ)

89

ಉಲುಹಿನ ವೃಕ್ಷದ [1]ನೆಳಲಡಿಯಲಿದ್ದು[1] ಗಲಭೆಯನೊಲ್ಲೆ[2]ನೆಂಬ ಪರಿಯೆಂತಯ್ಯ[2]? [A]ಪಟ್ಟದ ರಾಣಿಯ ಮುಖವ ಮುದ್ರೆಯನಿಕ್ಕಿ[A] ; ಮೆಟ್ಟ, ನಡೆವ-ಸತಿಯ [B]ನೆತ್ತಿಯ ಮೇಲೆ[B] [3]ನಿಲುವ[3] ಪರಿ ಎಂತಯ್ಯ ? ಆದಿಯ [4]ಹೆಂಡತಿಯ[4]ನುಲ್ಲಂಘಿಸಿದ ಕಾರಣ, ಮೇದಿನಿಯ ಮೇಲೆ [5]ನಿಲ[5]ಬಾರದು. ಸಾಧಕರೆಲ್ಲರು ಮರುಳಾದುದ ಕಂಡು ನಾಚಿ ನಗುತ್ತಿದ್ದೆನು, ಗುಹೇಶ್ವರ.

90

ಆಚಾರ[6]ವ[6]ಱಿಯದೆ, ವಿಭವವಳಿಯ[7]ದೆ,[7] ಕೋಪವಡಗದೆ, ತಾಪ ಮುಱಿಯದೆ, [8]ಬಱಿದೆ ಭಕ್ತರಾದೆವೆಂದು[8] ಬೆಬ್ಬನೆ ಬೆಱೆವವರ [9]ಕೇಡಿಂಗೆ ನಾನು[9] [10]ಮಱುಗುವೆನು[10] ಕಾಣಾ ಗುಹೇಶ್ವರ.

91

ಆಸೆಗೆ ಸತ್ತುದು ಕೋಟಿ, [11]ಆಮಿಷಕ್ಕೆ ಸತ್ತುದು ಕೋಟಿ,[11] ಹೊನ್ನು ಹೆಣ್ಣು ಮಣ್ಣಿಂಗೆ ಸತ್ತುದು ಕೋಟಿ. ಗುಹೇಶ್ವರ, ನಿಮಗಾಗಿ ಸತ್ತವ[12]ರನಾ[12]ರನೂ ಕಾಣೆ.

92

ಆದಿಯಲ್ಲಿ ಬಸವಣ್ಣನುತ್ಪ[13]ತ್ತಿಯಾದ[13] ಕಾರಣ, ನಾಗಲೋಕದ ನಾಗಗಣಂಗಳಿ[14]ಗೆಯೂ[14] ಬಸವಣ್ಣನ ಪ್ರಸಾದ ; ಮರ್ತ್ಯಲೋಕದ ಮಹಾಗಣಂಗಳಿ[14]ಗೆಯೂ[14] ಬಸವಣ್ಣನ ಪ್ರಸಾದ ; ದೇವಲೋಕದ ದೇವಗಣಂಗಳಿ[14]ಗೆಯೂ[14] ಬಸವಣ್ಣನ ಪ್ರಸಾದ. ಗುಹೇಶ್ವರ, ನಿಮ್ಮಾಣೆ ಎನ[14]ಗೆಯೂ[14] ನಿನ[14]ಗೆಯೂ[14] ಬಸವಣ್ಣನ ಪ್ರಸಾದ.

93

ಕಬ್ಬುನದ ಗುಂಡಿಗೆಯಲ್ಲಿ [15]ರಸದ[15] ಭಂಡವ ತುಂಬಿ, ಹೊನ್ನ ಮಾಡಬಲ್ಲ[16]ಡೆ, ಅ[16]ದು ಪರುಷ ಕಾಣಿರಣ್ಣ! ಲಿಂಗ ಬಂದುಂಬಡೆ, ಪ್ರಸಾದಕಾಯ-

---

1. ನೆಳಲಿನಡಿಯಲ್ಲಿದ್ದು (ಟ) 2. ನೆಂಬುದೆಂತಯ್ಯ (ಹಟಲ) ನೆಂತಯ್ಯ (ತ) A ಪಟ್ಟದ ರಾಣಿವಾಸದ ಮುಖವ ಮುದ್ರಿಸಿ (ಚವ್ಯಾ) ಪಟ್ಟದ ರಾಣಿಯ ಮುಖವ ಮುದ್ರಿಸಿ (ಟವ್ಯಾ) B ಶಿರವ ಮೆಟ್ಟಿ (ವ್ಯಾ) 3. ಮೆಟ್ಟಿ ನಡೆವ (ಟವ್ಯಾ) 4. ಹೆಂಡಿರ (ಟ) 5. ಇರ (ಟ) 6. ವನ (ಹತಲ) 7. ದೆ ಕ್ರಿಯಾಕಾರ ಉಡುಗದೆ (ಶೂ) 8. ಬಱಿದೆ ನನೆದ ಹೊರಸಿನಂತೆ ಬೆಬ್ಬಳಿಸಿ (ಶೂ) 9. ಕಂಡು ಆನು (ಟ) 10. ಬೆಱಗಾದೆ (ಶೂ) 11. × (ತ) 12. ರಾ (ಚವ) 13. ತ್ಯವಾದ (ಚೆಹ) 14. ಗೂ (ಚೆ) 15. ರಸ (ಲ) 16. ಡ (ಟ)

ವಪ್ಪಡೆ, ಅಂದಂದಿಂಗೆ ಭವಕರ್ಮ ಮುಟ್ಟಲಮ್ಮವು ಕಾಣಿರೇ! ಆದಿಯ ಪ್ರಸಾದಕ್ಕೆ ಬಾಧೆಯಿಲ್ಲ ಕಾಣಿರೇ! ಶಶಿಯಲ್ಲಿ ಕರಗದು, ಬಿಸಿಲಲ್ಲಿ ಕೊರಗದು ; ರಸ ಉಂಡ ಹೊನ್ನು, ಗುಹೇಶ್ವರ, ನಿಮ್ಮ ಶರಣ.

94

ನಚ್ಚು ಮಚ್ಚಿನ ಲಿಂಗವ [1]ಗ್ರಹಿಸಿ, ಮಚ್ಚು ಒಳಕೊಂಡಿತ್ತಯ್ಯ![1] ಕರ್ಪುರದ ಕರಡಗೆಯ ಘಾಸಿಮಾಡಿದಂತಾಯಿತ್ತು. ಲಿಂಗಾನುಭಾವಿಗಳ ಸಂಗದಿಂದಾನು [2]ಕಣ್ದೆಱೆದೆನು ಕಾಣಾ[2] ಗುಹೇಶ್ವರ.

95

ಹೃದಯಕಮಲದೊಳಗೊಂದು ಮಱಿದುಂಬಿ ಹುಟ್ಟಿತ್ತು. ಹಾರಿ ಹೋಗಿ ಆಕಾಶವ ನುಂಗಿತ್ತಯ್ಯ. ಆ ತುಂಬಿಯ ಗಱಿಯ ಗಾಳಿಯಲ್ಲಿ ಮೂಱು ಲೋಕವೆಲ್ಲವು ತಲೆಕೆಳಗಾಯಿತ್ತು. ಪಂಚವರ್ಣದ ಹಂಸೆಯ ಪಂಜರವ ಖಂಡಿಸಿದರೆ, ಗಱಿ ಮುಱಿದು, ತುಂಬಿ ನೆಲಕ್ಕೆ ಉರುಳಿತ್ತು. ನಿಜದುದಯದ [3]ಬೆಡಗಿನ[3]ಕೀಲ, ಗುಹೇಶ್ವರ, ನಿಮ್ಮ ಶರಣರನುಭಾವಸಂಗದಲಿ[4]ದ್ದು ಕಂಡೆ[4]ನಯ್ಯ.

96

ಲಿಂಗವನು ಪ್ರಾಣವನು ಒಂದು ಮಾಡಿ ತೋಱಿದ ಗುರುವಿದ್ದಾನಲ್ಲಾ; ಲಿಂಗವಿದ್ದಾನಲ್ಲಾ ! ಇದಕ್ಕೆ ಸಾಕ್ಷಿ, ಮುಂದೆ ಜಂಗಮವಿದ್ದಾನಲ್ಲಾ! [5]ಇಂತೀ[5] ತ್ರಿವಿಧ ದೃಷ್ಟವ ಕಂಡು ಬೇಱೆಂಬ ಅಜ್ಞಾನ[6]ಕ್ಕೆ ನಾನು [6]ಬೆಱಗಾದೆನು, ಗುಹೇಶ್ವರ.

97

ಕಬ್ಬಿ[7]ನ[7] ಬಿಲ್ಲ ಮಾಡಿ, ಪರಿಮಳದಲ್ಲಿ ಅಂಬ ಮಾಡಿ, [8]ನಲ್ಲೋ[8]ೞ [9]ಬಿ[9]ಲ್ಲಾಳೆ. ಎನ್ನ[10]ಮನದಲ್ಲಿ[10] ಎಸೆಯ ಬಲ್ಲೆಯಲ್ಲಾ ಗುಹೇಶ್ವರನೆಂಬ ಲಿಂಗವನು.

98

ಕಂಗಳೇಕೆ ನೋಡ ಬೇ[11]ಡ ಎಂ[11]ದಡೆ ಮಾಣ[12]ವು[12] ? ಶ್ರೋತ್ರಂಗ

---

1. ಗ್ರಹಿಸುವಲ್ಲಿ ಮಚ್ಚು ಒಳಕೊಂಡಿತ್ತು ನೋಡಾ (ಶೂ) 2. ಕಂದೆಱೆದೆ ನಯ್ಯ (ಟ) ಕಂನೆಱೆದೆನು ಕಾಣಾ (ದ) ಕಂದೆಱೆದು ಗುಹೇಶ್ವರನಲ್ಲಿ ತಲ್ಲೀಯವಾದೆನು ಕಾಣಾ ಚೆನ್ನಬಸವಣ್ಣ (ಶೂ) 3. ಬೆಳಗಿನ (ವ) 4. ದ್ದಱಿದೆ (ವ) 5. ಈ (ಡಿಹಟತಲ) 6. ಕ್ಕಾನು (ಟ) 7. ನಲಿ (ಟ) 8. ನಿಲ್ಲೋೞ (ಹ) 9. ಬ (ಹ) 10. ಮನದ ಮೇಲೆ (ಟ) 11. ಡಂ (ಟ) ಡವೆಂ (ಡಿಲ) 12. ವಯ್ಯ (ಟ)

ಳೇಕೆ ಆಲಿಸ ಬೇ[1]ಡ ಎಂ[1]ದಡೆ ಮಾಣ[2]ವು[2] ? ಜಿಹ್ವೆಯೇಕೆ ರುಚಿಸ ಬೇ[1]ಡ ಎಂ[1]ದಡೆ ಮಾಣ[2]ವು[2] ? ನಾಸಿಕವೇಕೆ [3]ವಾಸಿಸ[3] ಬೇ[1]ಡ ಎಂ[1]ದಡೆ ಮಾಣ[2]ವು[2] ? ತ್ವಕ್ಕೇಕೆ ಸೋಂಕ ಬೇ[1]ಡ ಎಂ[1]ದಡೆ ಮಾಣ[2]ವು[2] ? ಈ ಭೇದವ ನಱಿದು [4]ನುಡಿಸಲು[4] [5]ಸಮಧಾತು[5]ವಾಯಿತ್ತು. ಗುಹೇಶ್ವರಲಿಂಗಕ್ಕೆ ಒಲಿದ ಕಾರಣ, ಅಭಿಮಾನದ ಲಜ್ಜೆ ಬೇಸತ್ತು ಹೋಯಿತ್ತು.

99

ಬಿಸುಜಂತೆ, ಜವಳಿಗಂಭ! ಲೇಸಾಯಿತ್ತು [6]ಮನೆ,[6] ಲೇಸಾಯಿತ್ತು ಮೇಲುವೊದಿಕೆ. ಮಗುಳೆ ಆ ಅಂಗಕ್ಕೆ ಕಿಚ್ಚ[7]ನಿಕ್ಕಿ[7] ಮನೆಯನಿಂಬು[8]ಮಾಡಿದೆ[8] ಲಿಂಗಜಂಗಮಕ್ಕೆ. ಹುಟ್ಟುಗೆಟ್ಟು ಬಟ್ಟಬಯಲಲ್ಲಿ ನಾನಿದೇನೆ, ಗುಹೇಶ್ವರ.

100

ತನು ತರತರಂಬೋಗಿ, ಮನವು [9]ನಿಮ್ಮಲ್ಲಿ[9] ಸಿಲುಕಿತ್ತಯ್ಯ. ನೋಟವೆ ಪ್ರಾಣವಾಗಿ, ಆ[10]ಪ್ಯಾ[10]ಯನ ನಿಮ್ಮಲ್ಲಿ ಅ[11]ಱ[11]ತುದಯ್ಯ. ಸಿಲುಕಿತ್ತು ಶೂನ್ಯದೊಳಗೆ ; [12]ಗುಹೇಶ್ವರ[12] ನಿರಾಳ[13]ವಯ್ಯ[13].

101

ಮನ [14]ಬಸುಱಾದರೆ[14], ಕೈ ಬೆಸಲಾಯಿತ್ತ ಕಂಡೆ ; ಕರ್ಪುರದ [15]ಕಂಪ[15] ಕಿವಿ [16]ಕುಡಿಯಿತ್ತು[16] ಕಂಡೆ. ಮುತ್ತಿನ [17]ಧಾಳವ[17] ಮೂಗು ನುಂಗಿತ್ತ ಕಂಡೆ. [18]ಕಂಗಳು ಹಸಿದು ವಜ್ರವ ನುಂಗಿತ್ತ ಕಂಡೆ.[18] ಒಂದು ನೀಲದೊಳಗೆ ಮೂಱು ಲೋಕವಡಗಿತ್ತ ಕಂಡೆ, ಗುಹೇಶ್ವರ.

102

ಕಾಲ್ಗ ಸಡಗರ ಕೈಯಲದೆ, ಕೈಯ ಸಡಗರ ಕಂಗಳಲದೆ. [A]ಅದೇನು ಕಾರಣ[19]ವೆಂದಡೆ[19][A], ಕಂಗಳೇ ಕಾರಣವಾಗಿ. ಒಂದು ಮಾತಿನೊಳಗೆ ವಿಚಾರ ವದೆ. [B]ಕನ್ನಡಿಯೊಳಗೆ[B] [20]ಕಾರ್ಯ[20]ವದೆ. ಇದೇನು ಕಾರಣ, [C]ತಿಳಿಯಲಱಿ ಯರು ಹೇಳಾ[C] ಗುಹೇಶ್ವರ!

---

1. ಡೆಂ (ಟ) ಡವೆಂ (ಡಿಲ) 2. ವಯ್ಯ (ಟ) 3. ವಾಸನಿಸ (ತ) 4. ನು(ಡಿ) ಯಲು (ಲ) 5. ಸಮಾಧಾನ (ಲ) 6. ಮನ (ಹ) 7. ನಿಕ್ಕಿ ಸುಟ್ಟು (ಡಿತಲಹ) 8. ಮಾಡುವೆ (ಡಿತಲ) 9. ಲಿಂಗದಲ್ಲಿ (ವ) 10. ಪ್ಯ (ಟ) 11. ರಿ (ತ) 12. ಗುಹೇಶ್ವರಲಿಂಗ (ಟವ) 13. × (ಶೂ) 14. ಬೆಸಲಾದರೆ (ಟ) 15. ಕಂಪುವ (ವ) 16. ಮೇಯಿತ್ತು (ವ) ಕುಡಿಯಿತ (ಟ) 17. ದಾಳವ (ತ) 18. × (ಟ) A ಅದೇಕೆಂಬಡೆ (ಏ) 19. × (ವ) B ದರ್ಪಣದೊಳಗೆ (ಏ) C ತಿಳಿಯುವಲ್ಲದು (ಏ) 20. ಕಾಯ (ಹ).

103

ಅಮೃತಸಾಗರದೊಳಗಿದ್ದು ಆಕಳ ಚಿಂತೆಯೇಕೆ? ಮೇರುಮಂ[1]ದಿ[1]ರದೊಳಗಿದ್ದು [2]ಜರಗ[2] ತೊಳೆವ ಚಿಂತೆಯೇಕೆ? ಶ್ರೀಗುರುವಿನೊಳಗಿದ್ದು ತತ್ತ್ವವಿದ್ಯದ ಚಿಂತೆಯೇಕೆ? ಪ್ರಸಾದದೊಳಗಿದ್ದು ಮುಕ್ತಿಯ ಚಿಂತೆಯೇಕೆ? ಕರಸ್ಥಲ[3]ದೊಳಗೆ[3] ಲಿಂಗವಿದ್ದ ಬಳಿಕ [4][A]ಮತ್ತಿನ್ನಾವ[4] ಚಿಂತೆಯೇಕೆ[A] ಹೇಳಾ ಗುಹೇಶ್ವರ?

104

[B][5]ಈಶ್ವರ ನುಡಿದ[5] ನುಡಿಯನರಿ[6]ದೆವೆಂದು[6][B] ಬೀಸರವೋದರಣ್ಣ[7]ಗಳೆಲ್ಲ.[7] ಪ್ರಾಣ ಲಿಂಗವೆಂಬರಯ್ಯ, ಮನ ಘನವೆಂದರಿಯದೆ–ಮರುಳುಗೊಂಡರು. [C][8]ಈಶ್ವರನ[8]ನರಿದಡೆ[C], ತಾ ಶಿವನು. ಗುಹೇಶ್ವರನೆಂಬುದು ಬೇರಿಲ್ಲ.

105

ಕರ್ಮ ನಾಸ್ತಿಯೆಂಬೆ, ಅನಾಸ್ತಿಯೆಂಬೆ. ಜ್ಞಾನಕೊಬ್ಬಿನಲ್ಲಿ ಉಲಿವೆ. ಉಲಿದಂತೆ ನಡೆವೆ. ಸಂಗಡಸಹಿತ ಕರಸ್ಥಲಕ್ಕೆ ಬಂದು, [D]ನೀನೂ [9]ಬಯಲಾಗೆ[9]; ಎನ್ನನೂ ಬಯಲು ಮಾಡೆ[D] ಗುಹೇಶ್ವರ.

106

ನಿಚ್ಚಕ್ಕೆ[10]ನಿಚ್ಚ[10] ಒತ್ತೆಯ ಬೇಡಿದಡೆ [11]ಅಚ್ಚಿಗ[11]ವಾಯಿತ್ತವ್ವಾ, ನಮ್ಮ ನಲ್ಲಂಗೆ. ಕಿಚ್ಚನೆ ಹೊತ್ತುಕೊಂಡು [E]ಅ[12]ಚ್ಚ[12]ನೆಯನಾಡಲು ಅಚ್ಚುಗವಾಯಿತ್ತವ್ವಾ, ನಮ್ಮ ನಲ್ಲಂಗೆ[E]. ಅಚ್ಚನೆಯ ಗಳಿಹವನಿಳುಹಿದರೆ [E]ಬಳಿಕ[E] ನಿಶ್ಚಿಂತವಾಯಿತ್ತು, ಗುಹೇಶ್ವರ.

---

1. ವ (ಟ) 2. ಜಲಗ (ಟ) ಜಗರ (ಲ) 3. ದಲ್ಲಿ (ಲಿ) 4. ಮತ್ತಾವ(ಲಿ) ಇನ್ನಾವ(ಕಚಓ) A ಯಿನ್ನಾವುದಕ್ಕೆ ಚಿಂತೆ (ಟ) 5. ಈಸರ ನುಡಿವ (ಟ) B ಈಶ್ವರನ ನರ್‍ಇದೆವೆಂದು ನುಡಿದು (ಡಿ) ಈಶ್ವರನನರ್‍ಇದೆವೆಂದು (ಹಚಸ್ವತಲ) 6. ದೆಹೆನೆಂದು(ಟ) 7. ಆಗಳೆಯೆಲ್ಲ (ಟ) 8. ಈ ಸರವ (ಟಲ) B ಈಶ್ವರನನರಿಯದಡೆ (ತ) 9. ಬಯಲಾಗೆ ಅಲ್ಲಾ (ಡಿಟ) ಬಯಲಾಗೆ ಯಲ್ಲಾ (ಕ) D ನೀನು ಬಯಲಾಗೆ ಎನ್ನನು ಬಯಲು ಮಾಡಿದೆ (ಹ) ನೀನು ಬಯಲಾಗೆಯಲ್ಲಾ ಎನ್ನನು ಬಯಲು ಮಾಡಿದ್ಯೆ (ತ) 10. ನಿಚ್ಚಕ್ಕೆ (ಲಿ) 11. ಅಚ್ಚುಗ (ಡಿಕಚದತಲಲಿ) ಅಚ್ಚಿಗ (ಟಿವ) E × (ವ) 12. ರ್ಚ (ಚಿಸ್ವಟತದಲ)

107

ಆಸೆಯೆಂಬ ಕೂಸನೆ[A]ತ್ತಲು[A], ರೋಷವೆಂಬ ತಾಯಿ [B]ಮುಂದೆ ಬಂದಿಪ್ಪಳು[B] ನೋಡಾ! [C]ಇಂತೆರಡಿಲ್ಲದ[C] ಕೂಸನೆತ್ತಬಲ್ಲಡೆ, [D]ಆತನೆ ಲಿಂಗೈಕ್ಯನು[D] ಗುಹೇಶ್ವರ.

108

ತಾಯಿ ಬಂಜೆಯಾದಲ್ಲದೆ ಶಿಶು ಗತವಾಗದು ; ಬೀಜ ನಷ್ಟವಾದಲ್ಲದೆ ಸಸಿ ಗತವಾಗದು ; ನಾಮ ನಷ್ಟವಾದಲ್ಲದೆ [1]ನೇಮ ನಷ್ಟವಾಗದು[1]; ಮೊದಲುಗೆಟ್ಟಲ್ಲದೆ ಲಾಭದಾಸೆ ಬಿಡದು. ಗುಹೇಶ್ವರಲಿಂಗದ ನಿಜವನೆಯ್ದುವಡೆ ಪೂಜೆಯ ಫಲ ಮಾದಲ್ಲದೆ ಭವಂನಾಸ್ತಿಯಾಗದು.

109

ಬೆಟ್ಟಕ್ಕೆ ಚಳಿಯಾದಡೆ ಏನ ಹೊ[2]ದಿ[2]ಸುವರಯ್ಯ ? ಬಯಲು ಬತ್ತಲೆ [3]ಯಿದ್ದರೆ[3] ಏನನುಡಿಸುವರಯ್ಯ ? ಭಕ್ತನು ಭವಿಯಾದಡೆ [4]ಏ[4]ನನುಪಮಿಸುವೆನಯ್ಯ, ಗುಹೇಶ್ವರ ?

110

ಸತ್ತ ಬಳಿಕ ಮುಕ್ತಿಯ ಹಡೆ[E]ದಹೆ[5]ನೆಂ[5]ದು[E] [6]ಪೂಜಿಸ[6] ಹೋದರೆ ಆ ದೇವರೇನ ಕೊಡುವ[7]ರೋ[7] ? [8]ಸಾಯದೆ[8], ನೋಯದೆ, ಸ್ವತಂತ್ರ[9]ನಾ[9]ಗಿ [10]ಸಂದುಭೇದವಿಲ್ಲ[10]ದಿಪ್ಪ, ಗುಹೇಶ್ವರ, ನಿಮ್ಮ ಶರಣ.

111

[F]ನೀರ[F] ನೆಳಲನೆ ಕಡಿದು, ಮೇರುವೆಂಬುದ ನುಂಗಿ, [11]ಶಾರದೆ[11]ಯೆಂಬ ವಳ ಬಾಯ ಕಟ್ಟಿ, ಕಾರಮೇಘದ [12]ಬೆಳಸ ನೀರಹರಿ[12] ನುಂಗಲು, ದಾರಿ ಮೃತ್ಯುವ ನುಂಗಿ ನಗುತ್ತಿ[13]ದ್ದಿತ್ತು[13]. ನಾರಿಯ ಬೆನ್ನ ಮೇಲೆ ಗಂಡ ಬಂದು ಕುಳ್ಳಿರಲು ನೀರ ಹೊಳೆಯವರೆಲ್ಲರ ಕೊಡನೊಡೆದವು. ಕಾರೆಯ ಮುಳ್ಳೆದ್ದು ಕಲಿಗಳನಟ್ಟಿ ಸದೆವಾಗ, ಸೋರುಮುಡಿಯಾಕೆ ಗೊರವನ ನೆರೆದಳು. ಬಳ್ಳ ಆನೆಯ ನುಂಗಿ, ಒಳ್ಳೆ ಸಮುದ್ರವ ಕುಡಿದು, ಕುಳ್ಳಿರ್ದ[F] ಶಿಶು ಹಲಬರನೆಯ್ದೆ

---

A ತ್ತಿ (ಏ) B ಬಂದು ಮುಂದೆ ನಿಂದಿಪ್ಪಳು (ಏ) C ಇಂತಿವೆರಡಿಲ್ಲದೆ (ಏ) ಇಂತೀ ಎರಡಿಲ್ಲದ (ಡಿ) D ಅವ ಅಚ್ಚ ಶೀಲವಂತನೆಂಬೆ ಕಾಣಾ (ಏ) 1. ನೇಮದ ಹಂಗು ಬಿಡದು (ಟ) 2. ದ್ದಿ (ಡಿಹಲ) 3. ಯಾದಡೆ (ಟ) ಯಲ್ಲಿದರೆ (ಕ) 4. ಆದೇ (ಡಿಹತಲ) 5. ವೆಂ (ಟ) E ದೇನೆಂದು (ತ) 6. ದೇವರ ಪೂಜಿಸ (ಟ) 7. ದೋ (ಚಿ) 8. ಸತ್ತ ಬಳಿಕ ಕೊಂಬುದೇನು ಕೊಡುವುದೇನು ಸಾಯದೆ (ಟ) 9. ವಾ (ಟ) 10. ಸಂದಿಲ್ಲ (ಟ) F ನೀರು (ದಟ) 11. ಸಾರಥಿ (ತ) 12. ಬೆಳಸು ನೀರ ಹರಿಯು (ಟ) 13. ದ್ದುದು (ಟ)

ನುಂಗಿ, ಅತ್ತೆ, ಅಳಿಯ[1]ನ[1] ಕೂಡಿ, ಕೋಡಗವ ಹಡೆದಲ್ಲಿ, ಹತ್ತಿರಿದ್ದ ಹಾವಡಿಗನನದು ನುಂಗಿತ್ತು. ಕಪ್ಪೆ ಸರ್ಪನ ಹಿಡಿದು ಒತ್ತಿ ನುಂಗುವಾಗ ಕಪ್ಪೆಯ ಕೊರಳಲ್ಲಿ ಬಿಳಿದು ಕೆಂಪಡರಲು, ನಿಶ್ಚಿಂತವಾಯಿತ್ತು ಗುಹೇಶ್ವ[2]ರನ[2] ಶರಣಂಗೆ, ಕಟ್ಟಿದಿರ ಕರ್ಪುರದ ಜ್ಯೋತಿಯಂತೆ.

112

ಪೃಥ್ವಿಕುಳಮಂಟಪದ ಮೇಲೆ [3]ಪದಶಿಲೆ[3] ಬಿಗಿದು, ತಳಕಂಬ ಕಳಶದ ಮೇಲೆ ಕೆಸಱುಗಲ್ಲು. ಒಂದು [4]ಮಠಕ್ಕೆ[4] ಒಂಬತ್ತು ತುಂಬಿಯಾಳಾಪ. [5]ಬಗೆಯ[5] ಬಣ್ಣದ ಮೇಲೆ ಹಿರಿದಪ್ಪ [6]ಸಂಯೋಗ.[6] ಅಂಗಜನ ಪಡೆ ಕೋಟಿ ಮುಂಡವೆದ್ದು ಕುಣಿವಲ್ಲಿ, ರಣವುಂಡ ಭೂಮಿಯನು ಮೀಱಿದ ಗುಹೇಶ್ವರನು.

## ಮಾಹೇಶ್ವರಸ್ಥಲ

113

ಆಗಮಪುರುಷರಿರಾ, [7]ನಿಮ್ಮ ಆಗಮ[7] ವಾಯ[8]ವಾಗಿ[8] ಹೋಯಿ[9]ತ್ತಲ್ಲಾ[9]! ವಿದ್ಯಾಪುರುಷರಿರಾ, ನಿಮ್ಮ ವಿದ್ಯೆ ಅವಿದ್ಯೆಯಾಗಿ ಹೋದಲ್ಲಿ ಬಱುಮುಖರಾ[10]ಗಿದ್ದಿ[10]ರಲ್ಲಾ! ವೇದಪುರುಷರಿರಾ, ನಿಮ್ಮ ವೇದ ಹೊಲಬು ದಪ್ಪಿ ಹೋದಲ್ಲಿ, [11]ವೇದವೆ[11] ದೈವವೆಂದು ಕೆಟ್ಟಿರಲ್ಲಾ! ಪುರಾಣಪುರುಷರಿರಾ, ನಿಮ್ಮ ಪುರಾಣ ವಿಚಾರ[12]ಭ್ರಷ್ಟಾಗಿ[12] ಹೋದಲ್ಲಿ, [13]ನೀವು[13] ಒಡನೆ ಭ್ರ[14]ಷ್ಟಾ[14]ಗಿ ಹೋದಿರಲ್ಲಾ! ಶಾಸ್ತ್ರಪುರುಷರಿರಾ, ನಿಮ್ಮ ಶಾಸ್ತ್ರ ಮಹಾ ಪಥದ ಹೊನಲಲ್ಲಿ ಹೋದಲ್ಲಿ, ಭಕ್ತದೇಹಿಕದೇವನೆಂದಱಿಯದೆ ಕೆಟ್ಟಿರಲ್ಲಾ! 'ಯತ್ರ ಶಿವಸ್ತತ್ರ ಮಾಹೇಶ್ವರ'ನೆಂದು ಹೇಳಿತ್ತು ಮುನ್ನ. ಅಂತು ಭಕ್ತ ನಿತ್ಯಸತ್ಯಸ[15]ನ್ನಿ[15]ಹಿತ, ಗುಹೇಶ್ವರ, ನಿಮ್ಮ ಶರಣ.

114

ಕಲ್ಲ ಹೋರಿನೊಳಗೊಂದು [16]ಕಿಚ್ಚು[16] ಹುಟ್ಟಿತ್ತ ಕಂಡೆ. ಹುಲ್ಲ ಮೇವ ಎರಳೆಯ ಹುಲಿಯ ಸರಸವ ಕಂಡೆ. ಎಲ್ಲರು ಸತ್ತು ಆಡುತ್ತಿಪ್ಪುದ ಕಂಡೆ. ಇನ್ನೆಲ್ಲಿಯ ಭಕ್ತಿ ಹೇಳಾ ಗುಹೇಶ್ವರ?

---

1. ನೂ (ಟ) 2. ರನಿಮ್ಮ (ಟ) 3. ಪಾದಶಿಲೆ (ಟ) 4. ಮಠದೊಳಗೆ (ಟ) 5. ಬಗೆ (ಟ) 6. ಶಿವಯೋಗ (ಟ) 7. ನಿಮ್ಮಾಗಮ (ಲಿ) 8. ಕ್ಕೆ (ಲಿ) 9. ತ್ತೆ (ಟ) 10. ದಿ (ಲ) 11. ನಿಮ್ಮ ವೇದವೇ (ಡಿಲ) 12. ಭ್ರಷ್ಟವಾಗಿ (ಲಿತ) 13. × (ತ) 14. ಷ್ಟರಾ (ಟ) 15. ನ್ನ (ಡಿಟದತಲ) 16. ಕೆಚ್ಚು (ತ)

115

ಕುರೂಪಿ ಸ್ವರೂಪಿಯ ನೆನೆದಡೆ ಕುರೂಪಿಯಪ್ಪನೆ? [1]ಆ ಸ್ವರೂಪಿ ಕುರೂಪಿಯ ನೆನೆದಡೆ ಕುರೂಪಿಯಪ್ಪನೆ?[1] ಧನವುಳ್ಳ[2]ವರ[2] ನೆನೆದಡೆ ದರಿದ್ರ ಹೋಹುದೆ? ಪುರಾತರ ನೆನೆದು ಕೃತಾರ್ಥರಾದೆವೆಂಬರು; ತಮ್ಮಲ್ಲಿ ಭಕ್ತಿ ನಿಷ್ಠೆಯಿಲ್ಲದವರ [3]ಕಂಡಡೆ, ಮೆಚ್ಚನು ಗುಹೇಶ್ವರನು.[3]

116

[4]ಕಾರಣವಿಲ್ಲ, ಕಾರ್ಯವಿಲ್ಲ[4]! ಏತಕ್ಕೆ ಭಕ್ತರಾದೆವೆಂಬಿರೋ? ಐವರ ಬಾಯ ಎಂಜಲನುಂಬಿರಿ, ಐವರು ಸ್ತ್ರೀಯರ ಮುಖವನಱಿಯಿರಿ, ಮೂಱು ಸಂಕಲೆಯ ಕಳೆಯಲಱಿಯಿರಿ; ಕಾಯವಿಡಿದು ಲಿಂಗವ ಮುಟ್ಟಹೆನೆಂಬ ಭ್ರಮೆಯ ನೋಡಾ ಗುಹೇಶ್ವರ.

117

ಉದಯವಾ[5]ಯಿತ್ತ[5] ಕಂಡು ಉದರಕ್ಕೆ [6]ಕುದಿವರಯ್ಯ[6]! ಕತ್ತಲೆಯಾ[5]ಯಿತ್ತ[5] ಕಂಡು ಮಜ್ಜನಕ್ಕೆಱೆವರಯ್ಯ! ಲಿಂಗಕ್ಕೆ ನೇಮವಿಲ್ಲ; ಇರುಳಿಗೊಂದು ನೇಮ, ಹಗಲಿಗೊಂದು ನೇಮ; ಲಿಂಗಕ್ಕೆ ನೇಮವಿಲ್ಲ. ಕಾಯವೊಂದೆಸೆ, ಜೀವವೊಂದೆಸೆ, ಗುಹೇಶ್ವರನೆಂಬ ಲಿಂಗವು ತಾನೊಂದೆಸೆ.

118

ಅಗ್ಘವಣಿ [7]ಪತ್ರೆ[7] ಧೂಪ ದೀಪ [8]ನಿವಾಳಿಯಲ್ಲಿ[8] ಪೂಜಿಸಿ ಪೂಜಿಸಿ ಬಳಲುತ್ತೈದಾರೆ! ಏನೆಂದಱಿಯರು, ಎಂತೆಂದಱಿಯರು. 'ಜನ ಮರುಳೋ ಜಾತ್ರೆ ಮರುಳೊ' [9]ಎಂಬಂತೆ[9], ಎಲ್ಲರೂ ಪೂಜಿಸಿ, [10]ಏನನೂ[10] ಕಾಣದೆ [11]ಲಯವಾಗಿ[11] ಹೋದರು ಗುಹೇಶ್ವರ.

119

ಮಜ್ಜನಕ್ಕೆಱೆದು ಫಲವ [12]ಬೇಡುವರಯ್ಯ;[12] ತಮಗೆಲ್ಲಿಯದೋ ಆ

---

1. × (ತ) 2. ವನ (ಟ) 3. ಮೆಚ್ಚುವನೆ ನಮ್ಮ ಗುಹೇಶ್ವರ ಲಿಂಗವು (ಟ) ಕಂಡಡೆ ಮೆಚ್ಚುವನೆ ನಮ್ಮ ಗುಹೇಶ್ವರಲಿಂಗವು (ಸ್ವ) ಕಂಡಡೆ ಮೆಚ್ಚುವನೆ ಗುಹೇಶ್ವರನು (ಡಿ) 4. ಕಾರ್ಯವಿಲ್ಲ ಕಾರಣವಿಲ್ಲ(ಲಿ) 5. ದುದ(ಟ) 6. ಕುಡಿವರಯ್ಯ (ಚಸ್ವಓ) ಕುಡಿವರಯ್ಯ (ಹ) 7. ಪತ್ರೆ ಪುಷ್ಪ (ಡಿಟಲ) 8. ಗಂಧಾಕ್ಷತೆ ನೈವೇದ್ಯ ತಾಂಬೂಲದಿಂದ (ವ) 9. ಜಲಗಂಧಾಕ್ಷತೆ ಪುಷ್ಪ ಧೂಪದೀಪಾಶೀರ್ವಾದ ಗತಾನುಗತಿಕೋ ಲೋಕಃ ಕಿಮರ್ಥಂ ಪೂಜಯಿಷ್ಯತಿ ಎಂಬಂತೆ (ವ) 10. ಏನುವ (ಲ) 11. ಬಯಲಾಗಿ (ವ) ಲಯುಕ್ಕೊಳಗಾಗಿ (ಟತಹಲ) 12. ಬಯಸುವರಯ್ಯ (ಟ)

ಫಲವು [1]ಸಿತಾಳ[1]ಕ್ಕಲ್ಲದೆ? ಪತ್ರೆ ಪುಷ್ಪದಲ್ಲಿ ಪೂಜಿಸಿ [2]ಫಲವ[2] ಬೇಡುವರಯ್ಯ; ತಮಗೆಲ್ಲಿಯದೋ ಆ ಫಲವು [3]ಗಿಡು[3]ಗಳಿಗಲ್ಲದೆ? [4]ಸಯಿಧಾನ[4]ವನರ್ಪಿಸಿ ಪ್ರಸಾದದ ಫಲವ ಬೇಡುವರಯ್ಯ; ತಮಗೆಲ್ಲಿಯದೋ ಆ ಫಲವು ಹದಿನೆಂಟು ಧಾನ್ಯಕ್ಕಲ್ಲದೆ? ಲಿಂಗದೊಡವೆಯ [5]ಲಿಂಗಕ್ಕೆ[5] ಕೊಟ್ಟು ಫಲವ ಬೇಡುವ [6]ಸರ್ವಾನ್ಯಾಯಿಗಳ[6]ನೇನೆಂಬೆ ಗುಹೇಶ್ವರ,

120

ಹಾಲ ನೇಮವ ಹಿಡಿ[7]ದಾತ[7] ಬೆಕ್ಕಾಗಿ ಹುಟ್ಟು[8]ವ[8], ಕಡಲೆಯ ನೇಮವ ಹಿಡಿ[7]ದಾತ[7] ಕುದುರೆಯಾಗಿ ಹುಟ್ಟು[8]ವ[8], [9]ಅಗ್ಘಣಿ[9]ಯ ನೇಮವ ಹಿಡಿ[7]ದಾತ[7] ಕಪ್ಪೆಯಾಗಿ ಹುಟ್ಟು[8]ವ[8]. ಪುಷ್ಪದ ನೇಮವ ಹಿಡಿ[7]ದಾತ[7] ತುಂಬಿಯಾಗಿ ಹುಟ್ಟು[8]ವ[8]. [10]ಇವು ಷಟ್ಸ್ಥಲಕ್ಕೆ ಹೊಱಗು. ಭಕ್ತಿನಿಷ್ಠೆಯಿಲ್ಲದವರ ಕಂಡಡೆ ಮೆಚ್ಚ [A]ಗುಹೇಶ್ವರ[10A]

121

ಅಗ್ನಿಸ್ತಂಭದ ರಕ್ಷೆಯಿದ್ದು ಮನೆ ಬೆಂದಿತ್ತಯ್ಯ. ಬಲ ಮು[11]ರಿಯ[11] ಶಂಖವಿದ್ದು [12]ಪದ[12] ಹೋಯಿತ್ತಯ್ಯ. ಏಕಮು[13]ಖ[13]ರುದ್ರಾಕ್ಷಿಯಿದ್ದು [14]ವಿಘ್ನ[14]ವಾಯಿತ್ತಯ್ಯ. ಇವೆಲ್ಲವ [15]ಸಾಧಿಸಿದರೆ[15], ಏನೂ ಇಲ್ಲದಂತಾಯಿತ್ತು; [16]ಗುಹೇಶ್ವರ[16].

122

ಜಾ[17]ಲೆ[17]ಗಾಱನ ಕಾಲು ಮುಳ್ಳು ತಾಗಿ [18]ನೊಂದಿತ್ತೆಂ[18]ಬಂತೆ, [19]ಸೂನೆ[19]ಗಾಱನ ಮನೆಯಲ್ಲಿ [20]ಹೆಣ[20]ಹೋಗಿ ಅಳುವಂತೆ, ಕನ್ನಗಳ್ಳನ ಮನೆಯಲ್ಲಿ ಬಟ್ಟಲು ಹೋಗಿ ಮಱುಗುವಂತೆ, [21]ಠಕ್ಕನ[21] ಪೂಜೆಗೆ ಮೆಚ್ಚುವನೆ ನಮ್ಮ ಗುಹೇಶ್ವರನು.

---

1. ಸೆತಾಳ (ಚಿ) ಸೀತಾಳ (ಟತ) ಸಿತಳ (ಓಕ) 2. ವರವ (ಟ) 3. ತರು (ಟ) 4. ಸಯದಾನ (ಕತಲ) ಸಯಿದಾನ (ಜ) ಸುಯಧಾನ (ಟಡಿದ) 5. ಅಂಗಕ್ಕೆ (ಕ) 6. ಸರ್ವ ಅನ್ಯಾಯಿಗಳ (ಹ) ಸರ್ವ ಅನ್ಯಾಯಗಳ (ದತಲ) ಸರ್ವ ಅನ್ಯಾಯಿಗ (ಸ್ವ) ಸರ್ವ ಅಜ್ಞಾನಿಗಳ (ಟ) ಸರ್ವ ಅನ್ಯಾಯಗ (ಜಓ) 7. ದವರು (ಗ) 8. ವರು (ಗ) 9. ಅಗ್ಘವಣಿ (ಕತದಲ) 10. ಇಂತೀ ಚತುರ್ವಿದದೊಳಗಿಲ್ಲ, ಗುಹೇಶ್ವರ, ನಿಮ್ಮ ಶರಣರು (ಗ) A ನಮ್ಮ ಗುಹೇಶ್ವರ (ಸ್ವಟಚಜ) 11. ರಿ (ಚಿ) 12. ಫಲ (ಡಿ) ಪದವಿ (ಚಿ) 13. ಖದ (ವ) 14. ವಿಷ (ತ) 15. ಸಾಧಿಸಿ (ಟ) 16. ನಾನು ನಿಜವ ಸಾಧಿಸಿ ಬದುಕಿದೆ ಗುಹೇಶ್ವರ (ಟ) 17. ಲ (ಚಿ) ತಿ(ಹ) 18. ನೊಂದೆನೆಂ (ಟ) 19. ಸೂನೆ (ತ) 20. ಹೆಳ (ಕ) 21. ರಕ್ಕಸನ (ಟ)

123

[1]ಸಾಸವೆ[1]ಯಷ್ಟು ಸುಖಕ್ಕೆ ಸಾಗರದಷ್ಟು ದುಃಖ ನೋಡಾ. ಘಳಿಗೆಯ ಬೇಟವ ಮಾಡಿಹೆನೆಂಬ ಪರಿಯ ನೋಡಾ! ತನ್ನನಿಕ್ಕಿ ನಿಧಾನವ [2]ಸಾಧಿಸಿಹೆನೆಂದಡೆ[2] ಬಿನ್ನಾಣ ತಪ್ಪಿತ್ತು ಗುಹೇಶ್ವರ.

124

ಜವನ ಕದ್ದ ಕಳ್ಳ ಅಗಲಿ ಮಿಕ್ಕು ಹೋದಡೆ, [3]ಅಗಲಕ್ಕೆ[3] ಹಬ್ಬಿತ್ತು [4]ಅಲ್ಲಲ್ಲಿ[4], ನೋಡಲು ಶರಣಸಂಗವನಜಿಸುವರೆಲ್ಲಾ! [5]ಅಲ್ಲಲ್ಲಿ ನೋಡಿರೇ[5], ಸಾಧಕರೆಲ್ಲರು ಸಾಧಿಸಹೋಗಿ, [6]ಅಭೇದ್ಯ[6]ವನಱಿಯದೆ ಕೆಟ್ಟ[7]ರು[7] ಗುಹೇಶ್ವರ.

125

ಭವವುಳ್ಳನ್ನಕ್ಕರ ಥಾವತಿ ಮಾಣದು, ಶರೀರ ಉಳ್ಳನ್ನಕ್ಕರ ಅವಸ್ಥೆ ಮಾಣದು. ಗುಹೇಶ್ವರನೆಂಬ [8]ನೆನಹು[8]ಳ್ಳನ್ನಕ್ಕರ ಲಿಂಗವೆಂಬುದ ಬಿಡಲಾಗದು.

126

ಮಜ್ಜನಕ್ಕೆಱೆ[9]ವರೆಲ್ಲಾ ಇದ್ದಲ್ಲಿ[9] ಫಲವೇನು? [10]ಮುದ್ರೆ[10] ಧಾರಿಗಳಪ್ಪರಯ್ಯ! ಲಿಂಗದಲ್ಲಿ ನಿಷ್ಠೆಯಿಲ್ಲ, ಜಂಗಮದಲ್ಲಿ ಪ್ರೇಮಿಗಳಲ್ಲ! [11]ವೇಷಲಾಂಛನ[11]ಧಾರಿಗಳಪ್ಪರಯ್ಯ! ನೋಡಿ ಮಾಡುವ ಭಕ್ತಿ ಸಜ್ಜನಸಾರಾಯವಲ್ಲ. ಗುಹೇಶ್ವರ ಮೆಚ್ಚನಯ್ಯ.

127

ಕೊಟ್ಟ ಕುದುರೆಯನೇಱಲಱಿಯದೆ, ಮತ್ತೊಂದು ಕುದುರೆಯ ಬಯಸುವ[A]ರು[A] ವೀರರೂ ಅಲ್ಲ, ಧೀರರೂ ಅಲ್ಲ. ಇದು ಕಾರಣ [12]ನೆಱೆ[12] [B]ಮೂಱು ಲೋಕ[13]ವೆಲ್ಲವು[13][B] ಹಲ್ಲಣವ ಹೊತ್ತು[14]ಕೊಂಡು[14] [15]ಬಳಲು[15]ತ್ತೈದಾರೆ. [16]ಗುಹೇಶ್ವರನೆಂಬ ಲಿಂಗವನವರೆತ್ತ ಬಲ್ಲರೋ![16]

---

1. ಸಸಾವೆ (ಸ್ವ) ಸಾಸುವೆ (ಪ್ರಚಿ) 2. ಸಾಧಿಸುವನ್ನಕ್ಕರ (ಲಿ) ಸಾಧಿಸಿಹೆನೆಂಬ (ಪ್ರ) 3. ಗಗನ ಅಗಲಕ್ಕೆ (ಪ್ರ) 4. ಅಲ್ಲಿ ಅಲ್ಲಿ (ಟ) ಅಲ್ಲಲ್ಲಿಗೆ (ಪ್ರ) 5. ಅಲ್ಲಲ್ಲಿಗೆ ನೋಡಲು (ಪ್ರ) ಅಲ್ಲಲ್ಲಿಗೆ ನೋಡಿರೆ (ಡಿತಲ) 6. ಅ ಭೇದ (ಟ) 7. ರಲ್ಲಾ (ಟ) 8. ಲಿಂಗವು (ಕಚದಬ) 9. ದವರೆಲ್ಲಾ ಇದ್ದು (ಟ) 10. ಮುದ್ರ (ಟ) 11. ವೇಷ (ಹತಲಡಿಟ) A ರೆ ಅಂತವರು (ಏ) 12. × (ಶೂ) B ಮೂಲೋಕದವರೆಲ್ಲ (ಏ) 13. ವೆಲ್ಲಾ (ಶೂತ) 14. × (ಕಟ) 15. ತೊಳಲು (ವ) 16. ಗುಹೇಶ್ವರ (ಶೂ)

128

ಜೀವವಿಲ್ಲದ ಹೆಣನ ಹಿಡಿದಾಡುವರಯ್ಯ. ಪ್ರತಿಯಿಲ್ಲ[1]ದ[1] ಪ್ರತಿಗೆ ಪ್ರತಿಯ ಮಾಡುವರಯ್ಯ. ಶಿರವಿಲ್ಲದ ಮುಂಡಕ್ಕೆ ಸೇಸೆಯನಿಕ್ಕುವರು ಗುಹೇ[2]ಶ್ವರ.[2]

129

ಆದ್ಯರಲ್ಲ, ವೇದ್ಯರಲ್ಲ, ಸಾಧ್ಯರಲ್ಲದ ಹಿರಿಯ[3]ರ[3] ನೋಡಾ! ತನು ವಿಕಾರ, ಮನವಿಕಾರ, ಇಂದ್ರಿಯವಿಕಾರದ ಹಿರಿಯರ ನೋಡಾ! ಶಿವಚಿಂತೆ ಶಿವ ಜ್ಞಾನಿಗಳ ಕಂಡರೆ [4]ಆಳವಾಡಿ[4] ನುಡಿವರು [5]ಗು[5]ಹೇಶ್ವರನನಱಿಯದ ಕರ್ಮಿಗ[6]ಳಯ್ಯ.[6]

130

[7]ಅ[7]ಳವಱಿಯದ ಭಾಷೆ, ಬಹು[D]ಕುಳ[D]ವಾದ ನುಡಿ; ಇಂತೆರಡಱ ನುಡಿ ಹುಸಿಯಯ್ಯ. ಬಹುಭಾಷಿತರು, ಸುಭಾಷಿತವರ್ಜಿತರು, ಶರಣಸತಿ ಲಿಂಗ ಪತಿ[8]ಯೆಂಬರು[8]; ಹುಸಿಯಯ್ಯ! ಇಂತಪ್ಪವರ ಕಂಡು [9]ನಾಚಿದೆನಯ್ಯ[9] ಗುಹೇಶ್ವರ.

131

ಅಮರಾವತಿಯ ಪಟ್ಟಣದೊಳಗೆ ದೇವೇಂದ್ರನಾಳುವ [10]ನಂದನ[10]ವಯ್ಯ. ಅತ್ತ ಸಾರೆಲೆ [11]ಕಾಮು[11], ಮೋಹವೆ ನಿನಗೆ? [12]ಲೋಕಾದಿ[12]ಲೋಕವನೆಲ್ಲವ ಮರುಳು ಮಾಡಿದೆ; ಕಾಮ, ಗುಹೇಶ್ವರಲಿಂಗವನಱಿ[13]ಭೋ[13].

132

ದೇಶ ಗುಱಿಯಾಗಿ ಲಯವಾಗಿ ಹೋದವರ ಕಂಡೆ, ತಮಂಥ ಗುಱಿ ಯಾಗಿ ಲಯವಾಗಿ ಹೋದವರ ಕಂಡೆ, ಕಾಮ ಗುಱಿಯಾಗಿ ಬೆಂದು ಹೋದ ವರ ಕಂಡೆ; ನೀ ಗುಱಿಯಾಗಿ [14]ಹೋದವರ[14]ನಾರನೂ [15]ಕಾಣೆ[15] ಗುಹೇಶ್ವರ.

133

ಆ ಮಾತು ಈ ಮಾತು [16]ಹೋ[16]ಮಾತೆಲ್ಲವು ನೆರೆದುಹೋಯಿತ್ತಲ್ಲಾ! [17]ಭಕ್ತಿ ನೀರಲ್ಲಿ ನೆರೆದು ಜಲವ ಕೂಡಿ ಹೋಯಿತ್ತೆಲ್ಲಾ[17]! ಸಾವನ್ನಕ್ಕರ [18]ಸರ[18]ವುಂಟೆ ಗುಹೇಶ್ವರ?

---

1. ದ ಅ(ಟ) 2. ಶ್ವರ (ವ) 3. ರು (ಓಚಿಚ) 4. ಹಳಿದು ಆಳವಾಡಿ (ಚಿ) 5. ಮ (ಚ) 6. ಳು (ಟಲಿ) 7. ಆ (ಲ) D × (ಡಿ) 8. ಎಂದೆಂಬರು (ಟ) 9. ನಾಚುವೆನಯ್ಯ (ಡಿಟತಲ) 10. ನಂದನವನ (ಕಟತದಲಓಚಿಸ್ವ) 11. ಕಾಮಯ್ಯ (ಟ) 12. ಲೋಕಾ (ಟ) 13. ಯೋ (ಟಡಿಕದ) 14. ಲಯವಾಗಿ ಹೋದವರ (ತಟ) 15. ಕಾಣಾ (ಪ್ರ) ಕಾಣೆನು ಕಾಣಾ (ಟತ) 16. ವೋ (ವ) 17. × (ವ) 18. ಸರಸ (ವ) ಸರಿ (ತ)

134

ಅಗ್ನಿಗೆ ತಂಪುಂಟೆ? ವಿಷಕ್ಕೆ ರುಚಿಯುಂಟೆ ಹೇಳಾ? ಕಂಗಳಿಗೆ ಮಱೆಯುಂಟೆ [1]ಹೇಳೈ[1] ಲಿಂಗವೆ? ದಾಳಿಕಾಱಂಗೆ ಧರ್ಮವುಂಟೆ? ಕಂಗಳಿಗೆ [2]ಕರುಳುಂಟೆ?[2] ಗುಹೇಶ್ವರ, ನಿಮ್ಮ ಶರಣರು ಮೂಱುಲೋಕವಱಿಯೆ ನಿಶ್ಚಟರಯ್ಯ.

135

ಲಿಂಗಭಕ್ತನೆಂದು ಜಗವೆಲ್ಲಾ ಸಾಱುತ್ತಿಪ್ಪರು; ಲಿಂಗಭಕ್ತನ ಇಂಬಾವುದೆಂದಱಿಯರು. ಲಿಂಗಭಕ್ತ ಹಮ್ಮು ಬಿಮ್ಮಿನವನೇ? ಲಿಂಗಭಕ್ತ ಸೀಮೆಯಾದವನೆ? ಪ್ರಾಣವಿಲ್ಲದ [3]ರೂಹು[3], ಒಡಲಿಲ್ಲದ ಜಂಗಮ, ಉಳಿದವೆಲ್ಲಾ ಸಟೆಯೆಂಬೆನು, ಗುಹೇಶ್ವರ.

136

ಭಕ್ತ ಭಕ್ತ[4]ನೆಂಬರು![4] ಪೃಥ್ವಿಯ ಪೂರ್ವಾಶ್ರಯವ ಕಳೆಯ[5]ದನ್ನಕ್ಕ[5], ಅಪ್ಪುವಿನ ಪೂರ್ವಾಶ್ರಯವ ಕಳೆಯ[5]ದನ್ನಕ್ಕ[5], ತೇಜದ ಪೂವಾಶ್ರಯವ ಕಳೆಯ[5]ದನ್ನಕ್ಕ,[5] ವಾಯುವಿನ ಪೂರ್ವಾಶ್ರಯವ ಕಳೆಯ[5]ದನ್ನಕ್ಕ[5] ಆಕಾಶದ ಪೂರ್ವಾಶ್ರಯವ ಕಳೆಯ[5]ದನ್ನಕ್ಕ[5], [6]ಸೋಮಸೂರ್ಯರ ಪೂರ್ವಾಶ್ರಯವ ಕಳೆಯ[A]ದನ್ನಕ್ಕ[A], ಆತ್ಮನ ಪೂರ್ವಾಶ್ರಯವ[6] ಕಳೆಯ[5]ದನ್ನಕ್ಕ[5], ಭಕ್ತರೆಂದು ಲಿಂಗವ ಪೂಜಿಸುವವರ ಕಂಡು ನಾನು ಬೆಱಗಾದೆನು ಗುಹೇಶ್ವರ.

137

ಅನ್ಯರಜವ [7]ಸೋಂಕದೆ[7]; ತನ್ನ ರಜವ [8]ಬಾಧಿಸದೆ,[8] [9]ರವಿಯ ಬೆಳಸ [B]ಬ[B]ಳಸದೆ,[9] ಲಿಂಗದ [10]ಬೆಳಸ[10] ತಂದು ಜಂಗಮದಲ್ಲಿ ಸವೆಸುತ್ತಿ[11]ಪ್ಪ[11] ಲಿಂಗ ಭಕ್ತ. ಆ ಭಕ್ತನಲ್ಲಿ [12]ಗುಹೇಶ್ವರ[12]ಲಿಂಗವಿಪ್ಪನು.

138

ತ್ರಿವಿಧದ [13]ನಿತ್ಯವ[13], ತ್ರಿವಿಧದ [14]ಅನಿತ್ಯವ[14] ಬಲ್ಲವರಾರೋ?

---

1. ಹೇಳಾ (ಡಿಟ) 2. ಕರುವುಂಟೆ (ಟ) 3. ರೂಪು (ಹಟತಲ) 4. ರೆಂದೆಂಬರು (ಟ) 5. ಲಱಿಯದನ್ನಕ್ಕರ (ಹಡಿತಲ) ದನ್ನಕ್ಕರ (ಟಶೂ) 6. ಸೋಮಸೂರ್ಯಾತ್ಮನ ಪೂರ್ವಾಶ್ರಯವ (ಕಚದ) A ಲಱಿಯದನ್ನಕ್ಕರ (ಡಿಹತಲ) 7. ಬೆರಸದೆ (ಶೂ) 8. ಭಾವಿಸದೆ (ಶೂ) 9. × (ಜ) B ಬೆ (ಟ) 10. ಬೆಳೆದ ಬೆಳಸ (ಲಿ) 11. ಪ್ಪನು(ಲಿ) 12. ಆ ಗುಹೇಶ್ವರ (ಕಚ) 13. ಅನಿತ್ಯವ (ಸ್ವ) 14. ನಿತ್ಯವ (ಸ್ವ).

ತ್ರಿವಿಧಕ್ಕೆ ತ್ರಿವಿಧವನಿತ್ತು ತ್ರಿವಿಧಪ್ರಸಾದವ [1]ಕೊಳಬಲ್ಲಡೆ ಆತನ ತ್ರಿವಿಧ–ನಾಥನೆಂಬೆ ;[1] ಆತನ ವೀರನೆಂಬೆ, ಆತನ ಧೀರನೆಂಬೆ, ಆತನ ಗುಹೇಶ್ವರಲಿಂಗದಲ್ಲಿ [2]ಅಚ್ಚಪ್ರಸಾದಿ[2]ಯೆಂಬೆ.

139

ಪ್ರಣವಮಂತ್ರವ ಕರ್ಣದಲ್ಲಿ ಹೇಳಿ, ಶ್ರೀಗುರು ಶಿಷ್ಯನ ಅಂಗದ ಮೇಲೆ ಲಿಂಗಪ್ರತಿಷ್ಠೆಯ ಮಾಡಿದ ಬಳಿಕ ಪ್ರಾಣದಲ್ಲಿ ಲಿಂಗವಿಪ್ಪುದೆಂಬ ವ್ರತಗೇಡಿಗಳ ಮಾತ ಕೇಳಲಾಗದು. ಒಳಗಿಪ್ಪನೇ ಲಿಂಗದೇವನು [3]ಮಲಮೂತ್ರ ಮಾಂಸದ ಹೇಸಿಕೆಯೊಳಗೆ[3] ? ಅಲ್ಲಿ ಪ್ರಾಣವಿಪ್ಪುದಲ್ಲದೆ ಲಿಂಗವಿಪ್ಪುದೆ ? ಆ ಪ್ರಾಣ[4]ವ[4] ತಂದು ತನ್ನ ಇಷ್ಟ ಲಿಂಗದಲ್ಲಿರಿಸಿ ನೆರೆಯ ಬಲ್ಲಡೆ, [5]ಆತನೆ ಪ್ರಾಣಲಿಂಗ–ಸಂಬಂಧಿ ;[5] ಅ[6]ಲ್ಲ[6]ದವರ ಮೆಚ್ಚುವನೆ ನಮ್ಮ ಗುಹೇಶ್ವರಲಿಂಗವು ?

140

ಕಾಯದೊಳಗಣ ಜೀವವ [7]ಮೀಱಿ[7] ಹೋಹ ಕಳ್ಳನ ಸಂಗ ಬೇಡ, ನಿಮ್ಮ ನಿಮ್ಮ [8]ವಸ್ತುವ[8] ಸುಯಿಧಾನವ ಮಾಡಿಕೊಳ್ಳಿ ; ಗುಹೇಶ್ವರನೆಂಬ ಕಳ್ಳನ ಕೊಂದಡೆ ಅಳುವರಾರೂ ಇಲ್ಲ.

141

ಅಕ್ಕಟಾ ಜೀವನ ತ್ರಿವಿಧವೇ, ಮೂಱಕ್ಕೆ ಮುಟ್ಟದೆ ಹೋದೆಯಲ್ಲಾ! ಬಿಂದುವಿನ ಕೊಡನ ಹೊತ್ತುಕೊಂಡು ಅಂದ[9]ಚಂ[9]ದಗೆಟ್ಟು ಆಡುವರಯ್ಯ! ಗುಹೇಶ್ವರನಿರಾಳವೆ, ಐದರಿಂದ ಕೆಟ್ಟಿತ್ತು ಮೂಱುಲೋಕ.

142

ಅಷ್ಟದಳಕಮಲದ [10]ಮೇಲಿಪ್ಪ[10] ನಿಶ್ಶೂನ್ಯನ [11]ಮರ್ಮ[11]ವನಱಿಯ[12]ದೆ[12] ಪ್ರಾಣಲಿಂಗ[13]ವೆಂದೆಂಬರು ಸಂತೆಯ ಸುದ್ದಿಯ ವಂಚಕರು.[13] ಅಂಗದಾಪ್ಯಾಯನಕ್ಕೆ ಲಿಂಗವನಱಿಸುವ ಭಂಗಿತರ[14]ನೇನೆಂಬೆ[14] ಗುಹೇಶ್ವರ.

---

1. ಕೊಳಬಲ್ಲಾತನೇ ತ್ರಿವಿಧಪ್ರಸಾದಿಯೆಂಬೆ (ಲಿ) 2. ಪ್ರಸಾದಿ (ಶೂ) ಮಹಾಪ್ರಸಾದಿ (ಲಿ) 3. ಮಲಮೂತ್ರದ ಹೇಸಿಕೆಯ ಮಾಂಸದ ನುಡುವೆ (ಟಡಿತಲ) 4. ನ (ಕಡಿಚಟತಲ) 5. ಆತನ ಪ್ರಾಲಿಂಗಸಂಬಂಧಿಯೆಂಬೆ (ಡಿಟ) ಆತನೆ ಪ್ರಾಣ ಲಿಂಗ ಸಂಬಂಧಿಯೆಂಬೆ (ತಲ) 6. ದಲ್ಲ (ಲ) 7. ಮಾಱಿ (ಲಿ) 8. ವಸ್ತು (ಟ) 9. ಛಂ (ಲ) 10. × (ವ) 11. ವರ್ಮ (ಕಡಿದಟತಲ) ವರ್ನ (ವ) 12. ದ ಅಂಧಕರ ನೋಡಾ (ವ) 13. ವೆಂಬ ಮಾತಿನ ಬೇಹಾರ ಸಂದೇಹ ಶುದ್ಧಿಯ ಪಸರ ವಂಚಕರ ನೋಡಾ (ವ) ವೆಂದೆಂಬರು ಸಂತೆಸುದ್ದಿವಂಚಕರು (ಟ) 14. ನೋಡಾ (ವ)

143

ಲಿಂಗಾರ್ಚನೆಯಿಲ್ಲದ ಮುನ್ನ ಸಿಂಗಿಯನಾರೋಗಿಸಿದಿರಿ, ಸಂಜೆ ಸಮಾಧಿಗಳಿಲ್ಲದ ಮುನ್ನ ಉಂಡಿರಿ ಚೆನ್ನನ ಮನೆಯಲ್ಲಿ. ಚಿತ್ರಗುಪ್ತರಱಿಯದ ಮುನ್ನ ಎತ್ತಿದಿರಿ ಕಾಂಚಿಯ ಪುರವ, ಬೈಚಿಟ್ಟರಿ [1]ಕೈಲಾಸವ[1] ನಿಮ್ಮ [2]ಚಿಕ್ಕುಟ ಉದರದಲ್ಲಿ[2]. ಈರೇಳು [3]ಭುವನಂಗಳೆಲ್ಲವು[3] ನಿಮ್ಮ ರೋಮಕೂಪದಲ್ಲಡಗಿದ[4]ವು[4]. ಪ್ರಾಣಾಪಾನವ್ಯಾನೋದಾನಸಮಾನ[5]ರಹಿತ[5]ಗುಹೇಶ್ವ[6]ರ[6].

144

ಕಂಗಳಾಲಿಯ ಕರಿಯ ನಾಳದಲ್ಲಿ ಈರೇಳು ಭುವನಂಗಳಡಗಿದವು. ನಾಟಕ ನಾಟಕ[7]ವ[7] ನಟ[8]ಸುತ್ತ[8] [9]ಆಡಿಸುವ[9] ಸೂತ್ರದ [10]ಪರಿ[10]; ಗುಹೇಶ್ವರ [11]ಲಿಂಗ[11] ನಿರಾಳಚೈತನ್ಯ.

145

ಮರ[12]ನೊ[12]ಳಗಣ ಪತ್ರಫಲಂಗಳು ಮರಕಾಲವಶದಲ್ಲಿ ತೋಱುವಂತೆ, ಹರನೊಳಗಣ [13]ಪ್ರಕೃತಿಸ್ವಭಾವಂಗಳು[13] [14]ಹರಭಾವದಿಚ್ಛೆಗೆ[14] ತೋರುವವು. ಲೀಲೆಯಾದಡುಮಾಪತಿ, ಲೀಲೆ [15]ತಪ್ಪಿದಡೆ[15] ಸ್ವಯಂಭು, [16]ಗುಹೇಶ್ವರ.[16]

146

ಓಡಿ[17]ನೊಳಗು[17]ಂಟೆ ಕನ್ನಡಿಯ ನೋಟ ? ಮರುಳಿನ ಕೂಟ, ವಿಪರೀತ ಚರಿತ್ರ! ನೋಟದ ಸುಖ [18]ತಾಗಿ[18] ಕೋಟಲೆಗೊಂ[19]ಡೆ[19]ನು. ಗುಹೇಶ್ವರ [20]ನೊಬ್ಬನೆ[20] ಅಚಳ; ಉಳಿದವರೆಲ್ಲರೂ ಸೂತಕಿಗಳು.

147

ಎಸೆಯದಿರು ಎಸೆಯದಿರು ; ಕಾಮ, ನಿನ್ನ ಬಾಣ ಹುಸಿಯ[21]ಲೇಕೋ ?[21] ಕಾಮಕ್ರೋಧ [22]ಲೋಭ ಮೋಹ[22] ಮದ ಮತ್ಸರ [23]ಇದು ಸಾಲದೆ[23] ನಿನಗೆ?

---

1. ಕೈಲಾಸದಲ್ಲಿ (ಡಿಹಸ್ವಟತ) 2. ಚಿಕ್ಕುಟ್ಟುಧರದಲ್ಲಿ (ಸ್ವ) ಚಿಕ್ಕಟುದರದಲ್ಲಿ (ಹ) ಚಿಕ್ಕುಟು ಉದರದಲ್ಲಿ (ಕಟದ) ಚಿಕ್ಕುಟಾಧಾರದಲ್ಲಿ (ಚಿ) ಚಿಕ್ಕುಟವುದರದಲ್ಲಿ(ಓ) ಚಿಕ್ಕುಟುಧರದಲ್ಲಿ (ಡಿಲ) 3. ಭುವನಂಗಳಡಿಗಿದಲ್ಲಿವು (ಚ) ಭುವನಂಗಳೆಲ್ಲವು (ಕದ) ಭುವನವೆಲ್ಲವು (ತಲ) 4. × (ಚ) 5. × (ಕಚಟದ) 6. ರಯ್ಯ (ಕದ) 7. × (ಶೂ) 8. ಸಿತ್ತು (ಶೂ) 9. ಆಡುವ (ವಶೂ) 10. ಪರಿಯ ನೋಡಾ (ಶೂ) 11. × (ಶೂ) 12. ದೊ (ಗಲಿದ) 13. ಲೀಲಾ ಪ್ರಕೃತಿಸ್ವಭಾವಂಗಳು (ಲಿ) ಲೀಲಾ ಪ್ರಕೃತಿಸ್ವಭಾವ (ಗ) 14. ಹರನ ಲೀಲಾವಶದಲ್ಲಿ (ಗಲಿ) 15. ನಿಂದಡೆ (ಗಲಿ) 16. ನಮ್ಮ ಗುಹೇಶ್ವರಲಿಂಗವು (ಗಲಿ) 17. ನಲುಂ (ಕದಟತಲ) 18. ಕಾಗಿ (ಡಿಲ) 19. ಡ (ಟ) 20. ನೆಂಬ ಲಿಂಗವು ಒಬ್ಬನೆ (ಟ) 21. ಲದೇಕೋ (ಟ) 22. × (ಡಿಲ) 23. ಇವು ಸಾಲದೆ (ಚಟ).

ಗುಹೇಶ್ವರಲಿಂಗದ ವಿರಹದಲ್ಲಿ ಬೆಂದವರ ಮರಳಿ ಸುಡಲುಂಟೆ ಮರುಳು ಕಾಮಾ !

148

ಸತಿ ಭಕ್ತೆಯಾದಡೆ ಹೊಲೆಗಂಜಲಾಗದು, ಪತಿ ಭಕ್ತನಾದಡೆ ಕುಲ ಕಂಜಲಾಗದು. ಸತಿಪತಿಯೆಂಬ ಅಂಗಸುಖಹಿಂಗಿ, ಲಿಂಗವೆ ಪತಿಯಾದ ಬಳಿಕ, ಸತಿಗೆ ಪತಿಯುಂಟೆ, ಪತಿಗೆ ಸತಿಯುಂಟೆ ? ಪಾಲುಂಡು ಮೇಲುಂಬರೆ ಗುಹೇಶ್ವರ ?

149

ಉರಿಗೆ ಉರಿಯ[1]ನೆ[1] ತೋಱುವೆನು. ಅಮೃತದ ಕಳೆಯಲ್ಲಿ ನಿಲಿಸುವೆನು. [2]ನಾನು ಬ್ರಹ್ಮಸ್ಥಾನದಲ್ಲಿ, ಗುಹೇಶ್ವರ, ನಿರಂತರವಾಗಿದ್ದೆನಯ್ಯ.[2]

150

[3]ಅ[3]ದ್ಭುತವೆಂಬ ಪಿಶಾಚಿ ಮೂಱು ಲೋಕವನವಗ್ರಹಿಸಿತ್ತಯ್ಯ, [4]ಅದ್ಭುತ[4]ದೊಳಗೊಂದು ಗ್ರಹ ನಿರಂತರ ನಲಿದಾಡು[5]ತ್ತಿದ್ದಿತ್ತಯ್ಯ![5] ವಜ್ರ ಯೋ[6]ಗಿ[6]ಖಗರಂಧ್ರಪುರದಲ್ಲಿ ಗುಹೇಶ್ವರಲಿಂಗವು ತಾನೆ ನೋಡಾ !

151

ಅನಲನಾರಣ್ಯದೊಳಗೆದ್ದಲ್ಲಿ [7]ದೂ(=ಧು ?)ರದೆಡೆ[7]ಯಲಾರನೂ ಕಾಣೆ; ಸಂಗ್ರಾಮಧೀರರೆಲ್ಲರೂ ನೆಲೆಗೆಟ್ಟರಾಗಿ. ಮಾಯಾಮಂಜಿನ ಕೋಟೆಗೆ ರಂಜನೆಯ ಕೊತ್ತಳ, [8]ಅಂ[8]ಜನೆಯ [9]ಕಟ್ಟಳೆ[9]. ಗುಹೇಶ್ವರನ ಶರಣ ಐಕ್ಯಸ್ಥಲವ ಮೆಟ್ಟಲೊಡನೆ ಸರ್ವವು ಸಾಧ್ಯವಾಯಿತ್ತು.

152

ಪಂಚೇಂದ್ರಿಯ ಸಪ್ತಧಾತುವನತಿಗಳೆದಲ್ಲಿ [10]ಘ[10]ನವೇನೋ ? ಕಾಮ ಕ್ರೋಧಲೋಭ ಮೋಹ [11]ಮದ ಮತ್ಸರ[11] ವಿಷಯವನತಿಗಳೆದಲ್ಲಿ ಫಲ ವೇನೋ ? ಇವೆಲ್ಲವ ಕೊಂದ ಪಾಪ ನಿಮ್ಮ [12]ತಾಗುವುದು[12] ಗುಹೇಶ್ವರ.

---

1. × (ಟ) 2. ನಾನು ನಿರಂತರವಾಗಿ ಬ್ರಹ್ಮಸ್ಥಾನದಲ್ಲಿ ಗೊಹೇಶ್ವರನಾಗಿದ್ದೆನಯ್ಯ (ಟ) 3. ಆ (ಲ) 4. ಆ ಭೂತ (ಕಚದ) ಆ ಅದ್ಭೂತ (ತಲ) ಆ ಅದ್ಭುತ (ಡಿ) 5. ತ್ತಿದ್ದಿತ್ತು (ಕಚದ) ತಿದ್ದಿತಯ್ಯ (ವ) ತಿದ್ದುತ್ತು (ಲ) 6. ನಿ [=ಗಿ ?] (ಟದ) ನಿ (ವತ) ಗಿ (ಲ) 7. ದೂರದೆಡೆ (ಚ) ದುರದೆಡೆ (ಲಸ್ವಕಓಡಿದ) ಧುರದಡಿ (ಟ) ಮರದೆಡೆ (ಹತಚ) 8. ರಂ (ಡಿಲ) 9. ಕಟ್ಟಳೆಯ (ಟ) ಕೊಟ್ಟಳೆ (ಚ) 10. ಘ (ಡಿಹ) 11. ಮದಮತ್ಸರದ (ವ) × (ಟ) 12. ತಾಗದೆ (ವ) ತಾಗದು (ಚ).

153

ಲಿಂಗ ಒಳಗೋ ಹೊಱಗೋ? ಬಲ್ಲಡೆ ನೀವು ಹೇಳಿರೆ? ಲಿಂಗ ಎಡನೋ ಬಲನೋ? ಬಲ್ಲಡೆ ನೀವು ಹೇಳಿರೆ? ಲಿಂಗ ಮುಂದೋ ಹಿಂದೋ? ಬಲ್ಲಡೆ ನೀವು ಹೇಳಿರೆ? ಲಿಂಗ ಸ್ಥೂಲವೋ ಸೂಕ್ಷ್ಮವೋ? ಬಲ್ಲಡೆ ನೀವು ಹೇಳಿರೆ? ಲಿಂಗ ಪ್ರಾಣವೋ, ಪ್ರಾಣ ಲಿಂಗವೋ? ಬಲ್ಲಡೆ ನೀವು ಹೇಳಿರೆ ಗುಹೇಶ್ವರ[1]ನ[1].

154

ತನು ನಿಮ್ಮ ಪೂಜಿಸುವ ಕೃಪೆಗೆ ಸಂದುದು, ಮನ ನಿಮ್ಮ ನೆನೆವ ಧ್ಯಾನಕ್ಕೆ ಸಂದುದು, ಪ್ರಾಣ ನಿಮ್ಮ ರತಿಸುಖಕ್ಕೆ ಸಂದುದು. [2]ಇಂತು[2] ತನು-ಮನ-ಪ್ರಾಣ ನಿಮಗೆ ಸಂದಿಪ್ಪ ನಿಸ್ಸಂಗಿಯಾದ ನಿಶ್ಚಟ [3]ನಿಜ[3]ಲಿಂಗೈಕ್ಯ ಕಾಣಾ, ಗುಹೇಶ್ವರ.

155

ತನುವಿಂಗೆ ತನುವಾಗಿ, ಮನಕ್ಕೆ ಮನವಾಗಿ, ಜೀವಕ್ಕೆ ಜೀವವಾಗಿ ಇದ್ದುದನಾರು ಬಲ್ಲರೋ? ಅದು ದೂರವೆಂದು, ಸಮೀಪವೆಂದು, ಮಹಂತ ಗುಹೇಶ್ವರನೊಳಗೆಂದು; ಹೊಱಗೆಂದು, ಬಱುಸೂಱೆವೋದರು.

156

ಖೇಚರ ಪವನನಂತೆ ಜಾತಿಯೋಗಿಯ ನಿಲವು. ಮಾತಿನೊಳು [4]ಧಾತು[4] ನುಂಗಿ ಉಗುಳ[5]ದಿ[5]ನ್ನೆಂತೋ! ಭೂಚಕ್ರವಳಯವನು ಆಚಾರ್ಯ [6]ರಚಿಸಿದ[6]. ಗ್ರಾಮವೆಲ್ಲವ [7]ಸುಟ್ಟು[7] ನೇಮ ನೆಲಗತವಾಯಿತ್ತು. [8]ನೇಮ ನಾಮವ[8] ನುಂಗಿ, ಗ್ರಾಮ ಪ್ರಭುವನೆ ನುಂಗಿ, ಗುಹೇಶ್ವರ ಗುಹೇಶ್ವರನೆನುತ ನಿರ್ವಯಲಾಯಿತ್ತು.

ಪ್ರಸಾದಿಸ್ಥಲ

157

ಬೇಡದ ಮುನ್ನ ಮಾಡಬಲ್ಲಡೆ [9]ಭಕ್ತ[9]! ಬೇಡುವನೆ ಲಿಂಗ ಜಂಗಮ? ಬೇಡುವರಿಗೆಯೂ, ಬೇಡಿಸಿಕೊಂಬವರಿಗೆಯೂ ಪ್ರಸಾದವಿಲ್ಲ ಗುಹೇಶ್ವರ.

158

ಲಿಂಗ ಜಂಗಮ ಒಂದೇ ಎಂದು ಕಂಡೂ[10]ಳಲು[10]ಗೊಂಡಿರಲ್ಲಾ! ಮೂಱೆಡೆಯಲ್ಲಿ ಮುಟ್ಟಿತ್ತು [11]ತ್ರಿವಿ[11]ಧಾಚಾರ. ಲಿಂಗವೊಂದೆಡೆಯಲ್ಲಿ,

---

1. ಲಿಂಗವನು (ಟಡಿತಲ) 2. ಈ (ಚದ) 3. × (ಹಚಿತಟಲ) 4. ಧಾತುವ (ಟ) ಧಾತ (ತ) 5. ನಿ (ಕ) 6. ರಚಿಸಿ (ಶೂ) 7. ಸುಟ್ಟ (ಟ) 8. ನಾಮನೇಮವ (ಶೂ) 9. ಭಕ್ತಿ (ಚರ) 10. ಳ (ಡಿಟಹ) 11. ತ್ರಿ (ಕ)

ಜಂಗಮವೊಂದೆಡೆಯಲ್ಲಿ, ಪ್ರಸಾದವೊಂದೆಡೆಯಲ್ಲಿ. ಇಂತು ಎಲ್ಲಿಯ ಪ್ರಸಾದವೋ ಗುಹೇಶ್ವರ.

159

ಹಸಿವಾಯಿತ್ತೆಂದು ಹುಸಿದು ಮಜ್ಜನಕ್ಕೆಱೆವರಯ್ಯ, ತೃಷೆಯಾಯಿತ್ತೆಂದು ಅರ್ಪಿತವ ಮಾಡುವರಯ್ಯ, ಇದೆಂತೋ ಭಕ್ತಿಸಂಬಂಧ? ಇದೆಂತೋ ಶರಣಸಂಬಂಧ? ಇದೆಂತೋ ಲಿಂಗಸಂಬಂಧ? ಕಾರಣವಿಲ್ಲದ ಭಕ್ತಿಯ ಕಂಡಡೆ [1]ಹೋಗ[1]ನೂಕುವನು ಗುಹೇಶ್ವರ.

160

ಪ್ರಾಣವ ಮಾಱುವವಂಗೆ ಪ್ರಾಣಲಿಂಗವೆಲ್ಲಿಯದೋ? ಇಷ್ಟಲಿಂಗ ಪೂಜಕರೆಲ್ಲಾ ನೇಮವ [2]ಮಾಡುತ್ತಿಪ್ಪರು.[2] [3]ಸೂ[3]ನೆಗಾಱಂಗೆ ಪ್ರಸಾದವೆಲ್ಲಿಯದೋ ಗುಹೇಶ್ವರ.

161

ಒಳ[4]ಗ[4] ತೊಳೆಯಲಱಿಯದೆ [A]ಹೊಱಗ[A] ತೊಳೆದು ಕುಡಿವುತ್ತಿದ್ದರಯ್ಯ. ಪಾದೋದಕ ಪ್ರಸಾದವನಱಿಯದೆ [B5]ಬಂದ[5] ಬಟ್ಟೆಯಲ್ಲಿ[B] ಮುಳುಗುತ್ತೈದಾರೆ ಗುಹೇಶ್ವರ.

162

ಮಾಡಿದ ಓಗರ ಮಾಡಿದಂ[6]ತೆ ಇ[6]ದ್ದಿತ್ತು. [7]ನೀಡಿದ ಕೈಗಳೆಡೆಯಾಡುತ್ತಿದ್ದವು[7]; ಲಿಂಗ[C]ಕ್ಕ[C]ರ್ಪಿತವ ಮಾಡಿದೆ[8]ನೆಂ[8]ಬರು. [9]ಒಂದಱಲೊಂದು[9] ಸವೆಯದು [10]ನೋಡಾ,[10] ಲಿಂಗವಾರೋಗಣೆಯ [11]ಮಾಡಿದನೆಂಬರು.[11] ತಾವುಂಡು ನಿಮ್ಮ ದೂಱುವರು ಗುಹೇಶ್ವರ.

163

ತಮ್ಮ ತಮ್ಮ ಮುಖದಲ್ಲಿ ಲಿಂಗವನೊಲಿಸಿ[12]ದ[12]ರು, ಆರಾಧಿಸಿ[12]ದ[12]ರು, [13]ಬೇಡಿತ್ತ[13] ಪಡೆ[12]ದ[12]ರುಯೆಲ್ಲಾ! ಲಿಂಗ ಭೋಗೋಪ ಭೋಗಿಗಳಾಗಿ

---

1. ಹೊರ (ತ) 2. ಮಾಡುವರು (ಡಿಟತಲ) 3. ಸೊ (ಕಟ). 4. ಗೆ (ಕಓಚಿಚತಪ್ರ) [A]ಹೊಱಗನೆ (ಪ್ರ) ಹೊಱಗ (ಟ) ಹೊಱಗೆ (ತದ) 5. ಭವಬಂಧನವ (ಸ್ವ) [B] ಭವಬಂಧನದಲ್ಲಿ (ಪ್ರ) 6. ತಿ (ಡಿಟ) 7. ನೀಡುವ ಕೈಯೆಡೆಯಾಡುತ್ತಿದ್ದಿತ್ತು (ಟ) [C] ಗ (ಲ) 8. ವೆಂ (ಸ್ವಟದತ) 9. ಒಂದಱತೊಳ ಒಂದು (ಡಿ) ಒಂದರೊಳಗೊಂದು (ಚಿಸ್ವತ) 10. × (ಚಿಸ್ವಕಟತಲ) 11. ಮಾಡಿದೆವೆಂಬರು (ಹಲ) ಮಾಡಿಹೆವೆಂದು (ಟ) ಮಾಡಿದೆನೆಂಬರು (ಕ) 12. ದವ (ಡಿಹಟ) 13. ಬೇಡಿದುದ (ಡಿತಲ)

ಭೋಗಿಸು[1]ವ[1]ವರಿಲ್ಲ. ಗಂಗೆವಾಳುಕ[2]ರೆಲ್ಲ ವರ[2]ಮುಖಿಗಳಾಗಿ ಮೂರ್ತಿಯ ಳಿದು ಹೋದರು ಗುಹೇಶ್ವರ.

164

ಬೆಳಗಿನೊಳಗಣ ರೂಪ ತಿಳಿದು ನೋಡಿಯೆ, [3]ಕಳೆದು[3] ಹಿಡಿಯದೆ, ಹಿಡಿದುಕೊಳಬಲ್ಲನಾಗಿ [4]ಆತ[4] ಲಿಂಗಪ್ರಸಾದಿ. ಜಾತಿ ಸೂತ[5]ಕವಳಿದು[5], ಶಂಕೆ ತಲೆದೋ[6]ಱದೆ[6] ನಿಶ್ಶಂಕನಾಗಿ ಆತ ಸಮಯಪ್ರಸಾದಿ. ಸಕಲ ಭ್ರಮೆ ಯನೆ ಜಱಿದು ಗುಹೇಶ್ವರಲಿಂಗದಲ್ಲಿ ಬಸವಣ್ಣನೊಬ್ಬನೇ [7]ಅಚ್ಚಪ್ರಸಾದಿ.[7]

165

ತನು[A]ವ[A] ತಾಗದ ಮುನ್ನ, [8]ಮನ[A]ವ[A] ತಾಗದ ಮುನ್ನ,[8] ಆಪ್ಯಾ ಯ[8]ನ[8] ಬಂದು ಎಡೆಗೊಳ್ಳದ ಮುನ್ನ ಅರ್ಪಿತ[A]ವ[A] ಮಾಡಬೇಕು. ಗುರುವಿನ [9]ಕೈಯಲ್ಲಿ ಎಳತಟ[9]ವಾಗದ ಮುನ್ನ ಅರ್ಪಿತವ ಮಾಡಬೇಕೆಂದು. ಎಡದ ಕೈಯಲ್ಲಿ ಕಿಚ್ಚು, ಬಲದ ಕೈಯಲ್ಲಿ ಹುಲ್ಲು ಉರಿ ಹತ್ತಿತ್ತು ಗುಹೇಶ್ವರ [10]ನಿಮ್ಮ ಪ್ರಸಾದಿಯ[10].

166

ತನ್ನ ಮುಟ್ಟಿ [11]ನೀಡಿದುದೆ[11] ಪ್ರಸಾದ; ತನ್ನ ಮುಟ್ಟದೆ [12]ನೀಡಿದುದೆ[12] ಓಗರ; ಲಿಂಗಕ್ಕೆ ಕೊಟ್ಟು ಕೊಂಡಡೆ ಪ್ರಸಾದಿ. ಇದು ಕಾರಣ ಇಂತಪ್ಪ ಭೃತ್ಯಾ ಚಾರಿಗಲ್ಲದೆ ಪ್ರಸಾದವಿಲ್ಲ ಗುಹೇಶ್ವರ.

167

[13]ಆಧಿ[13]ಯಿಲ್ಲದಿದ್ದಡೆ ಲಿಂಗಪ್ರಸಾದಿ[14]ಯೆಂಬೆ;[14] ವ್ಯಾಧಿಯಿಲ್ಲದಿದ್ದಡೆ ಜಂಗಮಪ್ರಸಾದಿ[14]ಯೆಂಬೆ;[14] ಲೌಕಿ[15]ಕವ[15] ಸೋಂಕದಿದ್ದಡೆ ಸಮಯ ಪ್ರಸಾದಿ[14]ಯೆಂಬೆ[14]. ಇಂತೀ [16]ತ್ರಿವಿಧ[16] ಪ್ರಸಾದ ಸಂಬಂಧಿಯಾದಾತನ ಅಚ್ಚಪ್ರಸಾದಿಯೆಂಬೆನು ಕಾಣಾ ಗುಹೇಶ್ವರ.

---

1. ವವ(ಡಿತಲ) 2. ರೆಲ್ಲವರು (ಚ) 3. ಕಂಡು (ಲಿ) 4. × (ಡಿಟತಲಲಿ) 5. ಕವ ಕಳೆದು (ಲಿ). 6. ಱ (ಚ) 7. ಪ್ರಸಾದಿ (ಲಿಚಲಕಡಿದ) A ವು (ವ) 8. × (ಚ) 9. ಕೈಯಯೆಳತಟ (ಟ) ಕೈಯಲೆಳತಟ (ಶೂ) 10. × (ಚ) ನಿಮ್ಮ ಪರಮಪ್ರಸಾದಿಯ (ವ) 11. ನೀಡುವುದೆ (ಲಿ) 12. ನೀಡುವುದೆ (ಲಿ) ನೀಡಿದುದು (ಟ) 13. ಆದಿ (ಸ್ವಓಚಿಚತ) 14. ಯೆಂಬೆನು (ಲ) ಯೆಂದೆಂಬೆನು (ಟ) 15. ಕ (ಚಿ) 16. × (ಹ)

## 168

[A]ಸರ್ವಸುಯಿಧಾನಿ ಎಂದೆನಿಸಿಕೊಳಬಲ್ಲಡೆ ಬಂದ ಕಾಮಕ್ರೋಧವ ಲಿಂಗಾರ್ಪಿತವ ಮಾಡಬೇಕು. ಅಲಗಿನ ಕೊನೆಯ ಮೊನೆಯ ಮೇಲಣ ಸಿಂಹಾಸನ ಹೊರಳಿ ಹೋಗಬಾರದು. [1B]ಶಿವಾಚಾರದ ಧಾರೆ[1] ಮೇರೆ ಮುಟ್ಟದ ಮುನ್ನ ಅರ್ಪಿತವ ಮಾಡಬಲ್ಲಡೆ[B] ಭಿನ್ನ[2]ಭಾವ[2]ವೆಲ್ಲಿಯದೋ, ಗುಹೇಶ್ವರ ?[A]

## 169

[C]ಅಚ್ಚ ಪ್ರಸಾದಿ, ಅಚ್ಚಪ್ರಸಾದಿಯೆಂಬಿರಿ ಕೇಳಿರಯ್ಯ. ನಿಚ್ಚಕ್ಕೆ ನಿಚ್ಚ [D]ಹುಸಿ[3]ವ[3] ಹುಸಿಗಳ ಕಂಡೆವಯ್ಯ,[D] ವಾಯು [4]ಬೀಸದ[4] ಮುನ್ನ, ಆಕಾಶ ಬಲಿಯದ ಮುನ್ನ, ಲಿಂಗಕ್ಕೆ [E]ಅರ್ಪಿಸುವ ಮುಖವ [5]ಮಱೆ[5]ದಿ[5]ರಯ್ಯ.[E] ಭೋಜನವಮಾಡಿ ಭಾಜನವ[6]ನಿಕ್ಕಿಟ್ಟು[6] ಹೋಹ ಹಿರಿಯರಿಗೆ ಭಂಗ ನೋಡಾ[C] ಗುಹೇಶ್ವರ.

## 170

ಅನು[7]ಭಾ[7]ವದಿಂದ ಹುಟ್ಟಿತ್ತು ಲಿಂಗ, ಅನು[7]ಭಾ[7]ವದಿಂದ ಹುಟ್ಟಿತ್ತು ಜಂಗಮ, ಅನು[7]ಭಾ[7]ವದಿಂದ ಹುಟ್ಟಿತ್ತು ಪ್ರಸಾದ. ಅನು[7]ಭಾ[7]ವ ದನುವಿನಲ್ಲಿ ಗುಹೇಶ್ವರ[8]ಲಿಂಗವನುಪಮ[8]ಸುಖಿ.

---

A ಸರ್ವಸುಯಿಧಾನದಿಂದ ಸಾವಧಾನಿಯೆನಿಸಿಕೊಂಬರೆ ಕಾಮಿಸುವ ಕಾಮವ ಲಿಂಗಾರ್ಪಿತವ ಮಾಡಬೇಕು. ಕ್ರೋಧಿಸುವ ಕ್ರೋಧವ ಲಿಂಗಾರ್ಪಿತವ ಮಾಡಬೇಕು. ಲೋಭಿಸುವ ಲೋಭವ ಲಿಂಗಾರ್ಪಿತವ ಮಾಡಬೇಕು. ಮೋಹಿಸುವ ಮೋಹವ ಲಿಂಗಾರ್ಪಿತವ ಮಾಡಬೇಕು. ಮದಿಸುವ ಮದವ ಲಿಂಗಾರ್ಪಿತವ ಮಾಡಬೇಕು. ಮತ್ಸರಿಸುವ ಮತ್ಸರವ ಲಿಂಗಾರ್ಪಿತವ ಮಾಡಬೇಕು. ಅಹಂಕರಿಸುವ ಅಹಂಕಾರವ ಲಿಂಗಾರ್ಪಿತವ ಮಾಡಬೇಕು. ಅಲಗಿನ ಮೊನೆಯ ಮೇಲಣ ಸಿಂಹಾಸನ ಹೊರಳಿ ಹೋಗಬಾರದು. ಶಿವಾಚಾರ ಸಾವಧಾನ ಸಮಂತವಾದ ಸರ್ವಾರ್ಪಿತವ ಬಲ್ಲರೆ ಭಿನ್ನ ಭಾವವೆಲ್ಲಿಯದೋ ಗೊಗೇಶ್ವರ (ವ). 1. ಶಿವಾಚಾರಧಾರೆ (ಚ) B ಮುಟ್ಟದ ಮುನ್ನ ಶಿವಾಚಾರದ ಮೇಲೆ ಅರ್ಪಿತವ ಮಾಡಬಲ್ಲಡೆ (ಟ) ಶಿವಾಚಾರ ಸಾವಧಾನ ಸಮಂತವಾದ ಸರ್ವಾರ್ಪಿತವ ಬಲ್ಲರೆ (ವ) 2. ವಾದ(ಚ) C. ಅಚ್ಚಪ್ರಸಾದಿಗಳು, ನಿಚ್ಚಪ್ರಸಾದಿಗಳು ಎಂಬಿರಿ: ನಿಚ್ಚಕ್ಕೆ ನಾವು ಹುಸಿಗಳ ಕಂಡೆವಲ್ಲಾ! ವಾಯು ಬೀಸುವಲ್ಲಿ, ಆಕಾಶ ಬಲಿವಲ್ಲಿ, ಲಿಂಗಾರ್ಪಿತ ಮುಖವನಱಿಯಿರಲ್ಲಾ ! ಭೋಜನವನುಂಡು ಭಾಜನವ ಮಿಕ್ಕಿಟ್ಟು ಹೋಹ ಹಿರಿಯರಿಗೆ ಭಂಗ ನೋಡಾ (ಪ್ರ) D ಹುಸಿಗಳ ಕಂಡೆವಲ್ಲಾ ನಿಮ್ಮಲ್ಲಿ (ಟಡಿ) ಹುಸಿದ ಹುಸಿಗಳ ಕಂಡೆವಯ್ಯ (ದ) ಹುಸಿವ ಹುಸಿಗಳ ಕಂಡೆವಲ್ಲಾ ನಿಮ್ಮಲ್ಲಿ (ತ) ಹುಸಿವ ಹುಸಿಗಳ ಕಂಡೆವಲ್ಲಾ ನಿಮ್ಮಲ್ಲಿ (ಲ) 3. ದ (ಚ) 4. ಬೀಸುವ (ಚ) E ಅರ್ಪಿತಮುಖವ ಮಱೆದಿರಯ್ಯ (ಡಿಕದ) ಅರ್ಪಿತಮುಖವನಱಿಯರಲ್ಲಾ (ಟ) ಅರ್ಪಿತಮುಖವನಱಿಯರಯ್ಯ (ತಲ) 5. ನರಿಯ (ಹ) 6. ನಿಟ್ಟು (ಹ) ಇಕ್ಕಿಟ್ಟು (ಕ) 7. ಭ (ಟ) 8. ನಿಮ್ಮ ಶರಣನನುಪಮ (ಹಲ) ನಿಮ್ಮ ಶರಣನನುಭಾವ (ಟ) ನಿಮ್ಮ ಶರಣ ಅನುಪಮಸುಖಿ (ತ).

171

ಮನಬೀಸರವೆಂಬ ಗಾಳಿ [1]ಬೀಸಿತ್ತು[1], ವಿದ್ಯಾಮುಖದ ಜ್ಯೋತಿ ನಂದಿ[2]ತ್ತು.[2] ಕತ್ತಲೆಯಲ್ಲಿ ಗತಿಯ ಕಾಣದೆ ದುಮ್ಮಾನ [3]ನೆಲೆ[3]ಗೊಂಡಿ[4]ತ್ತು.[4] ಸುಮ್ಮಾನ ಹೋಯಿತ್ತು. ಸಕಲಕಳಾವಿದ್ಯಾಗುರು[5]ವಲಾ! ಮತಿ[5]ತಾಳವೆಂಬ ಗುಹ್ಯ ತಾಗಿ, ಸುತಾಳವೆಂಬ ಶರಣನಂಗದಲ್ಲಿ ಬಿದ್ದು, ಗುರುವಿಂಗೆ ಪ್ರಸಾದ [6]ವಾದುದು,[6] ಶಿಷ್ಯಂಗೆ [7]ಓಗರ[7]; ಲೌಕಿಕನಾಯಕನರಕ ! ಅರ್ಪಿತಮುಖವ ನಱಿಯದೆ ಅನರ್ಪಿತ[8]ಮುಖ[8]ವಾಯಿತ್ತು ಗುಹೇಶ್ವರ.

172

ಪದವನರ್ಪಿಸಬಹುದಲ್ಲದೆ ಪದಾರ್ಥವನರ್ಪಿಸಬಾರದು. ಓಗರವನರ್ಪಿಸ ಬಹುದಲ್ಲದೆ ಪ್ರಸಾದವನರ್ಪಿಸ ಬಾರದು. ಗುಹೇಶ್ವರ ನಿಮ್ಮ ಶರಣರು ಹಿಂದ ನೋಡಿ ಮುಂದನರ್ಪಿಸುವರು.

173

ಘನವಪ್ಪ ಬೋನವ[9]ನು ಒಂದ[9]ನುವಿನ ಪರಿಯಾಣದಲ್ಲಿ ಹಿಡಿದು, ಗುರು[10]ಲಿಂಗ[10]ವಾರೋಗಣೆಯ ಮಾಡಿ ಮಿಕ್ಕುದು ಪ್ರಸಾದ. [11]ಈ ತೆಱದ[11] ಘನವಪ್ಪ ಲಿಂಗವನು ಒಂದನುವಿನಲ್ಲಿ ತಂದಿರಿಸಿ ಘನವಪ್ಪ ಬೋನವನು ಲಿಂ[12]ಗವಾ[12]ರೋಗಣೆಯ ಮಾಡಿ, [13]ಮಿಕ್ಕುದ[15] ಕೊಳಬಲ್ಲಡೆ ಪ್ರಸಾದಿ- ಇಂತೀ ತೆಱನ ಬೆಸಗೊಳಬಲ್ಲಡೆ ಎನ್ನ ಬೆಸ[14]ಗೊಳ್ಳೈ[14] ಗುಹೇಶ್ವರ.

## ಪ್ರಾಣಲಿಂಗಿಸ್ಥಲ

174

ಕದಳಿಯ ಬನವ ಹೊಕ್ಕು ಹೊಲಬ ತಿಳಿಯದನ್ನ[15]ಕ್ಕ[15], ಬಯ[16]ಲ[16] ಗಾಳಿಯ ಹಿಡಿದು [17]ಘಟ್ಟಿ ಮಾಡದನ್ನಕ್ಕ[17], ಬಱಿದೆ ಬಹುದೇ ಶಿವಜ್ಞಾನ ? [18]ಷಡುವರ್ಗ ವಳಿಯದನ್ನಕ್ಕ[18] A ಬಱಿದೆ [19]ಬಹುದೇ ?A[19] [20]ಅಷ್ಟ[20]ಮದ

---

1. ಬೀಸಿತಯ್ಯ (ಟ) ಬೀಸುತ್ತ (ಲ) 2. ತ್ತಯ್ಯ (ಟ) 3. ವೆ (ಚ) 4. ತ್ತು ನೋಡಾ (ಟಹತಲ) 5. ವಲ್ಲಿ ನುತಿ (ಹ) ವಲ್ಲ ಮತಿ (ಲಡಿಟ) 6. ವಾಯಿತ್ತು (ಡಿಪಟ ತಲ) 7. ಓಗರವಾಯಿತ್ತು ನೋಡಾ (ಡಿಹತಲಟ) 8. × (ಟ) 9. ನೊಂದು ಅ (ವ) 10. ಲಿಂಗಜಂಗಮ (ಟ) 11. × (ವ) 12. ಗಾ (ಟ) 13. ಮಿಕ್ಕದು ಪ್ರಸಾದ (ವ) 14. ಗೋ (ಟ) ಗೊಳ್ಳೈ (ಡಿ) 15. ಕ್ಕರ (ಟತಲ) 16. ಲು (ವ) 17. ಗಟ್ಟಿಗೊಳಿಸದನ್ನಕ್ಕರ (ಟ) 18. ಷಡುವರ್ಣವಳಿಯದನ್ನಕ್ಕ (ಚಡಿಪಓಸ್ವಚಿಕತವ) ಷಡುವರ್ಗನಷ್ಟವಾಗದನ್ನಕ್ಕರ (ಟಲ) ಷಡುವರ್ಗವಳಿಯದನ್ನಕ್ಕ (ವ) A × (ಟ) 19. ಬಹುದೇ ಶಿವಸಂಪದವು (ವ) 20. ಮದಮತ್ಸರವ ಬೇದಿಸಿ ಅಷ್ಟ (ಟ)

ವಳಿಯದನ್ನಕ್ಕ ಮದಮತ್ಸರ[1]ವ[1] ಮಾಡಲಿಲ್ಲ, ಹೊದಕುಳಿಗೊಳಲಿಲ್ಲ. ಗುಹೇಶ್ವರಲಿಂಗ ಕಲ್ಪಿತದೊಳಗಲ್ಲ.

175

ಶಬ್ದ ಸ್ಪರ್ಶರೂ[2]ಪ[2]ರಸಗಂಧ ಪಂಚೇಂದ್ರಿಯ ಸಪ್ತಧಾತು ಅಷ್ಟಮದ[3]ದಿಂದ[3] ಮುಂದುಗಾಣದವರು ನೀವು ಕೇಳಿರೇ! ಲಿಂಗವಾರ್ತೆಯ ವಚ[4]ನ[4] ರಚನೆಯ [5]ಮಾಡುವರಯ್ಯ.[5] ಸಂಸಾರದ ಮಚ್ಚು ಬಿಡದನ್ನಕ್ಕರ ಸೂಕ್ಷ್ಮ ಶಿವಪಥವು ಸಾಧ್ಯವಾಗದು. ಗುಹೇಶ್ವರಲಿಂಗದಲ್ಲಿ [6]ವಾಕು [6][A]ಪಾಕ[A]ವಾದಡೇನು ಮನ ಪಾಕವಾಗದನ್ನಕ್ಕರ ?

176

ಮರ್ತ್ಯಲೋಕದ ಮಾನವರು ದೇಗುಲದೊಳಗೊಂದು ದೇವರ ಮಾಡಿದಡೆ ಆನು ಬೆಱಗಾ[7]ದೆನಯ್ಯ,[7] ನಿಚ್ಚ[8]ಕ್ಕೆ[8] ನಿಚ್ಚ ಅರ್ಚನೆ ಪೂಜನೆಯ ಮಾಡಿಸಿ ಭೋಗವ ಮಾಡುವರ ಕಂಡು ನಾನು ಬೆಱಗಾದೆನು, ಗುಹೇಶ್ವರ, ನಿಮ್ಮ ಶರಣರು ಹಿಂದೆ ಲಿಂಗವನಿರಿಸಿ ಹೋದರು.

177

ಬಱಿಯ [9]ನಚ್ಚು[9] ಮಚ್ಚಿನ ಭಕ್ತಿಯ ಭಕ್ತರು ಲಿಂಗವ [10]ಮುಟ್ಟಿಯೂ ಮುಟ್ಟದ[10] ಒಳ[11]ಲೊಟ್ಟೆಗಳು[11] ನೆರೆದು ಗಳಹುತ್ತಿಪ್ಪರು. ತಮತಮಗೆ ಅನುಭಾವವ [12]ನುಡಿವರು[12]. ಅನುಭಾವದ [13]ಆಯತವ[13]ನಱಿಯದಿದ್ದರೆ ಹಿಂದಣ ಅನುಭಾವಿಗಳು ? ಗುಹೇಶ್ವರಲಿಂಗದ [14]ಸುಖವ ಮುಟ್ಟಿದರೆ[14] ಮರಳಿ ಭವಕಲ್ಪಿತವೆಲ್ಲಿಯದೋ ?

178

ಭಾವದಲೊಬ್ಬ ದೇವರ ಮಾಡಿ, ಮನದಲೊಂದು ಭಕ್ತಿಯ [15]ಮಾಡಿದರೆ[15], ಕಾಯದ ಕೈಯಲ್ಲಿ ಕಾರ್ಯವುಂಟೆ ? ವಾಯಕ್ಕೆ ಬಳಲುವರು ನೋಡಾ! ಎತ್ತನೇಱಿ ಎತ್ತನಱಸುವರು ಎತ್ತ ಹೋದರೈ ಗುಹೇಶ್ವರ.

---

1. × (ವ) 2. ಪು (ದ) 3. ಉಳ್ಳವಱಿಂದ (ಟ) 4. ದ (ತಹ) 5. ಮಾತನಾಡುವಿರಯ್ಯ (ಟ) 6. ವಾಕ್ (ಟಲ) ವಾಕ್ಕು(ಹ) A ಪಕ್ವ (ಟ) 7. ದೆನು (ವಚ) 8. ಕೆ (ಕ) 9. ನಚ್ಚಿನ (ಲಡಿ) 10. ಮುಟ್ಟಿದ (ಜ) ಮುಟ್ಟಿ ಮುಟ್ಟದ (ಟ) 11. ಲೊಟೆಗಳು (ವಚ) ಲಟ್ಟೆಗರು (ಟ) 12. ನುಡಿವುತ್ತಿಪ್ಪರು (ಲ) 13. ನು ವ (ಹಟತಲ) 14. ಸುಖ ಮುಟ್ಟಿದಲ್ಲಿ (ಲಡಿ) ಸುಖವ ಮುಟ್ಟಿದಲ್ಲಿ(ಟಹತ) 15. ಮಾಡಿ (ಡಿವಟತನ)

## 179

ಹೊಟ್ಟೆಯ ಮೇಲೆ [1]ಕಟ್ಟೋ[1]ಗರದ ವೊಟ್ಟೆಯ ಕಟ್ಟಿದರೇನು ? ಹಸಿವು ಹೋಹುದೇ ? ಅಂಗದ ಮೇಲೆ ಲಿಂಗಸ್ವಾಯತವಾದರೇನು ? ಭಕ್ತನಾಗಬಲ್ಲನೆ ? ಇಟ್ಟ ಕಲ್ಲು [2]ಮೆಳೆಯ ಮೇಲೆ[2] ಸಿಕ್ಕಿದಡೆ ಆ ಕಲ್ಲು ಲಿಂಗವೆ ? ಆ ಮೆಳೆ ಭಕ್ತನೆ ? [3]ಇಟ್ಟಾತ[3] ಗುರುವೆ ? ಇಂತಪ್ಪವರ [4]ಕಂಡಡೆ[4] ನಾಚು[5]ವೆ[5]ನಯ್ಯ ಗುಹೇಶ್ವರ.

## 180

ಅಸ್ಥಿಗೆ ಚರ್ಮವಾಧಾರವಾ[A]ಗಿ[A], ಪ್ರಾಣಕ್ಕೆ [6]ಪ್ರಸಾದ ಮೃತ್ತಿಕೆಯಾಗೆ ಪ್ರಾಣ ಲಿಂಗವಲ್ಲೋ[6]! ಪ್ರಾಣ ಲಿಂಗವೆಂಬುದು ಕರ ಕಷ್ಟ ನೋಡಾ! ಪ್ರಾಣ ಲಿಂಗವೆಂಬುದು ಕರನಾಚಿಕೆ ನೋಡಾ, ಒಡೆದ ಮಡಕೆಗೆ ಒತ್ತಿ ಮಣ್ಣ ಮೆತ್ತಿದರೆ ಅದು ತರಹರ[7]ವಹುದೆ[7] ಗುಹೇಶ್ವರ.

## 181

ಇಷ್ಟಲಿಂಗವನು ಪ್ರಾಣಲಿಂಗವೆಂಬ ಕಷ್ಟವೆಲ್ಲಿಯದೋ! ಇಷ್ಟಲಿಂಗ ಹೋದರೆ ಪ್ರಾಣಲಿಂಗ ಹೋಗದು ನೋಡಾ ! ಇಷ್ಟಲಿಂಗ ಪ್ರಾಣಲಿಂಗವೆಂಬ ಭೇದವನು, ಗುಹೇಶ್ವರ, ನಿಮ್ಮ ಶರಣ ಬಲ್ಲ.

## 182

ವ್ರತಗೇಡಿ, ವ್ರತಗೇಡಿ [8]ಎಂಬವ ತಾನೆ[8] ವ್ರತಗೇಡಿ. ವ್ರತಗೆಡಲಿಕೇನು ಹಾಲಂಬಿಲ[9]ವೆ ?[9] ವ್ರತಗೆಟ್ಟ [10]ಬಳಿಕ[10] ಘಟ ಉಳಿಯ ಬಲ್ಲುದೇ ? ಕಾಯದೊಳಗೆ ಜೀವವುಳ್ಳನ್ನಕರ ಅದೇ ಪ್ರಾಣಲಿಂಗವು ಕಾಣಾ ಗುಹೇಶ್ವರ.

---

1. ಓ (ವಟಓಚ) 2. ಮೆಳೆಯಲ್ಲಿ (ಟ) 3. ಈತ (ವ) 4. ಕಂಡು (ಟ) 5. ವ (ಓ) [A]ಗೆ (ಪ್ರ) 6. ಪ್ರಸಾದ ಮುಕ್ತಿಯಾಗಿ ಪ್ರಾಣಲಿಂಗವಲ್ಲೋ (ತಲಕಚವಡಿ) ಪ್ರಸಾದವೇ ಮೃತ್ತಿಕೆಯಾಗೆ ಇದು ಪ್ರಾಣಲಿಂಗ ಸಂಬಂಧವಲ್ಲ ನಿಲ್ಲಿಭೋ (ಪ್ರ) 7. ವಾಗಬಲ್ಲುದೇ (ಟಪ್ರ) 8. ಎಂಬಾತನೆ (ಟ) 9. ವೆ ವ್ರತ ಕೆಟ್ಟಿಂದೋ ಬಿಳಿದೋ (ಟ) 10. ಈ (ಟ)

183

[B]ಅಂಗದ ಕಳೆಯ[1]ಲೊಂ[1]ದು ಲಿಂಗವ ಕಂಡೆ, ಲಿಂಗದ ಕಳೆಯ [2]ಲೊಂ[2]ದು ಅಂಗವ ಕಂಡೆ, [3]ಅಂಗಲಿಂಗ[3] ಸಂದಣಿಯನಱಿಸಿ [4]ಕಂಡೆ ನೋಡಿರೇ.[4] ಇಲ್ಲಿ [5]ಐ[5]ದಾನೆ [6]ಶಿವನು,[6] ಬಲ್ಲಡೆ ಇರಿಸಿಕೊಳ್ಳಿರೇ, ಕಾಯ ವಳಿಯದ ಮು[7]ನ್ನ[7]. ನೋಡಬಲ್ಲಡೆ ಗುಹೇಶ್ವರಲಿಂಗಕ್ಕೆ ಬೇ[8]ಱೆ[8] ಠಾವುಂ[9]ಟೆ[9] ಹೇಳಿರೇ[B] ?

184

ಪೂಜಿಸಿ [10]ಕೆಳಯಿಂಕೆ[10] ಇಳುಹಲದೇನೋ ? ಅನಾಗತಪೂಜೆಯ ಮಾಡಲದೇನೋ ? ದೇಹವೇ [11]ಪಿಂಡಿಗೆ[11], [12]ಜೀವವೇ[12] ಲಿಂಗ ; ಗುಹೇಶ್ವರ.

185

[13]ಅಱಿದಱಿದು ಅಱಿವು[13] ಬಱು[14]ದೊ[14]ಱೆವೋಯಿತ್ತು. ಕುಱುಹ ತೋಱಿದ[15]ಡೆಂತು[15] ನಂಬರು ? ತೆಱಹಿಲ್ಲದ ಘನವ ನೆನೆದು, ಗುರುಶರಣೆಂಬು ದಲ್ಲದೆ ಮಱಹು [16]ಬಂದಹುದೆಂದು[16] ಗುರು ಕುಱುಹ [17]ತೋಱಿದನಲ್ಲದೆ[17] ಬಲ್ಲಡೆ ಗುಹೇಶ್ವರ ಲಿಂಗವು ಹೃದಯದಲ್ಲೈದಾನೆ.

186

ಸಂಬಂಧ [18]ಅ[18]ಸಂಬಂಧವೆಂದು ಹೆಸರಿಟ್ಟುಕೊಂಡು ನುಡಿವಿರಿ. ಸಂಬಂಧವಾವುದು, [18]ಅಸಂಬಂಧವಾವುದು[18], ಬಲ್ಲಡೆ ನೀವು ಹೇಳಿರೆ ? [19]ಕಾಯ ಸಂಬಂಧ, ಜೀವಸಂಬಂಧ, ಪ್ರಾಣಸಂಬಂಧ, ಇಂತೀ ತ್ರಿವಿಧ-ಸಂಬಂಧವನಱಿದಡೆ ಆತನೆ ಸಂಬಂಧಿ ಕಾಣಾ ಗುಹೇಶ್ವರ.[19]

---

B ಅಂಗದ ಕಳೆಯಲ್ಲಿಯೊಂದು ಲಿಂಗವ ಕಂಡೆ. ಲಿಂಗದ ಕಳೆಯಲ್ಲಿಯೊಂದು ಅಂಗವ ಕಂಡೆ. ಅಂಗಲಿಂಗವೆಂಬ ಸಂದಳಿಯದೆ ಅರಸಿಕಂಡಿಹೆ ನೋಡಿರೇ. ಇಲ್ಲಿ ಐದಾನೆ ನೋಡಿರೇ ಶಿವದೇವನು ; ಇಲ್ಲಿ ಐದಾನೆ ನೋಡಿರೇ ಮಹದೇವನು. ಬಲ್ಲರೆ ಇರಿಸಿಕೊಳ್ಳಿರಿ ಕಾಯವಳಿಯದ ಮುನ್ನ ನೋಡಬಲ್ಲಡೆ ಇಲ್ಲಿ. ಗುಹೇಶ್ವರನೆಂಬ ಲಿಂಗಕ್ಕೆ ಬೇರೊಂದೆಡೆ ಯುಂಟೆ ಹೇಳಿರೇ (ಏ) 1. ಲ್ಲಿ ಒಂ (ವ) 2. ಲ್ಲೊಂ (ವ) 3. ಅಂಗದ ಲಿಂಗದ (ವ) 4. ನೋಡಿ ಕಂಡೆ (ಟ) 5. ಯೇ ಇ (ಚದ) 6. ಶಿವ ಲಿಂಗದೇವನು (ಟ) ಶಿವಲಿಂಗದೇವ ಇಲ್ಲಿ ಐದಾನೆ ಮಾಹೇಶ್ವರದೇವನು (ವ) 7. ನ್ನ ವೇ (ವ) 8. ಱೊಂದು (ವ) 9. ಟ (ಲಿ) 10. ಕೆಳಯಿಂದೆ (ಹ) ಕೆಳಯಿಕ್ಕೆ (ಚ) 11. ಪೀಠಿಕೆ (ಡಿತಲ) ಪೀಠಕೆ (ಚಿ) ಪೀಠಿಗೆ (ಟ) 12. ಪ್ರಾಣವೆ (ಟ) 13. ಅಱಿದಱಿವು (ಹಸ್ತ) ಅಱಿದಱಿದವು (ಡಿ) 14. ಸೂ (ಟ) 15. ಡೆಂತೂ (ಲಿ) ಡೆಂತು (ಹಚಿಟತಲ) ಡಿಂತು (ಕಚದ) 16. ಬಂದೀತೆಂದು (ಟವ) 17. ತೋಱಿದ ಬಳಿಕ (ಓ) ಕೈಯಲ್ಲಿ ತೋಱಿದ (ಡಿತಲಟ) ಕೈಯಲ್ಲಿತೋಱಿದನಲ್ಲದೆ (ವ) 18. × (ಪ್ರ) 19. ಕಾಯ ಜೀವ ಪ್ರಾಣ ಈ ತ್ರಿವಿಧ ಸಂಬಂಧವನಱಿದಡೆ ಗುಹೇಶ್ವರ ಲಿಂಗವಲ್ಲಿ ಆತನೇ ಸಂಬಂಧಿ (ಪ್ರ)

## 187

ಭಾನುಶಶಿ ಕಳೆಗುಂದಿ, ಪ್ರಾಣಾಪಾನವ್ಯಾನೋದಾನ[1]ಸಮಾನ[1] [2]ನಾಗ ಕೂರ್ಮಕೃಕರದೇವದತ್ತ ಧನಂಜಯನೆಂಬ[2] ವಾಯುವನಱಿಯವೋ ! [3]ಆದಿ ಪ್ರಾಣವನಱಿದಹೆ[3]ನೆಂಬವಂಗೆ ಬಯಲು. ಆಕಾಶದೊಳಗೊಂದು ರಸದ ಭಾವಿ. ಮುನ್ನಾದವ[4]ರಾದವರೆಲ್ಲವರೆನ[4]ಬೇಡ. ಗುಹೇಶ್ವರಲಿಂಗವು ತಾನೆ ಕಂಡೆಲವೋ ?

## 188

ಗುದಸ್ಥಾನದಲ್ಲಿ ಆಧಾರಚಕ್ರ, ಪೃಥ್ವಿಯೆಂಬ ಮಹಾಭೂತ, ಚತುಃ ಕೋ[5]ಣ,[5] ಚೌದಳಪದ್ಮ, [6]ಅಲ್ಲಿಹ[6] ಅಕ್ಷರ ನಾಲ್ಕು : ವ-ಶ-ಷ-ಸ : ಅದಱ ವರ್ಣ ಸುವರ್ಣ, ಅದಕ್ಕೆ ಅಧಿದೇವತೆ ದಾಕ್ಷಾಯಣಿ, ಲಿಂಗಸ್ಥಾನದಲ್ಲಿ ಸ್ವಾಧಿಷ್ಠಾನಚಕ್ರ, ಅಪ್ಪುವೆಂಬ ಮಹಾಭೂತ, ಧನುರ್ಗತಿ, ಷಡುದಳಪದ್ಮ, ಅಲ್ಲಿಹ ಅಕ್ಷರವಾಱು: ಬ–ಭ–ಮ–ಯ–ರ–ಲ : ಅದಱ ವರ್ಣ ಪಚ್ಚೆಯ ವರ್ಣ, ಅದಕ್ಕೆ ಅಧಿದೇವತೆ ಬ್ರಹ್ಮನು. ನಾಭಿಸ್ಥಾನದಲ್ಲಿ, ಮಣಿಪೂರಕಚಕ್ರ, ತೇಜವೆಂಬ ಮಹಾಭೂತ, ತ್ರಿಕೋ[6]ಣ[6], ದಶದಳಪದ್ಮ, ಅಲ್ಲಿಹ ಅಕ್ಷರ ಹತ್ತು: ಡ-ಢ-ಣ-ತ-ಥ-ದ-ಧ-ನ-ಪ-ಫ: ಅದಱ ವರ್ಣ ಕೃಷ್ಣವರ್ಣ, ಅದಕ್ಕೆ ಅಧಿದೇವತೆ ವಿಷ್ಣು. ಹೃದಯಸ್ಥಾನದಲ್ಲಿ ಅನಾಹತಚಕ್ರ, ವಾಯುವೆಂಬ ಮಹಾಭೂತ, ಷಟ್ಕೋ[6]ಣ,[6] ದ್ವಾದಶ ದಳಪದ್ಮ, ಅಲ್ಲಿಹ ಅಕ್ಷರ ಹನ್ನೆರಡು : ಕ-ಖ ಗ-ಘ-ಙ-ಚ-ಛ-ಜ-ಝ-ಞ-ಟ-ಠ : ಅದಱ ವರ್ಣ ಕುಂಕುಮವರ್ಣ, ಅದಕ್ಕೆ ಅಧಿದೇವತೆ [7]ಮ[7]ಹೇಶ್ವರನು. ಕಂಠಸ್ಥಾನದಲ್ಲಿ ವಿಶುದ್ಧಿಚಕ್ರ, ಆಕಾಶವೆಂಬ ಮಹಾಭೂತ, ವರ್ತುಳಾಕಾರ, ಷೋಡಶ ದಳಪದ್ಮ, ಅಲ್ಲಿಹ ಅಕ್ಷರ ಹದಿನಾಱು ಅ-ಆ-ಇ-ಈ-ಉ-ಊ-ಋ-ೠ-Aಲೃ-ಲೄA-[8]ಏ[8]-ಐ[9]ಓ[9]-ಔ-ಅಂ-ಅಃ : ಅದಱ ವರ್ಣ ಶ್ವೇತವರ್ಣ, ಅದಕ್ಕೆ ಅಧಿದೇವತೆ ಸದಾಶಿವನು, ಭ್ರೂಮಧ್ಯ ಸ್ಥಾನದಲ್ಲಿ ಆಜ್ಞಾಚಕ್ರ, ಮನವೆಂಬ ಮಹಾಭೂತ, ತಮಂ[10]ಧಾ[10]ಕಾರ, ದ್ವಿದಳಪದ್ಮ, ಅಲ್ಲಿಹ ಅಕ್ಷರವೆರಡು : ಹಂ[11]ಕ್ಷಂ[11] : ಅದಱ ವರ್ಣ ಮಾಣಿಕ್ಯ ವರ್ಣ, ಅದಕ್ಕೆ ಅಧಿದೇವತೆ ಶ್ರೀಗುರು. ಉನ್ಮನಿಜ್ಯೋತಿ ಬ್ರಹ್ಮರಂಧ್ರ[12]ದಲ್ಲಿ[12]

---

1. ಸಮಾನವೆಂಬ (ಟ) 2. ವೆಂಬ (ಡಿಹತಲ) 3. ಆದಿಪ್ರಾಣಮನವನಱಿದೆ (ಟ) ಆದಿಪ್ರಣಮವನರಿದಿಹೆ (ಹ) ಆದಿಪ್ರಣವವನಱಿದಿಹೆ (ತಲಡಿ) 4. ರೆಲ್ಲಿಯ ವರೆನ (ಟ) ರೆಲ್ಲವರೆಂದೆನ (ಡಿಹತ) 5. ಣ (ತ) 6. × (ತ) 7. ಮಾ (ಟಕದಲ)
A ಅಚ್ಚುಮೊಳೆಗಳಿಲ್ಲದುದಕ್ಕಾಗಿ ಈ ವ್ಯಂಜನಾಕ್ಷರಗಳನ್ನೇ ಸ್ವರಾಕ್ಷರಗಳೆಂದು ಭಾವಿಸಿರಿ.
8. ಎಐ (ಹ) 9. ಔಓ (ಹ) 10. ದಾ (ಟ) 11. × (ಟ) 12. ದ ಮೇಲೆ (ಟತಲ)

ಸಹಸ್ರದಳಪದ್ಮ, ಅಲ್ಲಿ ಅಮೃತವಿಹುದು. ಅಲ್ಲಿ ಓಂಕಾರಸ್ವರೂಪ[1]ವಾ[1]ಗಿ ಗುಹೇಶ್ವರಲಿಂಗವು ಸದಾಸ[2]ನ್ನ[2]ಹಿತನು.

189

ಆಧಾರ–ಸ್ವಾಧಿಷ್ಠಾನ–ಮಣಿಪೂರಕ[3]ಸ್ಥಾನ[3]ವನಱಿಯರು. ಅಷ್ಟದಳ ಕಮಲದಲ್ಲಿ ಸೂಕ್ಷ್ಮನಾಳವೆಯ್ದು[4]ದೆ[4], ಇನ್ನೇನನಱಿವರಾರೋ ? ಬೇಱೆ[3] ಮತ್ತೆ ಅಱಿಯಲುಂಟೆ, ಹೇಳಾ ? ಸಹಸ್ರದಳಕಮಲ[5]ಭ್ರೂಮಧ್ಯ[5]ದಲ್ಲಿಪ್ಪ ಅಮೃತಸ್ವರವಱಿದು ಹಿ[6]ಡಿ[6]ದುಕೊಂಬು[7]ದರಿದು[7] ಗುಹೇಶ್ವರ.

190

ಆಧಾರಲಿಂಗ–ನಾಭಿ-ಹೃದಯ-ಕಂಠ–[8]ಭ್ರೂಮಧ್ಯದ[8] ಮೇಲೆ ನಿಂದುದ ದೇನೋ ? ನಿತ್ಯನಿರಂಜನ ನಿರುಪಾಧಿಕರೇಖೆಯಾಗಿದ್ದು[9]ದ[9]ದೇನೋ? ವಿದ್ರುಮ ಕುಸುಮಚಕ್ಷುಪರಿಮಳದಿಂದತ್ತ[10]ಲೆ[10], ಗುಹೇಶ್ವರನೆಂಬುದದೇನೋ ?

191

ಘಟಸರ್ಪನಂತೆ! ಅತಿಶಯವು ! ನಾಭಿಸರವರಸ್ಥಾನಕವೆ ದಳವೆಂಟು ! ನವ[11]ದಶ[11]ಕಮಲ ಊರ್ಧ್ವಮಂಡಲ[12]ದ[12] ಅಮೃತಸೇವನೆಯಾಗಿ, ಶಿವ–ಯೋಗಿಯಾದೆವೆಂಬರು ! ಗುಹೇಶ್ವರಲಿಂಗವು ಪವನವಿಯೋಗ.

192

ಅರ್ಕನ ಅದ್ಭುತದಲ್ಲಿ ಕೆಟ್ಟರು ಹಲಬರು. [13]ತಪ್ಪು ಕ[13]ರಾದರು ಹಲಬರು. ಬಿಂದು [14]ಬಿಂದುವನೆ[14] ಕೂಡಿ ಲಿಂಗಲೀಯವಾಯಿತ್ತು. ನಿಂದನು ಗುಹೇಶ್ವರ–ನೆನ್ನೊಳಗೆ ಭರಿತನಾಗಿ.

193

ಉದಕ ಮೂರುತಿಯಾಗಿ ಉದ[15]ಯ[15]ವಾಯಿತ್ತು. [16]ಪಿಂಡಿಗೆಯಲ್ಲಿ[16] ಮೂಲಸ್ಥಾನ ಸ್ಥಾಪ್ಯವಾಯಿತ್ತು. ಸ್ವದೇಹಶಿವಪುರದಲ್ಲಿ [17]ವಾಯು[17] ಪೂಜಾರಿ ಯಾಗಿ, [18]ಪರಿಮಳದಿಂಡೆಯ[18] ಕಟ್ಟಿ, [19]ಪೂಜಿಸುತ್ತಿರ್ದುದೋ[19] ನವದ್ವಾರ–ಶಿವಾಲಯದಾದಿಮಧ್ಯಸ್ಥಾನದಲ್ಲಿ ; [20]ಗುಹೇಶ್ವರ[20]ನೆಂಬುದಲ್ಲಿಯೆ ನಿಂದಿತ್ತು.

---

1. ನಾ (ಟ) 2. ನ್ನಿ (ಹಚ) 3. × (ಟ) 4. ಡೆ (ಹ) 5. ಬ್ರಹ್ಮರಂಧ್ರ (ವ್ಯಾಖ್ಯಾನಗಳಲ್ಲಿ) 6. ರಿ (ಹ) 7. ದಱಿದು(ಟ) 8. ಮುಖದ (ಟಡಿವತಲ) 9. ವ (ಕಚತಲ) 10. ವೆ (ಹ) 11. ದಳ (ಚಟದ) 12. × (ಟ) 13. ತಪ್ಪುಗ (ಲಿ) 14. ಬಿಂದನೆ (ಲಿ) 15. ಕ (ಟ) 16. ಪೀಠಿಕೆಯಲ್ಲಿ (ಸ್ವಚಿ) ಪೀಠದಲ್ಲಿ (ಟತಲ) ಪಿಂಡಿಗೆ ಅಲ್ಲಿಯೆ (ವ) 17. ವಾಯುವಾ (ತ) 18. ಪರಿಮಳದಿಂಡೆ ದಂಡೆ (ಟ) ಪರಿಮಳದಿಂ ದಂಡೆಯ (ಸ್ವ) 19. ಪೂಜೆಯ ಮಾಡುತ್ತಿರ್ದುದೋ (ಕಚದಶೂಲ ಟಸ್ವಓಚಿ) ಪೂಜಿಸುತ್ತಿದ್ದಿತ್ತು (ವ) 20. ಗೊಗೇಶ್ವರ ಗೊಗೇಶ್ವರ (ವ).

194

ಕಳಶವುಳ್ಳ ಶಿವಾಲಯ[1]ಕ್ಕೆ[1] [2]ಚೌಕದವೆರಡು[2], ಕಂಭ ಮೂಱು; ಭಾವಪೂಜಕರಾರೋ; ಅನು[3]ಭಾ[3]ವಿಗಳಿನ್ನಾರೋ? ಪೂಜಿಸುವರಿನ್ನಾರೋ? ಇದಱ ಸ್ಥಾನದ [4]ನೆಲೆಗತಿಯ[4]ನಾರು ಬಲ್ಲರು, ಗುಹೇಶ್ವರ?

195

ಕಾಲೇ ಕಂಭಗಳಾದವೆನ್ನ! ದೇಹವೇ ದೇಗುಲವಾ[5]ಯಿತ್ತಯ್ಯ![5] ಎನ್ನ ನಾಲಗೆಯೆ ಘಂಟೆ, ಶಿರ ಸುವರ್ಣದ ಕಳಶ–ಇದೇನಯ್ಯ? [6]ಸರವೆ[6] ಲಿಂಗಕ್ಕೆ ಸಿಂಹಾಸನವಾಗಿ[7]ದ್ದಿತ್ತಯ್ಯ.[7] ಗುಹೇಶ್ವರ, ನಿಮ್ಮ ಪ್ರಾಣಲಿಂಗಪ್ರತಿಷ್ಠೆ ಪಲ್ಲಟವಾ[8]ಗದಂತಿದ್ದೆ[8]ನಯ್ಯ.

196

ಅಚಲಸಿಂಹಾಸನ[9]ವನಿಕ್ಕಿ ನಿಶ್ಚಲಮಂಟಪದ ಸಂಚದೋವರಿಯೊಳಗೆ[9] ರುಚಿಗಳಿಲ್ಲವ ನಿ[10]ಲಿ[10]ಸಿ, ಪಂಚರತ್ನದ ಶಿಖ[11]ರ[11], ಮಿಂ[12]ಚು[12] [13]ಕೋಟಿಯ[13] ಕಳಶ, ವಚನಚಿತ್ರದ ಪುಷ್ಪದ ರಚನೆ[14]ಯ[14] ನವರಂಗದಲ್ಲಿ ಖೇಚರಾದಿ[14]ಯ[14] ಗಮ[15]ನ[15] ವಿಚಾರ[16]ಪರ[16] ನುಂಗಿ, ಗುಹೇಶ್ವರ [17]ನಿಂದ ನಿಲುವು[17] ಸಚರಾಚರವ [18]ಮೀಱಿತ್ತು.[18]

197

ಭುವರ್ಲೋಕದ ಸ್ಥಾವರಕ್ಕೆ ಸತ್ಯಲೋಕದ ಅಗ್ಘವಣಿಯಲ್ಲಿ ಮಜ್ಜನಕ್ಕೆಱೆದು, ದೇವಲೋಕದ ಪುಷ್ಪದಲ್ಲಿ ಪೂಜೆಯ ಮಾಡಿದಡೆ, ಹತ್ತು ಲೋಕ [19]ದಾಚಾರ ಕೆಟ್ಟಿತ್ತು.[19] ಮೂಱು ಲೋಕದಱಸುಗಳು ಮುಗ್ಧರಾದರು. ಗುಹೇಶ್ವರಲಿಂಗವು ಸ್ಥಾವರಕ್ಕೆ ಸ್ಥಾವರವಾದನು.

198

ಪ್ರಾಣಲಿಂಗಕ್ಕೆ ಕಾಯವೇ ಸೆಜ್ಜೆ, ಆಕಾಶಗಂಗೆಯಲ್ಲಿ ಮಜ್ಜನ, ಹೂವಿ

---

1. ಒಂದಕ್ಕೆ (ವ) 2. ಚೌಕವೆರಡು (ಚ) ಚೌಕದಲ್ಲಿ ಎರಡು(ವ) 3. ಭ (ಟ) 4. ನೆಲೆ (ಹ) ನೆಲೆಗಯನಿಂ (ಟ) 5. ದುದಯ್ಯ (ಟ) 6. ಸ್ವರವೇ (ಲಿ) 7. ರ್ದುತ್ತೈಯ್ಯ (ಕಸ್ಪಓ) ದ್ದತ್ತಯ್ಯ (ಚದ) ಇರ್ದುದು (ಲಹ) 8. ಗಿದ್ದೆ (ಹ) ಗದಿರ್ದೆ (ಟ) ದಲ್ಲಿ (ತಲಟ) ಗದಂತಿಪ್ಪೆ (ಲಿ) 9. ವನಿಕ್ಕಿ ನಿಶ್ಚಲ ಮಂಟಪವು ಸಂಚಲದೋಹರಿಯೊಳಗೆ (ಟ) ದಲ್ಲಿ ನಿಶ್ಚಲವೆಂಬ ಮಂಟಪವು ಸಂಚಲದೋವರಿಯೊಳಗೆ (ಶೂ) 10. ರಿ (ಸ್ವ) 11. ರಿ (ಕಚದ) 12. ಚುವ (ಶೂ) 13. ಕೊಂಡಿಯ (ಹ) 14. × (ಶೂ) 15. ನವ (ಟ) ನವನು (ಶೂ) 16. ಪರಮ (ಓಚ) 17. ಲಿಂಗವು (ಟ) 18. ಮಿಂಚಿತ್ತು (ಓಸ್ವಚಿಹ) 19. ಧ ಆಚಾರ ಕೆಟ್ಟು ಹೋಯಿತು (ವ).

ಲ್ಲದ ಪರಿಮಳದ ಪೂಜೆ, ಹೃದಯ [1]ಕಮಲ[1]ದಲ್ಲಿ ಶಿವಶಿವಾ ಎಂಬ [2]ಶಬ್ದ[2]. ಇದು ಅದ್ವೈತ ಕಾಣಾ ಗುಹೇಶ್ವರ.

## 199

ಪೃಥ್ವಿಅಪ್ಪುತೇಜವಾಯ್ವಾಕಾಶ ಪಂಚಭೌತಿಕ, ಮನಬುದ್ಧಿಚಿತ್ತ ಅಹಂಕಾರ [3]ಚತುಷ್ಟಯ ಕರಣಂಗಳು,[3] ಸತ್ವರಜಸ್ತಮದಲ್ಲಿ ಆತ್ಮನ ಎತ್ತಲೆಂದಱಿಯರು. ಇದನಱಿದಡೆ ಸಮತೆ ಸದಾಚಾರ ಆ[4]ಶ್ರ[4]ಮಸ್ಥಾನಕ; ಸಹಸ್ರದಳಕಮಲದಲ್ಲಿ ಗುಹೇಶ್ವರನೆಂಬ ಲಿಂಗವು.

## 200

ಕಕ್ಷೆ–ಕರಸ್ಥಲ–[5]ಕಂಠ[5] – ಉತ್ತಮಾಂಗ – ಮುಖಸೆಜ್ಜೆ – ಅಂಗಸೋಂ[6]ಕೆಂ[6]ಬವು ಷಡುಸ್ಥಲ[5]ದ[5] [A]ದರ್ಶ[A]ನಾದಿಗಳಿಗೆ [7]ಬ[7]ಹಿರಂಗದ[5]ಲ್ಲಿ ವೇಷ[5] ಲಾಂಛನವಯ್ಯ. ಅಂತರಂಗದಲ್ಲಿ ನಾಲ್ಕು ಸ್ಥಲ: ಬ್ರಹ್ಮರಂಧ್ರ, ಭ್ರೂಮಧ್ಯ ನಾಶಿಕಾಗ್ರ, [8]ಚೌಕ[8]ಮಧ್ಯ. ಇಂತೀ ಸ್ಥಾನಂಗಳನಱಿಯರಾಗಿ ಬ್ರಹ್ಮರಂಧ್ರದಲ್ಲಿ ಲಿಂಗಸ್ವಾಯತ, ಭ್ರೂಮಧ್ಯದಲ್ಲಿ ಜಂಗಮಸ್ವಾಯತ, ನಾಶಿಕಾಗ್ರದಲ್ಲಿ ಪ್ರಸಾದಸ್ವಾಯತ, ಚೌಕಮಧ್ಯದಲ್ಲಿ ಅನುಭಾವಸ್ವಾಯತ, ಅಷ್ಟದಳ ಕಮಲದಲ್ಲಿ ಸರ್ವಸ್ವಾಯತ. ಇದು ಕಾರಣ ಗುಹೇಶ್ವರ ನಿಮ್ಮ ಶರಣರು ಸದಾ ಸನ್ನಿಹಿತರು.

## 201

ಆಧಾರದಲ್ಲಿ [B]ಬ್ರಹ್ಮ[B] ಸ್ವಾಯತವಾದ ಸ್ವಾಧಿಷ್ಠಾನದಲ್ಲಿ [9]ವಿಷ್ಣು[9] ಸ್ವಾಯತವಾದ, ಮಣಿಪೂರಕದಲ್ಲಿ [10]ರುದ್ರ[10] ಸ್ವಾಯತವಾದ. ಅನಾಹತದಲ್ಲಿ [11]ಈಶ್ವರ[11] ಸ್ವಾಯತವಾದ. ವಿಶುದ್ಧಿಯಲ್ಲಿ ಸದಾ[12]ಶಿವ[12] ಸ್ವಾಯತವಾದ. [13]ಆಜ್ಞೆಯದಲ್ಲಿ ಉಪಮಾತೀತ[13] ಸ್ವಾಯತವಾದ. [C]ಇವರೆಲ್ಲರು ಬಯ[14]ಲಲ[14] ಹುಟ್ಟಿ, [15]ಬಯಲಲೆ ಬಳೆದು[15], ಬಯಲ ಲಿಂಗವನೆ ಧರಿಸಿಕೊಂಡು, ಬಯಲನೆ ಆರಾಧಿಸಿ, ಬಯಲಾಗಿ ಹೋ[16]ದುದ[16] ಕಂಡೆ ಗುಹೇಶ್ವರ.[C]

---

1. × (ಲಿ) 2. ಮಂತ್ರ (ಲಿ) 3. ಅಂತಃಕರಣಚತುಷ್ಟಯಂಗಳು (ಟ) ಚತುಷ್ಟಯ ಕರಣಾದಿಗುಣಂಗಳು (ತ) ಚತುಷ್ಟಿಯ ಕರಣಾದಿಗುಣಂಗಳು(ಲ) 4. ಶ್ರೀ (ಕದತಲ) 5. ×(ಟ) 6. ಕು ಅಮಳೋಕ್ಯವೆಂ (ಟ) A ಷಡುದರ್ಶ (ತ) 7. ಬಾ(ಟ) 8. ಚೌ (ಲ) B ಅಜನೆಂಬ (ಪ್ರ) 9. ವಿಷ್ಣುವೆಂಬ (ಪ್ರ) 10. ರುದ್ರನೆಂಬ (ಪ್ರ) 11. ಈಶ್ವರನೆಂಬ (ಪ್ರ) 12. ಶಿವನೆಂಬ (ಪ್ರ) 13. ಆಜ್ಞಾಚಕ್ರದಲ್ಲಿ ಶಾಂತ್ಯತೀತ (ಪ್ರ) C ಗುಹೇಶ್ವರಲಿಂಗದಲ್ಲಿ ವ್ಯೋಮವ್ಯೋಇವ ಕೂಡಿದಂತೆ (ಪ್ರ) 14. ಲಲ್ಲಿ (ಟ) 15. ಬಯಲಲ್ಲಿಯೆ ಬೆಳೆದರು (ಟ) ಬಯಲಲೇ ಬೆಳೆದರು (ಲ) 16. ಯಿತ್ತ(ಟ)

202

ಆಧಾರಲಿಂಗಕುಂಡಲಿವಿಡಿದು, ಹೃದಯಕಮಲದಲ್ಲಿ ಬ್ರಹ್ಮ, [1D] ಆ ಹೃದಯಕಮಲ[1]ನಾಳದಲ್ಲಿ ವಿಷ್ಣು, [2]ಆ[2] ನಾಳದಗ್ರದಲ್ಲಿ ರುದ್ರ[D], ಭ್ರೂ-ಮಧ್ಯದ ಮೇಲೆ ಈಶ್ವರನು. ಬ್ರಹ್ಮರಂಧ್ರದ [3]ಮೇಲೆ[3] ಸದಾಶಿವನು, ಶಿಖಾಗ್ರದಲ್ಲಿ ಸರ್ವಗತಶಿವನು. ಅದಿಅನಾದಿಯಿಲ್ಲದಂದು ಗುಹೇಶ್ವರಲಿಂಗ ನಿರಾಳನು.

203

ಹೊತ್ತಾಱಿ[3] ಪೂಜಿಸಲು ಬೇಡ ಕಂಡಾ! ಬೈಗೆ ಪೂಜಿಸಲು ಬೇಡ ಕಂಡಾ! ಇರುಳುವನೂ ಹಗಲುವನೂ ಕಳೆದು [4]ಪೂಜಿಸಲು[4] ಬೇಕು ಕಂಡಾ! ಇಂತಪ್ಪ ಪೂಜೆಯ ಪೂಜಿಸುವವರ ಎನಗೆ [5]ತೋಱಯ್ಯ[5] ಗುಹೇಶ್ವರ.

204

ಅಂಗದಲ್ಲಿ ಮಾಡುವ ಸುಖ[6]ವದು ಲಿಂಗಕ್ಕೆ[6] ಭೂಷಣವಾಯಿತ್ತು, [7]ಕಾಡುಗಿಚ್ಚಿನ[7] ಕೈಯ[8]ಲ್ಲಿ[8] ಕರಡವ ಕೊ[9]ಯಿ[9]ಸುವಂತೆ: ಹಿಂದೆ ಮೆದೆಯಿಲ್ಲ, ಮುಂದೆ ಹುಲ್ಲಿಲ್ಲ, ಅಂಗಲಿಂಗವೆಂಬನ್ನ[10]ಕ್ಕರ[10] ಫಲದಾಯಕ, ಲಿಂಗೈಕ್ಯವದು ಬೇಱೆ[3] ಗುಹೇಶ್ವರ.

205

ಎನ್ನ ಮನದ ಕೊನೆಯ ಮೊನೆಯ ಮೇಲೆ [11]ಅಂಗವಿಲ್ಲದ ರೂಪನ[11] ಕಂಡು [12]ಮರುಳಾದೆನವ್ವ[12]! [13]ಆತನ ಕಂಡು ಬೆಱಗಾದೆನವ್ವ[13], [14]ಎನ್ನಂ[14]ತರಂಗದ ಆತುಮನೊಳಗೆ [15]ಅನಿಮಿಷ[15]ನಿಜೈಕ್ಯ [16]ಗುಹೇಶ್ವರನ ಕಂಡು! [16]

206

ಮನದ ಸುಖವ ಕಂಗಳಿಗೆ ತಂದರೆ, ಕಂಗಳ ಸುಖವ ಮನಕ್ಕೆ ತಂದರೆ, ನಾಚಿತ್ತು, ಮನ ನಾಚಿತ್ತು. ಸ್ಥಾನಪಲ್ಲಟವಾದ[17]ಡೆ[17] ವ್ರತಕ್ಕೆ ಭಂಗ ಗುಹೇಶ್ವರ.

---

1. ×(ಚಕದತ) D ವಿಷ್ಣುದ್ವಾದಶದಲ್ಲಿ ರುದ್ರ (ಟ) 2. × (ಕಚತದಲ) 3. ಲ್ಲಿ.(ಟ) 4. ಪೂಜೆಯನು ಪೂಜಿಸಲು (ಟಹತಲ) 5. ತೋಱಿಸದಿರಾ (ಟ) 6. ಲಿಂಗಕ್ಕದು (ಚಟದಲಿ) 7. ಕಾಳ್ಕಿಚ್ಚಿನ (ಟ) ಕಾಡಕಿಚ್ಚಿನ (ಲಿ) 8. ಲು (ಲಿದ) 9. ಯ್ಕಿ (ಲಿ) 10. ಬರ (ಲಿ) 11. ಒಂದಂಗವಿಲ್ಲದ ರೂಪ (ಟ) 12. ನಾನು ಬೆಱಗಾದೆ (ಶೂ) 13. × (ಶೂ) 14. ಅಂ (ಶೂ) 15. ಅನುಮಿಷದ (ಚಿ) ಅನುಮಿಷ (ವ) 16. ಗುಹೇಶ್ವರಲ್ಲಯ್ಯನ ಕಂಡು ಬೆಱಗಾದೆನು (ಶೂ) 17. ಬಳಿಕ (ಹಲ) ಬಳಿಕ್ಕ (ಟತ).

207

ಎನಗೊಂದು ಲಿಂಗ, ನಿನಗೊಂದುಲಿಂಗ, ಮನೆಗೊಂದು ಲಿಂಗವಾಯಿ[1]ತ್ತು[1]. ಹೋಯಿತ್ತಲ್ಲಾ ಭಕ್ತಿ ಜಲವ ಕೂಡಿ! ಉಳಿ ಮುಟ್ಟಿದ ಲಿಂಗವ ಮನ ಮುಟ್ಟ ಬಲ್ಲುದೆ? ಗುಹೇಶ್ವರ.

208

ಆ[2]ರ[2]ಳಿಯ ಮರದ ಮೇಲೆ ಒಂದು ಹಂಸೆ ಗೂಡನಿಕ್ಕಿತ್ತ ಕಂಡೆ. ಆ ಗೂಡಿನೊಳಗೊಬ್ಬ ಹೆಂಗೂಸು ಉಯ್ಯಲೆಯಾಡುತ್ತಿದ್ದಳು. [3]ಉಯ್ಯಲೆ[3] ಹಱಿದು, ಹೆಂಗೂಸು ನೆಲಕ್ಕೆ ಬಿದ್ದು ಸತ್ತಡೆ ಪ್ರಾಣಲಿಂಗವ ಕಾಣಬಹುದು ಕಾಣಾ ಗುಹೇಶ್ವರ.

209

[4]ಪೃಥ್ವಿ[4]ಗೆ ಹುಟ್ಟಿದ ಶಿಲೆ, [5]ಕಲ್ಲು[5]ಕುಟಿಕಂಗೆ ಹುಟ್ಟಿದ ಮೂರುತಿ ಮಂತ್ರಕ್ಕೆ ಲಿಂಗವಾಯಿತ್ತಲ್ಲಾ! ಈ ಮೂವರಿಗೆ ಹುಟ್ಟಿದ [6]ಮಗನ[6] ಲಿಂಗವೆಂದು ಕೈವಿಡಿವ ಅಚ್ಚವ್ರತಗೇಡಿಗಳನೇನೆಂಬೆ, ಗುಹೇಶ್ವರ.

210

ಕಲ್ಲು ದೇವರೆಂದು ಪೂಜಿ[7]ಸುವರು : ಆ[7]ಗದು ಕಾಣಿ[8]ರೋ![8] [9]ಆ[9]ಗಡಿಗರಾದಿರಲ್ಲಾ! ಮುಂದೆ ಹುಟ್ಟು[10]ವ[10] ಕೂಸಿಂಗೆ ಇಂದು ಮೊಲೆಯ ಕೊಡುವಂತೆ; [11]ಗು[11]ಹೇಶ್ವರ.

211

ಮೂಱು ಪುರದ ಹೆಬ್ಬಾಗಿಲೊಳಗೊಂದು ಕೋಡಗ ಕಟ್ಟಿದ್ದುದ ಕಂಡೆ. ಅದು ಕಂಡಕಂಡವರ[12]ನೇಡಿಸು[12]ತ್ತಿದ್ದಿತ್ತು ನೋಡಾ. ಆ ಪುರದರಸು ತನ್ನ [13]ಪಾ[13]ಯದಳಸಹಿತ ಬಂದರೆ ಒಂದೇ ಬಾರಿ ಮುಱಿದು ನುಂಗಿತ್ತ ಕಂಡೆ. ಆ ಕೋಡಗಕ್ಕೆ ಒಡಲುಂಟು, ತಲೆಯಿಲ್ಲ; ಕಾಲುಂಟು, ಹಜ್ಜೆಯಿಲ್ಲ; ಕೈಯುಂಟು, ಬೆರಳಿಲ್ಲ. ಇದು ಕರಚೋದ್ಯ ನೋಡಾ! ತನ್ನ ಕರೆದವರ ಮುನ್ನ[14]ವೇ[14] ತಾ ಕರೆವುದು ಆ ಕೋಡಗ. ತನ್ನ ಬಸಿಱಲ್ಲಿ ಬಂದ ಮದಗಜದ ನೆತ್ತಿಯನೇಱಿ ಗಾಳಿಯ ಧೂಳಿಯ ಕೂಡಿ ಓಲಾಡುತ್ತಿಹುದ ಕಂಡೆ. ವಾಯುದ ಗಗನದಮೇಲೆ ತನ್ನ ಕಾಯವ ಪುಟನೆಗೆದು ತೋಱುತ್ತಿಹುದ ಕಂಡೆ. ಹತ್ತು

---

1. ತಲ್ಲಾ (ಟ) 2. ರು (ಹಚಿಲ) 3. ಆ ಉಯ್ಯಲೆ (ಟ) 4. ಸೃಷ್ಟಿ (ಚಿಓತದಲ) 5. ಕಲು (ಕದ) 6. ಮಗುವ (ಟ) 7. ಸಲಾ (ಟ) 8. ಭೋ (ವ) 9. ಅ (ತಲವ) 10. × (ವ) 11. ಕಾಣಾ ಗು (ವ) 12. ನೋಡಿಸು (ಹ) ನೋಡಿ ನಗಿಸು (ಚಿ) 13. ಪ್ರಾ (ಸ್ವ) 14. ಲೇ (ಟ)

ಮುಖವ ಸರ್ಪನ ತನ್ನ ಹೇಳಿಗೆಯೊಳಗಿಕ್ಕಿ ಆಡಿಸುತ್ತಿಹುದ ಕಂಡೆ. ಐವರು ಕೊಡಗೂಸುಗಳ ಕಣ್ಣಿಂಗೆ [1]ಕಣ್ಣಡವ[1] ಕಟ್ಟುತ್ತಿಹುದ ಕಂಡೆ. ಹತ್ತು ಕೇರಿಗಳೊಳಗೆ ಸುಳಿವ ಹರಿಯ ನೆತ್ತಿಯ ಮೆಟ್ಟಿ [2]ಹುಬ್ಬೆತ್ತುತ್ತಿಹುದ[2] ಕಂಡೆ. ಆ ಕೋಡಗದ ಕೈಯ್ಯಲ್ಲಿ ಮಾಣಿಕ್ಯವ ಕೊಟ್ಟಡೆ, ನೋಡುತ್ತ ನೋಡುತ್ತ ಬೆಱಗಾದುದ ಕಂಡೆ. ಕೂಡಲಿಲ್ಲ, ಕಳೆಯಲಿಲ್ಲ; ಗುಹೇಶ್ವರನ ನಿಲವು ಪ್ರಾಣಲಿಂಗಸಂಬಂಧವಿಲ್ಲದವರಿಗೆ ಕಾಣಬಾರದು.

212

ಕಲ್ಲ ಮನೆಯ ಮಾಡಿ, ಕಲ್ಲ ದೇವರ ಮಾಡಿ, [3]ಆ[3] ಕಲ್ಲು ಕಲ್ಲ ಮೇಲೆ ಕೆಡೆದರೆ ದೇವರೆತ್ತ ಹೋದರೋ? ಲಿಂಗಪ್ರತಿಷ್ಠೆಯ ಮಾಡಿದ[4]ವಂಗೆ[4] ನಾಯಕನರ[5]ಕ[5] ಗುಹೇ[6]ಶ್ವರ.[6]

213

[A] ದೇಹ[B]ದೊಳಗೆ[B] [7]ದೇವಾಲಯವಿದ್ದು[7], [8]ಮತ್ತೆ ಬೇಱೆ[8]ದೇವಾಲಯವೇಕೆ? [9]ಎರಡಕ್ಕೆ ಹೇಳಲಿಲ್ಲಯ್ಯ![9] ಗುಹೇಶ್ವರ, ನೀನು ಕಲ್ಲಾದರೆ ನಾನೇನಪ್ಪೆನು.[A]

214

ಒಡಲುವಿಡಿದು ಪಾಷಾಣಕ್ಕೆ ಹಂಗಿಗರಾದಿರಲ್ಲಾ ?! [10]ಅಂಗ[10]ಸಂಗಿಗಳೆಲ್ಲಾ ಮಹಾಘನವನಱಿಯದೆ [11]ನಿಂದಿರೋ[11]! ಹುಸಿಯನೆ [12]ಕೊಯ್ದು[12], ಹುಸಿಯನೆ ಪೂಜಿಸಿ, ಗಸಣಿಗೊಳಗಾದರು; ಗುಹೇಶ್ವರ.

215

ಆಳುದ್ದಿ[13]ಯ[13]ದೊಂದು ಭಾವಿ ಆಕಾಶದ ಮೇಲೆ ಹುಟ್ಟಿತ್ತು ನೋಡಾ! ಆ ಭಾವಿಯ ನೀರನೊಂದು ಮೃಗ ಬಂದು ಕುಡಿಯಿತ್ತು. ಕುಡಿಯ ಬಂದ ಮೃಗ[14]ವಾ[14] ನೀರೊಳಗೆ ಮುಳುಗಿದರೆ, ಉರಿಯ ಬಾಣದಲೆಚ್ಚು ತೆಗೆದೆ ನೋಡಾ ಒಂದೇ ಬಾಣದಲ್ಲಿ ಗಾಯವಿಲ್ಲದೆ ಸತ್ತ ಮೃಗವು ಮುಂದಣ ಹೆಜ್ಜೆಯ

---

1. ಕನ್ನಡವ (ಚಿ) ಕನ್ನಡಕವ (ಸ್ವಓಕಚತಲ) 2. ಹುಬ್ಬಾಡಿಸುವುದ (ಟ) 3. × (ಕದತಲ) 4. ವರಿಗೆ (ಟ) 5. ಕವಪ್ಪುದು (ಟ) 6. ಶ್ವರ (ಶೂ) A ದೇಹವೇ ದೇವಾಲಯವಾಗಿದ್ದ ಮೇಲೆ ಮತ್ತೆ ಬೇಱೆ ದೇಗುಲಕ್ಕೆ ಎಡೆಯಾಡುವರಿಗೆ ಏನ ಹೇಳುವೆನಯ್ಯ? ಗೊಹೇಶ್ವರ ನೀ ಕಲ್ಲಾದಡೆ ನಾನೇನಪ್ಪೆನು? (ಟ) B ವೇ (ಶೂ) 7. ದೇಗುಲವಿರಲು (ವ) ದೇಗುಲವಾಗಿರಲು (ಶೂ) 8. ಬೇಱೆ ಮತ್ತೆ (ವಶೂ) 9. ಹೇಳಲಿಲ್ಲ ಕೇಳಲಿಲ್ಲ (ಶೂವ) ಪ್ರಾಣವೆ ಲಿಂಗವಾಗಿರಲು ಬೇಱೆಮತ್ತೆ ಲಿಂಗವೇಕಯ್ಯ (ಶೂ) 10. ಲಿಂಗ (ಹ) 11. ಹೋದಿರೋ (ತಲ) ಹೋದರೋ (ಹ) 12. ಕೊಂಬುದಲ್ಲದೆ (ಚ) 13. ಹು (ಹ) 14. × (ಚಢ)

385

ಗುರುಶಿಷ್ಯಸಂಬಂಧಕ್ಕೆ ಲಿಂಗ[1]ವ[1] ಧರಿಸು[2]ವರಯ್ಯ[2] ! ನಿಮ್ಮ ಬಂಧನ [3]ಕಿ[3]ಕ್ಕಿ ಆಳುವ[4]ರಯ್ಯ ![4] [5]ಆ[5]ನು ಕಂಡು ಮಱುಗಿ ಅಕಟಕಟಾ ಎಂದೆನ[6]ಲ್ಲಾ[6]! ಕೂಗಿಲ್ಲ, ಬೊಬ್ಬೆಯಿಲ್ಲ; ಹೋದ ಹೊಲಬನಱಿಯರು—ದೇವ [7]ಗುಹೇಶ್ವರನ ಬಾಳುದಲೆವಿಡಿದೆ.[7]

386

ಕಾಯದಲ್ಲಿ ಕಳವಳವೆಡೆಗೊಂಡ ಬಳಿಕ ಅಱಿವಿನಲ್ಲಿ ಮಱವೆ ತಾನೆ ನಿಂದಿತ್ತು ನೋಡಾ! ಕಾಯದ ಕಳವಳವ ವಾಯುವೆಂದಱಿಯ ಬಲ್ಲಡೆ [8]ದೇವ[8] ಗುಹೇಶ್ವರನ ನಿಲವು ತಾನೆ.

387

ಬಿಸಿಲೆಂಬ ಗುರುವಿಂಗೆ ನೆಳಲೆಂಬ ಶಿಷ್ಯ. ನಿರಾಳಲಿಂಗಕ್ಕೆ ಬಯ[9]ಲ[9] ಸೆಜ್ಜೆ, ವಾಯು[10]ವೆ[10] ಶಿವದಾರ, ಬೆಳಗೆ ಸಿಂಹಾಸನ. ಅತ್ತಲಿತ್ತ ಚಿತ್ತವ ಹರಿಯಲೀಯದೆ ಮಜ್ಜನಕ್ಕೆಱೆದು ಸುಖಿಯಾದೆ ಗುಹೇಶ್ವರ.

388

ಕರಣಾದಿ ಗುಣಂಗ[11]ಳಳಿದು[11], ನವಚಕ್ರಂಗಳು ಭಿನ್ನವಾದ ಬಳಿಕ ಇನ್ನೇನೋ, ಇನ್ನೇನೋ?! [12]ಪುಣ್ಯ[12] ಪಾಪವಿಲ್ಲ ಇನ್ನೇನೋ ಇನ್ನೇನೋ? [13]ಸ್ವರ್ಗ[13]ನರಕವಿಲ್ಲ ಇನ್ನೇನೋ ಇನ್ನೋನೋ! ಗುಹೇಶ್ವರ [14]ನೆಂಬ ಲಿಂಗ[14] ವೇದಿಸಿ ಸುಖಿಯಾದ ಬಳಿಕ ಇನ್ನೇನೋ ಇನ್ನೇನೋ?

389

ಪೃಥ್ವಿಯನತಿಗಳೆದ ಸ್ಥಾವ[15]ರಂ[15]ಗಳಿಲ್ಲ. [16]ಅಪ್ಪು[16]ವನತಿಗಳೆದ ತೀರ್ಥಯಾತ್ರೆಗಳಿಲ್ಲ. ಅಗ್ನಿಯನತಿಗಳೆದ ಹೋಮಸಮಾಧಿಗಳಿಲ್ಲ. ವಾಯುವನತಿಗಳೆದ ನೇಮನಿತ್ಯಂಗಳಿಲ್ಲ. ಆಕಾಶವನತಿಗಳೆದ ಧ್ಯಾನ ಮೌನಂಗಳಿಲ್ಲ. ಗುಹೇಶ್ವರನೆಂದಱಿ[17]ದಂ[17]ಗೆ ಇನ್ನಾವಂಗವೂ ಇಲ್ಲ.

390

ಪೃಥ್ವಿ ಜಡನೆಂದಱಿ[18]ದವಂಗೆ[18] ಸ್ಥಾವರಾದಿಗ[19]ಳಲ್ಲಿ[19] ಎಱಗಲೇಕಯ್ಯ? ಅಪ್ಪು ಜಡನೆಂದಱಿದವಂಗೆ ತೀರ್ಥಸ್ನಾನಂಗಳಲ್ಲಿ ಅತಿಶಯ

---

1. ವನವ (ಕ) 2. ವಿರಿ (ವ) 3. ಕ್ಕೆ (ವ) 4. ರು (ವ) 5. ನಾ (ವ) 6. ಯ್ಯ (ತ) 7. ಗುಹೇಶ್ವರಾ ಬಾಳುದಲೆಯ ಹಿಡಿದೆನು (ಕಚಟತದಲ) 8. × (ತಲ) 9. ಲೆಂಬ (ಟ) 10. × (ಟ) 11. ಳಳಿದು ಕಳೆದು (ಕಟದ) 12. ಪುಣ್ಯವಿಲ್ಲ (ತಲ) 13. ಸ್ವರ್ಗವಿಲ್ಲ (ತಲ) 14. ಲಿಂಗವ (ಟ) 15. ರಾದಿ (ಲ) 16. ಉದಕ (ಟತಲ) 17. ದವಂ (ಟ). 18. ದಂಗೆ (ಕತಲ) 19. ಳಿಗೆ (ಟ)

ವೇಕಯ್ಯ ? ತೇಜ ಜಡನೆಂದಱಿದವಂಗೆ ಹೋಮಸಮಾಧಿಗಳೇಕಯ್ಯ ? ವಾಯು ಜಡನೆಂದಱಿದವಂಗೆ ಧ್ಯಾನಮೌನಂಗಳ ಹಿಡಿಯಲೇಕಯ್ಯ ? ಆಕಾಶ ಜಡನೆಂದಱಿ[1]ದವಂಗೆ[1] ಮಂ[2]ತ್ರಾ[2]ರೂಢಿ ಏಕಯ್ಯ ? ಇನಿತು ಜಡನೆಂದಱಿದ ವಂಗೆ ವಿಧಿಕಿಂಕರತೆ ಇಲ್ಲವಯ್ಯ, ಗುಹೇಶ್ವರನೆಂಬ ನಿಜವು ಇದು ತಾನೆಂದ ಱಿದ ಮಹಾತ್ಮಂಗೆ.

391

ಬಂದ ಬಟ್ಟೆಯ ನಿಂದು ನೋಡಲೊ[3]ಲ್ಲೆ[3] ! ಕಂದ, ಕಂದ, ಅದೇನು ಸೋಜಿಗವೋ ! ಬಿಂದು ಛಂದವಲ್ಲ ; ಬಂದ ಪರಿಯನು ಗುಹೇಶ್ವರ ಬಲ್ಲ [4]ಕಂಡಾ[4] !

392

ಪೃಥ್ವಿಯಲೊದಗಿದ ಘಟವು ಪೃಥ್ವಿಯಲಡಗಿದರೆ ಆ ಪೃಥ್ವಿಯ ಚರಿತ್ರವೆ ಚರಿತ್ರ ನೋಡಾ ! ಅಪ್ಪುವಿನಲೊದಗಿದ ಘಟವು ಅಪ್ಪುವಿನಲಡಗಿದರೆ ಆ ಅಪ್ಪುವಿನ ಚರಿತ್ರವೆ ಚರಿತ್ರ ನೋಡಾ ! [5]ತೇಜದ[5]ಲೊದಗಿದ ಘಟವು [5]ತೇಜದ[5]ಲಡಗಿದರೆ ಆ ತೇಜದ ಚರಿತ್ರವೆ ಚರಿತ್ರ ನೋಡಾ ! ವಾಯುವಿನ ಲೊದಗಿದ ಘಟವು ವಾಯುವಿನಲಡಗಿದರೆ ಆ ವಾಯುವಿನ ಚರಿತ್ರವೆ ಚರಿತ್ರ ನೋಡಾ ! ಆಕಾಶದಲ್ಲೊದಗಿದ ಘಟವು ಆಕಾಶದಲಡಗಿದರೆ ಆ ಆಕಾಶದ ಚರಿತ್ರವೇ ಚರಿತ್ರ ನೋಡಾ ! ಗುಹೇಶ್ವರನೆಂಬ ಲಿಂಗದಲೊದಗಿದ ಘಟವು ಲಿಂಗದಲಡಗಿದರೆ ಆ ಲಿಂಗದ ಚರಿತ್ರವೆ ಚರಿತ್ರ ನೋಡಾ !

393

ಸಕಲ ಭುವನಾದಿ ಭುವನಂಗಳಿಗೆ ತಂದೆ, ಸಕಲ ದೇವಾದಿ ದೇವರ್ಕಳಿಗೆ ತಂದೆ, ಭವಭವದಲ್ಲಿ ನೀನೆನ್ನ ತಂದೆ, ಗುಹೇಶ್ವರಲಿಂಗ, ನಿರಾಳದಲ್ಲಿ ನೀನೆನ್ನ ತಂದೆ.

394

ಬಟ್ಟೆಗೊಂಡು ಹೋಗುತ್ತೊಂದ [6]ಕೊಟ್ಟು[6] ಹೋದರೆಮ್ಮವರು. ಎಲ್ಲಿಯದು ಲಿಂಗ ? ಎಲ್ಲಿಯದು ಜಂಗಮ ? [7]ಎಲ್ಲಿಯದು ಪಾದೋದಕ ಪ್ರಸಾದ ವಯ್ಯ[7] ? ಅಲ್ಲದವರೊಡನಾಡಿ [8]ಎಲ್ಲರೂ[8] ಮುಂದುಗೆಟ್ಟರಯ್ಯ. [9]ಆ[9] ನಿಮ್ಮ ನಂಬಿ ಬಯಲಾದೆ ಗುಹೇಶ್ವರ.

---

1. ಡಾತಂಗೆ (ಟ) 2. ತ್ರ (ಟಲ) 3. ಲ್ಲದೆ (ಲ) 4. ಕಂದಾ (ಡಿಟಲ) × (ತ) 5. ಅಗ್ನಿಯ (ತಲ) 6. ಉಡಕೊಟ್ಟು (ಲಿ) 7. ಎಲ್ಲಿಯದು ಪ್ರಸಾದವಯ್ಯ (ಲಿ) ಎಲ್ಲಿಯದು ಪ್ರಸಾದ ಎಲ್ಲಿಯದು ಪಾದೋದಕವಯ್ಯ (ಟತಲ) 8. ಎಲ್ಲಾ (ಟ) 9. ಆನು (ತ)

395

ಆದಿ[1]ಯ[1] ಶರಣನ ಮದುವೆಯ ಮಾಡಲು ಯುಗಜುಗದವರೆಲ್ಲಾ ನಿಬ್ಬಣ ಹೋದರು. ಹೋದ ನಿಬ್ಬಣಿಗರು ಮರಳರು. ಮದವ[2]ಣಿ[2]ಗನ [3]ಸುದ್ದಿ[3]ಯನಜಾಯಲು ಬಾರದು. ಹಂದರವಳಿಯದು, ಹಸೆ ಮುನ್ನಲುಡುಗದು. ಬಂದ ಬಂದವರೆಲ್ಲ ಮಿಂದುಂಡು ಹೋದರು. ಇದಱಂತುವನಱ[4]ಯದೆ ಜಗವೆಲ್ಲ ಬಱಡಾಯಿತ್ತು ಗುಹೇಶ್ವರನೆಂಬ[4] ಶಬ್ದವನೊಳಕೊಂಡ ಮಹಂತ [5]ಬಯಲು[5].

396

ಮರನೊಳಗಣ ಕಿಚ್ಚು ಮರನ ಸುಟ್ಟಂತಾದೆನಯ್ಯ! ಬಯಲ ಗಾಳಿಯ ಪರಿಮಳ ನಾಸಿಕವನಪ್ಪಿದಂತಾದೆನಯ್ಯ. ಕರುವಿನ ಬೊಂಬೆ[6]ಯನುರಿಗೊಂಡು ನಿಂದಂ[6]ತಾದೆನಯ್ಯ! ಗುಹೇಶ್ವರನೆಂಬ ಲಿಂಗವ ಪೂಜಿಸಿ ಭವಗೆಟ್ಟೆನಾನಯ್ಯ.

397

ಐವರ ಸಂಗದಿಂದ ಬಂದೆ ನೋಡಯ್ಯ. ಐವರ ಸಂಗದಿಂದ ನಿಂದೆ ನೋಡಯ್ಯ. ಐವರೂ ತಮ್ಮ ತಮ್ಮ ಬಟ್ಟೆಯಲ್ಲಿ ಹೋದರು. ನಾನೊ[7]ಬ್ಬನೆ[7] ನಿಸ್ಸಂಗಿಯಾಗಿ ಉಳಿದೆನ[A]ಲ್ಲಾ[A]! ಗುಹೇಶ್ವರನೆಂಬ ನಿತ್ಯನಿರಂಜನ [8]ರೂಪಿ[8]ಲ್ಲದ ಘನವ ಕಂಡೆನಯ್ಯ.

398

ಸಟೆ ದಿಟವಾದಲ್ಲಿ ಮುಟ್ಟ[9]ಯು[9] ಮುಟ್ಟದೆ ಇರಬೇಕು. ಅತಿರತಿಗತಿ ಮತಿಗೆ ಮಂದವಾಯಿತ್ತು. ಎಂಟು [A]ಹಿಟ್ಟು[A] ಪಂಚಮಠ ಉಂಟು ಧರೆಯ ಮೇಲೆ, ನರಸುರಾದಿಗಳೆಲ್ಲ [10]ಸಭಾರವ[10] ಹೊತ್ತು ಬಂದೈದಾರೆ. ಹಿಟ್ಟು ನಷ್ಟ; ಮಠ ಹಾಳು, ಊರಿಗುಪಟಳ! [B]ಘನಮಠವ[B] ಸುಟ್ಟು ಗುಹೇಶ್ವರ [11]ಬಿ(ೀ?)ದಿಗಜು[11]ವಾದ.

---

1. ಯಲ್ಲೊಬ್ಬ (ಟ) 2. ನಿ (ಕಚಟದಲ) 3. ಶುದ್ಧಿ (ಕಚದ) ಶುದ್ಧಿ (ಲ) 4. ಯದೆ ಜಗವೆಲ್ಲ ಬಱಿದಾಯಿತ್ತು ಗುಹೇಶ್ವರನೆಂಬ (ಹ) ಯದೆ ಜಗವೆಲ್ಲಾ ಬಱಿದಾಯಿತ್ತು ಗೊಹೇಶ್ವರ (ಟ) ಪಡೆ ನಿಜವಿಲ್ಲ ಗುಹೇಶ್ವರನೆಂಬ (ಕಚದ) 5. ಬಯಲು (ಲಿ) 6. ಯ ಉರಿ ಉಂಡಂ (ಟ) ಯನು ಉರಿ ಕೊಂಡಂ (ಡಿತಲ) ನಾನಯ್ಯ ಉರಿ ಕೊಂಡು ನಿಂದಂ (ದ) 7. ಬ್ಬ (ಟಲಿತಲ) Aಯ್ಯ (ಲಿ) 8. ಸ್ವರೂಪ (ಲಿ) ರೂಹಿ (ಕ) 9. × (ತಲಐಟ) Aಹಿಟ್ಟ (ತಲ) 10. ಸಂಭಾರವ (ಕ) ಸಬಾರವ (ತ) ಸಬಾರ (ಲ) Bಪಂಚಮಠವ (ಐ) 11. ಬಿಡೆಗಜು (ಚ) ಬೀದಿಗಜಿ (ಚವ್ಯಾ) ಬಿದಿಗರು (ಓ) ಬಿಡೆಗರು (ಸ್ವ)

399

ಮತಿಯೊಳಗೊಂದು ದುರ್ಮತಿ ಹುಟ್ಟಿದ ಬಳಿಕ, ಮತಿಯು ಮಱವೆ ಯೊಳಕೊಂಡು ಭವಕ್ಕೆ ಗುಱಿ ಮಾಡಿ ಕೆಡಹಿತ್ತು, ನೋಡಾ! [1]ಅಖಂಡಿತವ ತಂದು[1] ಮತಿಯೊಳಗೆ ವೇದಿಸಲು ಗತಿಗೆಟ್ಟು ನಿಂದಿತ್ತು ಗುಹೇಶ್ವರ.

400

ತಲೆಯಿಲ್ಲದಟ್ಟೆ ಜಗವ ನುಂಗಿತ್ತು, ಅಟ್ಟೆಯಿಲ್ಲದ ತಲೆ ಆಕಾಶವ ನುಂಗಿತ್ತು, ಅಟ್ಟೆ ಬೇಱೆ ತಲೆ ಬೇಱಾದಡೆ ಮನಸಂಚಲಿಸುತ್ತಿದ್ದಿತ್ತು. ಅಟ್ಟೆ ಯನೂ ತಲೆಯನೂ ಬಯಲು ನುಂಗಿದರೆ, ಆನು ನುಂಗಿದೆನು ಗುಹೇಶ್ವರ[2]ನಿಲ್ಲ ದಂತೆ.[2]

401

ಅಹಂಕಾರವನೆ ಮಱೆದು, ದೇಹಗುಣಂಗಳನೆ ಜಱೆದು [3]ಇಹಪರವೂ[3] ತಾನೆಂದಱಿದ ಕಾರಣ, ಸೋಹಂಭಾವ ಸ್ವಸ್ಥಿರವಾಯಿತ್ತು. ಸಹಜ[4]ದು[4]ದಯದ ನಿಲವಿಂಗೆ [5]ಮ[5]ಹಾಘನಲಿಂಗದ ಬೆಳಗು [6]ಸ್ವಾಯತ[6]ವಾದ ಕಾರಣ, ಗುಹೇ ಶ್ವರ, ನಿಮ್ಮ ಶರಣನುಪಮಾತೀತನು.

402

ಕಾಯ ಭಿನ್ನವಾಯಿತ್ತೆಂದು ಮುಟ್ಟಿಸುವರು ಲಿಂಗವನು. [7]ಮುಟ್ಟ ಲಾಗದು ಲಿಂಗವ, ಮುಟ್ಟಿದಾತ[7] ಮುಂದೆ ಹೋದ. ಮುನ್ನ ಮುಟ್ಟಿದವರೆಲ್ಲಾ ಉಪಜೀವಿಗಳು. ಇನ್ನು ಮುಟ್ಟಿದವರಿಗೆ ಗತಿಯುಂಟೆ ಗುಹೇಶ್ವರ?

403

ಬಿತ್ತದ ಬೆಳೆಯದ ತುಂ[8]ಬಿ[8]ದ ರಾಶಿಯ ಕಂಡಲ್ಲಿ, ಸುಖಿಯಾ[9]ಗಿ ನಿಂ[9]ದ ವರಾರೋ? ಇದ ಹೇಳಲೂ ಬಾರದು, ಕೇಳಲೂ ಬಾರದು. ಗುಹೇಶ್ವರ, ನಿಮ್ಮ ಶರಣನು ಲಚ್ಚಣವಳಿಯದೆ ರಾಶಿಯನಳೆದನು.

404

ಅಂತರಂಗದಲ್ಲಿ ಭವಿಯನೊಳಕೊಂಡು, ಬಹಿರಂಗದಲ್ಲಿ ಭಕ್ತಿಯನೊಳ ಕೊಂಡು, ಆತ್ಮ ಸಂಗದಲ್ಲಿ ಪ್ರಸಾದವನೊಳಕೊಂ[10]ಡು ಇಪ್ಪ ಭಕ್ತರ[10] ಕಾಣೆ ನಯ್ಯ. ನಾನು [11]ಇಂತಪ್ಪ[11] ಲಿಂಗೈಕ್ಯರ ಕಾಣೆನಯ್ಯ. ಅಂತರಂಗದಲ್ಲಿ ಸುಳಿ

---

1. ಅಖಂಡವ ಕಂಡು (ಲಿ) 2. × (ತ) 3. ಇಹಪರ (ಟ) ಇಹವು ಪರವು (ತ) ಇಹವೂ ಪರವೂ (ಲ) 4. ಉ (ಕಚದತ) 5. ಅ ಮ (ಕತ) 6. ಸ್ವಯ (ಟ) 7. ಮುಟ್ಟಿದಾತ (ಟ) ಮುನ್ನ ಮುಟ್ಟಿದಾತ (ತ) 8. ಬ (ಟಲ) 9. × (ಟ) 10. ಡಿಪ್ಪ ಭಕ್ತರನಾರನೂ (ಲಿ) 11. ಇಪ್ಪ (ಲಿ) ನಿಜ (ವ)

ದಾಡುವ ತನುಗುಣಾದಿಗಳ, ಮನಗುಣಾದಿಗಳ, ಪ್ರಾಣಗುಣಾದಿಗಳ ಕಳೆದಲ್ಲಿ ಶರಣರಹರೆ? [1]ತನು-ಮನ-ಧನವ ಕೊಟ್ಟಲ್ಲಿ ಭಕ್ತರಹರೆ[1]? ಉಂಬವರ ಕಂಡು ಕಯ್ಯ ನೀಡಿದಡೆ ಪ್ರಸಾದಿಗಳಹರೆ? ಅಂತರಂಗ, ಬಹಿರಂಗ, ಆತ್ಮ ಸಂಗ—[2]ಈ[2] ತ್ರಿವಿಧಭೇದವ, ಗುಹೇಶ್ವರ, ನಿಮ್ಮ ಶರಣ ಬಲ್ಲ.

405

ಲೋಕದ ನಚ್ಚು ಮ[3]ಚ್ಚು[3] ಬಿಟ್ಟು ನಿಶ್ಚಿಂತವಾಯಿ[4]ತ್ತು.[4] ಏನು ಹತ್ತಿತ್ತೆಂದಱಿಯೆನಯ್ಯ! ಏನು [5]ಹೊದ್ದಿ[5]ತ್ತೆಂದಱಿಯೆನಯ್ಯ. ಗುಹೇಶ್ವರ ನೆಂಬ [A]ಗ್ರ್ರಹ[A] ಒಳಕೊಂಡಿತ್ತಾಗಿ ನಾನೇನೆಂದಱಿಯೆನಯ್ಯ.

406

ಧರೆಯ ಮೇಲಣ ಜನಿತಕ್ಕೆ ಉರಗನ ಅಧರಪಾನ! ನ-ಖ-ಕಂ-ಕಣ ಮುಖ ಮುವ್ವತ್ತೊಂ[B]ದ[B] [C]ಶಿರ[6]ವು[6C] ನುಂಗಿತ್ತು ನೋಡಾ! ಉತ್ತರಾಪಥದ ಕೊಡಗೂಸು ಈಶಾನ್ಯ[7]ದ[7] ಒಡಲೊಳಗೆ [8]ಅಡಗಿ,[8] ಸಾಕಾರಸಂಗವ ನುಂಗಿದ, ಭಾಷೆಯನಱಿಯದ ಮುಗುದೆ! ಅಱಿವಿನೊಳಗಣ ಮಱಹು, ಮಱಹಿನೊಳ ಗಣ ಅಱಿವು! ಗುಹೇಶ್ವರನೆಂಬ ಲಿಂಗವು ತ್ರಿಕಾಲಪೂಜೆಯ ನುಂಗಿತ್ತು.

407

ಊರಕ್ಕಿ ಊರೆಣ್ಣೆ ಉಣ್ಣು ಮಾರಿಕವ್ವ; ತಾಯೆ, [9]ಬಾರಿಕಮಾ[9]ರನ ತಲೆಗಾಯಿ [10]ಎ[10]ಂಬಂತೆ, ಕಾಡ[11]ಹೂ[11] [12]ಕೈಯ[12] ಲಿಂಗವ ಪೂಜಿ [13]ಸುವಾತನ[13] [14]ಭಕ್ತ[14]ನೆಂಬರು, ಅಲ್ಲ! [15]ತಾನು[15] ಲಿಂಗ, ತನ್ನ ಮನವೆ ಪುಷ್ಪ, ಪೂಜೆಯ ಪೂಜಿ[16]ಸುವಾತನೆ[16] ಸದ್ಭಕ್ತನು ಗುಹೇಶ್ವರ.

408

ವಾಯದ [17]ಪಿಂಡಿಗೆ ಮಾಯದ[17] ದೇವರಿಗೆ; ವಾಯಕ್ಕೆ [18]ಕಾ[18]ಯವ ಬಳಲಿಸದೆ [19]ಪೂಜಿಸಿರೋ?[19] ಕಟ್ಟುಗುಂಟಕ್ಕೆ ಬಂದ ದೇವರ ಪೂಜಿ

---

1. ಬಾಹಿರಂಗದಲ್ಲಿ ತನುವ ಕೊಟ್ಟು, ಮನವ ಕೊಟ್ಟು, ದನವ ಕೊಟ್ಟು ಭಕ್ತರಹರೆ (ವ) 2. ಇಂತೀ (ವ) 3. ಚ್ಚ (ಟ) 4. ತು (ಲ) 5. ಹೊಂದಿ (ಟ) ಹೊತ್ತಿ (ಹ) Aಗ್ರಾಹ (ಲ) B(ಬ); ದು 6. ವ (ಕಚತದಲಡಿ) C× (ಡಿ) 7. ದಾ (ಲಕ) 8. × (ಟ). 9. ಬಾರಿಕಮ್ಮಾ (ಕ) ಬಾರೆ ಕುಮಾರನ (ಪ್ರ) 10. ದೆ (ತ) 11. ಹೂವಿನಲಿ (ಪ್ರ) 12. ಕಲ್ಲ (ಟಪ್ರ) 13. ಸಿದವನ (ಸ್ವಹಟತಲ) 14. ಸದುಭಕ್ತ (ಟ) ಭವಿಯ ಭಕ್ತ (ಪ್ರ) 15. ತಾ (ಟ) 16. ಸಿದಾತನೆ (ತಲ) 17. ಪಿಡಿಗೆಯ ಮಾಯಿ (ವ) 18. ವಾ (ತಲ) 19. ಪೂಜಿಸಿ ಪೂಜಿಸಿ ಭೋ (ವ)

ಸಲು, ಸೂಜಿಯ [1]ಪೋಣಿಸಿ[1] ದಾರವ [2]ಮಱೆ[3]ದಡೆ ಹೊಲಿಗೆ ಬಿಚ್ಚಿತ್ತು[2] ಗುಹೇಶ್ವರ.

409

ಭಿತ್ತಿ ಮೂಱಱ ಮೇಲೆ [3]ಚಿತ್ರ[3] ಬರೆಯಿತ್ತು. ಪ್ರಥಮ ಭಿತ್ತಿಯ ಚಿತ್ರ ಚಿತ್ರದಂ[4]ತಿ[4]ದ್ದಿತ್ತು. ಎರಡನೆಯ ಭಿತ್ತಿಯ ಚಿತ್ರ ಹೋಗುತ್ತ ಬರುತ್ತಿದ್ದಿತ್ತು. ಮೂಱನೆಯ ಭಿತ್ತಿಯ ಚಿತ್ರ ಹೋಯಿತ್ತು, ಮರಳಿ ಬಾರದು. ಗುಹೇಶ್ವರ, ನಿಮ್ಮ ಶರಣ ತ್ರಿವಿಧದಿಂದತ್ತ[5]ತ್ತ[5]ಲೆ.

410

ಅಂಗದ ಮೇಲೆ ಲಿಂಗಸಂಬಂಧ[6]ವಾದ ಬಳಿಕ, ಪ್ರಾಣದ[6] ಮೇಲೆ ಜ್ಞಾನ ನಿರ್ಧರವಾಯಿತ್ತು ನೋಡಾ! ಒಳಹೊಱಗೆಂಬ ಉಭಯವೂ ಏಕಾರ್ಥ ವಾಯಿತ್ತು, ಗುಹೇಶ್ವರ, ನಿಮ್ಮ ನೆರೆದೆನಾಗಿ.

411

[7]ಹಿಂದೆ[7] ಮುನ್ನೂಱಱವತ್ತು ಸಾವಿರ ಯುಗ ಹೋಯಿತ್ತು. [8]ಮುಂದೆ[8] ಮುನ್ನೂಱಱವತ್ತು ಸಾವಿರ ಯುಗ ಹೋಯಿತ್ತು. ಇನ್ನೂ [9]ಕೊಯ್ದಾನೆ[9] ಪುಷ್ಪಂಗಳನು? ಉನ್ನತನೆಂಬ ಗಣೇಶ್ವರನ ಕರಡಗೆ ತುಂಬದು ನೋಡಾ! ಇನ್ನೂ ಕೊಯ್ದಾನೆ ಪುಷ್ಪಂಗಳನು? ಆ ಕುಲಗಿರಿಗೆ ಮೇರುಗಿರಿ ಘನ ವೆಂದಱಿಯರು. ಗುಹೇಶ್ವರ, ನಿಮ್ಮ ಮಹಿಮೆಯ ಹರಿಬ್ರಹ್ಮಾದಿಗ[10]ಳ[10]ಱಿ ಯರು.

412

ಮಹಾಮೇರುವಿನ ಮಱೆ[3]ಯಲ್ಲಿದ್ದು ಭೂತದ [A]ನೆಳಲನಾ[11]ಚ[11]ರಿಸುವ[A] ಕರ್ಮಿ ನೀ ಕೇಳಾ! ಮಹಾಲಿಂಗಕ್ಕೆ ಮಜ್ಜನವೆಂದೇನೋ? ಪರಿಮಳಲಿಂಗಕ್ಕೆ ಪತ್ರೆಪು[B]ಷ್ಪವೆಂ[B]ದೇನೋ? ಜ[12]ಗ[12]ಜ್ಜ್ಯೋತಿಲಿಂಗಕ್ಕೆ ಧೂಪದೀಪಾರತಿ ಯೆಂದೇನೊ? ಅಮೃತಲಿಂಗಕ್ಕೆ ಆರೋಗಣೆಯೆಂದೇನೋ? ಗುಹೇಶ್ವರಲಿಂಗ ದಂತುವ ಬಲ್ಲವರಾರೋ?

413

ಹೂವ ಕೊಯ್ಯ ಹೋದರೆ ಹೂ ದೊರಕೊಳವು; ಅಗ್ಘವಣಿಯ

---

1. ಪೋಣಿಸ (ಚ) 2. ಮಱೆದ ಹೊಲಿಗೆ ಬಿಚ್ಚದೆ (ವ) 3. ಚಿತ್ರವ (ಕ) 4. ತೆ ಇ (ಟ) 5. X (ಐಕಚತದಲ) 6. ವಾಗಿ ಪುನರ್ಜನ್ಮವಿಲ್ಲದೆ ಬಳಿಕ ಪ್ರಾಣದ (ಚ) ವಾದ ಬಳಿಕ ಪ್ರಾಣನ (ತಟ) 7. ಮುಂದೆ (ಹಟ) 8. ಹಿಂದೆ (ಹಟ) 9) ಕೊಯ್ದುಹನೆ (ಟ) 10. ಳಾರೂ ಅ (ಟ) A ನೆಳಲನಱಿಸುವ (ಐ) 11. ದ (ಚ. B ಷ್ಪಂಗಳೆಂ (ತಲ) 12. ಗಂ (ಸ್ವಓದಲ)

ತುಂಬುವಡೆ ಅಗ್ಘವಣಿ ತುಂಬದು ; ಪೂಜಿಸ ಹೋದರೆ ಪೂಜೆ [1]ನೆಲೆ[1]ಗೊಳ್ಳದು; ಇದೇನು ಸೋಜಿಗವೋ ಅಯ್ಯ ! ? ಅಱಿದು ಮಱೆದವನಲ್ಲ, [2]ಬೆಱಗು ಹಿಡಿದವನಲ್ಲ[2] ! ಗುಹೇಶ್ವರನೆಂಬ ಬುದ್ಧಿಯಿಂತುಟು.

414

ಶರಣಲಿಂಗಾರ್ಚನೆಯ ಮಾಡಲೆಂದು ಪುಷ್ಪಕ್ಕೆ [3]ಕರವ[3] ನೀಡಿದರೆ, [4]ಆ ಪುಷ್ಪ ನೋಡ ನೋಡ ಕರದೊಳಡಗಿತ್ತಲ್ಲಾ[4] ! ಅದು ಓಗರದ ಗೊಬ್ಬರವನುಣ್ಣದು ; [5]ಕಾಮದಗಣ್ಣಱಿಯದು[5] ; ನಿದ್ರೆಯ ಕಪ್ಪೊತ್ತದು; [A]ಅರುಣಚಂದ್ರರ ತೆರೆಯಲ್ಲಿ [6]ಬೆ[6]ಳೆಯದು. ಲಿಂಗವೇ[7]ದಿ[7]ಯಾಗಿ ಬೆಳೆದ ಪುಷ್ಪವನು, ಗುಹೇಶ್ವರ, ನಿಮ್ಮ ಶರಣ [8]ಪ್ರಾಣ[8]ಲಿಂಗಕ್ಕೆ ಪೂಜೆಯ ಮಾಡಿದನು.[A]

415

ಗಗನವೇ ಗುಂಡಿಗೆ, ಆಕಾಶವೆ ಅಗ್ಘವಣಿ ! ಚಂದ್ರಸೂರ್ಯರಿಬ್ಬರೂ ಪುಷ್ಪ[9] ನೋಡಾ[9] ! ಬ್ರಹ್ಮ ಧೂಪ, ವಿಷ್ಣು ದೀಪ, ರುದ್ರನೋಗರ[10]ಸಯುಧಾನ[10] ನೋಡ ! ಗುಹೇಶ್ವರಲಿಂಗಕ್ಕೆ ಪೂಜೆ ನೋಡಾ !

416

ಸ[11]ರೋ[11]ವರದ ಕಮಲದಲ್ಲಿ ತಾನಿಪ್ಪನು, ಕೆಂದಾವರೆಯ ಪುಷ್ಪದ ನೇಮ[12]ವೆಂತೋ[12] ? ಹೂವ [13]ಮುಟ್ಟದೆ[13] ಕೊಯ್ವ ನೇಮ[14]ವೆಂತೋ[14] ? [15]ಮುಟ್ಟದೆ ಕೊಯ್ವ ಮುಟ್ಟದ ಪರಿಮಳ(+ವ ?) [15]ಗುಹೇಶ್ವರ, ನಿಮ್ಮ ಶರಣ.

417

ಹೊಱಗನೆ ಕೊಯ್ದು, ಹೊಱಗನೆ ಪೂಜಿಸಿದವರ ಕಂಡು ನಾಚಿದೆನಯ್ಯ !

---

1. ಸೇವೆ (ಹ) 2. × (ಲ) 3. ಕೈಯ (ವ) 4. ಪುಷ್ಪ ಕರದೊಳಡಗಿತ್ತಯ್ಯ, ಷೋಡಶ ಕಳೆಯ ಹದಿನಾಱಱ ಎಸಳನುವಿಕಸಿತವಾಯಿತ್ತು ಪುರುಷ ಪುಷ್ಪದ ಮರನು (ವ) 5. ಕಾಮದಗಂಣಿಯುಱಿಯದು (ಚಟ) ಕಾಮದ ಗಂಣಱಿಯದು (ಚವ್ಯಾಕದತಲ) ಕಾಮವಗಣ್ಣರಿಯದು (ಹ) A ವರುಣಚಂದ್ರಾದಿಗಳಿಬ್ಬರ ತೆರೆಯುಂಡು ಬೆಳೆಯದ ಪುಷ್ಪ ಲಿಂಗವೇ ಥೆ(ಥ ?)ರೆಯಾಗಿ ಬೆಳೆಯಿತ್ತು ಆ ಪುಷ್ಪ ನೋಡಾ। ಆ ಪುಷ್ಪ ಎಂದೆಂದಿಗೆಯೂ ನಿರ್ಮಾಲ್ಯವಿಲ್ಲೆಂದು, ಗೊಗೇಶ್ವರ, ನಿಮ್ಮ ಶರಣ ಪ್ರಾಣಲಿಂಗಕ್ಕೆ ಪ್ರಾಣ ಪೂಜೆಯ ಮಾಡಿದ (ವ) 6. ಬೆಳೆಯಲ್ಲಿ ಬೆ (ತ) 7. ಥರೆ (ಟ) 8. × (ಲ) 9. × (ತಲ) 10. ಸಯುವು (ವ) 11. ರ (ಕಟತದಲ) 12. ವೇಕೋ (ವ) 13. ಮುಟ್ಟ (ತವ) 14. ದ ಪರಿಯೆಂತೋ (ಟ) 15. ಮುಟ್ಟದ ಪರಿಮಳವ ಮುಟ್ಟದೆ ಕೊಯ್ಯು (ವ).

ಒಳಗೊಂದು ಅನಿಮಿಷ ಲಿಂಗವ ಕಂಡು, ಎನ್ನ ಮನೋಪುಷ್ಪದಲ್ಲಿ [1]ಪೂಜೆಯ ಮಾಡಿದಡೆ[1] ನಾಚಿಕೆ ಮಾದು ನಿಸ್ಸಂದೇಹಿಯಾದೆನು ಗುಹೇಶ್ವರ.

418

[A]ಅರಗಿನ ದೇಗುಲ[2]ದಲ್ಲಿ ಒಂ[2]ದು ಉರಿಯ ಲಿಂಗವ ಕಂಡೆ. ಮತ್ತೆ ದೇವರ ಪೂಜಿಸುವರಾರೂ ಇಲ್ಲ. ಉತ್ತರಾಪಥದ ದರ್ಶನಾದಿಗ[3]ಳಿಗೆ[3] ಸು[4]ತ್ತಿ ಮುತ್ತಿದ ಮಾಯೆ[4] ಎತ್ತಲಿ[5]ಕೆ[5] ಹೋಯಿತ್ತು ? ಮರನೊಳಗಣ ಕಿಚ್ಚು ಮರನ ಸುಟ್ಟುದ ಕಂಡೆ ; ಗುಹೇಶ್ವರನೆಂಬ ಲಿಂಗವಲ್ಲಿಯೆ ನಿಂದಿತ್ತು ![A]

419

ಮನ ಮುಟ್ಟದ ಮಜ್ಜನ, ತನು ತಾಗದ [6]ದೇ[6]ಹಾರ, ಭಾವ ತಾಗದ ಪೂಜೆ, ಎವೆ ತಾಗದ ನೋಟ, ವಾಯು ತಾಗದ ಲಿಂಗದ ಠಾವ ತೋಱಾ ಗುಹೇಶ್ವರ.

420

ಒಂದೆ ಹೂ, ಒಂದೆ ಅಗ್ಘವಣಿ, ಒಂದೆ ಓಗರ, ಒಂದೆ ಪ್ರಸಾದ, ಒಂದೆ ಮನ, ಒಂದೆ ಲಿಂಗ, [B]ನಂದಾದೀವಿಗೆ[B] ಕುಂದದ ಬೆಳ[7]ಗು,[7] ಸ್ವತಂತ್ರ ಪೂಜೆಯೊಂದೆ ; ಅನಾಹತವೆರಡಾಗಿ [C]ಬಱುಮುಖರಾಗಿ [8]ಕೆಟ್ಟು[8][C] ಹೋದರು ಗುಹೇಶ್ವರ.

421

ಮನವೆ ಲಿಂಗವಾದ ಬಳಿ[9]ಕ[9] ನೆನೆವುದಿನ್ನಾರನಯ್ಯ ? ಭಾವವೆ ಐಕ್ಯವಾದ ಬಳಿಕ ಬಯಸುವುದಿನ್ನಾರನು ? ಭ್ರಮೆಯಳಿದು ನಿಜವು ಸಾಧ್ಯವಾದ ಬಳಿಕ ಅಱುವುದಿನ್ನಾರನು ಗುಹೇಶ್ವರ ?

422

ಗಗನದ ಮೇಲೊಂದು ಸರೋವರ. ಆ ಜಲದಲ್ಲಿ [10]ವೊಗವ[15] ತೊಳೆದು ಹೂವ ಕೊಯ್ವರೆಲ್ಲರೂ. ದೇವರಿಗೆ ಮುಖಮಜ್ಜನವೆಂಬುದನೆಱೆ[3]ದು ಪೂಜಿಸಿ

---

1. ಪೂಜಿಸಿದಡೆ (ಟ) A ಅರಗಿನ ದೇಗುಲದೊಳಗೊಂದು ಉರಿಯ ಲಿಂಗವ ಕಂಡೆನು. ಲಿಂಗವ ಪೂಜಿಸುವ ಗೊರವನದೆತ್ತಲಾಡ ಹೋದನೋ ಉತ್ತರಪಥದ ದರ್ಶನವು ಮತ್ತೆ ಪೂಜಿಸುವ ಗೊರವನದೆತ್ತಲಾಡಹೋದನೋ ? ಮರನೊಳಗೆ ಕಿಚ್ಚು ಹುಟ್ಟಿ ಮರನನೇ ನುಂಗಿತ್ತು ಗುಹೇಶ್ವರಲಿಂಗವದೆತ್ತಲಾಡಹೋದನೋ (ವ) 2. ದೊಳಗೊಂ (ಟ) 3. ಳೆಲ್ಲರ (ಚವ್ಯಾ) 4. ತ್ತಿದ ಮುತ್ತಿದ ಮಾಟ (ಟ) 5. ಕ್ಕೆ (ಡಿಲ) 6. ಬೇ (ಹ) B ಎಂದೂ ನಂದಾದೀವಿಗೆ (ಐ) 7. ಗ (ಚ) ಗು (ಚವ್ಯಾ) C ಕೆಟ್ಟು ಬಱಿ ಮುಖರಾಗಿ (ಐ) 8. ✕ (ಟ) 9. ಕ್ಕೆ (ಟ) 10. ಮುಖವ (ಟ)

ಹೊಡವಂಟಡೆ ಒಮ್ಮೆ ನಾಯಕನರಕ ತಪ್ಪದಲ್ಲಾ ! ದೇವಲೋಕದ ಪ್ರಮಥರ ಲಜ್ಜೆಯನೇನ ಹೇಳುವೆ ಗುಹೇಶ್ವರ.

423

[A]ಮಲಿನ ದೇಹಕ್ಕೆ [1]ಮಜ್ಜನವಲ್ಲದೆ[1], ನಿರ್ಮಲದೇಹಕ್ಕೆ[A] ಮಜ್ಜನವೇಕೋ ? [2]ವಿಷಯವುಂಟೆ ಲಿಂಗ[2]ನಿಷ್ಪತಿಯಾದ ಶರಣಂಗೆ ? ಅಗಮ್ಯ ಅಗೋಚರ ಅಪ್ರಮಾಣ, ಗುಹೇಶ್ವರ, [B]ನಿಮ್ಮ ಶರಣ.[B]

424

ಮಜ್ಜನಕ್ಕೆಱೆ[3]ವಡೆ [C]ನೀನು [3]ಶುದ್ಧ[3] ನಿರ್ಮಲದೇಹಿ[C] ; ಪೂಜೆಯ ಮಾಡುವಡೆ ನಿನಗೆ ಗಗನಕಮಲಕುಸುಮದ [4]ಅಖಂಡಿತ[4] ಪೂಜೆ ; ಧೂಪ ದೀಪಾರತಿಗಳ ಬೆಳಗುವಡೆ ನೀನು [5]ಸ್ವಯಂಜ್ಯೋತಿಪ್ರಕಾಶನು.[5] [D6]ಅರ್ಪಿತವ ಮಾಡುವಡೆ[6] ನೀನು ನಿತ್ಯತೃಪ್ತನು, ಅಷ್ಟವಿಧಾರ್ಚನೆಯ ಮಾಡುವಡೆ ನೀನು ಮುಟ್ಟಬಾರದ ಘನವೇದ್ಯನು.[D] [7]ನಿತ್ಯನೇಮಂಗಳ[7] ಮಾಡುವಡೆ ನಿನಗನಂತ ನಾಮಂಗಳಾದವು ಗುಹೇಶ್ವರ.

425

[E]ಒಲುಮೆಯ ಕೂಟಕ್ಕೆ ಹಾಸಿನ ಹಂಗೇಕೆ ? ಬೇಟದ ಮರುಳಿಗೆ ಲಜ್ಜೆ [8]ಮುನ್ನುಂಟೆ ?[8] ನಿಮ್ಮನಱಿದ ಶರಣಂಗೆ ಪೂಜೆಯ [9]ಹಂಬಲ[9] ದಂದುಗವೇಕೆ ? ಮಿಸುನಿಯ ಚಿನ್ನಕ್ಕೆ ಒರೆಗಲ್ಲ ಹಂಗೇಕೆ ? ಗುಹೇಶ್ವರಲಿಂಗಕ್ಕೆ ಕುಱುಹು [10]ಮುನ್ನುಂಟೆ ?[10E]

426

ಮುಂಡಧಾರಿಯ ತಲೆ ಮುಂದೆ ಬಪ್ಪುದ ಕಂಡೆ. [11]ಜಟಾ[11]ಧಾರಿಯ ತಲೆ ನಡೆದು [12]ಹೋಯಿತ್ತು[12] ಕಂಡೆ, ಖಂಡಕಪಾಲಿಯ ಖಂಡವ ಕೊಯಿತ್ತು

---

A ಮಲಿನ ದೇಹಿ ಮಜ್ಜನಕ್ಕೆಱೆವನಲ್ಲದೆ ನಿರ್ಮಲದೇಹಿಗೆ (ತಲ) ಮಲಿನ ದೇಹಿಗೆ ಮಜ್ಜನಮಲ್ಲದೆ ನಿರ್ಮಲದೇಹಿಗೆ ಮಜ್ಜನಮೇಕೋ (ಏಐ) 1. ಮಜ್ಜನಕ್ಕೆಱೆವರಲ್ಲದೆ (ಟ) 2. ಉಂಟೆ ವಿಷಯ (ಟ) B × (ಏ) C ಶುದ್ಧನಿರ್ಮಲದೇಹಿ ನೀನು (ಐ) 3. ಶುದ್ಧ ಕೇವಲ (ವ) 4. ಬಂತಿ(ವ) 5. ಜ್ಯೋತಿರ್ಮಯನು (ಟ) D × (ಶೂ) 6. ನೈವೇದ್ಯವ ಸಮರ್ಪಿಸುವಡೆ (ಟ) 7. ನೇಮನಿತ್ಯಗಳ (ವ) ನಿತ್ಯ ನಿಯಮಂಗಳ (ದ) E ನಿಮ್ಮನಱಿದ ಶರಣಂಗೆ ಶಿವ ಪೂಜೆಯ ಮಾಡುವ ದಂದುಗವೇಕೋ ? ಒಲುಮೆಯ ಕೂಟಕ್ಕೆ ಹಾಸಿಕೆಯ ಹಂಗೇಕೊ? ಬೇಟದ ಮರುಳಿಂಗೆ ಲಜ್ಜೆ ಇನ್ನೇಕೋ ? ಮಿಸುನಿಯ ಚಿನ್ನಕ್ಕೆ ಒರೆಗಲ್ಲಿನ ಹಂಗೇಕೋ ? ಗುಹೇಶ್ವರ ಲಿಂಗವು ಪ್ರಾಣವಾಗಿಪ್ಪ ಸಿದ್ಧರಾಮಯ್ಯಂಗೆ ಕುಱುಹು ಮುನ್ನೇಕೋ ಚೆನ್ನಬಸವಣ್ಣ ? (ಶೂ) 8. ಯೇಕೆ (ವ) 9. ಹಂಗಿನ (ವ) 10. ಮುನ್ನೇಕೆ (ವ) 11. ಜಡೆಯ(ಟ) 12. ಹೋಹುದ (ಟ).

ಕಂಡೆ. ಬಾಲಬ್ರ[1]ಹ್ಮ[1]ಚಾರಿಯ ಬಾರನೆತ್ತಿ[2]ತ್ತ[2] ಕಂಡೆ, ಭಕ್ತರೆಲ್ಲರೂ ಸತ್ತು ನೆಲಕಿಕ್ಕಿತ್ತ ಕಂಡೆ, ಗುಹೇಶ್ವರ, ನೀ ಸತ್ತು ಲಿಂಗವಾ[3]ಯಿತ್ತ[3] ಕಂಡೆ.

427

ಎನ್ನಲ್ಲಿ ನಾನು ನಿಜವಾಗಿ, ನಿಮ್ಮನಱ[4]ದೆ[4]ನೆಂದಡೆ, ಅದು ನಿಮ್ಮ ನು[5]ತ[5]ಕ್ಕೆ ಬಪ್ಪುದೆ? ಎನ್ನ ನಾನು ಮಱ[6]ದು, ನಿಮ್ಮನಱಿದಡೆ, ಅದು ನಿಮ್ಮ ರೂಪೆಂಬೆ. ಎನ್ನ ನಿನ್ನೊಳು ಮಱ[6]ದರೆ[6] ಕನ್ನಡಿಯೊಳಗಣ ಪ್ರತಿಬಿಂಬದಂತೆ ಭಿನ್ನವಿಲ್ಲ[7]ದಿದ್ದೆನು[7] ಕಾಣಾ ಗುಹೇಶ್ವರ.

428

ಭಕ್ತಂಗೆ ಉತ್ಪತ್ತಿಯಿಲ್ಲಾಗಿ ಸ್ಥಿತಿಯಿಲ್ಲ. ಸ್ಥಿತಿಯಿಲ್ಲಾಗಿ ಲಯವಿಲ್ಲ. [A]ಮು[8]ನ್ನೆ[8]ಲ್ಲಿಂದ ಬಂದನಲ್ಲಿಗೆ ಹೋಗಿ ನಿತ್ಯನಾಗಿಪ್ಪ, ಗುಹೇಶ್ವರ.[A]

429

ತುಂಬಿ ಬಂದಡೆ ಪರಿಮಳ ಓಡಿತ್ತ ಕಂಡೆ! [9]ಏನು[9] ಸೋಜಿಗ ಹೇಳಾ? ಮನ ಬಂದಡೆ ಬುದ್ಧಿ ಓಡಿತ್ತ ಕಂಡೆ ; ದೇವ ಬಂದಡೆ ದೇಗುಲ ಓಡಿತ್ತ ಕಂಡೆ.

430

ರಂಗವೊಂದೇ, ಕಂಭವೊಂದೇ ; ದೇವರೊಂದೇ, ದೇಗುಲ ಒಂದೇ : ಗುಹೇಶ್ವರ, [B]ನಿಮ್ಮ ಮನ್ನಣೆಯ ಶರಣರ ದೇವರೆಂಬೆ.[B]

431

ಊರ ಹೊಱಗೊಂದು ದೇಗುಲ. ದೇಗುಲದೊಳಗೊಬ್ಬ ಗೊರತಿ [10]ನೋಡಯ್ಯ[10]. [11]ಗೊ[11]ರತಿಯ ಕೈಯಲ್ಲಿ ಸೂಜಿ, ಸೂಜಿಯ ಮೊನೆಯಲ್ಲಿ ಹದಿನಾಲ್ಕು ಲೋಕ. ಗೊರತಿಯ, ಸೂಜಿಯ, ಹದಿನಾಲ್ಕು ಲೋಕವನೊಂದಿಱುಹೆ ನುಂಗಿತ್ತ ಕಂಡೆ ಗುಹೇಶ್ವರ.

432

ಮನಕ್ಕೆ ಮನೋಹರವಾದಡೆ ಮನಕ್ಕೆ ಭಂಗ ನೋಡಾ! ತನುವಿನಲ್ಲಿ ಸುಖವ ಧರಿಸಿಕೊಂಡಡೆ ಆತನುವಿಂಗೆ ಕೊಱತೆ ನೋಡಾ! ಅಱುವನಱುದು ಸುಖವಾಯಿತ್ತೆಂದಡೆ ಆ ಅಱುವಿಂಗೆ ಭಂಗ ನೋಡಾ ಗುಹೇಶ್ವರ.

---

1. ಹ್ಮಾ (ಲ) 2. ದ್ದ (ಟ) 3. ದುದ (ಟ) 4. ದೆಹೆ (ಟಲ) 5. (ಲ) 6. ದಲ್ಲಿ (ಲಿ) 7. ದಿರ್ದೆ (ಲಿ) [A]ಲಯವಿಲ್ಲಾಗಿ ದೇಹನಾಮಪ್ರವರ್ತನೆಯಿಲ್ಲ. ಇವಾವೂ ಇಲ್ಲದ ಕಾರಣ ನಿಮ್ಮ ಶರಣನಂಗ ಬಚ್ಚ ಬಱಯ ಬಯಲು ಗೊಹೇಶ್ವರ (ಲಿ) 8. ನ್ನಲೆ (ಟ) 9. ಇದೇನು (ಟ) [B]ನಿಮ್ಮಾಣೆ ನಿಮ್ಮ ಶರಣರ ದೇವರೆಂಬೆ (ವ) ನಿಮ್ಮ ಶರಣರ ದೇವರೆಂಬೆನು (ಟ) 10. ಕಂಡಯ್ಯ (ಐಟ) 11. ಆ ಗೊ (ತ).

433

'ನ' ಎಂಬುದೆ ನಂದಿಯಾಗಿ, 'ಮ' ಎಂಬುದೆ ಮಹತ್ತಾಗಿ, 'ಶ್ಶಿ' ಎಂಬುದೆ ರುದ್ರನಾಗಿ, 'ವಾ' ಎಂಬುದೆ ಹಂಸೆಯಾಗಿ, 'ಯ' ಎಂಬುದೆ ಅಱಿವಾಗಿ, ಓಂಕಾರವೇ ಗುರುವಾಗಿ, ಸಂಬಂಧವೆ ಅಸಂಬಂಧವಾಗಿ, ಅಸಂಬಂಧವೆ ಸಂಬಂಧವಾಗಿ, ಎರ[1]ಡೊ[1]ಂದಾಗಿ, ಗುಹೇಶ್ವರ ಲಿಂಗ[2]ದಲ್ಲಿ[2] ಸಂಬಂಧಿ.

434

ಜಗದಗಲ[3]ದ[3] ಮಂಟಪಕ್ಕೆ ಮುಗಿಲಗ[4]ಲದ[4] ಮೇಲುಕಟ್ಟಿನಲ್ಲಿ [5]ಚಿತ್ರ ವಿ[5]ಚಿತ್ರವ ನೋಡುತ್ತ ನೋಡುತ್ತ ಧ್ಯಾನವಿ[6]ಶ್ರಾಮದಲ್ಲಿ[6] [7]ದಿಟದಿಟ[7]ವೆಂಬುದೊಂದು ದರುಶನವ ನೋಡುತ್ತ [A]ನೋಡುತ್ತ[A] ಗಗನಗಂಭೀರದಲ್ಲಿ [8]ಉದಯ[8]ವಾಯಿತ್ತ ಕಂಡೆ ಗುಹೇಶ್ವರಲಿಂಗವು ತಾನೆಯಾಗಿ.

435

ಹಿಂದಣ ಅನಂತವನು, ಮುಂದಣ ಅನಂತವನು, ಒಂ[9]ದು[9] ದಿನ ಒಳಕೊಂಡಿತ್ತು ನೋಡಾ! ಒಂದು ದಿನವನೊಳಕೊಂಡು ಮಾತನಾಡುವ ಮಹಂತನ ಕಂಡು ಬಲ್ಲವರಾರಯ್ಯ? ಆದ್ಯರು ವೇದ್ಯರು ಅನಂತ ಹಿರಿಯರು ಲಿಂಗದಂತುವನಱಿಯದೆ ಅಂತೆ ಹೋದರು ಕಾಣಾ ಗುಹೇಶ್ವರ.

436

ಹುಟ್ಟುವರೆಲ್ಲರ ಹುಟ್ಟಬೇ[10]ಡೆಂ[10]ದೆನೆ? ಹೊಂದುವರೆಲ್ಲರ ಹೊಂದಬೇ[10]ಡೆಂ[10]ದೆನೆ? ಪ್ರಳಯದಲ್ಲಿ ಅಳಿವವರ ಅಳಿಯಬೇಡೆಂದೆನೆ? ಗುಹೇಶ್ವರ, ನಿಮ್ಮನಱಿದು ನೆರೆದ ಬಳಿಕ, ಧರೆಯ[11]ಮೇಲು[11]ಳ್ಳವರನಿರಬೇಡೆಂದೆನೆ.

437

ಆದಿಯಾಧಾರ ಉಳ್ಳನ್ನ[12]ಕ್ಕರ[12] ಉಪಚಾರ; ಎರಡೂ ಒಂದಾದಡೆ ಶಿವಾಚಾರ. [13]ಆ ಶಿವಾಚಾರ[13] [14]ಸ[14]ಯವಾದಡೆ ಬ್ರ[15]ಹ್ಮಾ[15]ಚಾರ. ಗುಹೇಶ್ವರನನಱಿದಡೆ ಅನಾಚಾರ.

438

ಕಿಚ್ಚಿನೊಳಗೆ [16]ಹೊ(ೀ?)ರಿದ[16] ಹು[17]ಳ್ಳಿ[17]ಯಂತಾದೆನಯ್ಯ. ಬೆಂದ

---

1. ಡೂ ಒಂ (ಟ) 2. × (ಟಕದ) 3. × (ವ) 4. ಲಿನ (ವ) 5. × (ವ) ವಿ (ಶೂ) 6. ಶ್ರಾಂತಿಯಲ್ಲಿ (ಶೂತಲವ) 7. ಘಟಘಟ (ವ) A × (ಶೂ) 8. ಗಗನ 9. ದೆ (ಹಟ) 10. ಡವೆಂ (ಟ) 11. ನೆಲೆ (ಟ) 12. ಕ್ಕ (ಲ) 13 × (ಟ) 14. ಸ್ವ (ಲಿ) 15. ಹ್ಮ (ಕದಚ) 16. ಹಾಕಿದ (ಹ) 17. ರುಳಿ (ಚ)

ನುಲಿಯ ಸಂದಿಕ್ಕಿ ಮುತ್ತೊಂದ ಮಾಡಬಾರದಯ್ಯ. ಗುಹೇಶ್ವರ, ನಿಮ್ಮ ನಿಲುವಿನ ಪರಿ[1]ಯಿ[1]ಂತುಟಯ್ಯ.

439

ಸತ್ತ ಕೋಳಿ ಎದ್ದು ಕೂಗಿ[2]ತ್ತ[2] ಕಂಡೆ. [3]ಮೊ[3]ತ್ತದ ಮಾಮರ[4]ನುಲಿಯಿತ್ತ[4] ಕಂಡೆ. [A]ಕತ್ತಲೆ ಬೆಳಗಾಯಿ[2]ತ್ತ[2] ಕಂಡೆ[A]. ಹೊತ್ತಾಱೆ[3]ಯೆದ್ದು ಹೊಲಬು[5]ದಪ್ಪಿತ್ತ[5] ಕಂಡೆ. ಇದೇ[6]ನು[6] ಹತ್ತಿ[7]ತ್ತೆಂ[7]ದಱಿಯೆ ಗುಹೇಶ್ವರ.

440

[8]ಪರತತ್ತ್ವದಲ್ಲಿ[8] ತದ್ಗತವಾದ ಬಳಿಕ, ಬೇಱೆ[3] ಮತ್ತಱಿದಹೆನೆಂಬ ಭ್ರಾಂತೇಕೆ? ಅಱಿವು ಸಯವಾಗಿ ಮಱಹು ನಷ್ಟವಾದ ಬಳಿಕ [9]ತಾ[9]ನಾರೆಂಬ ವಿಚಾರವೇಕೆ? ಗುಹೇಶ್ವರನ ಬೆರಸಿ ಭೇದಗೆಟ್ಟ ಬಳಿಕ ಮತ್ತೆ, ಸಂಗವ ಮಾಡಿಹೆನೆಂಬ ತೆವಕವೇಕಯ್ಯ?

441

ಇಂದು ಸಾವ ಹೆಂಡತಿಗೆ ನಾಳೆ ಸಾವ ಗಂಡ [10]ನೋಡವ್ವ[10] ! [A]ಘಳಿಗೆ ಘಳಿಗೆಗೆ [11]ಮಗು[11] ಹುಟ್ಟಿ [12]ಕೈಗೆ ಬಾಯ್ಗೆ[12] [13]ಬಂದಿತ್ತವ್ವ[13] ! ಅಱಿವು–ಕುಱುಹನು ಮಱವೆ ನುಂಗಿತ್ತು, ಗುಹೇಶ್ವರನುಳಿದ[14]ನವ್ವ[14] ![A]

442

ಮರುಳುಂಡ ಮನುಷ್ಯನ ಇರವಿನ ಪರಿಯಂತೆ, ವಿವರವನಱಿಯಬಾರದು ನೋಡಾ ಶಿವಜ್ಞಾನ! ಅದನಱಿದಹೆನೆಂದು ನೆನೆಯ ಹೋದರೆ, ಅದು ಮುಂದುದೋಱದು. ಮಱೆ[3]ದಹೆನೆಂದು ಭಾವಿಸ ಹೋದರೆ, ತೆಱಹು [15]ಗೊ[15]ಡದು, ಗುಹೇಶ್ವರ, ನಿಮ್ಮ ನೆಱೆ[3]ಯಱಿದ ಶರಣರು ನಿಸ್ಸೀಮಸುಖಿಗಳು ನೋಡಾ.

443

ಮಣ್ಣಿಲ್ಲದ ಹಾಳ ಮೇಲೆ ಕಣ್ಣಿಲ್ಲ[16]ದಾತ[16] ಮಣಿಯ ಕಂಡ. ಕೈಯಿಲ್ಲ–

---

1. ಯಂ (ಚ) 2. ತ (ಟ) 3. ಮ (ಗ) 4. ಉಲಿಯಿತ್ತ (ಲಿ) ನುರಿವುದ (ಗ) [A] ×(ಗ) 5. ದಪ್ಪುವುದ (ಚಟಖದತಲ) ದಪ್ಪುದ (ಗಕ) 6. ನು ಸೋಜಿಗ (ಗ) 7. ತೆಂ (ಕ) 8. ಪರಮತತ್ತ್ವದೊಳಗೆ (ಟ) 9. ನಾ (ಟ) 10. ×(ವ) A. ಘಳಿಗೆಯಲ್ಲಿ ಮಗುವು ಹುಟ್ಟಿ ಕೈಗೆ ಬಾಯಿಗೆ ಬಂದರೆ ಅಱಿವು ಮಱವು ಕುಱುಹಿನಲ್ಲಿ ನೀನೆಲ್ಲಿದ್ದೆ ಹೇಳಾ ಗುಹೇಶ್ವರ (ವ) 11. ಮಗವು (ತ) ಮಗ (ಲಿ) 12. ಕೈ ಬಾಯಿಗೆ (ಲಿ) 13. ಬಂದುತ್ತು ನೋಡವ್ವ (ಲ) 14. ನೋಡವ್ವ (ತಲ) 15. ಗು (ಟ) 16. ದಾತನೊಂದು (ಲಿ) ದಾತನೊಂದು ವಿರಳವಿಲ್ಲದ (ಖ).

ದಾತ ಪವಣಿಸಿದ, ಕೊರಳಿಲ್ಲದಾತ ಕಟ್ಟಿಕೊಂಡ. ಅಂಗವಿಲ್ಲದ [1]ಸಿಂ[1]ಗಾರಕ್ಕೆ ಭಂಗ[2]ವುಂಟೆ,[2] ಗುಹೇಶ್ವರ.

444

ಕಾಮಿಸದೆ ನೆನೆದಡೆ, ಕಲ್ಪಿತವಿಲ್ಲದ ಪುರುಷ ಬಂದನೆನಗೆ [3]ನೋಡಾ[3]! ಕಲ್ಪಿತವಿಲ್ಲದೆ ನೆ[4]ರೆ[4]ದಡೆ, ಭಾವಿಸಲಿಲ್ಲದ ಸುಖ[5]ವು[5] ದೊರಕಿತ್ತು ನೋಡಾ. ಗುಹೇಶ್ವರನೆಂಬ ಲಿಂಗವನಱಿದ ಬಳಿಕ [6]ನೀ ನಾನೆಂಬುದಿಲ್ಲ[6] ನೋಡಾ!

445

ನೆಲ ಹುಟ್ಟಿದಂದಿನ ಧವಳಾರ, ಧವಳಾರದೊಳಗೊಬ್ಬ ಸೂಳೆ ನೋಡಯ್ಯ. ತಲೆಯಿಲ್ಲದಾತ ನಿಚ್ಚಕ್ಕೆ ಬಪ್ಪ, ಕರುಳಿಲ್ಲದಾತ [7]ಕುಂಟಣಿ[7]ಯಾದ ನೋಡಯ್ಯ. ಕೈ ಕಾಲಿಲ್ಲದೆ ಅಪ್ಪಲೊಡನೆ ಇದ ಕಂಡು ಬೆಱಗಾದೆ ಗುಹೇಶ್ವರ.

446

[8]ಪರ[8]ತತ್ತ್ವದೊಳ[9]ಗಿ[9]ರ ಬಲ್ಲಡೆ ಉಣಲಾಗದು, ಉಣದಿರಲಾಗದು. ಎಲ್ಲರ ಸಂಗ[10]ದಲ್ಲಿರಲಾ[10]ಗದು, [11]ಬೇಱೆ[11] ಮತ್ತೊಬ್ಬನೆ ಇರಲಾಗದು. ತಾಯಿ ಸತ್ತ [12]ಅ[12]ಱುದಿಂಗಳಿಗೆ ತಾ ಹುಟ್ಟಿದ ಮೂಲ ಗುಹೇಶ್ವರ.

447

ಸುಳಿಯ ಬಲ್ಲಡೆ ಸುಳುಹೆ ಲೇಸಯ್ಯ. ಗಮನವಿಲ್ಲದೆ ಸುಳಿಯ ಬಲ್ಲಡೆ, ನಿರ್ಗಮನಿಯಾಗಿ [13]ನಿಲ[13]ಬಲ್ಲಡೆ, ಅದಕ್ಕದೆ ಪರಿಣಾಮ, ಅದಕ್ಕದೆ ಸಂತೋಷ, ಗುಹೇಶ್ವರಲಿಂಗದಲ್ಲಿ ಆವರ ಜಗದಾರಾಧ್ಯರೆಂಬೆನು.

448

ತಾ ನಡೆ[14]ವ[14]ಡೆ ನಡೆಗೆಟ್ಟ ನಡೆಯ ನಡೆ[15]ಯಬೇಕು,[15] ತಾ ನುಡಿ[14]ವ[14]ಡೆ ನುಡಿಗೆಟ್ಟ ನುಡಿಯ ನುಡಿ[15]ಯಬೇಕು.[15] ರೂಹಿಲ್ಲದ ಸಂಗವ ಮಾಡಬೇಕು. [16]ಭವ[16]ವಿಲ್ಲದ ಭಕ್ತಿಯ ಮಾಡಬೇಕು. [A]ತಾನಾವನೆಂದಱಿಯದಂತಿಹುದು[A], ಗುಹೇಶ್ವರ.

449

ಕಾಲಿಲ್ಲದ ಗಮ[17]ನ[17], ಕೈಯಿಲ್ಲದ ಸೋಂಕು, ಬಾಯಿಲ್ಲದ ರುಚಿ,

---

1. ಶೃಂ (ವ) 2. ವುಂಟೆ ? ಇಲ್ಲವಾಗಿ ಪೇಳು ಗೊಗೇಶ್ವರ (ವ) 3. ನೋಡವ್ವ (ಲಿ) 4. ನೆ (ಲಿ) 5. ವೆ (ಕ) × (ತಲ) 6. ನೀನು ನಾನೆಂಬುದು ಇಲ್ಲ (ಟ) ನಾ ನೀನೆಂಬುದಿಲ್ಲ (ಲಿ) 7. ಕುಂಠಿಣಿ (ಟ) 8. ಪರಮ (ಟ) 9. ಗೆ ಇ (ಲಿ) 10. ಡವಾ (ಲಿ) 11. × (ಟತಲ) 12. ಆ (ತ) 13. ಇರ (ಟ) 14. ದ (ಟಐಲಿ) 15. ವುದಯ್ಯ (ತಲ) 16. ಭಾವ (ಐಹ) A ತಾನಿದಿರಿಂದಱಿಯದಂತಿಹುದು (ಐ) 17. ನಿ (ಐಚಟದ)

[B]ಭಾವವೆ [1]ಖರ್ಪರ[1]ವಾಗಿ[B], ಪರವು ದೇಹಿ ಎಂದು ಬೇಡುವ ಪರಮನ ತೋರಯ್ಯ ಗುಹೇ[2]ಶ್ವರ[2].

## 450

ಕಣ್ಣೆ ಕಟ್ಟಿಗೆಯಾಗಿ, ಕೈಯೆ [3]ಖ[3]ರ್ಪರವಾಗಿ, ಕಿವಿಯೆ ಸಕಲ [4]ಪುರಾತರ[4] ಕಾರುಣ್ಯ[5]ವ[5]ನು[C]ತ[C], ಮನದ ಭಿ[D]ಕ್ಷವ[D]ನುಂಡು, ತನು ಪರಿಣಾಮವನೆಯ್ದಿಹ [6]ಘನಮಹಿಮರ ತೋಱಾ[6] ಗುಹೇಶ್ವರ.

## 451

ಕಂಗಳ ಕರುಳ ಕೊಯ್ದವರ, ಮನದ ತಿರುಳ ಹುರಿದವರ, ಮಾತಿನ ಮೊದಲ ಬಲ್ಲವರ[7]ನೆನಗೊಮ್ಮೆ[7] ತೋಱಾ ಗುಹೇ[8]ಶ್ವರ[8].

## 452

ಆದಿಪುರ, ವೇದಪುರ, ಹಿಮಪುರ, [9]ಖಂಡಿತ[9] ಅಖಂಡಿತ ಶಿವಶಿವಾ! ಗಗನವ ಮನ ನುಂಗಿತ್ತು. ಆದಿ ವೇದವ ನುಂಗಿ, ವೇದ ಸ್ವಯಂಭುವ ನುಂಗಿ, ಕಾಲಕರ್ಮ ಹಿಂಗಿತ್ತು, ಗುಹೇಶ್ವರ, ನಿಮ್ಮ ಶರಣಂಗೆ.

## 453

ಮನದೊಳಗೆ ಘನ ವೇದ್ಯವಾಗಿ, ಘನದೊಳಗೆ ಮನ ವೇದ್ಯವಾದ ಬಳಿಕ ಪುಣ್ಯವಿಲ್ಲ ಪಾಪವಿಲ್ಲ, ಸುಖವಿಲ್ಲ ದುಃಖವಿಲ್ಲ, ಕಾಲವಿಲ್ಲ ಕರ್ಮವಿಲ್ಲ, ಜನನ ವಿಲ್ಲ ಮರಣವಿಲ್ಲ. ಗುಹೇಶ್ವರ, ನಿಮ್ಮ ಶರಣನು ಘನಮಹಿ[10]ಮ[10] ನೋ[11]ಡಯ್ಯ[11].

## 454

[12]ಬಾ[12]ನದೊಳಗೊಂದು ಆನೆಯಿ[13]ದ್ದಿ[13]ತ್ತು. [12]ಬಾ[12]ನ ಬೆಂದಿತ್ತು, ಆನೆ ಬದುಕಿತ್ತು. ಇದೇನು ಸೋಜಿಗವಯ್ಯ. ದೇವ ಸತ್ತ, ದೇವಿ ಕೆಟ್ಟಳು, ಆನು ಬದುಕಿದೆನು, ಗುಹೇಶ್ವರ.

## 455

ಪರುಷಕ್ಕೆ ಬೆಲೆ[14]ಯಿಲ್ಲ[14], ಪ್ರಾಣಕ್ಕೆ ನಿರ್ಮಾಲ್ಯ[14]ವಿಲ್ಲ[14], ರುಚಿಗೆ

---

B ಮನವೆ ಕಪ್ಪರವಾಗಿ (ಐ) 1. ಕರ್ಪರ (ದ) ಕರ್ಪುರ (ಹ) 2. ಶ್ವರ (ಶೂ) 3. ಕ (ಐಕತಲ) 4. ಪುರಾತನ (ಐಟ) 5. ವೆ ಎ (ಟ) C ತ್ತ (ಐ) D ಕ್ಷೆ ಯ (ಐ) 6. ಪರಮನ ತೋಱಯ್ಯ (ಟ) 7. ಎನಗೆ ನೀ (ಟ) ಎನಗೆ(ವ) 8. ಶ್ವರ (ಐ) 9. ಖಂಡಿತ ನೋಡಾ (ತ) 10. ಮನು (ಲಿ) 11. ಡಾ (ಟಲಿ) 12. ಜೋ (ಹ) 13. ದ್ದು (ಲ) 14. ಯುಂಟೆ (ಪ್ರ)

ಎಂಜ[1]ಲಿಲ್ಲ[1], ಸುಖಕ್ಕೆ [2]ಅರೋಚಕ[2]ವಿಲ್ಲ. ಗುಹೇಶ್ವರ, [3]ನಿಮ್ಮ ಶರಣಂಗೆ ಭವವಿಲ್ಲ ಬಂಧನವಿಲ್ಲಯ್ಯ[3].

456

ಅಮೃತಸೇವನೆಯ ಮಾಡಿ [A]ಆಪ್ಯಾನ [4]ಘನ[4]ವಾಯಿತ್ತು[A]. ಪರುಷ–ವೇದಿಯ ಸಾಧಿ[5]ಸ ಹೋದರೆ [B]ದಾರಿದ್ರ್ಯ[B] ಘನವಾ[5]ಯಿ[C]ತ್ತು[C]. ಮಱು–[6]ಜೇ[6]ವಣಿಯ ಹಣ್ಣು ಮೆದ್ದು ಮರಣವಾ[7]ಯಿತ್ತ[7] ಕಂಡೆ. [8]ಎಲ್ಲ[8]ವನು ಸಾಧಿಸ ಹೋದರೆ, ಏನೂ ಇಲ್ಲದಂತಾ[9]ಯಿತ್ತು. ನಾನು ನಿಜವ ಸಾಧಿಸಿ ಬದುಕಿದೆನು[9] ಗುಹೇಶ್ವರ.

457

ಒಂದೂ ಇಲ್ಲದ ಬಿಂ[10]ದು[10]ವ, ತಂದೆಯಿಲ್ಲದ ಕಂದನ, ಮಾತೆಯಿಲ್ಲದ ಜಾತನ, ಗಮನವಿಲ್ಲದ ಗಮ್ಯನ, ಮೂವರಱಿಯದ ಮುಗ್ಧನ [11]ಠಾವ ತೋಱಿಸು ಗುಹೇಶ್ವರ[11].

458

ಪೂರ್ವಬೀಜ ಬ್ರಹ್ಮಚರ್ಯವೆ? ಅಱಿವು ತಾ ಬ್ರಹ್ಮಚರ್ಯವೇ? ಜ್ಞಾನಾಜ್ಞಾನ[12]ದುದಯ[12] ತಾ ಬ್ರಹ್ಮಚರ್ಯವೇ? ಗುಹೇಶ್ವರ, ನಿಮ್ಮ ಶರಣರ ಪರಿಣಾಮವೆ ಬ್ರಹ್ಮಚರ್ಯವು.

459

ನೆಳಲ ಹೂಳಿಹೆನೆಂದು ಬಳಲುತ್ತಿದೆ ಜಗವೆಲ್ಲ! ನೆಳಲು ಸಾಯಬಲ್ಲುದೆ ಅಂಗಪ್ರಾಣಿಗಳಿಗೆ? ಸಮುದ್ರದಾಚೆಯ ತಡಿಯಲ್ಲಿ [13]ಕಳ್ಳನ[13] ಕಂಡು, [14]ಇಲ್ಲಿ[14] ಮುನಿದು ಬೈದರೆ, ಅವ ಸಾಯಬಲ್ಲನೆ? ಭಾವ[15]ದಲ್ಲಿ[15] ಹೊಲಿದ ಹೊಲಿಗೆಯ ಭೇದವನಱಿಯರು; ಕಾಮಿಸಿದರುಂಟೆ ನಮ್ಮ ಗುಹೇಶ್ವರಲಿಂಗವು?

460

ಅಜ್ಞಾನವೆಂಬ ತೊಟ್ಟಿಲೊಳಗೆ ಜ್ಞಾನವೆಂಬ ಶಿಶುವ ಮಲಗಿಸಿ ಸಕಲ

---

1. ಯುಂಟೆ (ಪ್ರ) 2. ಅರೋಚ (ಕ) ರೋಚಿಕೆ (ಏ) ಆರೋಚಕ (ಲ) 3. ನಿಮ್ಮನಱಿದ ಶರಣಂಗೆ ಭವಬಂಧನವುಂಟೇ (ಪ್ರ) ನಿಮ್ಮ ಶರಣಂಗೆ ಭವವಿಲ್ಲ (ಟ) A ಆಪ್ಯಾಯನ ಘನವಾಯಿತ್ತ ಕಂಡೆ (ಶೂ) 4. × (ವ) 5. ಸಿ ದರಿದ್ರ ಹಿರಿದಾ (ವ) B ದರಿದ್ರ (ಟ) ದಾರಿದ್ರ (ದಲಶೂ) C ತ್ತ ಕಂಡೆ (ತಲ) 6. ಜ (ವ) 7. ದುದ (ಟವ) 8. ಇಂತು ಎಲ್ಲ (ವ) ಇವನೆಲ್ಲ (ಶೂ) 9. ದೆ ಕಾಣಾ (ವ) 10. ದ (ಟ) 11. ತೋಱಿಸಾ ಗುಹೇಶ್ವರಲಿಂಗದಲ್ಲಿ ಸಂಗನ ಬಸವಣ್ಣ (ಶೂ) 12. ವು (ಟ) ದ ಉದಯ (ತಲ) 13. ಖಳನ (ಓಚ) 14. ಯಲ್ಲಿಂದ (ಚ) ಇಲ್ಲಿಂದ(ತಲಹ) 15. × (ಟ)

ವೇದಶಾ[1]ಸ್ತ್ರವೆಂಬು[1] ನೇಣಕಟ್ಟಿ, [2]ಹಿಡಿದು[2] [3]ತೂಗಿ[3], ಜೋಗುಳವಾಡು[4]ತ್ತಿ[4] ದಾಳೆ ಭ್ರಾಂತಿಯೆಂಬ ತಾಯಿ. ತೊಟ್ಟಲು ಮುಱಿದು, ನೇಣು ಹಱಿದು, [5]ಜೋಗುಳ[5] ನಿಂದಲ್ಲದೆ ಗುಹೇಶ್ವರ[6]ನೆಂಬ[6] ಲಿಂಗವ ಕಾಣಬಾರದು.

461

ಮೋಟರ ಮದುವೆಗೆ ಭಂಡ[7]ರು ಹಱಿಯ ಹೊಯ್ದು[7], ಮೂಕೊಱಿತಿ ಯ[8]ರೆಲ್ಲಾ[8] ಕಳಶವ ಹೊತ್ತರಲ್ಲಾ! ಉಘೇ [9]ಚಾಂಗು[9] ಭಲಾ ಎಂದು ನಿಬ್ಬಣ [10]ನೆರೆದು[10], ಹೊ[11]ದಂ[11]ಬುಲಕ್ಕೆ ಮುನಿವರಿ[12]ದೇನಯ್ಯ[12]? ತ್ರಿಜಗ ವೆಲ್ಲಾ ನಿಬ್ಬಣ ಹೋಯಿತ್ತು, ಗುಹೇಶ್ವರನನಱಿಯದ ಹಗರಣ[13]ವೊ[13]!

462

ಜ್ಯೋತಿ, [14]ಕಂಡಾ, ಇರಲು[14] ಕತ್ತಲೆ ಕಂಡಾ? ನಿಧಾನ, [14]ಕಂಡಾ, ಇರಲು[14] ಬಡತನ ಕಂಡಾ? ಪ್ರಸಾದ, [15]ಕಂಡಾ[15], ಕೊಂಡಡೆ ಪ್ರಳಯ ಕಂಡಾ? ಗುಹೇ[16]ಶ್ವರ, ಕಂಡಾ[16], ಇದು ಭ್ರಾಂ[17]ತು[17] ಕಂಡಾ!

463

ಜಲದೊಳಗೆ ಹುಟ್ಟಿ, ನೆಲದೊಳಗೆ ಹುದುಗಿರ್ದುದ ಕೆಲಬಲದೊಳಗಿದ್ದ ವರೆಲ್ಲಾ ಬಲ್ಲರೆ? ಗಾಳಿಯೊಳಗಿ[18]ಪ್ಪ[18] ಜ್ಯೋತಿ ಕೆಡದೆಯಿದ್ದುದ ಕಂಡು [19]ನಾನು[19] ಬೆಱಗಾದೆ. ಬಾಲಕ್ರೀಡೆಯೊಳಗಾಡುತಿಪ್ಪ ನಾರಿಯ ಮಕ್ಕಳೈವರು ಆರೂ ಕಾಣದ ಭಾವಿಯೊಳಗೆ ಬಿದ್ದಿರಲು, ಬೇಱೆ ಮತ್ತೆ ಜ್ಞಾನವೆಲ್ಲಿಯದೋ? ಗುಹೇಶ್ವರ, ನಿಮ್ಮನಱಿಯದ ಬಱಿಯಱಿವಿನ ಹಿರಿಯರ ಕಂ[20]ಡಡೆ[20], ನಾನು ನಾಚುವೆನಯ್ಯ.

464

ಕುಲಮದ ಛಲಮದ ವಿದ್ಯಾಮದದವರ ತೋಱದಿರಾ! ಅವರ ಆ[21]ರೂ[21]ಢಪದವಿಯನೆನಗೆ ತೋಱದಿರಾ! ಅವರ ಗರುವ ಗಂಭೀರತನವನೆನಗೆ ತೋಱದಿರಾ! ಶಮೆದಮೆಯುಳಿದು, ದಶಮುಖ ನಿಂದು, ಲಿಂಗದಲ್ಲಿ ಲೀಯ ವಾದವರನಲ್ಲದೆ ಎನಗೆ ತೋಱದಿರಾ ಗುಹೇಶ್ವರ.

---

1. ಸ್ರಂಗಳೆಂಬ (ಹಟತಲ) 2. × (ಕ) 3. ತೂಗಿ ಜೊಜೋ ಎಂದು (ಟ) 4 ತ್ತಿೃ (ಟ) 5. ಜೋಗುಳೆ[ೀ?]ಳೆ (ತ) 6. × (ಟ) 7. ರ ಹಱಿ ಹೊಯ್ದು (ಟ) 8. ರು (ಹತಲ) 9. ಚಾಗು (ಕ) 10. ನೆರೆದರು (ಟ) 11. ತಂ (ಟ) 12. ದೇನೋ ಅಯ್ಯ (ಹತಲ) 13. ವ(ತ) 14. ಕಂಡ ಇರಲು (ತಟ) ಕಂಡಿರಲು (ಹ) 15. ಕಂಡ (ಕಟ) ಕಂಡು (ಹ) 16. ಗುಹೇಶ್ವರಾ ಕಂಡ (ಕ) ಗುಹೇಶ್ವರ ಕಂಡಾ (ದ) ಗುಹೇಶ್ವರನ ಕಂಡು (ಹ) ಗುಹೇಶ್ವರನ ಕಂಡ (ಟ) 17. ತಿ (ಕ) 18. ದ್ದ (ಟ) 19. ನಾಚಿ (ಟ) 20. ಡು (ಟ) 21. ಜೂ (ಲ).

465

ವೇದವೆಂಬುದು ಓದಿನ ಮಾತು, ಶಾಸ್ತ್ರವೆಂಬುದು ಸಂ[1]ತೆ[1]ಯ [2]ಸು[2]ದ್ದಿ, ಪುರಾಣವೆಂಬುದು ಪುಂಡರ ಗೋಷ್ಠಿ, ತರ್ಕವೆಂಬುದು ತಗರ ಹೋರಟೆ, ಭಕ್ತಿ ಎಂಬುದು ತೋ[3]ರುಂ[3]ಬ ಲಾಭ, ಗುಹೇಶ್ವರನೆಂಬುದು ಮೀಱಿದ ಘನ[4]ವು[4].

466

ಆಶೆಯೆಂಬ ಶೂಲದ ಮೇಲೆ ವೇಷವೆಂಬ ಹೆಣನ ಕುಳ್ಳಿರಿಸಿ, ಧರೆಯ ಮೇಲುಳ್ಳ [5]ಹಿರಿಯರು[5] [6]ಹೇಂಗೆ[6] ಸವೆದರು. ನೋಡಾ! ಆಶೆಯ ಮುಂದಿಟ್ಟುಕೊಂಡು [7]ಸುಳಿವ[7] ಹಿರಿಯರ ಕಂಡು [8]ಹೇಸಿಕೆಯಾಗಿತ್ತು ಗುಹೇಶ್ವರ.[8]

467

ಧರೆಯ ಮೇಲುಳ್ಳ ಅರುಹಿರಿಯರೆಲ್ಲರೂ ಮರುಳುಗೊಂಡಾಡುತ್ತಿಪಾರೆ ನೋಡಾ. ಮಂಜಿನ ಮಡಕೆಯೊಳಗೆ ರಂಜನೆಯ [9]ಭಂಡವ[9] ತುಂಬಿ, ಅಂಜದೆ ಪಾಕವ ಮಾಡಿ[A]ಕೊಂಡು[A], [10]ಭಂಡವ[10] ಮಾಱುತಿಪ್ಪರು ನೋಡಾ. ಸಂಜೀವಿನಿಯ ಬೇರ ಕಾಣದೆ ಮರಣಕ್ಕೊಳಗಾದರು ಗುಹೇಶ್ವರ[11]ನ[11]ನಱಿಯದ ಭವಭಾರಕರೆಲ್ಲರೂ.

468

ಜಗದ ಕರ್ತನ ಕೈಯಲ್ಲಿ ಹಿಡಿದುಕೊಂಡು [B]ಮನೆಮನೆದಪ್ಪ[12]ದೆ[12] ತಿರುಗುವ ತುಡುಗುಣಿಯಂತೆ ಕಾಡಲಾಗದು ಭಕ್ತನ, ಬೇಡಲಾಗದು ಭವಿಯ. ಕಾಡಿ, ಬೇಡಿ, ಒಡಲ ಹೊರೆದಡೆ, ಬೇಂಟೆಯ ಶ್ವಾನ[B] ಮೊಲಕ್ಕೆ [13]ಬಾಯ್ದೆಗೆದಂತೆ[13] ಗುಹೇಶ್ವರ.

469

ಬಾಯೆ ಭಗವಾಗಿ, ಕೈಯೆ ಇಂದ್ರಿಯವಾಗಿ, ಹಾಕುವ ತುತ್ತುಗಳೆಲ್ಲಾ ಬಿಂದು ಕಾಣೆ[14]ರೋ[14]! ಪ್ರಥಮವಿಷಯ[15]ವಿಂತಿರಲು[15], ಗುಹೇಶ್ವರ, ಏಕೋ ಅದ್ವೈತ?

---

1. ಥೆ (ಓಸ್ಸಟದ) 2. ಶು (ತಲದ) 3. ಱು ಉಂ (ಕದಲ) 4. ವೋ (ಕ) 5. ಅರುಹಿರಿಯರು (ಟ) 6. ಯೀಹಿಂಗೆ (ಟ) ಹಿಂಗೆ (ಕತ) ಹೇಗೆ (ಶೂ) 7. ತಿರುಗುವ (ಟ) 8. ಗುಹೇಶ್ವರಲಿಂಗಕ್ಕೆ ಹೇಸಿಕೆಯಾಯಿತ್ತು ಕಾಣಾ ಸಂಗನ ಬಸವಣ (ಶೂ) 9. ಖಂಡವ (ಹ) ಬಣ್ಣವ (ಟ) A ಕೊಂಡುಂಡು (ಶೂ) 10. ಉಂಡ ಭಂಡ (ಟ) 11. ನಿಮ್ಮ (ಕವ್ಯಾ) B ಕಾಡಲಾಗದು ಭಕ್ತನು, ಬೇಡಲಾಗದು ಜಂಗಮ. ಕಾಡಿ ನೀವು ಒಲಿಸಿಕೊಂಡಡೆ ಬೇಟೆಯ ನಾಯಿ (ಟ) 12. ದಲ್ಲಿ (ಲ) 13. ಬಾಯದೆಱೆದಂತೆ (ಸ್ವತಲಓ) ಬಾಯಿದೆಗೆದಂತೆ (ಚ) 14. ಭೋ (ಲ) 15. ಇಂತಿರಲಿಕೆ (ಟ)

470

ಜಾನುಜಂಘೆಯಲ್ಲಿ ಹುಟ್ಟಿ ಜಂಗಮವೆನಿಸಿಕೊಳಬಹುದೆ? ಆ [1]ಠಾವು ಹಿಂಗದಡೆ[1] ಭಂಗಿತನು ಕಂಡಾ! ಅಂತರಂಗ ಒದಗುವುದನಱಿಯರು. ಗುಹೇಶ್ವರನೆಂಬುದು ಮೀಱಿದ ಘನವೋ?

471

ಜಂಗಮಸ್ಥಲಕ್ಕೆ ಲಕ್ಷಣವಾವುದೆಂದರೆ [2]ಹೇಳಿಹೆ[2] ಕೇಳಿರಣ್ಣ: ಮೂಱಱ ಹೋಲಿಗೆಯ ಬಿಚ್ಚಿ, ಆಱು ಮಾಡಬೇಕು. ಆಱಱ ತಿರುಳ ತೆಗೆದು, ಒಂದಱೊಳಗೆ ನಿಲಿಸಬೇಕು. [3]ಐದಱ[3] ಮುಸುಕನುಗಿದು, ಐದರ ಕಳೆಯ ಕೆಡಿಸಿ, ಐದರ ನಿಲವನಡಗಿಸಿ, ಮೂಱಱ ಮುದ್ರೆಯನೊಡೆದು, ನಾಲ್ಕಱೊಳಗೆ ನಿಲ್ಲದೆ, [4]ಮೂಱು ಮುಖ[4] ಒಂದು ಭಾವವಾಗಿರಬೇಕು. ಈ ಭೇದವನಱಿಯದೆ ಸುಳಿವವರ ಕಂಡು ಬೆಱಗಾದೆನು ಕಾಣಾ ಗುಹೇಶ್ವರ.

472

ಹಗಲ[5]ನಿ[5]ರುಳ ಮಾಡಿ, ಇರುಳ ಹಗಲ ಮಾಡಿ; ಆಚಾರವ ಅನಾಚಾರವ ಮಾಡಿ,ಅನಾಚಾರವ ಆಚಾರವ ಮಾಡಿ; ಭಕ್ತನ ಭವಿಯ ಮಾಡಿ, ಭವಿಯ ಭಕ್ತನ ಮಾಡಿ [6]ನುಡಿವನ[6] ಮಾತ ಕೇಳಲಾಗದು, ಗುಹೇಶ್ವರ.

473

ಇಷ್ಟಲಿಂಗವ ತೋಱಿ ಮೃಷ್ಟಾನ್ನವ ಹೊಡೆವವರಿಗೆ ಇಷ್ಟಾರ್ಥ ಸಿದ್ಧಿಯದೆಲ್ಲಿಯದೋ? ಆದೆಲ್ಲಿಯದೋ ಲಿಂಗ? ಅದೆಲ್ಲಿಯದೋ ಜಂಗಮ? ಅದೆಲ್ಲಿಯದೋ ಪಾದೋದಕ ಪ್ರಸಾದ? ಅಲ್ಲದಾಟವ[7]ನಾ[7]ಡಿ ಎಲ್ಲರೂ ಮುಂದುಗೆಟ್ಟರು, ಗುಹೇಶ್ವರ, ನಿಮ್ಮಾಣೆ.

474

[8]ಕಂಕುಳೆಂ[8]ಬುದು ಕವುಚಿನ ತವರುಮನೆ. ಕರಸ್ಥಲವೆಂಬುದು [9]ಕೈ-ಕೆಟ್ಟ[9] ಹುಣ್ಣು. ಅಮಲೋಕ್ಯವೆಂಬುದು ಬಾಯ [10]ಬಗದಳ[10]. ಅಂಗ-ಸೋಂಕೆಂಬುದು ಪಾಪದ [11]ತವರ್ಮನೆ[11]. ಉತ್ತಮಾಂಗವೆಂಬುದು ನೆತ್ತಿಯ ಮೃತ್ಯು. ಕಂಠವೆಂಬುದು ಗಂಟಲ ಗಾಣ. ಮತ್ತೆ, ಗುಹೇಶ್ವರ[12]ನ ಮಾತು ನಿನಗೇಕೆಲವೋ[12]?

---

1. ಠಾವ ಹಿಂಗದಡೆ (ದ) ಠಾವ ಹಿಂಗಿದಡೆ (ಚಕ) 2. ಹೇಳುವೆ (ಹ) 3. ಐವರ(ಚ) ಐದಱ (ಚವ್ಯಾ) 4. ಮೂಱಱ ಮುಖವೂ(ಟ). 5. ಇ (ದ) 6. ನುಡಿವ (ಚ) ನುಡಿವವರ (ದತಲ) 7. ನೆ ಅ (ಟ) 8. ಕಕ್ಷವೆಂ (ಟ) 9. ಕೈಯ ಕೆ[=ಕ ?]ಟಕ (ಟ) 10. ಬೀಯಗದ ಬಗದಳ (ಟ) 11. ನೆಲೆ (ಟ) ತವರುಮನೆ (ಲ). 12. ನೆಂಬುದು ನಿಮಗೇಕೆಲವೋ(ಟ) ನ ಮಾತು ನಿಮಗೇಕೆಲವೋ (ತಲ).

## 475

ಅಱಿವು ಅಱಿವೆನುತ್ತಿಪ್ಪಿರಿ, ಅಱಿವು ಸಾಮಾನ್ಯವೆ? ಹಿಂದಣ ಹಜ್ಜೆಯ ನೋಡಿ ಕಂಡಲ್ಲದೆ, ನಿಂದ ಹಜ್ಜೆಯನಱಿಯ ಬಾರದು. ಮುಂದಣ ಹಜ್ಜೆಯಳಿದಲ್ಲದೆ, ಒಂದು ಪಾದ ನೆಲೆಗೊಳ್ಳದು. ನೆಲನ ಬಿಟ್ಟು, ಆಕಾಶದಲ್ಲಿ ನಿಂದು, ಮುಗಿಲೊಳಗೆ ಮಿಂಚಿದಲ್ಲದೆ ತಾನಾಗಬಾರದು. ಗುಹೇಶ್ವರನೆಂಬುದು ಬಱಿದೆ ಬಹುದೆ, ಹೇಳಿರೆ?

## 476

ಹರಿದು ಹತ್ತಿ [1]ಮುತ್ತಿ[1] ಹಿಡಿ[2]ದಹೆನೆಂ[2]ದು, ಜಾಱಿ ಉರುಳಿಬಿದ್ದ[3]ರು ಅ[3]ನಂ[A]ತ[A]ರು. ಹಿಡಿದವರೆಲ್ಲ [4]ಹೆಣ[4]ನುಂಡು ಹೋದರು. [5]ನಾ[5] ಹಿಡಿ[6]ದ[6] ಬಂ[7]ದಿ[7] ಒಡಬಂದಿಯಾಯಿತ್ತು, ಗುಹೇಶ್ವರ.

## 477

ಆದಿ [8]ಆ[8]ಧಾರ ತನುಗುಣ ಉಳ್ಳನ್ನಕ್ಕರ, ಸಮತೆ ಎಂಬುದೇನೋ? ಕಾಲಕಲ್ಪಿತ ಉಪಾಧಿ ಉಳ್ಳನ್ನ[9]ಕ್ಕರ[9] ಶೀಲವೆಂಬು[10]ದು[10] ಭಂಗ. [11]ಕಾಮ[11]ವೆಂಬುದಱ ಬೆಂಬಳಿಯ ಕೂಸಿನ ಹುಸಿಯ ತಾನೆಂದು ತಿಳಿ[12]ಯ[12]ದನ್ನಕ್ಕರ, ಗುಹೇಶ್ವರ, ನಿಮ್ಮ ನಾಮಕ್ಕೆ ನಾಚದವರ [13]ನಾ[13]ನೇನೆಂಬೆನು.

## 478

ಮದ್ಯಮಾಂಸಾದಿಗಳ ಮುಟ್ಟೆವೆಂದೆಂಬಿರಿ ನೀವು ಕೇಳಿರೇ! ಮದ್ಯವಲ್ಲ[14]ದೇ[14]ನು ಅಷ್ಟಮದಂಗಳು? ಮಾಂಸವಲ್ಲ[14]ದೇನು[14] ಸಂಸಾರಸಂಗ? ಈ ಉಭಯವನತಿಗಳೆದಾತನೆ ಗುಹೇಶ್ವರಲಿಂಗದಲ್ಲಿ ಲಿಂಗೈಕ್ಯನು.

## 479

ದಾರಿಗೊಂಡು ಹೋಹವರೆಲ್ಲ ನೀವು ಕೇಳಿರೇ: ಮೂಱು ಬಟ್ಟೆ ಕೂಡಿದ ಠಾವಿನಲ್ಲಿ ಒಬ್ಬ ಹೆಮ್ಮಾರಿಯೈದಾಳೆ. ಆ [15]ಹೆಮ್ಮಾರಿ[15]ಯ ಬಾಯೊಳಗೆ ಮೂಱು [16]ಘಟ್ಟ[16]ವಿಪ್ಪವು; ನಂಜಿನ ಸೋನೆ ಸುರಿವುತ್ತಿಪ್ಪುದು. ಕಾ[17]ಡ[17] ಕೋಣನ ಕತ್ತಲೆ ಕಾಣಲೀಸದು. [18]ಐವಾಯ[18] ಹುಲಿ ಆಗುಳಿಸುತ್ತಿಪ್ಪುದು. ಇವೆಲ್ಲವ ಗೆದ್ದಲ್ಲದೆ, ಗುಹೇಶ್ವರನ ಕಾಣಬಾರದು.

---

1. ಮುಟ್ಟಿ (ಕಚದತಲ) 2. ದೆವೆಂ (ವ) 3. ರ (ವ) A ತ ಹಿರಿಯರೆಲ್ಲ (ಲ) 4. ಹೀಹೆಣ (ಚವ್ಯಾ) 5. ನಾನು (ಟ) 6. ದು (ವ) 7. ಡಿ (ಹ) ಧಿ (ಚದ). 8. ಯಾ (ಕಚದತ) 9. ಬರ (ಟ) 10. ದ (ಟ) 11. ಕಾಯ (ದ) 12 × (ಹ) 13. × (ಟ) 14. ವೇ (ದತ) 15. ಮಾರಿ (ಕಚದತಲರ) 16. ಘಟ (ಕಟ) 17. ಡು (ಕ) 18. ಐದು ಬಾಯ (ಕಚಟದ).

480

ಜಂಗ[1]ಮ[1] ಘನವೆಂಬೆನೆ? ಬೇಡಿ ಕಿಱಿದಾಯಿತ್ತು! ಲಿಂಗ ಘನವೆಂಬೆನೆ? ಕಲುಕುಟಿಕನ [A]ಕೈಯಲ್ಲಿ[A] ಮಾಡಿಸಿ ಕೊಂಡು ಕಿಱಿದಾಯಿತ್ತು! ಭಕ್ತ ಘನವೆಂಬೆನೆ? ತನುಮನಧನ[2]ದಲ್ಲಿ[2] ವಂಚಕನಾಗಿ ಕಿಱಿ[3]ದಾದ[3]. [4]ಇಂತೀ[4] ತ್ರಿವಿಧದಲ್ಲಿ ಪರಿಣಾಮವಿಲ್ಲ, ಪರಮಾರ್ಥವಿಲ್ಲ. [5]ಘನವ ಬಲ್ಲವರಾರೋ, ಗುಹೇಶ್ವರ[5]?

481

ಭಕ್ತರೆಲ್ಲರು [6]ಲಂ[6]ದಣಿಗರಾಗಿ ಹೋಯಿತ್ತು. ಜಂಗಮವೆಲ್ಲವು ಉಪಜೀವಿಗಳಾಗಿ ಹೋಯಿತ್ತು. ಇದೇನೋ, ಇದೆಂತೋ; ಅಱಿಯ[7]ಲಿ[7] ಬಾರದು! ಕಾಯಗುಣ ನಾಸ್ತಿಯಾದಾತ ಭಕ್ತ. ಪ್ರಾಣಗುಣ ನಾಸ್ತಿಯಾದಾತ ಜಂಗಮ. ಉಳಿದವೆಲ್ಲವ ಸಟೆಯೆಂಬೆ ಗುಹೇಶ್ವರ.

482

ಜ್ಞಾನದ ಉಬ್ಬು ಕೊಬ್ಬಿನಲ್ಲಿ [8]ಉಲಿ[8]ವುತ್ತಿಪ್ಪವರೆಲ್ಲರು! ನಾಮ ನಾಸ್ತಿಯಾಗದು, ತನುಗುಣ ನಾಸ್ತಿಯಾಗದು, ಕರಣಂಗಳು ನಾಸ್ತಿಯಾಗವು; ಕರಸ್ಥಲ ನಾಸ್ತಿಯಾಗದು; ಇದೆತ್ತಣ ಉಲುಹೋ, ಗುಹೇಶ್ವರ?

483

ಜಗ[B]ದ್ವ[B]ಂದ್ಯರೆಂದು ನುಡಿ[9]ದು ನಡೆವರು ನೋಡಾ[9]! ಭವಬಂಧನದ ಕುಣಿಕೆಯ ಕಳೆಯಲಱಿಯರು ನೋಡಾ! ಭವ ತಮ್ಮ [10]ತುಳಿ[10]ತುಳಿದುಕೊಂ[11]ಡಿ[11]ತ್ತು ನೋಡಾ! ಶಬ್ದವೇದಿಗಳೆಂದು ನುಡಿದು ನಡೆವರು ನೋಡಾ! ನಿಶ್ಶಬ್ದ ವೇದಿಸದಿದ್ದರೆ, ಗುಹೇಶ್ವರ ನೋಡಿ [12]ನೋಡಿ[12] ನಗುತ್ತಿಪ್ಪ ನೋಡಾ!

484

ಲೋಕದವರನೊಂದು ಭೂತ ಹಿಡಿದರೆ, ಆ ಭೂತದಿಚ್ಛೆ[13]ಯಲ್ಲಿ[13] ನುಡಿವುತ್ತಿಪ್ಪರು. ಲಾಂಛನದಾರಿ ವೇಷವ ಧರಿಸಿ, ಆಶೆಯಿಂದ [14]ಘಾಸಿ[14]ಯಾಗಲೇಕಯ್ಯ? ಆನೆಯ ಚೋಹವ ತೊಟ್ಟು ನಾಯಾಗಿ [15]ಬೊ[15]ಗಳುವ ಮಾನವ[16]ರ[16]ನೇನೆಂಬೆ, ಗುಹೇಶ್ವರ.

---

1. ಮವ (ಕ) A ಯಿಂದ (ರ) 2. × (ಶೂಟ) 3. ದಾಯಿತ್ತು (ಹತಲ) 4. ಇಂತು (ತಲ) 5. ಗುಹೇಶ್ವರಲಿಂಗದ ಘನವ ಬಲ್ಲವರಾರು ಹೇಳೈ ಸಂಗನಬಸವಣ್ಣ (ಶೂ) 6. ಅಂ (ತ) 7. ಲು (ತ) 8. ನುಡಿ (ಕಚದತಲರ) B ವಂ (ಕಚಟದಲರ) 9. ದು ನಡೆವರಯ್ಯ (ಟರ) ನುಡಿವರು ನೋಡಾ (ಹದ) 10. ತುಳಿದು (ರ) 11. ದಿ (ತ) ದು (ರ) 12. × (ಹತಲ) 13. ಯ (ಟದ) 14. ಪೂಜಿಸಿ ಘಾಸಿ (ತ) 15. ಬ (ದರ) 16. × (ಟ)

485

ಏನೆಂದಱಿಯರು, ಎಂತೆಂದಱಿಯರು, ಬಱುಮಾತಿನ ಬೊಮ್ಮವನಾಡು ತ್ತಿಪ್ಪರು! ರುದ್ರನ ನೊಸಲ ಕಣ್ಣ ಕಿಚ್ಚಿನೊಳಗೆ ತ್ರಿಪುರವ ಸುಡಲಱಿಯದೆ ಕಾಮನ ಕಣ್ಣ ಕಿಚ್ಚಿನೊಳಗೆ ತ್ರಿಪುರವ ಸುಡುತ್ತಿಪ್ಪರು. ಭೂಮಿ[1]ಯಾ[1]ಕಾಶವ ಮೆಟ್ಟಿ ಕಾಮಗಣಂಗಳ ಕೂಡೆ ಕಾದಿ ಗೆಲಲಱಿಯದೆ, ನೀಲಗಿರಿಯ ಮೇಲೆ ನಿಂದು [2]ಉಲಿವ[2] ಉಯ್ಯಾಲೆಯನಾಡುತ್ತಿಪ್ಪರಯ್ಯ. ಗುಹೇಶ್ವರ, ನಿಮ್ಮ ನಱಿ[3]ದೆನೆಂಬವರೆಲ್ಲಾ[3] ಬ[4]ಱು[4]ದೋಱಿ[3]ವೋದರಯ್ಯ!

486

ಗಗನದ ಮೇಘಂಗಳೆಲ್ಲಾ [5]ಸುರಿದವು[5] ಭೂಮಿಯ ಮೇಲೆ. ಭೂಮಿ ದಣಿಯುಂಡು, ಸಸಿಗಳೆಲ್ಲಾ ಬೆಳೆ[6]ದವು[6]. ಬಹುವಿಕಾರದಿಂದ ಬೆಳೆದ, ಸಸಿಯ ವಿಕಾರದಿಂದ ಗ್ರಹಿ[7]ಸುವ[7] ಕಾ[8]ಮ[8]ವಿಕಾರಿಗಳು ಲಿಂಗವನೆತ್ತ ಬಲ್ಲರು ಗುಹೇಶ್ವರ?

487

ಮರನುಳ್ಳನ್ನಕ್ಕರ ಎಲೆ ಉಲಿವುದ ಮಾಬುದೆ? ಶರೀರ ಉಳ್ಳನ್ನಕ್ಕರ ವಿಕಾರ ಮಾಬುದೆ? ಅಯ್ಯ, ಸುಳಿ[9]ಹು[9]ಳ್ಳನ್ನಕ್ಕರ ಸೂತಕ [A]ಹಿಂಗುವುದೆ[A] ಗುಹೇಶ್ವರ.

488

ಅಱಿವಿನ ಬಲದಿಂದ ಕೆಲಬರು, ಅಱಿಯದವರ ಗೆಲಬೇಕೆಂದು, ಬಱು ಮಾತಿನ ಉಯ್ಯಾಲೆಯನೇಱಿ ಒದೆದು [10]ಒಱಲಿ[10] ಕೆ[B]ಡೆ[B]ವ ದರಿದ್ರರು. ಅಱಿವು ತೋಱದೆ ಇರಬೇಕು—ಕಾಯನಿರ್ಣಯ[11]ನಿಃಪತಿ[11]ಯೆಂಬಾತನು. ಸೋಂಕಿನ ಸೋಜಿಗವೆಂಬ ಪರಿಣತೆ ಫ[12]ಲಿ[12]ಸಬೇಕು. ಅಱಿವು [13]ತೋಱಿ[13]ದ[13] ಎರಡೆಂಬ ಭಿನ್ನವೇಷವ ತೊ[14]ಟ್ಟು[14] ಡಂಬಕವ ನುಡಿ[15]ದಹೆ[15]ವೆಂಬ ಉದ್ದಂಡರ ಗುಹೇಶ್ವರ ಕಂಡಡೆ ಕನಲುವ.

489

ಹೋಮವ ಮಾಡುವರ ಕಂಡೆ; ಹೊಗೆಯ ನಿಲಿಸುವರ[16]ನಾರನೂ[16] ಕಾಣೆ. ದೂರ ದಾರಿಯ ನಡೆವರ ಕಂಡೆ; ಕಾಲುಗಳ ನುಂಗುವರ[16]ನಾರನೂ[16]

---

1. ಅ (ಟ) 13. ಉರಿವ (ತ) 3. ದೆಹೆವೆಂಬವರೆಲ್ಲಾ (ಟ) ದೆವೆಂದವರೆಲ್ಲಾ (ರ) 4. ರುಯಿ (ತ) 5. ಸುರಿದು (ಕಚದತಲರ) 6. ದವೆ (ಕಚದಲರ) 7. ಸಿ (ಟರ) 8. ಯ (ಟರ) 9. ಹುಲು (ಟ) Aಹಿಂಗದು (ತಲ) 10. ಒದಱಿ (ಟ) Bಡು (ತ) 11. ನಿಷ್ಪತಿ (ಚತರ) 12. ಕಿ(ತ) 13. ತೋಱದೆ (ಕಪಟ) ತೊಱದೆ (ದ) 14. ಟ್ಟ (ಟಲ) 15. ದೆ (ರ) 16. ×(ತರಲ)

ಕಾಣೆ. [1]ಆಲುತ್ತ[1] ಬೊಬ್ಬೆಗೊ[2]ಟ್ಟು[2] ರಣದೊಳಗೆ [3]ಮುಂಡ[3] [4]ಮುಂಡೆ[4] ನಡೆದಾಡುವರ ಕಂಡೆ; ಹರಿದ ಶಿರವ ಹಿಡಿದು[5]ಕೊಂಡು[5] ಕುಣಿದಾಡುವರ ನಾರನೂ ಕಾಣೆ ಕಾಣಾ ಗುಹೇಶ್ವರ.

490

ಹೊನ್ನ ತೂಗಿದ ತ್ರಾಸುಕಟ್ಟ[6]ಳೆ[6] [7]ಹೊನ್ನಿಂಗೆ[7] ಸರಿಯಪ್ಪುದೆ? [8]ಸನ್ನಹಿತರಾದೆ[8]ವೆಂಬ ನುಡಿಗೆ ನಾಚರು ನೋಡಾ! ಕನ್ನದಲ್ಲಿ ಸವೆದ [9]ಕಬ್ಬುನ[9]ದಂತೆ ಮುನ್ನ ಹೋದ ಹಿಱಿಯರು ಲಿಂಗದ [10]ಸುದ್ದಿ[10]ಯನಱಿಯರು. ಇನ್ನಾರು ಬಲ್ಲರು ಹೇಳಾ, ಗುಹೇಶ್ವರ.

491

ಶಬ್ದಿಯಾದಾತ ತರುಗಳ ಹೋತ. ನಿಶ್ಶಬ್ದಿಯಾದಾತ ಪಾಷಾಣವ ಹೋತ. [A]ಕೋಪಿಯಾದಾತ ಅಗ್ನಿಯ ಹೋತ[A]. [B]ಶಾಂತನಾದಾತ ಜಲವ ಹೋತ.[B] ಬಲ್ಲೆ [11]ಬಲ್ಲೆ[11]ನೆಂಬಾತ ಇಲ್ಲವೆಯ ಹೋತ. ಅಱಿಯೆನೆಂಬಾತ ಪಶುವ ಹೋತ. ಇದು ಕಾರಣ, ಅಱಿಯೆನೆನ್ನದೆ, [12]ಬಲ್ಲೆನೆನ್ನದೆ[12], ಅಱಿವಿನ ಕುಱುಹನಳಿದುಳಿದು, ಗುಹೇಶ್ವರನೆಂಬ ಲಿಂಗವ ಹೋತವರನಾರನೂ ಕಾಣೆ.

492

ನಾದದ ಉತ್ಪತ್ತಿಸ್ಥಿತಿಲಯವನು ಹೇಳಿದಡೇನು, ಕೇಳಿದಡೇನು, ಎಲೆ ಮರುಳೆ? ಬಿಂದುದಳದ ಉತ್ಪತ್ತಿಸ್ಥಿತಿಲಯವನು ಹೇಳಿದಡೇನು, ಕೇಳಿದಡೇನು, ಎಲೆ ಮರುಳೆ? ಮಧ್ಯ[13]ದಳದ[13] ಉತ್ಪತ್ತಿಸ್ಥಿತಿಲಯವನು ಹೇಳಿದಡೇನು, ಕೇಳಿದಡೇನು, ಎಲೆ ಮರುಳೆ? ಮುಗಿಲಗಲದ ಅಂಬರ ವಾಯು ಅಗ್ನಿ ಜಲಧರೆಯ ಹೊತ್ತುಕೊಂಡು ಅವ ಹೇಳಿದಡೇನು, ಕೇಳಿದಡೇನು, [14]ಎಲೆ[14]ಮರುಳೆ? ಗುಹೇಶ್ವರಲಿಂಗದ [15]ಬಾರಿ[15]ಗೊಳಗಾಗಿ [16]ಇವೆಲ್ಲ[16]ವನುಂಟುಮಾಡ[17]ಲಱಿಯೆನಾಗಿ, ಎನಗಿಲ್ಲವೆನುತಿದ್ದೆನಯ್ಯ[17].

---

1. ಅರಲುತ್ತ (ಹ) ಆರುತ್ತ (ಚವ್ಯಾರ) 2. ಟ್ಟ (ಟಲ) 3. ಮುಂದ (ಓಚ) ಮುಂದೆ (ಚವ್ಯಾ) 4. × (ಟ) 5. × (ಟದತರಲ) 6. ಣೆ (ರ) 7. ಹೊನ್ನಿನ (ಟ) 8. ಸನ್ನಿಹಿತರಾದೆ (ಹ) ಸನ್ನಿಹಿತರಾದೆಹೆ (ಟ) 9. ಕಬ್ಬಿಣ (ಹ) 10. ಶುದ್ಧಿ (ಚಟದತ) B+A (ಟ) B×(ರ) 11. ×(ಟದತ) 12. ×(ಚ) 13. ದ (ಟ) 14. ಕೇಳಿಲೆ (ರ) 15. ಬಾಧೆ (ಚವ್ಯಾತಲ) ಬೋಧೆ (ಹ) 16. ಎಲ್ಲ (ರ) 17. ಲಱಿಯೆನಾ ಇಲ್ಲೆನುತ್ತಿದ್ದೆನಯ್ಯ (ಟ) ಲಱಿಯನಾಗಿ ಇಲ್ಲವೆನುತಿದ್ದೆನಯ್ಯ (ರ)

493

[C]ಮುಂದಳೂರಿಗೆ ಬಟ್ಟೆಯಿದೇ ಹೋಗೆಂದಡೆ, ಅಂಧಕ[1]ನೇನ[1] ಬಲ್ಲನು ಹೇಳಾ? ಸಂಗ್ರಾಮದಲ್ಲಿ ಓಡಿದ ಹಂದೆ ಗೆಲ್ಲಬಲ್ಲನೆ ಹೇಳಾ?[C] ನಿಂದ ನಿಲವಿನ ಮಡುವ [2]ಕಂದನೀಸಾಡ[2] ಬಲ್ಲನೆ ಹೇಳಾ? ಗುಹೇಶ್ವರನೆಂಬ ನಿರಾಳದ ಘನವ ಪಂಚೇಂದ್ರಿ[3]ಕ[3]ನೆತ್ತ ಬಲ್ಲನು ಹೇಳಾ?!

494

ಗಗನದ ಮೇಘಂಗಳು ಸುರಿದಲ್ಲಿ, ಒಂದು ಹಿರಿಯ ಕೆರೆ ತುಂಬಿತ್ತು. ಆ ಕೆಱೆ[4]ಗೆ[4] ಏರಿ ಮೂಱು; ಅಲ್ಲಿ ಒಳಗೆ ಹತ್ತು ಭಾವಿ ಹೊಱಗೆ ಐದು ಭಾವಿ. ಆ ಏರಿಯೊಳಗೆ ಒಂಬತ್ತು [5]ತೂಬ[5]ನುಚ್ಚಿದರೆ ಆಕಾಶವೆಲ್ಲಾ ಜಲಮಯವಾಯಿತ್ತು. ತುಂಬಿದ ಜಲವನುಂಡು ಬಂದು, ಅಂಜದೆ ನುಡಿವ ಭಂಡಯೋಗಿಗಳ ನೇನೆಂಬೆ ಗುಹೇಶ್ವರ.

495

[A]ರೂಪ[6]ನೆ[6] ಕಂ[7]ಡರು,[7] ನಿರೂಪ[6]ನೆ[6] ಕಾಣರು. [A]ತನುವನೆ ಕಂ[7]ಡರು[7], [B]ಅನುವನೆ ಕಾಣರು. ಆಚಾರವನೆ ಕಂ[7]ಡರು[7], [B]ವಿಚಾರವನೆ ಕಾಣರು. ಗುಹೇಶ್ವರ, ನಿಮ್ಮ[C]ಕುಱುಹನೆ [8]ಕಂಡು[8] ಕೂಡಲಱಿಯದೆ ಕೆಟ್ಟರು.[C]

496

ಇರುಳೊಂದು ಮುಖ, ಹಗಲೊಂದು ಮುಖ; ಕಾಯವೊಂದು ಮುಖ, ಜೀವವೊಂದು ಮುಖ. ಬುದ್ಧಿಯ[9]ನಱಿಯದಿದೆ[9] ನೋಡಾ! ಪ್ರಾಣಲಿಂಗವೆಂಬ ಭ್ರಾಂತು ನೋಡಾ! ಇದು ಕಾರಣ, ಮೂಱು ಲೋಕ[10]ವೆಯ್ದೆ ಬಱಿ ಸೂಱೆವೋಯಿತ್ತು[10], ಗುಹೇಶ್ವರ.

497

ಭಾವದಲ್ಲಿ [11]ಭ್ರಮಿತ[11]ರಾದವರ ಸೀಮೆಯೇನು, ನಿಸ್ಸೀಮೆಯೇನು?

---

[C] × (ರ) 1. ನೇ (ಓ) 2. ಶಿಶುಕಂಡುನಿಶಾಡ (ಟ) 3. ಯಕ (ಕರ) 4. ಯ (ಟ) 5. ತುಂಬ (ಹತರಲ) [A] ರೂಪವನೆ ಕೂಡರು ನಿರೂಪವನೆ ಕೂಡರು (ಏ) 6. × (ಟರ) 7. ಡು (ಲಿ) [B]ಅನುವನೆ ಕಂಡರು ತನುವನೆ ಕಾಣರು (ಕಚಟದತಲರಲಿ) [ವ್ಯಾಖ್ಯಾನವೂ ಈ ಪಾಠಾಂತರವನ್ನೇ ಸಮರ್ಥಿಸುತ್ತದೆ] [C]ಶರಣರು ಕುಱುಹನೆ ಕಂಡರು ಕೂಡಲಱಿಯರು (ವ) 8. ಕಂಡರು (ಏಕಐತಲ) 9. ನಱಿಯದೆಯಿದೆಯಿದೆ (ಟ) ನಱಿಯದ್ದೈದೆ (ರ) ನಱಿದೆದೆ (ತ) 10. ವೆ ಇದೆಂಬರು ಸೂಱೆಹೋಯಿತ್ತು (ಚ) ವೆಯ್ದೆ ಬಳ್ಳುಸೂಳ್ಱೆವೋದರು (ಟ) 11. ಭರಿತ (ಟ)

ವಚನದ ರಚನೆ[1]ಯು[1] [A]ರಂಜನೆಯ [2]ಲೀ[2]ಲೆಯನಾಡುವರು ಗುಹೇಶ್ವರನಿಪ್ಪ ಗುಪ್ತವೆಂತೆಂದಱಿಯರು.[A]

## 498

ಅಘಟಿತ ಘಟಿತನೆ, ವಿಪರೀತ ಚರಿ[3]ತ್ರ[3]ನೆ, ಸಾವರ ಕೈಯ[B]ಲ್ಲಿ[B] ಪೂಜೆಗೊಂಬರೆ ಲಿಂಗಯ್ಯ? ಸಾವ ನೋವರ ಕೈಯ[B]ಲ್ಲಿ[B] ಪೂಜೆಗೊಂಬುದು ಲಜ್ಜೆ [4]ಕಾಣಾ[4] ಗುಹೇಶ್ವರ.

## 499

ಅಪರಿಮಿತದ ಕತ್ತಲೆಯೊಳಗೆ [5]ವಿಪರೀತದ[5] ಬೆಳಗನಿಕ್ಕಿದ[6]ವರಾರೋ[6]? ಬೆಳಗೂ ಅದೆ, ಕತ್ತಲೆಯೂ ಅದೆ! [7]ಇದೇನು ಚೋದ್ಯವೋ[7]? ಒಂದಕ್ಕೊಂದಂಜ[8]ದು.[8] ಆನೆಯೂ ಸಿಂಹವೂ ಒಂದಾಗಿ ಉಂಬುದ ಕಂಡು, ಬೆಱಗಾದೆನು ಕಾಣಾ ಗುಹೇಶ್ವರ.

## 500

ತತ್ತ್ವವೆಂಬುದ ನೀನೆತ್ತ ಬಲ್ಲೆಯೋ? ಸತ್ತು ಮುಂದೆ [9]ನೀನೇನ[9] ಕಾಬೆಯೊ? [10]ಇಂದೆ ಇಂದೆಯೋ, ಇಂದೆ ಮಾನವ.[10] ಮಾತಿನಂ[11]ತುಟಲ್ಲ[11] ಶಿವಾಚಾರದ [12]ಸರಿ[12]ದೊಡಕು ಕಾಣಿರಣ್ಣ, [13]ಬ[13]ಚ್ಚೆಯ ಮಾತಲ್ಲ, ಬೀದಿಯ ಮಾತಲ್ಲ. ಏಕೋರಾತ್ರಿಯ ಬಿಂದು ನೋಡಾ! ಗುಹೇಶ್ವರನ ಕೂಡಿದ [14]ಕೂಟ ಇಂದು[14] ಸುಖ, ಮುಂದೆ ಲೇಸು.

## 501

ಪೃಥ್ವಿ–ಅಪ್ಪು–ತೇಜ–ವಾಯ್ವಾಕಾಶದಲ್ಲಿ ಬೆಳೆವುತ್ತಿದ್ದರೇನು ನೋಡಾ! ಘನಘನವನಱಿ[15]ದೆನೆಂಬ[15] ಮರುಳು ಮಾನವರ ನೋಡಾ! ನಿರ್ಣಯವಿಲ್ಲದ ನಿರ್ವಿಕಾರಗುಹೇಶ್ವರನೆಂಬ ಮಹಾಘನವ ತಿಳಿಯ[16]ರು[16] ನೋಡಾ!

---

1. × (ಲ) [A]ಬಱುಬಾಯ ಭುಂಜಕರು ಗೊಗೇಶ್ವರನಿಪ್ಪಗುಪ್ತವದೆಂತೆಂದಱಿಯರು (ವ) 2. ನೆ (ಹ) 3. ತ (ಲಕ) [B] ಲಿ (ಟ) 4. × (ರ). 5. ಪರಿಮಿತದ (ಕಚಟದತಲರ) 6. ರೆ (ಕಚಟದತಲರ) 7. × (ವ) 8. ವು ನೋಡಾ (ವ) ದು ನೋಡಾ(ತ) 9. ಏನ(ವ) 10. ನಿಂದೆ ನಿಂದೆಯೋ ನಿಂದೆ ಮಾನವ (ಕಚಟದತಲರ) 11. ತದಲ್ಲ (ವ) 12. ಪರಿ (ಟ) ಶರಿ (ಕದತ) ಸಿರಿ (ರ) 13. ರ (ರ) 14. ಕೂಟದ (ರ) 15. ದೆಹೆನೆಂಬ (ಟ) ದೆವೆಂಬ (ಕ) 16. ದು (ಟಚ).

502

[A]ಎಲ್ಲ ಎಲ್ಲವನಱಿಯ ಬಹುದು, ಸಾವನಱಿಯ ಬಾರದು. ಸರ್ವ ವಿ[1]ದ್ಯಾ[1]ಸಕಲಕಳಾವ್ಯಾಪ್ತಿ[2]ಯ[2]ನಱಿಯಬಹು[3]ದು[3], [B]ಸಾವನಱಿಯ ಬಾರದು[B]. [4]ಹರಿ[4]ಬ್ರಹ್ಮಕಾಲಕಾಮದಕ್ಷಾದಿ ದೇವದಾನವಮಾನವ[5]ರಿಗೆಲ್ಲ[5] ಸಾವು! [6]ಮಹಾಪುರುಷರಿಗೆಲ್ಲ[6] ಸಾವು! ಶಿವಶಿವಾ, [7]ಈ ಸಾವ[7]ನಱಿದು, [8]ಲೋಕ[8]ಪ್ರಪಂಚ ಮಱೆದು, ಲಿಂಗದಲ್ಲಿ ನೆನಹು ನೆಲೆ[9]ಗೊಂಡಡೆ, ಆ ಮಹಾಮಹಿಮಂಗೆ ಸಾವಿಲ್ಲ[9]! [10]ಈ ಸಾವನಱಿಯದ ಅಱಿ[10]ಮರುಳುಗಳ ಅಱಿವು ಮಾನಹಾನಿ [11]ಕಾಣಾ[11] ಗುಹೇಶ್ವರ.[A]

503

ಆಗ ಹುಟ್ಟಿ, ಬೇಗ ಸಾವ ಕಾಯಗೊಂಡ ಮಾನವ, ನೀ ದೇವರೆನಿಸಿಕೊಂಬು[12]ದಾ[12]ವುದಂತರ ಹೇಳಾ? ದೇವರು ಸಾವರೆ? ದೇವರಿಗೂ ಸಾವರಿಗೂ ಆವುದಂತರ ಹೇಳಾ? ದೇವರಿಗೆ ದೇವಲೋಕ, ಮಾನವರಿಗೆ ಮರ್ತ್ಯಲೋಕ; ಗುಹೇಶ್ವರಲ್ಲಯ್ಯಂಗೆ ಇನ್ನಾವಲೋಕವೂ ಇಲ್ಲ.

504

ಅತ್ತಲಿತ್ತಲು ಕಾಣಲಿಲ್ಲ. ಬಯಲ [13]ಥಾಳಿ[13] ಮುಟ್ಟಿತ್ತಲ್ಲಾ! ಸರಳ ಮಂ[14]ಡಲ[14] ಮಂಜಿನ ಕಾಳಗತ್ತಲೆ ಕವಿಯಿತ್ತು. ರವಿಯ ರಥದಚ್ಚು ಮುಱಿಯಿ[15]ತ್ತು.[15] ಶಶಿ[16]ವಂಶದ[16] ನಿಲವನು ರಾಹು ಗೆ[17]ದ್ದು[17]ದ ಕಂಡು, ಹಿರಿಯರು ಹೊಲಬುಗೆಟ್ಟರು ಗುಹೇಶ್ವರ.

---

A ಎಲ್ಲ ಎಲ್ಲವನಱಿಯಬಹುದು, ಈ ಸಾವನಱಿಯಬಾರದು. ಶಿವಶಿವಾ, ಮಹಾಪುರುಷರಿಗೆಯೂ ಸಾವು! ದೇವದಾನವಮಾನವ ಕಾಮಕಾಲ ದಕ್ಷಾದಿಗಳಿಗೆಯೂ ಸಾವು! ಈ ಸಾವನಱಿದು ಲೋಕಪ್ರಪಂಚವ ಮಱೆದು ಲಿಂಗದಲ್ಲಿಯೇ ನೆನಹು ನೆಲೆಗೊಂಡ ಮಹಾಮಹಿಮಂಗೆ ಮರಣವಿಲ್ಲ. ಸಾವನಱಿಯದೆ, ಲೋಕ ಪ್ರಪಂಚ ಮಱೆಯದೆ, ಅಱಿವ ಮರುಳಗಳ ಅಱಿತಿಹೆವೆಂಬುದು ಮಹಾ ಹಾನಿ ಕಾಣಾ ಗುಹೇಶ್ವರ. (ಪ್ರ). 1 ದಕ್ಕೆ (ಟ) ದ್ಯ (ಕದ) ದ್ಯಕ್ಕೆ (ರ) 2. ಯನ್ನೆಲ್ಲವ (ತಲರ) 3. ದಲ್ಲದೆ. (ಟ) ದಲ್ಲದೆ ಶಿವಜ್ಞಾನವನಱಿಯಬಾರದು (ತಲ) B × (ತಲ) 4. ಹರಿಹರ (ರ) 5. ರಿಗೆಲ್ಲರಿಗೆಯು (ಟ) ರೆಲ್ಲರಿಗೂ (ರ) 6. ಮಹಾಮಹಿಮರಿಗೆಯೂ (ಟ) ಮಹಾಪುರಷರಿಗೆಯೂ (ಕದತಲ) ಮಹಾಪುರುಷರಿಗೂ (ರ) 7. ಸಾವುದ (ಟರ) 8. ಲೋಕದ (ಲ) 9. ಗೊಂಡ ಮಹಾಮಹಿಮಂಗೆ ಸಾವನಱಿಯಬಹುದು (ತಲ) 10. ಈ ಸಾವನಱಿಯದೆ ಅಱಿವ ಅಱಿ (ಟರ) ಈ ಸಾವನಱಿಯದ ಅಱೆ (ಹ) ಈ ಸಾವನಱಿಯದ ಅಱಿ (ತಲ) 11. × (ರ) 12. ದೊಂದು ಆ (ಕಚಟದ) ದು ಅ (ತಲ) ದದು ಆ (ರ) 13. ಥಾಳಿಯು (ಟ) ಥಾಳಿಯೆ (ವ) 14. ಡಲದ (ಟರ) 15. ತ್ತಲ್ಲಾ (ವ) 16. ವಸಂತರ (ವ) 17. ರ್ದು (ವ).

505

ಸನಕಸನಂದಾದಿ ಮುನಿಜನಂಗಳೆಲ್ಲ[1]ರೂ[1], ಭಸ್ಮಾಂಗಿಗಳೆಲ್ಲರೂ ಇವರು ಸತ್ಯರೆಂಬುದು ಹುಸಿ, ನಿತ್ಯರೆಂಬುದು ಹಸಿ ; [2]ಸತ್ತ[2]ರೆಂಬುದು ದಿಟ, ಗುಹೇಶ್ವರ.

506

ಹನ್ನೆರಡು ಯುಗ ಪ್ರಳಯವಾದಲ್ಲಿ ಆದಿಬ್ರಹ್ಮಂಗೆ ಪ್ರಳಯ. ಆದಿ ಬ್ರಹ್ಮನ ಪ್ರಳಯ ಅಳಿದುಳಿದಲ್ಲಿ ಮೀನಜರಿಗೊಂದು ಸಿಂಪಿನ ಪ್ರಳಯ. ಮೀನಜರಿಗೆ ಮೀನಪ್ರಳಯವಾದಲ್ಲಿ, [3]ಅಸಹಸ್ರ[3]ನೆಂಬ ಗಣೇಶ್ವರಂಗೆ [4]ಒಂದು[4] ಪ್ರಳಯ. [5]ಆ ಅಸಹಸ್ರ[5]ನೆಂಬ ಗಣೇಶ್ವರನು [6]ಪ್ರಳಯದಲ್ಲಿ[6] ಅಳಿದುಳಿದಲ್ಲಿ ಅಕ್ಷಯನೆಂಬ ಗಣೇಶ್ವರಂಗೆ ಒಂದು ತಲೆಯ ಪ್ರಳಯ. [7]ಆ[7] ಅಕ್ಷಯನೆಂಬ ಗಣೇಶ್ವರಂಗೆ ಅಱುವತ್ತುಕೋಟಿ ತಲೆ. ಇಂತಹ ರುದ್ರಾವತಾರ [8]ಹಲವಳಿದರೆ[8] ಗುಹೇಶ್ವರಲಿಂಗವೇನೆಂದೂ ಅಱಿಯ.

507

ಖೇಚರರಾಗಲಿ, ಭೂಚರರಾಗಲಿ, ಲಾಂಛನಧಾರಿಯಾಗಲಿ, ಮರಣ ವಾರಿಗೂ ಮನಣೆಯಿಲ್ಲ! ಸನಕಸನಂದಾದಿಗಳಿಗೂ ಮರಣ ಮನಣೆಯಿಲ್ಲ! ಇದುಕಾರಣ, ಗುಹೇಶ್ವರ, ನಿಮ್ಮ ಶರಣರು ಕಾಲನ [9]ಬಾರಿಗೆ[9] ಕಲ್ಪಿತರಾಗರು.

508

ಕಾಮಿಸುವ ಕಲ್ಪಿಸುವ ಬ್ರಹ್ಮನೆಂಬವ ವ್ರತಗೇಡಿ; ವಿಷ್ಣುವೆಂಬವ ಸತ್ತುಬಿದ್ದ; ರುದ್ರ[10]ನೆಂಬವ ಅಬದ್ಧ ಅವಿಚಾರಿ[10]. ಅವಿಚಾರದಲ್ಲಿ ಎಲ್ಲ[11]ರ[11] ಕೊಂದ ಕೊಲೆ ನಿಮ್ಮ [12]ತಾಗುವುದು[12], ಗುಹೇಶ್ವರ.

509

ಮಾಯಾಮಂಜಿನ ಸಂಗ್ರಹದ ಘಟಾಘಟಿತರೆಲ್ಲರೂ ಕುಂಜರನ ಪಂಜರ ದಲ್ಲಿ ಸಂಜೀವಿತರಾಗಿಪ್ಪರು, ಎಂಜಲನುಂಡುಂಡು ಬಂದು ಅಂಜದೆ [13]ನುಡಿವು ತ್ತಿಪ್ಪರು.[13] ರಂಜನೆಗೊಳಗಪ್ಪುದೆ? ಆಗರದ ಸಂಚವನಱಿಯರು. ರಂಜ ಕನೂ ಅಲ್ಲ, [14]ಭುಂಜಕನೂ[14] [15]ಅಲ್ಲ[16] ; ಗುಹೇಶ್ವರ, ನಿಮ್ಮ ಶರಣ ಸಂಜೀ [16]ವನ[16]ರಹಿತನು.

---

1. ರೂ ಸತ್ತರು (ಟ) 2. ಅನಿತ್ಯ (ತಲ) 3. ಆ ಅಸಹಸ್ರ (ರಟ) ಅ ಸಹಸ್ರ (ಕಲ) 4. ಒಂದೆ (ಟ) 5. ಆ ಸಹಸ್ರ (ಕರ) 6. ಪ್ರಳಯವಾದಲ್ಲಿ (ಟ) × (ತಲ) 7. × (ರ) 8. ಹಲವಾದರೆ (ರ) 9. ಬಾಧೆಗೆ (ಹ) 10. ನೆಂಬವಬದ್ಧ ವಿಚಾರಿ (ಟ) ನೆಂಬವ ಅಬದ್ಧ ವಿಚಾರಿ (ಕಲರದ) 11. ರೂ (ರ) 12. ತಾಗದು (ಚ) ತಾಗೂದು (ಚವ್ಯಾಕದ) 13. ನುಡಿವರು (ಟರ) 14. ಭಜಂಕ (ಹ) 15. ಇಲ್ಲ (ಲ) 16. ವ (ಕ).

## 510

ಆದಿತ್ರೈಯುಗದಲ್ಲಿ ದೇವದಾಸವ ಮಾನವರು ಮಾಯಾ ಮೋಹದಲ್ಲಿ ಹುಟ್ಟಿ, [1]ತೊಳಲಿ ಬಳಲುತ್ತೈದಾರೆ.[1] ಆವ ವೇಷವಾದರೇನು ತಾಮಸಧಾರಿಗಳು? ಕಾಮ ಕ್ರೋಧ ಲೋಭ [2]ಮೋಹ[2] ಬಿಡದ ನಾನಾವಿಧದ ಡಂಬಕರು, ಹೂಳದ ಹುಣ್ಣಿಂಗೆ ಆರಂಯ್ಯ ಮದ್ದನಿಕ್ಕುವರು? [3]ಏನು[3] ಕಾರಣ, ಗುಹೇಶ್ವರ, ಸೋ[4]ರೆ[4]ಯ ಬಣ್ಣದ ಹಿರಿಯರು?

## 511

[5]ಯುಗಜುಗವ ಬಲ್ಲೆನೆಂಬವರು[5] ನಿಚ್ಚ[6]ಕ್ಕೆ[6] ನಿ[7]ಚ್ಚ[7] ಬಪ್ಪ [8]ಚಿಕ್ಕುಟ[8] ಸಾ[9]ವ[9]ನಜೀ[9]ಯರು, [10]ಬಾಯ[10] ಬಾಗಿಲ ತಲೆ [11]ಹೊ[11]ಲದ [12]ಹುಲ್ಲೊಣ[12]ಗಿತ್ತು. ನಿಮ್ಮನುವಿನಲ್ಲಿದ್ದೆ ಕಾಣಾ, ಗುಹೇಶ್ವರ.

## 512

ರುದ್ರನೆಂಬಾತನೊಬ್ಬ ಗಣೇಶ್ವರನು. ಭದ್ರನೆಂಬಾತನೊಬ್ಬ ಗಣೇಶ್ವರನು. ಶಂಕರನೆಂಬಾತನೊಬ್ಬ ಗಣೇಶ್ವರನು. ಶಶಿಧರನೆಂಬಾತನೊಬ್ಬ ಗಣೇಶ್ವರನು. ಪೃಥ್ವಿಯೆ ಪೀಠ, ಆಕಾಶವೆ ಲಿಂಗ, [13]ಅಂಥಾ[13]ತನೊಬ್ಬ ಗಣೇಶ್ವರನು. ಬಲ್ಲಾಳನ ವಧುವ ಬೇಡಿದಾತನೊಬ್ಬ ಗಣೇಶ್ವರನು. ಸಿರಿಯಾಳನ [14]ಮಗನ[14] ಬೇಡಿದಾತನೊಬ್ಬ ಗಣೇಶ್ವರನು. ಕಾಮದಹನವ ಮಾಡಿದಾತನೊಬ್ಬ ಗಣೇಶ್ವರನು. ಬ್ರಹ್ಮಕಪಾಲ ವಿಷ್ಣುಕಂಕಾಳವನಿಕ್ಕಿ ಆಡುವಲ್ಲಿ ನೀಲಕಂಠನೆಂಬಾತನೊಬ್ಬ ಗಣೇಶ್ವರನು. ಇವರೆಲ್ಲರು [15]ನಮ್ಮ[15] ಗುಹೇಶ್ವರಲಿಂಗದಲ್ಲಿ ಅಡಗಿಪ್ಪರು.

## 513

ದೇವಲೋಕದವ[16]ರೆಲ್ಲರ[16] ವ್ರತಗೇಡಿಗಳೆಂಬೆ, ಮರ್ತ್ಯಲೋಕದವ[17]ರೆಲ್ಲರ[17] [18]ಭಕ್ತ[18]ದ್ರೋಹಿಗಳೆಂಬೆ, ದೇವಸಂಭ್ರಮ ಗಣಪದವಿಯ

---

1. ತೊಳಲುತ್ತೈದಾರೆ ಬಳಲುತ್ತೈದಾರೆ(ಹ) 2. ×(ಕಟದತರಲ) 3. ಇದೇನು (ಟ) 4. ಜತೆ(ಲ)ರೆ (ರ) 5. ಯುಗವ ಬಲ್ಲೆವು ಜುಗವ ಬಲ್ಲೆವು ಎಂಬರು (ಗವ) 6. × (ಗ) 7. ಚ್ಚಕ್ಕೆ (ಟ) 8. ಚಿಕ್ಕ (ಗ) ಚಿಕ್ಕಟು (ವ) ಚಿಕ್ಕುಟು (ಕದತ) ಚಿಕ್ಕುಟ (ಓ) ಚಿ [ಚಿ?]ಕ್ಕುಟ್ಟ (ಸ್ವ) ಚಿಕ್ಕುಟ್ಟು (ರ) ಚಿಕ್ಕಟ (ಟಟವ್ಯಾ) 9. ವು ಆರೆ ನಿವ್ರೆಯ(ಗ) 10. ಬಯಲ(ಟ) ಅವರ ಬಾಯ(ಗ) 11. ವೊ (ಟಗರ) 12. ಉಲುಹಡ (ಗ) 13. ವೆಂಬಾ (ಟ) 14. ಮಗನ ಭಿಕ್ಷವ (ತರಲ) 15. ಎನ್ನ (ರ) 16. ರೆಲ್ಲಾ (ಟತಲ) ರ (ವ) ರೆಲ್ಲರು (ಜ) 17. ರ (ವ) ರೆಲ್ಲರು (ಜದ) 18. ಶಿವ (ವ)

[1]ಪಡೆದವರೆಲ್ಲರು[1] ಕುಂಭಕರ್ಣನಂತೆ [2]ಅತಿನಿದ್ರಿಗಳೆಂಬೆ[2], ಅನಂತಶೀಲರ ಕಂಡಡೆ ಕೈಕೂಲಿಕಾಱರೆಂಬೆ, ಗುಹೇಶ್ವರ, ಲಿಂಗೈಕ್ಯವನಱಿಯರಾಗಿ.

514

ಹರಿ ಹೊಲಬನಱಿಯ. ಬ್ರಹ್ಮ ಮುಂದನಱಿಯ, ರುದ್ರ ಲೆಕ್ಕವ ಮಱೆದು ಜಪವನೆಣಿಸು[3]ತ್ತೈದಾನೆ.[3] ಈಶ್ವರ ಪವನಯೋಗದಲ್ಲಿ ಮಗ್ನನಾದ. ಸದಾಶಿವನು ಭಾವದಲ್ಲಿ ಭ್ರಮಿತನಾ[4]ದ[4], [5]ಒಂದಂಡಜದೊಳಗಣ[5] ಬಾಲಕರೈವರು ನಿಮ್ಮನೆತ್ತಬಲ್ಲರು ಗುಹೇಶ್ವರ.

515

ಕಾಯವೆ ಸತ್ತು, ಮಾಯವೆ ಉಳಿಯಿತ್ತು ; ಎರಡಱ ಸುಖದುಃಖವ [6]ನಱಿಯರು ನೋಡಾ[6] ! ಅದೇನೆಂದಱಿಯರು, ಅದೆಂತೆಂದಱಿಯರು ನೋಡಾ ಹಿರಿಯರೆಲ್ಲಾ [7]ವೃಥಾ[7] ಹೋದರು ನೋಡಾ ! ಕಣ್ಣ ಮುಂದಣ ಕಪ್ಪ ಕಳೆಯಲಱಿಯರು ನೋಡಾ ! ಗುಹೇಶ್ವರನೆಂಬ ಶಬ್ದಕ್ಕೆ ನಾಚರು ನೋಡಾ !

516

ಅಮರ[8]ದ[8] ಹೊಲಬನಱಿಯದೆ ಜಗ[9]ವೆಲ್ಲಾ[9] ಬರಡಾಯಿತ್ತು. ಅಂಗದ ಹೊಲಬನಱಿಯದೆ [10]ಯೋಗಿಗಳೆಲ್ಲಾ ಭಂಗಿತರಾದರು.[10] ಸಂಗದ ಹೊಲಬನಱಿಯದೆ ಶರಣರು [11]ಭಂಗಿತರಾದರು[11]. ಲಿಂಗದ ಹೊಲಬನಱಿಯದೆ ಭಕ್ತ ಶೀಲವಂತನಾದ. ಆದಿಮಧ್ಯಾವಸಾನದಲ್ಲಿ ಗುಹೇಶ್ವರಲಿಂಗವು ಅಱಿವಿನ [12]ಮಱೆ[12]ಯಲ್ಲಿಹುದನಾರೂ ಅಱಿಯರಲ್ಲಾ !

517

ಅಱಿಯದಂತಿರಲೊಲ್ಲದೆ ಅಱಿದು ಕುಱುಹಾದೆಯಲ್ಲಾ! ಹಿರಿಯರೆಲ್ಲರು ನೆರೆದು, [13]ನಿನ್ನ[13] ಕಟ್ಟಿದರೆ ಅಯ್ಯ, ಉಪಚಾರ[14]ಕ್ಕೋಸುಗರ ?[14] ಸಾ[15]ವಿಂ[15]ಗೆ ಸಂಗಡವಾದೆಯಲ್ಲಾ, ಗುಹೇಶ್ವರ ?

518

ಅಜ್ಞಾನಿಯಾದವಂಗೆ ಅಱಿವು ತಾನೆಲ್ಲಿಯದೋ ? ಸುಜ್ಞಾನಿಯಾದ

---

1. ಕಂಡವರೆಲ್ಲರ (ಕ) ಕಂಡವರೆಲ್ಲಾ (ಟವದ) 2. ಅಧಿಕನಿದ್ರಿಗಳೆಂಬೆ (ಟ) ಅನೀತಿವ್ರತರೆಂಬೆ (ವ) ಆದಿನಿದ್ರಿಗಳೆಂಬೆ (ರ) ಅತಿನಿದ್ರಿತರೆಂಬೆ (ಹ) ಅತಿನಿದ್ರೆಗಳೆಂಬೆ (ಚ) 3. ವ (ಹ) 4. ದನು (ಟರ) 5. ಒಂದೊಡಲೊಳಗಣ (ಹ) 6. ನೋಡಾ (ತ) ನಾರೂ ಅಱಿಯರು ನೋಡಾ (ರ) 7. ವೃಥಾಯ (ರ) 8. ನ (ರ) 9. × (ವ) 10. ಯೋಗಭಂಗವಾಯಿತ್ತು (ದಟಚಕವರ) ಯೋಗಿಗಳೆಲ್ಲಾ ಭಂಗಿತರಾದರು (ಟವ್ಯಾಚವ್ಯಾ) 11. ಭಂಗವಾದರು (ವ) 12. ಮಱವೆ (ಟ) 13. ನಿಮ್ಮ (ತಲ) 14. ಕ್ಕೋಸ್ಕ (ಟ) ಕ್ಕೋಸುಗ (ವ) ಕ್ಕೋಸುಕರ (ರ) 15. ವಿ (ವ)

ವಂಗೆ ಮಱ[1]ಹು[1] ತಾನೆಲ್ಲಿಯದೋ ? ನಾನಱಿದೆನೆಂಬಾತ ಇದಿರ ಕೇಳಲುಂಟೆ? ಭ್ರಾಂತಿನ ಭ್ರಮೆಯೊಳಗೆ ಬಳಲುತ್ತಿರಲು, ಮಾತಿನ [2]ಮಾಲೆಯೊಳಗೆ[2] ಅಱಿವೆಂಬುದುಂಟೆ ? ಸೂತಕ ಹಿಂಗದೆ, ಸಂದೇಹ[3]ವ[3]ಳಿಯದೆ, ಮುಂದಣ ಸೂಕ್ಷ್ಮವ ಕಾಂಬ ಪರಿ[4]ಯೆಂ[4]ತೋ ? ಜ್ಯೋತಿಯ ಬಸಿಱೊಳಗೆ ಜನಿಸಿದ ಕಾಂತಿ–[5]ಯೂಥ[5]ಪ್ರಭೆಯ ಬೆಳಗು, ಗುಹೇಶ್ವರ, ನಿಮ್ಮ ಶರಣ.

## 519

ಇರುಳ ನುಂಗಿತ್ತು ಇರುಳಿಲ್ಲ, ಹಗಲ ನುಂಗಿತ್ತು ಹಗಲಿಲ್ಲ, [6]ಅಱಿವ ನುಂಗಿತ್ತು ಅಱಿವಿಲ್ಲ,[6] ಮಱಹ ನುಂಗಿತ್ತು ಮಱಹಿಲ್ಲ, ಕಾಯವ ನುಂಗಿತ್ತು ಕಾಯವಿಲ್ಲ, ಜೀವವ ನುಂಗಿತ್ತು ಜೀವವಿಲ್ಲ. [7]ಇವೆಲ್ಲವ[7] ನುಂಗಿತ್ತು ಇದೇನಯ್ಯ, ಸಾವ ನುಂಗದು ಗುಹೇಶ್ವರ ?

## 520

ಅಡಿಗಡಿಗೆ ತೊಳೆದು ಕುಡಿದರೆ, [8]ಹೊಟ್ಟೆಯ[8] ಜಲಗರಕುತ್ತ ಬೆಳೆಯಿ[9]ತ್ತೆ[9] ! ಅಚ್ಚಪ್ರಸಾದಿಯಾದಡೆ ಹಿಂದೆ ಪರಿ[10]ಯಾ[10]ಣ ಉಳಿವುದೆ ? ಇವರೆಲ್ಲರೂ ನಿಮ್ಮ ಪೂಜಿಸಿ ವ್ರತಗೇಡಿಗಳಾದರು. ನಾ ನಿಮ್ಮ ಪೂಜಿಸಿ ಬದುಕಿದೆನು, ಗುಹೇಶ್ವರ.

## 521

ಮಜ್ಜನಕ್ಕೆಱೆವಡೆ ಭೂತವಿ[11]ಕಾ[11]ರ,, ಪ್ರಮಥಗಣಂಗಳೆಲ್ಲರೂ ಪ್ರೇತರು. ವೀರಭದ್ರಗಣಂಗಳೆಲ್ಲರೂ ಬ್ರಹ್ಮರಾಕ್ಷಸರು. ಅರ್ಧನಾರೀಶ್ವರರೆಲ್ಲರೂ ಚಿಕ್ಕ ಮಕ್ಕಳ ಮೇಲೆ ತಪ್ಪ ಸಾಧಿಸಿ [12]ಕಾಡಿ ಉಂಬರು.[12] ಈ ನಾಲ್ಕು ಸ್ಥಲದೊಳಗೆ ಆವುದೂ [13]ಅಲ್ಲ[13], ಗುಹೇಶ್ವರ, [14]ಲಿಂ[14]ಗೈಕ್ಯವು.

## 522

ಭಕ್ತಿಯೆಂಬುದು [15]ಮುಕ್ತಿ[15]ಯೊಳಗು, ಪೂಜೆಯೆಂಬುದು ನಿರ್ಮಾಲ್ಯದೊಳಗು, ಪ್ರಸಾದವೆಂಬುದು ಓಗರದೊಳಗು, ಆಚಾರವೆಂಬುದು ಅನಾಚಾರದೊಳಗು, ಧರ್ಮವೆಂಬುದು ಅಧರ್ಮದೊಳಗು, ಸುಖವೆಂಬುದು ದುಃಖದೊಳಗು, ವ್ರತವೆಂಬುದು ವೈರಾಗ್ಯದೊಳಗು, ನೇಮವೆಂಬುದು ಉದ್ಯೋಗ

---

1. ವೆ. (ಟ) 2. ಮಾತಿನೊಳಗೆ (ಕಚಟದಲರ) 3. ತಿ (ರ) 4. ಯಿನ್ನೆಂ(ಕ) 5. ಯ (ಹತಲ) ಯುತ (ರಕಚದ) 6. × (ಟ) 7. ಎಲ್ಲವ (ಟ) 8. ಹೊಟ್ಟೆ (ಚಕದತಲ) 9. ತ್ತು (ಲ) 10. ವಾ (ರ) 11. ಚಾ (ಹ) 12. ಕಾಡಿ ಉಣ್ಣಬಂದವರು (ಟ) 13. ಇಲ್ಲ (ಟ) 14. ನಿಮ್ಮ ಲಿಂ (ಕದತಲ) 15. ಯುಕ್ತಿ (ಚತರಲ)

ದೊಳಗು, [1]ಅಹಿಂಸೆ[1]ಯೆಂಬುದು ಹಿಂಸೆಯೊಳಗು, ಇವಾವಂಗವು [2]ಇಲ್ಲದೆ[2], ಗುಹೇಶ್ವರ, ನಿಮ್ಮ ಶರಣ ಸುಖಿಯಾಗಿದ್ದನು.

523

ಭಕ್ತನೆಂಬವ ಸೂತಕಿ. ಲಿಂಗೈಕ್ಯನೆಂಬವ ವ್ರತಗೇಡಿ. ಶರಣಸತಿ ಲಿಂಗ ಪತಿ[3]ಯೆಂಬ ಶಬ್ದ[3]ಸರ್ವಗುಣಸಾಹಿತ್ಯನೆಂಬಾತ ಕರ್ಮೇಂದ್ರಿಯಭೋಗಕ್ಕೆ ಬಾರದ ಭೋಗಿ. ಗುಹೇಶ್ವರ, ನಿಮ್ಮ ಶರಣ ಆವ ಭೀತ[4]ನೂ ಅಲ್ಲ[4], ಆವ ಕರ್ಮಿ[A]ಯೂ ಅಲ್ಲ[A].

524

ಭವಿಯೆಂಬು[5]ದು[5] ಹುಸಿ, ಭಕ್ತಿಯೆಂಬು[5]ದು[5] ಉಪದೇಶ. ಶೀಲವೆಂಬುದು ಸಂಕಲ್ಪ. ಸಮತೆಯೆಂಬುದು ಸೂತಕ. ಇಂತೀ ಚತುರ್ವಿಧ[6]ದೊಳಗಿಲ್ಲ[6], ಗುಹೇಶ್ವರ, ನಿಮ್ಮ ಶರಣ ನಿ[7]ಸ್ಸೀ[7]ಮ.

525

ಊರೊಳಗೊಬ್ಬ ದೇವ, [8]ಮಡುವಿನಲೊಬ್ಬ ದೇವ[8], ಅಡವಿಯಲೊಬ್ಬ ದೇವ, [8]ಮಡಿಲಲೊಬ್ಬ ದೇವ[8]. ನೀರು ನೀರ ಕೂಡಿ, [8]ಬಯಲು ಬಯಲ ಕೂಡಿ[8], ನರನೆಂಬ ದೇವ ತಾ ನಿರಾಳವೋ ! ಲಿಂಗವೆಂಬುದೊಂದು ಅನಂತ[ದ] ಹೆಸರು. ಗೊಹೇಶ್ವರನೆಂಬುದದೇನೊ ! ?

526

ತನುವಿನ ಕೊಣತೆಗೆ ಸುಳಿಸುಳಿದು, ಮನದ ಕೊಣತೆಗೆ ನೆನೆನೆನೆದು, ಭಾವದ ಕೊಣತೆಗೆ ತಿಳಿತಿಳಿದು, ಶಬ್ದದ ಕೊಣತೆಗೆ ಉಲಿಉಲಿದು, ಗುಹೇಶ್ವರ ನೆಂಬ ಲಿಂಗ ಮನದಲ್ಲಿ ನೆಲೆಗೊ[9]ಳ್ಳ[9]ದಾಗಿ.

527

[10]ಹುಸಿಯುಳ್ಳಾತ[10] ಭಕ್ತನಲ್ಲ, [11]ಬಾಧೆ[11]ಯುಳ್ಳಾತ ಜಂಗಮನಲ್ಲ, ಆಶೆಯುಳ್ಳಾತ ಶರಣನಲ್ಲ ; ಇಂತಪ್ಪ ಆಶೆ ಹುಸಿ[11]ಬಾಧೆ[11]ಯ [12][B]ನಿರಾಕರಿಸಿ ಇರಬಲ್ಲ,[B] ಗುಹೇಶ್ವರ, ನಿಮ್ಮ ಶರಣ.[12]

---

1. ಆಶೆ (ಹ) 2. ಇಲ್ಲ (ಟ) 3. ಎಂಬ (ರ) ಯೆಂಬಾತ (ಚಲ) 4. ನಲ್ಲ (ತ) [A]ಯಲ್ಲ (ತ) 5. ದೆ (ರ) 6. ದೊಳಗಾವಂಗವೂ ಇಲ್ಲ (ಟ) ದೊಳಗಲ್ಲ (ರ) 7. ಸ್ಸ (ಹ) 8. × (ರ) 9. ಳ (ಟ) 10. ಹಸಿವುಳ್ಳಾತ (ಟ) ಹುಸಿವುಳ್ಳಾತ (ಹಕಚವರ) 11. ಬೋಧೆ (ಚಟದತರಲ) 12. ನೀಕರಿಸಬೇಕು ಗೊಹೇಶ್ವರ (ಟ) [B]ನೀಕರಿಸಿ ಇರಬಲ್ಲ (ಕದ)ನಿಷ್ಕರಿಸಿ ಇರಬಲ್ಲರೆ (ತ) ನೀಕರಿಸಿ ಇರಬಲ್ಲರೆ (ಲ)

528

ಆಶೆಯ ವೇಷವ ಧರಿಸಿ, ಭಾಷೆ ಪಲ್ಲಟವಾದರೆ, ಎಂತಯ್ಯ ಶರಣ[1]ಪಥ[1] ವೇದ್ಯವಹುದು? ತ್ರಿಭುವನದ ಮಸ್ತಕದ ಮೇಲಿಪ್ಪ ಮೂಜು ಗಿರಿಯ ಹುಡಿಗುಟ್ಟದನ್ನಕ್ಕರ, ಎಂತಯ್ಯ ಶಿವ[2]ಪಥ[2] ಸಾಧ್ಯವಹುದು? ಭದ್ರೆನಿಭದ್ರೆಯೆಂಬವರ ಮೂಲನಾಶವ ಮಾಡದನ್ನಕ್ಕರ, ಎಂತಯ್ಯ ಲಿಂಗೈಕ್ಯವು? ಅತಳಲೋಕದಲ್ಲಿ ಕುಳ್ಳಿದ್ದು, ಬ್ರಹ್ಮಲೋಕವ ಮುಟ್ಟಿದೆನೆಂಬವರೆಲ್ಲಾ ಭವಭಾರಕ್ಕೊಳಗಾದುದ ಕಂಡು, [3]ನಾನು[3] ಬೆಜಗಾದೆನು; ಗುಹೇಶ್ವರ.

529

ತನು ಬತ್ತಲೆಯಿದ್ದಡೇ[4]ನೋ[4], ಮನ [5]ಶುಚಿ[5]ಯಾಗದನ್ನಕ್ಕರ? ಮಂಡೆ ಬೋಳಾದಡೇ[4]ನೋ[4], ಭಾವ ಬಯಲಾಗದನ್ನಕ್ಕರ? ಭಸ್ಮವ ಪೂಸಿದಡೇನೋ, ಕರಣಾದಿ ಗುಣಂಗಳನೊತ್ತಿ, ಮೆಟ್ಟಿ, ಸುಡದನ್ನಕ್ಕರ? ಇಂತೀ ಆಶೆಯ ವೇಷದ ಭಾಷೆಗೆ, [6]ಗುಹೇಶ್ವರ, ನೀ ಸಾಕ್ಷಿಯಾಗಿ ಛೀ ಎಂಬೆನು.[6]

530

ಭಸ್ಮವ ಪೂಸಿ, ಬತ್ತಲೆ ಇದ್ದಡೇನು, ಬ್ರಹ್ಮಚಾರಿಯೆ? ಅಶನವ ನುಂಡು, ವ್ಯಸನವ [7]ಮ[7]ಱಿದಡೇನು, ಬ್ರಹ್ಮಚಾರಿಯೆ? ಭಾವ ಬತ್ತಲೆಯಿದ್ದು, ಮನ ᴬದಿಗಂಬರᴬ[8]ವಾದಡೆ[8], ಅದು [9]ಸಹಜ[9]ನಿರ್ವಾಣ ಕಾಣಾ, ಗುಹೇಶ್ವರ.

531

ಶರಣಸಂಬಂಧವನಱಿ[10]ದವ[10]ನೆಂತಿದ್ದಡೇನಯ್ಯ? ತಿಳಿದು ನೋಡಿ ನಡೆಯುದಿದ್ದಡೆ ಭಕ್ತಿವಿರೋ[11]ಧ.[11] [12]ತೆಱನನಱಿದು[12], [13]ಮಱವೆ[13]ಯಳಿದು ಸುಳಿವನಾಗಿ, ಉಪಜೀವಿ[11]ಕ[14]ನಲ್ಲ ಕೇಳಿರಣ್ಣ. ಗುಹೇಶ್ವರನ ಶರಣ[15]ನ[15] ಸಂಗಸುಖದುರುವಣೆಯ ಸೋಂಕು ಲೋಕಕ್ಕೆ ವಿರೋಧ.

532

ನೆಲನಿಲ್ಲದ ಭೂಮಿಯ ಮೇಲೊಂದು ಗಿಡು ಹುಟ್ಟಿತ್ತು. ಸಿಡಿಲ ಬಣ್ಣದವೆಂಟು ಹೂವಾದವು ನೋಡಾ! ಕೊಂಬಿನೊಳಗೆ ಫಲದೋಱ

---

1. ಪದ (ರ) 2. ಪದ (ರಲಚ) 3. × (ಟ) 4. ನು (ಟತರಶೂ) 5. ಸುಖಿ(ಹ) 6. ನೀ ಸಾಕ್ಷಿಯಾಗಿ ಛೀಯೆಂದು ಕಳೆವೆನು ಗುಹೇಶ್ವರ (ತಲ) ಗುಹೇಶ್ವರ ಸಾಕ್ಷಿಯಾಗಿ ಛೀಯೆಂಬೆನು ಕಾಣಾ ಸಂಗನ ಬಸವಣ್ಣ (ಶೂ) 7. ತೊ (ಟ) ᴬಗಂಭೀರ (ಹ) 8. ನಾಗಿದ್ದಡೆ (ಟತರಲ) 9. × (ಟರ) 10. ದಾತ (ತಲ) 11. ಧಿ (ಹ) 12. ತೆರಹನುಳಿದು (ಹತ) ತೆಱನನಱಿತು (ಟ) ತೆಱನಱಿದು (ಚ) 13. ಮಱಿತಿ (ಟರ) 14. ತ (ಹಟತ) 15. ×(ಟರ)

ಬೇ[1]ರಿ[1]ನೊಳಗೆ ಹಣ್ಣಾಯಿತ್ತು. [2]ಆರೂ[2] ಕಾಣದ ಠಾವಿನಲ್ಲಿ ತೊಟ್ಟು ಬಿಟ್ಟು ಬಿದ್ದ ಹಣ್ಣ ಮೆದ್ದವನಲ್ಲದೆ ಶರಣನಲ್ಲ, ಗುಹೇಶ್ವರ.

533

ಧ್ಯಾನಸೂತಕ, ಮೌನಸೂತಕ, ಜಪಸೂತಕ, ಅನುಷ್ಠಾನ ಸೂತಕ! ಗುಹೇಶ್ವರನೆಂಬ ಲಿಂಗವನಱಿದ ಬಳಿಕ, ಸೂತಕ ಹಿಂಗಿತ್ತು ಯಥಾ[3]ಸ್ವೇಚ್ಛೆ.[3]

534

[4]ಕೂರಹ[4] ಮುಟ್ಟದೆ, ಕೂದಲು ಹಱಿಯದೆ, ಬೋಳಾಗಬೇಕು. ಕಾಯ ಬೋಳೋ? ಕಪಾಲ ಬೋಳೋ? ಹುಟ್ಟುವುದು ಬೋಳೋ? ಹುಟ್ಟದೆ ಹೋಹುದು ಬೋಳೋ, ಗುಹೇಶ್ವರ?

535

ನಿರಾಳಸ್ಥಾನದಲ್ಲಿ ಆಪ್ಯಾಯನವಿಲ್ಲದೆ ಹೋಯಿ[5]ತ್ತದೇ[5]ನೆಂಬೆನಯ್ಯ? ಹಲವು [6]ನಾಮವಾದೆ[6]ಯಲ್ಲ?! ಚಂದಚಂದದ ಚರಿತ್ರನಲ್ಲ, ನಿಲ್ಲು ಮಾಣು. ನಿಮ್ಮಿಚ್ಛೆಯ ಪಡೆದವ[7]ರೆ[7]ಮ್ಮವರು. ಇಂತಹ ದೇವನು, ಅಂತಹ ದೇವನು [8]ಎಂಬ[8] ನಾಮ ಉಱಿಸದು, ಒಲ್ಲೆ ಕಾಣಾ ಗುಹೇಶ್ವರ.

536

[9]ಆಗದಂತೆ[9] ಆದೆನು; ಜಗದ ಆಗುವ ಕಂಡು ಬಲ್ಲೆನಾಗಿ ಒಲ್ಲೆನು. ಜಗ ನಿಲ್ಲದು ಕಂಡಯ್ಯ. ಮಾಡಿ ಮಾಡಿ ಕೆಡಿಸದಿರಾ! ನೀ ನಾಡಿಂಗೆ ಮರುಳಾಗದಿರಾ! [10]ಬೇಡು[10], ಗುಹೇಶ್ವರ, ನಿರಾಳ[11]ವನೆ[11]ನ್ನಲ್ಲಿ!

537

ಊರೊಳಗಣ ಕಿಚ್ಚು ಕಾನನದಲ್ಲಿ ಉರಿಯಿತ್ತು, ಕಾನನದ ಕಿಚ್ಚು ಬಂದು ಊರೊಳ[12]ಗು[12]ರಿಯಿತ್ತು; ಆ[13]ಲಿ[13]ಸಿರೋ! ಆ[13]ಲಿ[13]ಸಿರೋ ನಾಲ್ಕು ದಿಕ್ಕಿನ ಬೇಗೆಯ! [14]ಆ ಭೂಭೂಕಾರವ[14] ದೃಷ್ಟಿ ಮುಟ್ಟದಡೆ, [15]ಅಟ್ಟೆ[15] ಸಹಸ್ರವಾ[16]ಡಿ[16]ತ್ತು. ಲೆಕ್ಕವಿಲ್ಲದ [17]ಮರಣ ಮಡಿ[17]ಯಿತ್ತು, ಗುಹೇಶ್ವರ.

---

1. ಱಿ (ಚ) 2. ಅದು (ಹ) 3. ಸ್ವಯಿಚ್ಛೆ (ಚಕದತಲ) 4. ಕೂಱಪ(ಚ) ಕುರುಹ (ತಸ) ಕೂರುಹ (ಲ) 5. ತ್ತು ಏ (ಟ) 6. ನಾಮಂಗಳಾದೆ (ಚವ್ಯಾಹವ್ಯಾ) 7. ರೆ ನ (ಟರ) 8. × (ಚಕದ) ಎಂಬ (ಚವ್ಯಾಹವ್ಯಾ) 9. (ಟರ); ಆದಂತೆ (ಕಚದತಲ) 10. ನೀ ಬೇಡು (ಟರಲ) 11. ವ (ಕದ) 12. ಗೆ ಉ (ತರಲಟಲಿಕ) 13. ರಿ(ಗ) 14. ಆ ಭೂಭಾರಕ ನರ (ಟ) ಆ ಭೂ ಭಾರಕರ (ಟವ್ಯಾ) ಆ ಭೂಭಾಕಾರ (ಕ) ಆ ಭೂಭಾಕರ (ದ) ಆ ಬೂಭಕಾಱದ (ಲರ) 15. ಅಷ್ಟೆ (ಚ) ಅಟ್ಟೆ (ಟಟವ್ಯಾ) 16. ದಿ (ಚ) ಯಿ (ಟ) 17. ಮರಣವ ಮಾಡಿ (ರ)

## 538

ಪರಿಣಾಮದೊಳಗೆ ಮನದ ಪರಿಣಾಮವೆ ಚೆಲುವ, ಸಂಗದೊಳಗೆ [1]ಶರಣರ ಸಂಗವೆ[1] ಚೆಲುವ, ಕಾಯಗೊಂ[2]ಡು[2] ಹುಟ್ಟಿದ ಮೂಢರೆಲ್ಲ, ಸಾಯದ ಸಂಜವನಱವುದೆ ಚೆಲುವ, ಗುಹೇ[3]ಶ್ವರ.[3]

## 539

[4]ಜಗತ್ಸ್ರಷ್ಟ[4]ನಹ ಅಜನ [5]ಕೊಂಬು[5] ಮುಱಯಿತ್ತು, ಧರೆಯ ಚಂದ್ರಸೂರ್ಯರಿಬ್ಬರೂ ನೆಲಕ್ಕೆ ಬಿದ್ದರಲ್ಲಾ! ಉದಯ ನಿಂದಡೆ ಅಸ್ತಮಾನ ವಹುದು, ಊರು ಬೆಂದು ಉಲುಹಳಿದುದು, ಇದೇನು ಸೋಜಿಗವೋ? ದೇವ ಸತ್ತ, ದೇವಿ ಕೆಟ್ಟಳು, ಆನು ಬದುಕಿದೆನು, ಗುಹೇಶ್ವರ.

## 540

ಅಂಗ ಲಿಂಗದಲ್ಲಿ ತರಹರವಾಗಿ, [6]ಸಮತೆ ಶಾಂತಿಯಲ್ಲಿ ತರಹರವಾಗಿ[6], ಮನ ಜ್ಞಾನದಲ್ಲಿ ತರಹರವಾಗಿ, ಭಾವ ನಿರ್ಭಾವದಲ್ಲಿ ತರಹರವಾಗಿರ[7]ಬಲ್ಲಡೆ ಆತನೇ[7] ಅಚ್ಚ ಶರಣ[8]ನು ಕಾಣಾ[8] ಗುಹೇಶ್ವರ.

## 541

ಉದಕದ ಕೈಕಾಲ ಮುಱದು, ಅಗ್ನಿಯ ಕಿವಿಮೂಗನರಿದು, ವಾಯುವ ತಲೆಯ [9]ಕೊಯ್ದು[9], ಆಕಾಶವ ಶೂಲದಲ್ಲಿಕ್ಕಿದ ಬಲ್ಲಿದ ತಳವಾಱನೀತನು ; ಅರಸು ಪ್ರಧಾನ ಮಂತ್ರಿ ಮೂವರ ಮುಂದುಗೆಡಿಸಿದ ಬಲ್ಲಿದ ತಳವಾಱನೀತನು ; ಒಂಭತ್ತು ಬಾಗಿಲ ಕದವನಿಕ್ಕಿ ಬಲಿದು, [10]ಬೀಗವ[10] ಹೂಡಿ, ನವಸಾಸಿರ ಮಂದಿಯ ಕೊಂದುಳಿದನು ಗುಹೇಶ್ವರ.

## 542

ಕಾಯದ ಕಳವಳವ ಗೆಲಿದಡೇನೋ, ಮಾಯದ ತಲೆಯನರಿ[11]ಯ[11] ದನ್ನಕ್ಕರ? ಮಾಯದ ತಲೆಯನರಿದಡೇನೋ, ಜ್ಞಾನದ [12]ನೆಲೆಯನಱ[12]ಯ ದನ್ನಕ್ಕರ? ಜ್ಞಾನದ [12]ನೆಲೆಯನಱ[12]ದಡೇನೋ ತಾನು ತಾನಾಗದನ್ನಕ್ಕರ? ತಾನು ತಾನಾದ ಶರಣನ ನಿಲವಿಂಗೆ ಒಂದು [13]ಧಾರೆ[13] ಮೇರೆಯುಂಟೆ ಗುಹೇಶ್ವರ?

---

1. ಶರಣಸಂಗವೆ (ವ) 2. ಡ (ಟ) 3. ಶ್ವರ (ಶೂ) 4. ಜಗಚ್ಛ್ರೇಷ್ಠ (ಕಚಟ) 5. ಕುಂಬು (ಕ) 6. × (ಲಿಲ) ಮತ್ತೆ ಶಾಂತಿಯೊಳಗೆ ತರಹರವಾಗಿ (ಟ) 7. ಬಲ್ಲಾತನೆ (ಲಿ) 8. ×(ಲಿ), 9. ಹೊಯ್ದು (ಟ) 10. ಬೀಯಗವ (ಟ) ಬಿಯ್ಯಗವ (ರ) 11. × (ತ) 12. ತಲೆಯನರಿ (ಲ) ತಲೆಯನಱ (ಟ) 13. ದಾರಿ (ಹ) ದಾರೆ (ಟ)

543

ಆಡುತಾಡುತ ಬಂದ ಕೋಡಗ, ಜಪವ ಮಾಡುವ ತಪಸಿಯ ನುಂಗಿತ್ತಲ್ಲಾ ! [1]ಬೇಡ[1]ಬೇಡೆಂದಿತ್ತು ಮುಂದಣ ಕೇರಿಯ ಮೊಲ[2]ನೊಂದು[2]. ಮುಂದಣ ಮೊಲನ, ಹಿಂದಣ ಕೋಡಗವ ಕಂಬಳಿ ನುಂಗಿತ್ತು, ಗುಹೇಶ್ವರ.

544

ಧರೆಯೂ, ಬ್ರಹ್ಮಾಂಡವೂ, ಚಂದ್ರಸೂರ್ಯತಾರಾಮಂಡಲವೂ, ಇಲ್ಲಿಂದಿತ್ತಲೆ ನೋಡಾ! ನರನಲ್ಲ, ಸುರನಲ್ಲ, ಭ್ರಾಂತನಲ್ಲ ಶರಣನು ; ಲಿಂಗಸನ್ನಿಹಿತ ಅಪಾರಮಹಿಮನು. ಸುರಾಸುರರೆಲ್ಲರು ನಿಮ್ಮ ವರದಲ್ಲಿ ಸಿಲುಕಿದರು. ಸರಸ[3]ದೊ[3]ಳಗಲ್ಲ [4]ಹೊಱಗಲ್ಲ[4], ಕೇಳು ಭಾವ ಗುಹೇಶ್ವರ.

545

ಕಿಚ್ಚಿನ ದೇವನು, ಕೆಂಡದ ದೇವನು, ಮಾರಿಯ ದೇವನು, [5]ಮಸಣದ[5] ದೇವನು, [6]ತಿರುಕ[6]ಗೊರವನೆಂದು ಅಲ್ಲಲ್ಲಿ ಒಂದೊಂದನಾಡುತ್ತಿಪ್ಪರಯ್ಯ. ನಾ ನಿಮ್ಮ ಪೂಜಿಸಿ, ನಷ್ಟಸಂತಾನ[7]ವಾಗಿ[7], ಬಟ್ಟಬಯಲಲ್ಲಿ ಬಿದ್ದು ಕೆಟ್ಟೆನು ಗುಹೇಶ್ವರ.

546

ಕಾಮನ ಕೈಮುಱಿದರೆ ಮೋಹ ಮುಂದುಗೆಟ್ಟಿತ್ತು, ಆಮಿಷತಾಮಸಧಾರಿಗಳೆಲ್ಲ ಎಳತಟವಾದರು. ಅಕ್ಕಟಾ! ಅಯ್ಯಲಾ! ನಿಮ್ಮ ಕಂಡವರಾರೋ ? [8]ಅಳವಿಲ್ಲದ[8] ಸ್ನೇಹಕ್ಕೆ ಮರಣವೇ ಮಹಾನವಮಿ. ಗುಹೇಶ್ವರನನಱಿಯದೆ ರಣಭೂಮಿಗಳುಲಿದವು.

547

ಕಲ್ಯಾಣವಱಿ[9]ಯೆ[9], ಕಟಕವಱಿ[9]ಯೆ[9], ಬೇಂಟೆಯನಾಡುತ್ತಿದ್ದೆ. ಎನ್ನ [10]ಕೈ[10] ನೋಡಿ ಭೋ! ಕಲಿವೀರ ಸುಭಟರು ಎನ್ನ ಕೈ ನೋಡಿ ಭೋ! [11]ಅರುಹಿರಿಯರು[11] ಕಾದಿ ಗೆಲಿ[12]ದು[12] ಗುಹೇಶ್ವರಲಿಂಗದಲ್ಲಿಗೆ [13]ತಲೆವರಿಗೆಯನಿಕ್ಕ ಬಂದೆನ್ನ[13] ಕೈ ನೋಡಿ ಭೋ!

---

1. × (ಟ) 2. ಬಂದು (ಟ) 3. ವೊ (ರ) 4. × (ಟ) 5. ಮಸಣೆಯ (ಲರ) 6. ತಿರಿಕ (ಟ) 7. ನಾಗಿ (ಕತ) 8. ಅಳಲಿಲ್ಲದ (ಲ) ಅಳವಲ್ಲದ (ರ) 9. ಯ (ಟ) 10. ಕೈಯ (ಟರ) 11. ಅಱುಹಿರಿಯರ (ರ) 12. ದರು (ತ) 13. ತಲೆವರಿಯನಿಕ್ಕಿ ಬಂದೆನೆನ್ನ (ಕ) ತಲೆವರಿಯಬಂದೆ ಎನ್ನ (ರ) ತಲೆವರಿಗೆಯನಿಕ್ಕಿ ಬಂದೆನೆನ್ನ (ಚಲದ) ತಲೆವರಿಗೆಯನಿಕ್ಕಬಂದೆನ್ನ (ತಸ್ಸಟ)

548

ಆಸುರವಾದುದು ಬೀಸರವಾಯಿತ್ತು, [1]ಬಲ್ಲೆ[1]ನೊಲ್ಲೆ ನೀ ಕೊಡುವ [2]ವರವನು[2]. ನಾ ಬೇಡಿ[3]ದುದು[3] ನಿನ್ನ ಮುಖದಲಿಲ್ಲ, ಗುಹೇಶ್ವರ.

549

ಅತಿ[4]ರಥ[4]ಸಮರಥ[5]ರೆನಿಪ[5] ಹಿರಿಯ[6]ರು[6] ಮತಿಗೆಟ್ಟು ಮರುಳಾದರಲ್ಲಾ! ದೇವ ಸ[7]ತ್ತ[7], ಬ್ರಹ್ಮ ಹೊ[7]ತ್ತ[7], ವಿಷ್ಣು ಕಿಚ್ಚ ಹಿಡಿದ ; ಗಂಗೆ ಗೌರಿಯರಿಬ್ಬರು ಬಱು[8]ಮುಂಡೆ[8]ಯರಾದರು. ಇದ ಕಂಡು ಬೆಱಗಾ[9]ದೆ[9] ಗುಹೇಶ್ವರ.

550

[10]ಹಿಂಪಣ[10] ಕವಿಗ[11]ಳೆನ್ನ[11] ತೊತ್ತಿನ ಮಕ್ಕಳು ; [12]ಮುಂದಣ[12] ಕವಿಗ[11]ಳೆನ್ನ[11] ಕರುಣದ ಕಂದಗಳು. [13] ಆಕಾಶದ[13] ಕವಿಗ[11]ಳೆನ್ನ[11] [14]ತೊಟ್ಟಿಲ ಕೂಸು[14]; [15]ಹರಿಬ್ರಹ್ಮರೆನ್ನ ಕಕ್ಷಕುಳ. ನೀ ಮಾವ ನಾನಳಿಯ ಗುಹೇಶ್ವರ[15].

551

ದೇವಲೋಕದ [16]ದೇವ[16]ಗಣಂಗಳೆಲ್ಲಾ ಎನ್ನ ಹೊಱಗೆಂಬರು, ಅದು ದಿಟವೆ ? ಸತ್ಯಸಾತ್ತ್ವಿ[17]ಕ[17]ಸದ್ಭಕ್ತರು ಎನ್ನ ಹೊಱಗೆಂಬರು, ಅದು ದಿಟವೆ ? ಹದಿನಾಲ್ಕು ಭುವನದೊಳಗೆ ಅವರು ತಾವಿರಲಿ ; ನಾ ನಿಮ್ಮೊಳ[18]ಗು[18] ಗುಹೇಶ್ವರ.

552

ಪಂಚಮ ಹಾಪಾತ[19]ಕಂಗಳಾ[19]ವುದೆಂದಱಿಯರು. ಭವಿಯ ತಂದು ಭಕ್ತನ ಮಾಡುವುದೆ ಪ್ರಥಮ ಪಾತಕ. ಭಕ್ತರಿಗೆ ಶರಣೆಂಬುದೇ ದ್ವಿತೀಯ ಪಾತಕ. ಗುರುವೆಂಬುದೆ ತೃತೀಯ ಪಾತಕ. ಗುರುಲಿಂಗ ಜಂಗಮದ ಪ್ರಸಾದವ ಕೊಂಡಡೆ ನಾಲ್ಕನೆ ಪಾತಕ. ಗುಹೇಶ್ವರಲಿಂಗದಲ್ಲಿ [20]ಹಿರಿದು[20] ಭಕ್ತಿಯ ಮಾಡುವುದು ಪಂಚ[21]ಮ[21]ಪಾತಕ.

---

1. ಒಲ್ಲೆ (ದತ) 2. ವರವ (ಲಿ) 3. ತ್ತು (ತಲಲಿಕಚದ) ದ್ದು (ಹ) 4. ರತಿ (ಟ) 5. × (ವ) 6. ರೆಲ್ಲ (ರ) 7. ತ್ತು (ಟ) 8. ಮಂಡೆ (ಟ) 9. ದ (ವ) 10. ಮರ್ತ್ಯಲೋಕದ (ವ) 11. ಳೆಲ್ಲರೂ ಎನ್ನ (ವ) 12. ದೇವಲೋಕದ (ವ) 13. ಹಿಂದೆಮುಂದೆಯಾಡುವ (ವ) 14. ಲೆಂಕಡಿಂಗರಿಗರು (ವ) 15. ಹರಿಬ್ರಹ್ಮರುದ್ರ ಈ ಮೂವರೂ ಎನ್ನ ಕಕ್ಷೆಯ ಒಕ್ಕಲು ಗೊಗೇಶ್ವರ ನೀನಳಿಯ ನಾ ಮಾವ (ವ) 16. × (ದತಲ) 17. ಕರು (ಟ) 18. ಗೆ (ಟರ) 19. ಕವಾ (ಕಚದತರಲ) 20. × (ತ) 21. ಮಹಾ (ಕಚದತರಲ)

553

ಅಗಮ್ಯ ಅಗೋಚರ[1]ನೆ[1] ನಿಸಿಕೊಂಡು ಅವರಿವರ ಕೈ[2]ಗೆ ಎಂ[2]ತು ಬಂದೆ? ಉಗುರುಗಳಿಲ್ಲ ಸುತ್ತಿದವೇ [3]ಅಯ್ಯ[3]? ಅಗ್ಘವಣಿ ಪತ್ರೆ [4]ಅಜಿತವೇ[4] ಅಯ್ಯ? ಎನ್ನ ಕರಸ್ಥಲದೊಳಗಿದ್ದು ಎನ್ನೊಡನೆ [5]ನುಡಿಯೆ ಅಯ್ಯ[5]! [6]ನಿನ್ನ[6] ಹಲ್ಲ ಕಳೆದರೆ [7]ಒಡೆಯರುಂಟೆ[7] ಗುಹೇಶ್ವರ?

554

ಶ್ವೇತ ಪೀತ[8] ಕಪೋತ ಹರಿತ ಕೃಷ್ಣ ಮಾಂಜಿಷ್ಠವೆಂಬ[8] ಷಡುವರ್ಣ ವೆಂದೆನ್ನ; ಉಂಡು [A]ಉಪವಾಸಿ,[A] ಬಳಸಿ ಬ್ರಹ್ಮಚಾರಿಯೆಂದೆನ್ನ; ಲಿಂಗ [9]ವಿಂ[9]ತುಟೆನ್ನ, ಲಿಂಗೈಕ್ಯವ ನುಡಿಯ; ಅಭಂಗನ ನಿಲವ ಭಂಗಿತರೆತ್ತ ಬಲ್ಲರು, ಗುಹೇಶ್ವರ?

555

[10]ಆಡಾಡ ಬಂದ[10] ಕೋಡಗ ಹಂದ[11]ವನೇ[11]ಱುತ್ತಲ್ಲಾ! ನೋಡ ಬಂದವರ ಕಣ್ಣೆಲ್ಲಾ ಒಡೆದವು. ಬೆಣ್ಣೆಯ ತಿಂದವರ ಹಲ್ಲೆಲ್ಲಾ ಹೋದವು. ಇದೇನು ಸೋಜಿಗ[12]ವೋ[12] ಗುಹೇಶ್ವರ!

556

ಕೆಂಡದ ಮಳೆ ಕಱೆವಲ್ಲಿ ಉದಕವಾಗಿರಬೇಕು. ಜಲಪ್ರಳಯವಾದಲ್ಲಿ ವಾಯುವಿನಂತಿರಬೇಕು. ಮಹಾಪ್ರಳಯವಾದಲ್ಲಿ ಆಕಾಶದಂತಿರಬೇಕು. ಜಗತ್ಪ್ರಳಯವಾದಲ್ಲಿ ತನ್ನ ತಾ ಬಿಡಬೇಕು. ಗುಹೇಶ್ವರಲಿಂಗ ತಾನಾಗಿರ ಬೇಕು.

557

ಅಱೆಯ ಮೇಲಣ ಹುಲ್ಲೆಗೆ ಕೆಂಗಱಿಯ ಬಾಣವ ತೊಟ್ಟವನೆ, ತಪ್ಪದೆ ತಾಗಿ[13]ತ್ತಲ್ಲಾ[13]! ಅದು ಒಂದೇ ಬಾಣದ[14]ಲ್ಲಿ ಅಳಿಯಿತ್ತಲ್ಲಾ[14]! ನಾರಿ ಹಱಿಯಿತ್ತು, ಬಿಲ್ಲು ಮುಱಿಯಿತ್ತು. ಹುಲ್ಲೆ ಎತ್ತ ಹೋಯಿ[15]ತ್ತು[15] ಗುಹೇಶ್ವರ?

---

1. ನೀನೆ (ಲ) 2. ಗೆಂ (ವ) 3. × (ಕವಚವರ) 4. ಯ ಅತವೇ (ವ) ಯಜಿತವೆ (ಟರ) 5. ನುಡಿಯಲೊಲ್ಲೆ (ವ) 6. ನನ್ನ (ವ) 7. ದಿಕ್ಕುಂಟೆ (ವ) 8. ಹರಿತಕಪೋತ ಮಾಂಜಿಷ್ಠ (ಟ) ಶ್ವೇತಪೀತಹರಿತಕಪೋತಮಾಂಜಿಷ್ಟಕೃಷ್ಣವೆಂಬ (ಐ) ಹರಿತಕಪೋತ ಮಾಂಜಿಷ್ಠಗೌರವ (ತರಲ) Aಉಪವಾಸಿಯೆಂದೆನ್ನ (ಐ) 9. ಎಂ. (ಟ) ವೆಂ (ಐ) 10. ಆಡಾಡ ಬಂದರೆ (ವ) ಆಡಡಬಂದ (ಲ) 11. ವೇ (ವ) 12. ಹೇಳಾ (ಟವ) 13. ತ್ತೋ (ಟತ) ತೋ (ಲ) 14. ಲಳಿಯಿತೋ (ಟ) 15. ತ್ತೋ (ಟ)

558

ನಾ ದೇವನಲ್ಲದೆ ನೀ ದೇವನೇ? ನೀ ದೇವನಾದರೆ ಎನ್ನನೇಕೆ ಸಲಹೆ? ಆರೈದು ಒಂದು ಕುಡಿತೆ [1]ಉದಕವ[1]ನೆಱೆ[3]ವೆ. ಹಸಿದಾಗ ಒಂದು ತುತ್ತು ಓಗರವನಿಕ್ಕುವೆ, ನಾ ದೇವ ಕಾಣಾ, ಗುಹೇಶ್ವರ.

559

ಒಕ್ಕುದ ಮಿಕ್ಕುದ [2]ಕೊಂಬ[2] [3]ನಿಶ್ಚಲಪ್ರಸಾದಿ ನೀ ಕೇಳಾ[3]! [4]ಒಕ್ಕುದಾವುದು, ಮಿಕ್ಕುದಾವುದು ಬಲ್ಲಡೆ [A]ನೀ ಹೇಳಾ[4A]! ಒಕ್ಕು [5]ಹೋಹುದು[5] ಕಾಯ; ಮಿಕ್ಕು [5]ಹೋಹುದು[5] ಪ್ರಾಣ! [6]ಇದು[6] ತಕ್ಕು[7]ದೆಂ[7]ದಱಿದು [8]ಕೊಳ[8]ಬಲ್ಲಡೆ [9]ಸಿಕ್ಕುವನು[9] ನಮ್ಮ ಗುಹೇಶ್ವರ.

560

ಕಲ್ಲ [10]ಹೋರಿ[10]ನೊಳಗೊಂದು ಕಾರ್ಯವ ಕಾಬಡೆ, ಕಲ್ಲ ಬೆದಕದೆ, [11]ಕಪ್ಪೆಯ[11] ಸೋಂಕದೆ, ಅಲ್ಲಿ[12]ಯ[12] ಉದಕವ ಕುಡಿಯಬಲ್ಲಡೆ, [13]ಅದು[13] ಯೋಗ; ಬಲ್ಲಡೆ ನಿಮ್ಮಲ್ಲಿ ನೀವೇ ತಿಳಿದು ನೋಡಿರೇ! ಅಱಿವ ಯೋಗ[14]ಕ್ಕಿದು[14] ಚಿಹ್ನವಯ್ಯ! ಕಲ್ಲು ಕಪ್ಪೆಯೊಳಗಣ ಹುಲ್ಲುರಿಯ[15]ದೆ ಅ[15]ಟ್ಟುಂಬಂತೆ ಗುಹೇಶ್ವರ.

561

ನೀರಿಲ್ಲದ, ನೆಳಲಿಲ್ಲದ, ಬೇರಿಲ್ಲದ ಗಿಡು [16]ಹುಟ್ಟಿತ್ತು.[16] ತಲೆಯಿಲ್ಲದ ಮೃಗ ಬಂದು ಮೇಯಿತ್ತಾ ಗಿಡುವ; ಕಣ್ಣಿಲ್ಲದ [17]ಕುರುಡನು[17] ಕಂಡನಾ ಮೃಗವ; ಕೈಯಿಲ್ಲದ ವ್ಯಾಧನು ಎಚ್ಚನಾ ಮೃಗವ; ಕಿಚ್ಚಿಲ್ಲದ ನಾಡಿಗೊಯ್ದು ಸುಟ್ಟು, ಬಾಣಸವ ಮಾಡಿ, ಲಿಂ[18]ಗಕ್ಕ[18]ರ್ಪಿತವಾಯಿತ್ತು; ಗುಹೇಶ್ವರ.

562

ನೀನಾನೆಂಬ ಭಾವವಾ[19]ರಿಂದಾ[19]ಯಿತ್ತು ಹೇಳಾ? ನೀನೆಂಬುದೇ ಅಜ್ಞಾನ, ನಾನೆಂಬುದೇ ಮಾಯಾಧೀನ. ನೀನೆನ್ನದೆ ನಾನೆನ್ನದೆ ಇಪ್ಪ

---

1. ನೀರ (ತಲ) 2. ನಂಬ (ಪ್ರ) 3. ನಿಚ್ಚಳಪ್ರಸಾದಿ ನೀ ಕೇಳಾ (ಲ) ನಿಚ್ಚಪ್ರಸಾದಿಗಳು ನೀವು ಕೇಳಿರೋ (ಪ್ರ) 4. ಒಕ್ಕು ಹೋವುದಾವುದು ಬಲ್ಲರೆ ನೀವು ಹೇಳಿರೋ (ಪ್ರ) A ನೀವು ಹೇಳಿರೇ (ಟ) 5. ಹೋದುದೇ (ಟ) ಹೋವುದೇ (ಪ್ರ) 6. ಇವ (ಟ) ಇವು (ಪ್ರ) 7. ವೆಂ (ಪ್ರ) 8. ಸಿಕ್ಕಿಸಿಕೊಳ (ಪ್ರ) 9. ಸಿಕ್ಕದಾದ ಕಾಣಾ (ಪ್ರ) 10. ಹೊಟ (ಲರ) 11. ಕಪ್ಪೆ (ಕಟ) 12. × (ಕಟ) 13. × (ಕಟರ) 14. ಕ್ಕಿದೆ (ಟ) ಕ್ಕದು (ತಲ) 15. ದ (ಲರ) 16. ಹುಟ್ಟ (ಕಟಐವಲ) 17. ವ್ಯಾಧ (ರಐ) 18. ಗಾ (ಲ) 19. ರಿಂದಲಾ (ಟ)

ಸುಖವ ಭಿನ್ನವಿಲ್ಲದೆ ಅಱಿಯಬಲ್ಲಡೆ, ಆ ಸುಖವು ನಿಮಗರ್ಪಿತ ಕಾಣಾ ಗುಹೇಶ್ವರ.

563

ಇಪ್ಪತ್ತೈದು ತತ್ತ್ವದ ಹತ್ತೆಂಬ ದ್ವಾರದಲ್ಲಿ ಬಳಲುವ ವ್ಯರ್ಥಗೇಡಿ ಮನವ [1]ನಾ[1]ನೇನೆಂಬೆನಯ್ಯ ? ತನ್ನ ತಾ ತಿಳಿಯಲು, ತನಗೆ ತಾನನ್ಯ[2]ವಿಲ್ಲ[2] ಮರುಳೆ! ಮುತ್ತಯ್ಯನ ಬೆಣ್ಣೆಯ ಶಿಶು ನುಂಗಿತ್ತು. ಮತ್ತೆ ಶಿಶುವಿನ ಸುಖವ ನೇನೆಂಬೆ ಗುಹೇಶ್ವರ.

564

ಶಬ್ದವೆಂಬೆನೆ ಶ್ರೋತ್ರದೆಂಜಲು, [3]ಸ್ಪರ್ಶ[3]ವೆಂಬೆನೆ ತ್ವಕ್ಕಿನೆಂಜಲು, ರೂಪೆಂಬೆನೆ ನೇತ್ರದೆಂಜಲು, ರುಚಿಯೆಂಬೆನೆ ಜಿಹ್ವೆಯೆಂಜಲು, [4]ಪರಿಮಳ[4] ವೆಂಬೆನೆ [5]ಘ್ರಾಣ[5]ದೆಂಜಲು. ನಾನೆಂಬೆನೆ [6]ಆಱಿವಿ[6]ನೆಂಜಲು. ಎಂಜಲೆಂಬ [7A]ಭಿನ್ನ[A]ವಳಿದ ಬೆಳಗಿನೊಳಗಣ ಬೆಳಗು ಗುಹೇಶ್ವರ[B]ಲಿಂಗವು[7B].

565

ಹಸಿವಱತಲ್ಲದೆ ಪ್ರಸಾದಿಯಲ್ಲ, ತೃಷೆಯಱತಲ್ಲದೆ ಪಾದೋದಕಿಯಲ್ಲ, ನಿದ್ರೆಯಱತಲ್ಲದೆ ಭವವಿರಹಿತನಲ್ಲ, ಅನಲಪವನ ನಿಂದಲ್ಲದೆ ಪ್ರಾಣಲಿಂಗಿ ಯಲ್ಲ. ಇದು ಕಾರಣ ಗುಹೇಶ್ವರಲಿಂಗವು ಎಲ್ಲರಿಗೆಲ್ಲಿಯದೋ ! ?

566

ಪಿಂಡಬ್ರಹ್ಮಾಂಡದೊಳಗೆ ತಂಡತಂಡದ ಲೋಕ, ಗಂಡಗಂಡರನಿರಿಸಿ, ಬಡವ[8]ರೊಡೆಯರ[8] ನುಂಗಿ, ನಾಡೊಳಗೆ ಗಿಡು ನಡೆದು, ಮಡುವನೆಲ್ಲವ ತೊಡೆದು, ನಡುರಂಗದಲ್ಲಿ ಕೊಡನೊಡೆಯ[9]ಲೀಯದೆ[9], ಮಡದಿಯೊಡಗೂಡಿ ಗಗನವನಡಿಗೆಯ ಮಾಡಿ ಉಂಡು ಸುಖಿಯಾದೆ, ಗುಹೇಶ್ವರ.

567

ಪರಮಸುಖ[10]ದ[10] ಪರಿಣಾಮದ ಇರವ ಬಲ್ಲವರಾರೋ ? ಅದು ದೊರ ಕೊಳ್ಳದು ನೋಡಾ ! ತನತನಗೆ ತನ್ನ ಇರವ ಲಿಂಗದಲ್ಲಿ[11]ರಿಸಿ[11], ಪರವ ಮನ ದಲ್ಲಿ [12]ಹಿಡಿದು[12], ಇಹಪರವೆಂಬುದೊಂದು ಭ್ರಾಂತಳಿದು, ನಿರತಿಶಯ ಸುಖ ದೊಳಗೆ [13]ನಿಜ[13]ವಾಗಿರಬಲ್ಲ, ಗುಹೇಶ್ವರ, ನಿಮ್ಮ ಶರಣನನುಪಮ ಪ್ರಸಾದಿ.

---

1. × (ಟತರಲ) 2. ವಲ್ಲ (ಟತರಲ) 3. ಸ್ಪರ್ಶನ (ಟಐಲಿಕದಲರ) 4. ಗಂಧ (ಲಿ) 5. ನಾಸಿಕ (ಟ) 6. ಅಱುಹಿ (ಲಿ) 7. ಭಿನ್ನ ಸೂತಕವಳಿದುಳಿದು ಬೆಳಗಿನ ಬೆಳಗು ಗುಹೇಶ್ವರ ನಿಮ್ಮ ಶರಣ (ಲಿ) A ಭಂಗ (ಐ) B ನಿಮ್ಮ ಶರಣ (ಐ) 8. ರೊಡವೆಯ (ಟ) 9. ಲೀಸದೆ (ರ) 10. × (ಟತರಲ) 11. ನಿಲಿಸಿ (ಲ) 12. ಹಿಡಿದಿಹ (ಟ) 13. ನಿಜಲಿಂಗ (ತಲ)

568

[1]ಗಂಗಾದೇವಿಯ ಹುಳಿಯ ಕಾಸಿ, ಗೌರೀದೇವಿಯ ಕೂಳನ[A]ಟ್ಟು[1A] ಭಕ್ತನ ಬಾಡನ[A]ಟ್ಟು[A], ದೇವನ ಸಾಸವೆಗಲಸಿ, ಬ್ರಹ್ಮ[2]ನಡ್ಡಣಿಗೆ[2], ವಿಷ್ಣು [3]ಪರಿಯಾಣ[3], ರುದ್ರನೋ[4]ಗರ,[4] ಈಶ್ವರ ಮೇಲೋ[5]ಗರ,[5] ಸದಾಶಿವ ತುಪ್ಪ, [6]ಉಣಲಿಕ್ಕಿ ಕೈಕಾಲು ಮುರಿಯಿತ್ತು[6] ಗುಹೇಶ್ವರ.

569

ಉಂಡೆ[7]ನುಟ್ಟೆನೆಂಬ[7] ಸಂದೇಹ ನಿನಗೇ[8]ಕಯ್ಯ?[8] ಉಂಬುದೇ ಅಗ್ನಿ? ಉಡುವುದೇ ಪೃಥ್ವಿ? ನೀನೆಂದು ಉಂಡೆ? ನಾನೆಂದು ಕಂಡೆ? ಉಣ್ಣದೆ ಉಡದೆ ಹೊಗೆಯ ಕೈಯಲ್ಲಿ ಸತ್ತೆನೆಂಬ ಅಂಜಿಕೆ ನಿನ[B]ಗೆ[B] ಬೇಡ. ಅಂಜದಿರು ಗುಹೇಶ್ವರ, ನಿನಗಾವ [9]ನಾಚಿಕೆ[9]ಯೂ ಇಲ್ಲ.

570

ಮೇರುಮಂದಿರದಲ್ಲಿ ಈರೈದಟ ತಲೆ; [10]ಧಾರುಣಿಯ[10] ಜನ[C]ರೆಲ್ಲರೂ ಬಣ್ಣಿಸುತ್ತಿಪ್ಪರು.[C] ಜ್ಞಾನಾಮೃತರಸದಲ್ಲಿ ಓಗರವ ಮಾಡಿ [D]ಆರೋಗಣೆಯ ಮಾಡಿದೆನು.[D] ವಿಷಮಾಕ್ಷ, ಹರ, ಭಸ್ಮವಿಭೂಷಣ, ಶಶಿಧರ ಶರಣು ಶರಣೆನುತ್ತಿದ್ದೆನು. ಇಂದ್ರಾಗ್ನಿ[11]ಯ[11] ಪು[E]ರ[E] ಪಟ್ಟಣದಲ್ಲಿ ಚಂದ್ರಾಹಾರವ [12]ಬೇಡಿವಡೆ[12], ಖಂಡಕಪಾಲ[F]ದಲ್ಲಿ ಉಂಡ ತೃಪ್ತಿ; ಅಖಂಡಿತ[13]ನಿರಾಳ[F13] ಗುಹೇಶ್ವರ.

571

ಶಿಷ್ಯನ ಮುಖದಿಂದಾದ ಗುರುಲಿಂಗೆ ಶಿಷ್ಯನ ಪ್ರಸಾದ; ಗುರುಲಿಂಗಲ್ಲದೆ ಗುರುವಿನ ಪ್ರಸಾದ ಶಿಷ್ಯಂಗಿಲ್ಲ. ಇದು ಕಾರಣ, ಗುರುವೆ ಓಗರ, ಓಗರವೆ ಅರ್ಪಿತ. [14]ಪ್ರಸಾದ[14] ಪ್ರಸಾದವೆಂದು ಉಂಡುಂಡು ಸವೆದರಲ್ಲಾ! ಸುಡು ಸುಡು! ಶಬ್ದಸೂತಕರ ಕೈಯಲ್ಲಿ ಸ್ಥಾವರ ವಿಧಿವಶವಾಯಿತ್ತು, ಗುಹೇಶ್ವರ.

———

1. ಗಂಗಾದೇವಿಯ ಕೂಳನಟ್ಟು, ಗೌರೀದೇವಿಯ ಹುಳಿಯ ಕಾಸಿ (ವ) A ಟ್ಟಿ (ಟ) 2. ನಟ್ಟಣಿ (ವ) ನಡ್ಡಣಿಗೆ(ತ) 3. ಪರಿಯಣ (ವ) 4. ಜ(ವ) 5. ಗರವಾದ (ರ) 6. ಉಣಲಿಕ್ಕಿದ ಕೈಕಾಲ ನುಂಗಿತ್ತು (ವ) ಉಣಲಿಕ್ಕೆ ಕೈಕಾಲು ಮುಱಿಯಿತ್ತು (ತ) ಉಣಲಿಕ್ಕಿ ಕೈಕಾಲ ಮುಱಿಯಿತ್ತು (ಲ) 7. ನುಂಟೆಂಬ (ಲ) ನುಂಡೆನೆಂಬ (ರ) 8. ಕೆ (ಟ) B ಗೇಕೆ (ಐ) 9. ಅಂಜಿಕೆ (ಟ) 10. ವಾರುಧಿಯ (ರ) C ರು ಬಣ್ಣಿಸುತ್ತಿರಲು (ಐ) D ಆರೋಗಣೆಗೆಡೆಮಾಡಿದೆನು(ಐ) 11. ಯಮ (ಟಐರ) E ರವ (ಐ) 12. ಬೇಡವೆ (ಟರ) F ವ ಕೊಯಿದುಂಡ ತೃಪ್ತಿ ಅಖಂಡಿತನಿರವಯ(ಐ) 13. ನಿರವಯ (ರಲ) 14. × (ತ)

572

ಒಳ[1]ಗೆ[1] ನೋಡಿಹೆನೆಂದಡೆ ಒಳ[2]ಗೆ[2] ನಿರಾಳ. ಹೊಱ[1]ಗೆ[1] ನೋಡಿಹೆನೆಂದಡೆ ಹೊಱ[2]ಗೆ[2] ನಿರಾಳ. ಹೊಲದಲ್ಲಿ ಆವಿಲ್ಲ, ಮನೆಯಲ್ಲಿ ಕಱುವಿಲ್ಲ, ನೆಲಹಿನ ಮೇಲಣ ಬೆಣ್ಣೆಯಿದು ದಿಟವೋ! ನಾರಿವಾ[3]ಳ[3]ದ ಕಾಯೊಳಗಣ ತಿರುಳನೊಡೆಯದೆ ಮೆಲಬಲ್ಲಡೆ, ಬೆಡಗು ; ಗುಹೇಶ್ವರ.

573

ಹಸಿವಿಲ್ಲದೆ ಉಣಬಲ್ಲಡೆ, ಉಪಾಧಿಯಿಲ್ಲದೆ ಬೇಡಬಲ್ಲಡೆ ಅದು [4]ವರ್ಮ[4], ಅದು ಸಂಬಂಧ ; ಗಮನವಿಲ್ಲದೆ ಸುಳಿಯಬಲ್ಲಡೆ, ನಿರ್ಗಮನಿಯಾಗಿ ನಿಲಬಲ್ಲಡೆ ಅದು [4]ವರ್ಮ[4], ಅದು ಸಂಬಂಧ. ಅವರ ನಡೆ ಪಾವನ, ಅವರ ನುಡಿ ತತ್ತ್ವ. [5]ಅವರು[5] ಜಗದಾರಾಧ್ಯ[6]ರೆಂಬೆ[6], ಗುಹೇಶ್ವರ.

574

ಉಂಡಹೆನೆಂದಡೆ ಹಸಿವಿಲ್ಲ, ಕಂ[7]ಡಹೆ[7]ನೆಂದಡೆ [8]ಪ್ರತಿ[8]ಯಿಲ್ಲ, [9]ನೋಡಿರೇ ನೋಡಿರೇ[9] ಉದಕದೊಳಗಣ ಜ್ಯೋತಿಯಂ[10]ದವ[10]! ಗುಹೇಶ್ವರ, ನಿಮ್ಮ [11]ನಾಮವ[11] ಹಿಡಿದು ಬಿಟ್ಟಡೆ ಭಂಗವಯ್ಯ.

575

ಉಂಡ[12]ರೇ[12]ನೋ ? ಉಣ್ಣದಿದ್ದ[12]ರೇ[12]ನೋ ? [13]ಸೋಂಕಿತ[13]ವೇನೋ ? [A]ಅ[A][13]ಸೋಂಕಿತ[13]ವೇನೋ ? ಹುಟ್ಟುವು[14]ದಿಲ್ಲಾಗಿ ಹೊಂದುವುದಿಲ್ಲ.[14] ಸತ್ತು ಬದುಕಿ ನಿಶ್ಚಿಂತವಾಯಿತ್ತು, ಗುಹೇಶ್ವರ.

576

ಅಂಬರವಿಲ್ಲದ [15]ಮೇರು[15], ಅಂಬುಧಿಯಿಲ್ಲದ [16]ಗುಂಪು[16], ತಂದವರಿಲ್ಲದೆ ಬಂದಿತ್ತು, ನಿಜ ಒಳಕೊಂಡಿತ್ತು. ಸಾಧನವಿಲ್ಲದ [17]ಓಗರ[17], ಭಾಜನವಿಲ್ಲದೆ ಗಡಣಿಸಿ, ಭೋಜನವಿಲ್ಲದೆ ತೃಪ್ತಿಯಾಯಿತ್ತು [18]ನೋಡಾ. ಕ್ರಿಯಾವಿರಹಿತಯೋ[A]ಗ[A] ಫಲದಾಯಕಹೀನಭಕ್ತಿ ಆಯತಸ್ವಾಯತವಱಿಯದೆ ಹೋಯಿತ್ತು[18], ಗುಹೇಶ್ವರ.

---

1. ಗ(ಟ) 2. ಗು (ಟ) 3. ಣ (ತರ) 4. ಮರ್ಮ (ಹ) 5. ಅವರ (ತಐ) 6. ರೆಂಬೆ ಕಾಣಾ (ಐ) 7. ಡ (ಲ) 8. ಪ್ರಕೃತಿ (ರ) 9. ನೋಡಿಹೆನೆಂದಡೆ (ಕಚಟದತರಲ) 10. ದವನು (ವ) ತೆ (ತಲ) 11. × (ವ) 12. ಡೇ (ಟಲಿ) 13. ಶೋಕಿತ (ಟರ) A ಆ (ಕ) 14. ದಿಲ್ಲವಾಗಿ ಹೊಂದಲಿಲ್ಲ (ಲಿ) 15. ಮೇರುವ (ಕಚದತಲಐ) 16. ಗುಂಪುವ (ಕಐಚದತಲ) 17. ಓಗರವ (ಐತಲಚವ್ಯಾ) 4. × (ಟ) A ಗವು (ಐ)

577

ಬೆಲ್ಲದ ಪುತ್ಥಳಿಯ ಕೈಯಲ್ಲಿ ಹಿಡಿದು, ಎಲ್ಲಿ ಚುಂಬಿಸಿದ[1]ರೂ ಇ[1]ನಿದಹುದು. [2]ಒಳ್ಳಿ [=ಳ್ಳೆ ?]ಯ[2] ಬೇವಿನ ಹಣ್ಣ ಮೆಲ್ಲನೆ ಚುಂಬಿಸಿದರೆ ಇನಿದಹುದೆ? ಎಲ್ಲಾ ವಿದ್ಯವನೂ ಬಲ್ಲೆ[3]ವೆಂದೆಂಬರು[3]; [4]ಅವರು[4] [5]ಸಲ್ಲದೆ[5] ಹೋದರಯ್ಯ, ಗುಹೇಶ್ವರ.

578

ನಿರವಯ ನಿರ್ಗುಣ ನಿಶ್ಶೂನ್ಯಲಿಂಗಕ್ಕೆ ಶರಣರು [6]ತಮ್ಮ[6] ತಮ್ಮ ತನು[7]ಗುಣಾ[7]ದಿಗಳನರ್ಪಿಸಿಹೆನೆಂಬುದೇ ಮಹಾ[A]ಪಾಪ[A]. ಅವು [8]ತಮ್ಮ[8] ತನುವಿನಲ್ಲಿಪ್ಪುದೇ ಭಂಗ, ಅದೇ ಕರ್ಮ. ಈ ಉಭಯನಾಸ್ತಿಯಾಗದ ಸುಳುಹು ಮುಂದೆ [9]ಕಾಡಿಹುದಯ್ಯ[9], ಗುಹೇಶ್ವರ.

579

ನೋಡಲಿಲ್ಲದ ಶೃಂಗಾ[10]ರ[10], ಮಾತಾಡಲಿಲ್ಲದ ಶಬ್ದ, [B]ಬೇಡಲಿಲ್ಲದ ವರ[11]ವು[11] ನೋಡಿರೇ ನಿರಾಳ[C]ವನು[B]! ಬಾಡಲಿಲ್ಲದ ಸಸಿಯ [12]ಬೆಳಸು[12] ಕೂಡದೆ ಕೂಡಿ[13]ತ್ತೊ[13]ಂದು ಸುಖವ, ಕಂಡೆ ನಾನು[C]. ಇಲ್ಲದ ಉಪಕಾರ, ಮೆಲ್ಲದ ಸವಿಯಿಂದ ಸುಖಿಸಿದೆ, ಗುಹೇಶ್ವರ.

580

[14]ನಾನು[14] ಸ[15]ಜ್ಜೀ[15]ವವೋ, ನೀನು ಸ[15]ಜ್ಜೀ[15]ವವೋ; ನಿನಗೆಯೂ ಎನಗೆಯೂ [16]ಸಂಬಂಧ[16]ವಯ್ಯ. ನಿನ್ನನೆಂತು ಪ್ರಾಣಲಿಂಗವೆಂದು ಪೂಜಿಸುವೆನಯ್ಯ? [17]ಎನ್ನ ಪ್ರಸಾದ ನಿನಗೆ, ನಿನ್ನ ಪ್ರಸಾದ ಎನಗೆ[17]; ಎನಗೆಯೂ ನಿನಗೆಯೂ ಏಕಪ್ರಸಾದ [18]ಕಾಣಾ[18] ಗುಹೇಶ್ವರ.

581

ತಲೆಯ ಮೇಲೆ ತಲೆಯಿ[19]ದ್ದಿ[19]ತ್ತಲ್ಲಾ! ತಲೆತಲೆ[20]ಯಾ[20] ತ[21]ಲೆ[21]

---

1. ಡಿ (ರ) 2. ಒಳ್ಳಿಹ (ಟರ) 3. ನೆಂಬವರು (ಟ) 4. ಆವದು (ತ) 5. ಅಲ್ಲದೆ (ಟರ) 6. ×(ತರಲ) 7. ಮನಾ (ರ) A ಪಾತಕ (ರ) 8. ತಮ್ಮ ತಮ್ಮ (ಟ) 9. ಕಾಡಿಹಿತಯ್ಯ (ಕವತ) ಕಾಡಿಹಿತ್ತಯ್ಯ (ಲ) ಕಾಡಿತ್ತಯ್ಯ (ರ) 10. ರಕ್ಕೆ (ಟ) B ಹಾಡಲಿಲ್ಲದ ಸ್ವರವ ಬೇಡಲಿಲ್ಲದ ವರವ ನೋಡಲಿಲ್ಲದ ನಿರಾಳವ (ಐ) 11. ×(ಟ) ವ (ಚವತರಲ) C ಕೂಡುವಡೆ ಕೂಡಿ ಒಂದು ಸುಖವ ಕಂಡೆ ನಾನು (ರ) 12. ಬೆಳಗ (ಹ) 13. ತೊಂ (ಐಟ) 14. ತಾನು (ತ) 15. ಜೀ (ಹ) 16. ಏನು ಸಂಬಂಧ(ವ) 17. ಎನ್ನ ಪ್ರಸಾದ ಎನಗೆ (ವ) 18. × (ವ) 19. ದ್ದು (ಚಲ) ಯ 20. (ಟ) 21. ಲೆಯ (ಶೂ)

ನುಂಗಿತ್ತಲ್ಲಾ! ಸತ್ತು ಹಾಲ ಸವಿಯ ಬಲ್ಲಡೆ, ರಥದ ಕೀಲ [1]ಬಲ್ಲಡೆ, [A]ಅದು[1A] ಯೋಗ. ಶಿಶು ಕಂಡ ಕನಸಿನ[2]ಲುಳ್ಳ[2] [3]ತೃಪ್ತಿ ನಿನ್ನಲ್ಲಿ ಉಂಟೆ[3], ಗುಹೇಶ್ವರ?

582

ಅಱಿವಿನೊಳ[4]ಗೊಂ[4]ದು ಮಱವೆಯದೆ, ಮಱವೆಯೊಳಗೊಂದು ಅಱಿವದೆ. ಅಱಿವು ಮಱವೆಯೆಂಬೆರಡು ಅಳಿದರೆ [5]ನಿರ್ವಯಲದೆ[5]; ತಾನೆಂಬಲ್ಲಿ [6]ನಿಪ್ಪತಿಯದೆ[6]; ಇದೇನು ಹೇಳಾ ಗುಹೇಶ್ವರ?

583

ಜೂಜಿನ ವೇಧೆಯುಂಟು, ಜಾಗರದ ಬಲವಿಲ್ಲ, ಆಗಳೂ ಗೆಲ[7]ಲುಂ[7]ಟೆ ಪ್ರಾಣಪದತನಕ? ರತುನದ ಸರ ಹಱಿದು ಸೂಸಿ ಬಿದ್ದರೆ, ಮಾಣಿಕವ ಬೆಲೆಯಿಟ್ಟು ಬಿಲಿತವ[8]ರಿಲ್ಲ[8]. ಸರ್ಪಿಣಿ ಸರ್ಪನ ನುಂಗಿ, [9]ದೀಪವ ನುಂಗಿತ್ತು. ಇದು[9] [10]ಯೋಗದೃಷ್ಟಾಂತ[10] ಗುಹೇಶ್ವರ.

584

ಭೂತಳದ ಮತಿವಂತ[11]ರು[11] ಆತುಮನ ಸ್ಥಲವಿಡಲು, ಮಾತು ಮಾಣಿಕವ ನುಂಗಿ, ಜಾತಿಧರ್ಮವನುಡುಗಿ, ವ್ರತದ ಭ್ರಮೆಗಳ ಸು[12]ಟ್ಟು[12], [13]ಚಿತ್ರ[13]ಭಸ್ಮವಧರಿಸಿ, ಅಣುಮಾದಿಗುಣಂಗಳ ಗತಿಯ ಪಥ[14]ವ[14] ಮೀಱಿ, ಭ್ರಾಂತಳಿದು, ಜ್ಯೋತಿ ಬೆಳಗುತ್ತಿದೆ; ಗುಹೇಶ್ವ[15]ರ[15].

585

ನೋಡುವುದ ನೋಡಲಱಿಯದೆ [16]ಕೆಟ್ಟತ್ತೀ ಲೋಕವೆಲ್ಲ.[16] ನೋಡುವುದ ನೋಡಬಲ್ಲಡೆ ಕೂಡಲಿಲ್ಲ, ಆಗಲಿಲ್ಲ; [17]ನೋಟದ[17] ಕೂಟದ ಅಗಲದ ಸುಖವನು, ಗುಹೇಶ್ವರ, ನಿಮ್ಮ [18]ಶರಣ ಬಲ್ಲ[18].

586

ಭುವನ ಹದಿನಾಲ್ಕಱ ಭವನದ ಕೀಲನೆ ಕಳೆದು, ಉರವಣಿಸುವ

---

1. ನಱಿಯಬಲ್ಲಡೆ (ಟ) A× (ತರಲ) 2. × (ಟ) 3. ತೃಪ್ತಿಯ ನಿಮ್ಮಲ್ಲಿ ಕಂಡೆನು (ಶೂ) ತೃಪ್ತಿಯು ನಿಮ್ಮಲ್ಲಿ ಉಂಟೆ (ರ) ನಿಮ್ಮಲ್ಲಿ ಉಂಟೆ ಹೇಳಾ (ತಲ) 4. ಗೆ ಒಂ (ಟ) 5. ನಿರ್ಣಯುವನೆ (ರ) 6. ನಿಷ್ಪತ್ತಿಯವೆ (ಹ) ನಿಃಪತಿಯದೆ (ದಲ) ನಿಃಪತಿಯಾವೆ (ಕ) 7. ಉಂ (ರ) 8. ರಿತ್ತೋ (ರ) 9. ತ್ತು (ರ) ದೀಪವನೆ ನುಂಗಿತ್ತು ಇದು (ಲ) 10. ಯೋಗದ ದೃಷ್ಟಾಂತರ (ತಲ) ಯೋಗದ ದೃಷ್ಟಾಂತ (ರ) 11. ರೆಲ್ಲರು (ಟ) 12. ಟ್ಟ (ಟ) 13. ಚಿತ್ತು (ರ) ಚಿತ್ತದ (ತಲ) 14. ವನೆ (ಟ) 15. ರ ನಿಮ್ಮ ಶರಣ (ಕಚದ) 16. ಕೆಟ್ಟುದೀ ಲೋಕವೆಲ್ಲ (ವ) ಕೆಟ್ಟತೀ ಜಗವೆಲ್ಲ (ಲಿ) 17 ನಿಮ್ಮ ನೋಟದ (ಲಿ) 18. ಶರಣರೆ ಬಲ್ಲರು (ಲಿ) ಶರಣನೆ ಬಲ್ಲ (ಟ).

ಪವನಂಗಳ ತರಹರಿಸಿದಡದು ಯೋಗ. [1]ಚತುರಸ[1]ದೊಳಗಣ [2]ನಿಲವ[2] ಕಾಣಬೇಕು. [3]ವಜ್ರ(+ವು) ನೀಲವ[3] ಹೊದಿಕೆಯಲ್ಲಿದ್ದ ಭುವನಂಗಳ ಹೊದ್ದಿ ಮಾಣಿಕವ ನುಂಗಿ ಉಗುಳದು ಗುಹೇಶ್ವರ.

587

ತಾನಿದ್ದು ತನ್ನನಱಿಯದೆ, ಇನ್ನೆಂದಿಗೆ ಶರಣನಪ್ಪ[4]ನಯ್ಯ[4]? ಪವನ ಸ್ಥಾನವನಱಿದ ಬಳಿಕ, ಬಂದು ಬಂದು ಸುಳಿಯಲಿಲ್ಲ. ಇದಱಂತುವನಾರು ಬಲ್ಲರು, ಗುಹೇಶ್ವರ, ನಿಮ್ಮ ಶರಣರಲ್ಲದೆ?

588

ಆಕಾಶವ ನುಂಗಿದ ಸರ್ಪನ ಫಣೆಯ ಮಣಿಯೊಳಗಣ ಕಪ್ಪೆ ವಾಯು ವನಲನ ಸಂಚವ [5]ನುಂಗಿತ್ತ[5]ದೇನೋ! ರೂಹಿಲ್ಲದ ತಲೆಗೆ ಮೊಲೆ ಮೂಱಾಯಿತ್ತ ಕಂಡೆ. ಉಂಡಾಡುವ ಶಿಶುವಿನ ಕೈಯಲ್ಲಿ ಮಾಣಿಕದಾರತಿಯ ಕಂಡೆ, ಕಾಯವಿಲ್ಲದ ಹೆಣನ ವಾಯವಿಲ್ಲದೆ ಜವನೆಳೆದೊಯ್ದ[6]ನೆಂಬ[6] ವಾಯಕ್ಕೆ ವಾಯವನೇನೆಂಬೆ, ಗುಹೇಶ್ವರ.

589

ಶಿವಶಕ್ತಿಸಂಪುಟವೆಂಬುದೆಂತು ಹೇಳಿರಣ್ಣ? ಶಿವನೇ ಚೈತನ್ಯಾತ್ಮ ಕ[7]ನು,[7] ಶಕ್ತಿಯೆ ಚಿತ್ತು, [8]ಇಂತು[8] ಚೈತನ್ಯಾತ್ಮ[9]ಕ[9]ನೆ [10]ಚಿತ್ಸ್ವರೂಪ ನೆಂದಱಿಯ ಬಲ್ಲಡೆ[10] ಆತನೆ ಶರಣ ಗುಹೇಶ್ವರ.

590

ಆಕಾಶದ ಬೀಜ ಅಗ್ನಿಯ[A]ಲೊ[A]ದಗಿದ ಶಾಖೆಯಿಲ್ಲದೆ ಮೊಳೆತು ಪಲ್ಲವಿ ಸಿತ್ತು. [11]ಅಱಿದಹೆ[11]ನೆಂಬವನನಾಱಡಿಗೊಂಡಿತ್ತು. [12]ಈ ನಿರ್ಣಯವ ನಱಿಯದ[12] ಮಾನವ, ಗುಹೇಶ್ವರನೆಂಬುದು ಬಯಲವಿಕಾರ.

591

ಹರಿದಱಿಸಿಹೆನೆಂದರೆ ಮನದ ವಿಕಾರ. ಸುಳಿದಱಿಸಿಹೆನೆಂದರೆ ಪವನ ವಿಕಾರ. ನಿಂದಱಿಸಿಹೆನೆಂದರೆ [13]ಕಾಯ[13]ವಿಕಾರ. ಒಳಗಱಿಸಿಹೆನೆಂದರೆ ಜ್ಞಾನ ವಿಕಾರ. ಅಱಿಸಲಿಲ್ಲದೆ ಬೆರಸಬಲ್ಲಡೆ ಆತನೆ ಶರಣ, ಗುಹೇಶ್ವರ.

---

1. ಚದುರಸ (ವ) 2. ನಿಲಯವ (ವ) 3. ವಜ್ರನೀಲದ (ಟಚಕದರಲ). ವಜ್ರದ ನೀಲದ (ವತ) 4. ನು (ವ) 5. ಕೆಡಿಸಿತ್ತಿ (ಟ) 6. ನೆಂದರೆ (ಹವ್ಯಾಚವ್ಯಾ) 7. ×(ಟ) 8. ಇಂತೀ (ಲಿ) 9. ×(ಲಿತರ) 10. ಚಿತ್ಸ್ವರೂಪನೆಂದು ಅಱಿಯಬಲ್ಲರೆ (ಲಿ) A ಲ್ಲೊ (ಟವ) 11. ಅಱಿದೆ (ಹಚವ್ಯಾವರ) 12. ನಿರ್ಣಯವನಱಿಯಾ (ವ) 13. ದೇಹ (ಲಿ)

592

ಹತ್ತು ಬಣ್ಣದ ಗಿಡುವಿಂಗೆ ಹತ್ತೆಲೆ, ಹತ್ತು ಹೂ, ಹತ್ತು ಕಾಯಾಯಿತ್ತು. ಹತ್ತು ಹತ್ತು ಘನದಲ್ಲಿ [A]ಅಳವಟ್ಟು[A], ಹತ್ತು ಹತ್ತು ಆಚಾರಕ್ರಮದಲ್ಲಿ ವಿಚಾರವ ಕಾಣಬಲ್ಲಡೆ, ಆ [1]ಕಾಯ ಲಿಂಗಮಯ[1]ವಹುದು ಕಾಣಾ ಗುಹೇಶ್ವರ.

593

ಪ್ರಾಣ ಲಿಂಗದಲ್ಲಿ ಸಮನಿಸದು, ಲಿಂಗ ಪ್ರಾಣದಲ್ಲಿ ಸಮನಿಸದು; ಪ್ರಾಣ ಲಿಂಗ, ಲಿಂಗ ಪ್ರಾಣವೆಂಬುದು ಸಂದುಸಂಶಯವಲ್ಲದೆ, ನಿಜವಲ್ಲ ಕೇಳಾ! ದಶಪ್ರಾಣವಳಿದು, ಲಿಂಗವೆ ತಾನೆಂಬಱಿಯ ಬಲ್ಲಡೆ, ಅದೆ ಪ್ರಾಣಲಿಂಗ; ಗುಹೇಶ್ವರ.

594

ತನು ಒಂದು ದ್ವೀಪ, ಮನ ಒಂದು ದ್ವೀಪ; [B]ಆಪ್ಯಾಯನ ಒಂದು ದ್ವೀಪ,[B] [C]ವಚನ ಒಂದು ದ್ವೀಪ[C]! ಇಂತೀ ನಾಲ್ಕು ದ್ವೀಪದೆಡೆಯ ಬೆಸಗೊಂಬಡೆ, ಗುಹೇಶ್ವರ, ನಿಮ್ಮ ಸ್ಥಾನಂಗಳು.

595

ಆದಿಯಲ್ಲಿ ಶಿವದಾರವ ಕಂಡೆ. ಬೀದಿಯಲ್ಲಿ ಬಿದ್ದ ಸೆಜ್ಜೆಯ ಕಂಡೆ. ಪ್ರಾಣಲಿಂಗವ ಬೈಚಿಟ್ಟು[2]ಕೊಂಡೆ[2]. ಕಾಯವಳಿದು ಜೀವ [3]ನಿಮ್ಮ[3]ಲ್ಲಿಗೆ ಬಂದರೆ ಎನ್ನಿಂದ ವ್ರತಗೇಡಿಗಳಿಲ್ಲ, ಗುಹೇಶ್ವರ.

596

ಇದ್ದುದ ಹೇಳಲಿಲ್ಲ, ಇದ್ದುದ ತೋಱಲಿಲ್ಲ; ಹೊದ್ದಿದ [4]ಆಶ್ರಮ[4]ವದ ನಾನೇನೆಂಬೆನು, ಶಿವನೆ! ಭದ್ರಕಾಳಿಯ ಬಸಿಱೊಳಗಿ[5]ದ್ದ[5] ಭಾವಿಯ ಸರ್ಪನು ಸಿದ್ಧರಸದ ಘುಟಿಕೆಯ [6]ನುಂಗಿ[6] ಎದ್ದಾಡಿತ್ತು ನೋಡಾ! ಹದ್ದಿನ ಹೆಡೆಯಲ್ಲಿ [D]ಮಾಣಿಕವಿ[7]ದ್ದೂ[7]ದು ಇಲ್ಲೆಂಬ[D] ಎದ್ದು ಹೇಳುವ ಕನಸು ತಾ[8]ನಿ[8]ಲ್ಲ, ಗುಹೇಶ್ವರ.

---

[A] ಅಳವಟ್ಟುತ್ತು (ತ) 1. ಕಾಯವೆ ಲಿಂಗಮಯ (ಹಟ) ಕಾಯಲಿಂಗವುದಯ (ಚದ) ಕಾಯವೆ ಲಿಂಗ (ಚವ್ಯಾ) ಕಾಯಲಿಂಗ (ಬ) C + B (ಟ) 2. ಕೊಂಡರೆ (ಚಕದ) ಕೊಂಡೆನು (ತರಲಚವ್ಯಾ) 3. ನಿಂದ (ರ) 4. ಆಶ್ರಿಮ (ಕದತರಲ) ಆಶ್ರಯ (ಟ) ಆಶ್ರಿಯ (ಚ) ಆಶ್ರಮ (ಚವ್ಯಾಬ) 5. ಪ್ಪ (ತ) 6. ನುಂಗಿತ್ತು (ಟ) [D] ಮಾಣಿಕವಿದ್ದುಹೂದಿಲ್ಲವೆಂದು (ತ) 7. ದ್ದುಹು (ಕಚದಲ) ದ್ದು (ರ) 8. ನ (ಕಟತಬದಲಚವ್ಯಾ)

## 597

ಅದ್ವೈತನ ಕರಸ್ಥಲದೊಳಗೆ ಅನಂತನೆಂಬ ಗಿಣಿ ಮೂರ್ತಿಗೊಂ[1]ಡು[1], ಅತೀತ–ಅನಾಗತ–ವರ್ತಮಾನವೆಂಬ [2]ಕೋಱ[2]ಕೂಳನುಂಡು, ಓದಿತ್ತು ಅಗಣಿತ [3]ಪುರಾಣವ,[3] ಅನಾಮಯ [4]ಶಾಸ್ತ್ರವ[4] ಅನುಪಮವೇದವೆಂದು. ನಿಸ್ಥಲವ ಸ್ಥಲವಿಡಲು ನಿರ್ಮಲಾತ್ಮಂಗೆ ಇಹವಿಲ್ಲ ಪರವಿಲ್ಲ. ಆದಿಮಧ್ಯಾಂತ ನಿರಾಳ ಗುಹೇಶ್ವರನ ಅನುಭವಿಗೆ ಸರ್ವಾಂಗ ಲಿಂಗವು.

## 598

ಅಂಗೈಯೊಳಗಣ ಸಿಂಹಾಸನ[5]ವಿದೇನೋ[5] ? ಅಂಗೈಯ ಮೇಲೆ ಸಿಂಹಾಸನ[6]ವೆಂದೇನೋ[6] ? ಧೂಪದೀಪನಿವಾಳಿಯೆಂದೇನೋ ? ಶರಣಂಗೆ ಕಳಶದ ಮೇಲೆ ನೆಲೆಗಟ್ಟೆಂಬು[7]ದೇನೋ[7] ? ಗುಹೇಶ್ವರನೆಂಬ ನಿರಾಳ.

## 599

ಕಂಗಳಲ್ಲಿ ನಟ್ಟ [8]ಗಾಯವನಾರಿ[A]ಗೂ[A] ತೋರಬಹುದೇ[8] ? ಮನ ಸೋಂಕಿದ ಸುಖವ ಮೊಟ್ಟೆಯ ಕಟ್ಟಬಹುದೆ ? ಆತನಿಂದ ಸುಖವಾತಂಗೆ ಸಾಧ್ಯ[9]ವಾ[9]ಯಿತ್ತು, ಆತ ನಿಂದ ನಿಲವನೇನೆಂಬೆ ಗುಹೇಶ್ವರ.

## 600

[10]ಅಱಿದೆನಱಿದೆನೆಂದರೆ[10] ಅದೇಕೋ [11]ಮುಂದೆ[11] ಮಱವೆ ? [12]ಅಱಿದೆ[12]ನೆಂಬುದು ನಿನ್ನಲ್ಲಿ ಲೇಸಾಗಿ ಉಳ್ಳಡೆ ನಿನ್ನಱುವೆಲ್ಲವ [13]ಹಱಹಂಚ ಮಾಡಿ ಹೋದಡಱ[13] ಮರುಳೆ! ಸ್ವತಂತ್ರ ಘನದೊಳಗಿದ್ದು ನಿಜವನಱ[14]ದೆ[14]ನೆಂದಡೆ ಮೂರ್ತಿ ಕಿಱದಲ್ಲ ನಿಲ್ಲು ಮಾಣು. ಗುಹೇಶ್ವರನೆಂಬ [15]ಲಿಂಗದ[15] ಘನಘಟ್ಟಿಯನಱವಡೆ, ನಿನ್ನಱಿಱವೆಲ್ಲ[B]ವ[B] ಹಱಹಂ[16]ಚ[16] ಮಾಡಿ [17]ನೀನಱ ಮರುಳೇ ಅನು[C]ಭಾ[C]ವಿಯಾದಡೆ[17].

---

1. ಡಿತ್ತು (ಟ) 2. ಕೋಱೆಯ (ತಲಬ) 3. ಟ ; ಪುರಾಣ 4. (ಟ) ; ಶಾಸ್ತ್ರವನು 5. ವೆಂದೇನೋ (ಲ) 6. ವಿದೇನೋ (ಟ) 7. ದಿದೇನೋ (ಟ) 8. ಹಯನನಾರಿಗೆ ತೋಱಬಹುದಯ್ಯ (ವ) ಘಾಯವನಾರಿಂಗೆ ತೋಱಬಹುದಯ್ಯ (ಐ) A (ಟ) ; ಗೆ 9. ಅ (ವ) 10. (ಏಐ) ; ಆಱಿದೆಹೆನಱಿದೆಹೆನೆಂದರೆ (ಕಚದ) ಅಱಿದಹೆನಱಿದಹೆನೆಂದರೆ (ತಟಲ) 11. ಮುಂದಣ (ಏ) 12. ಅಱಿದಹೆ (ತಟಲ) ಅಱಿದೆಹೆ (ಕಚದ) 13. ಹಱಿಹಂಚು ಮಾಡಿದಡಱಿ (ಟ) ಹರಿಹಂಚುಮಾಡಿ ನೀನರಿ (ಏ) ಹಱಿಹಂಚುಮಾಡಿ ಹೋದಡಱಿ (ಬತ) ಹಱಿಹಂಚುಮಾಡಿ ನೀನಱಿ ಮರುಳೆ (ಐ) 14. ದೆಹೆ (ಕಚದಬ) ದ (ತಟಲ) ದಿಹೆ (ಏ) 15. × (ತಲ) B × (ಏ) 16. ಚು (ಬಟಏಐ) 17. ಬಱಿದೆಂದು ನೀನಱಿ. ಮರುಳೆ ನೀನು ನಿರ್ಭಾವಿಯಾದಡೆ (ಐ) C ಭ (ತಲ)

601

ಎನ್ನ ಕಂಗಳೊಳಗಣ ರೂಹಿಂಗೆ ಆನು ಬೇಟಗೊಂಡು ಬಳಲುವಂತೆ ಹಿಡಿದು ನೆರೆಯಲಿಲ್ಲಯ್ಯ! [1]ತುರೀಯದ[1] ತವಕವನೇನೆಂಬೆ[2]ನಯ್ಯ[2]? ಸಂಗ ಸಂಯೋಗ[3]ವಿಲ್ಲದ[3] ರತಿಸುಖವನಱಿಸಲುಂಟೆ? ಗುಹೇಶ್ವರಲಿಂಗದ [4]ಕೃತಕ_ದಾಳಿಯ[4]ನೇನೆಂಬೆ.

602

ಆಱುವೆಯ[5]ನೊಂದೊ[5]ಱಲೆ ಕೊಂಡಡೆ, ಆಕಾಶವ[6]ನು[6]ಡು ಮೇಯಿತ್ತಲ್ಲಾ! ಕತ್ತಲೆ[7]ಯ[7] ಬೆಳಗುವ ತಾನೆ ನುಂಗಿತ್ತಲ್ಲಾ! ಗುಹೇಶ್ವ[8]ರ[8], ಸತ್ತವರು ಬದುಕಿದವರ ಹೊತ್ತರು.

603

ಉರಿವ ಕಿಚ್ಚಿನೊಳಗೆ ಹಾ[9]ಯ್ಕಿ[9]ದಡೆ, ಬೆಂದಿ[10]ತ್ತೆಂ[10]ದಱಿಯಬಾರದು, ಬೇಯದೆಂದಱಿಯಬಾರದು. ಹಿಡಿದು [11]ಸುಟ್ಟು[11] ಬೂದಿಯ ಪೂಸಿಕೊಂಡರೆ ಮರಳಿ ಹುಟ್ಟಲಿಲ್ಲ ಕಾಣಾ ಗುಹೇಶ್ವರ.

604

ತನ್ನನಱಿ[12]ದವಂಗೆ[12] ಇದಿರೆಂಬುದಿಲ್ಲ. ತನ್ನನಱಿಯದವಂಗೆ ಇದಿರೆಂಬುದುಂಟು. ಅಱಿವು ಮಱವು ಕುಱುಹಳಿಯಿತ್ತು. ಬೆಱಗಾಯಿತ್ತು ಬೆಱಗು; ಬೆಱಗಿನೊಳಗೆ ಕಱಗೊಂಡಿತ್ತಿದೇನೋ—ಭ್ರಾಂತು ಭ್ರಾಂತನೆ [13]ನುಂಗಿ[13], ಗುಹೇಶ್ವರ, ಭವಿಯ ಬೆಂಬತ್ತಿ ಭವಿಯಾದ ಕಾರಣ.

605

ಕೆಂಡದ ಗಿರಿಯ ಮೇಲೊಂದು ಅರಗಿನ ಕಂಭ[14]ವಿದ್ದಿತ್ತು ನೋಡಾ ಅಯ್ಯ[14]! ಅರಗಿನ ಕಂಭದ ಮೇಲೆ ಒಂದು ಹಂಸೆ[A]ಯಿದ್ದಿತ್ತು[A]. ಕಂಭ [15]ಬೆಂದಿತ್ತು[15], ಹಂಸೆ ಹಾಱಿತ್ತು, ಗುಹೇಶ್ವರ.

---

1. ತುರ್ಯದ (ಟ) ತೂರ್ಯದ (ಹ) 2. × (ಕ) 3. ವಿಲ್ಲ (ವಟ) 4. ಕೃತಕದ ಆಳಿಯ (ಹಟತಲ) ಕೃತಕದ ದಾಳಿಯ (ವ) 5. ನೊ (ಲಿ) ನೊಂದು ಒ (ಲ) 6. ಉ (ಬಟ) 7. × (ಕತದ) 8. ರ ಗುಹೇಶ್ವರ (ಬಕದ) 9. ಯಿಕಿ (ಟ) 10. ತೆಂ (ಟತ) 11. ಸುಟ್ಟೆ (ಕತದಟ) 12. ತಂಗೆ (ಟ) ದಂಗೆ (ಬ) 13. ನುಂಗಿತ್ತು (ಬಟ) 14. ವಿದದ್ದುದ ಕಂಡೆ (ಶೂ) ವಿದ್ದುತ್ತು ನೋಡಯ್ಯ (ಬ) Aಯಿದ್ದುದ ಕಂಡೆ (ಶೂ) ಯಿದ್ದುತ್ತು (ಬ) 15. ಬೆಂದು (ಶೂ)

## ಐಕ್ಯಸ್ಥಲ

### 606

ಸತ್ತು ಹುಟ್ಟಿ, ಕೆಟ್ಟವರೆಲ್ಲರೂ ದೇವಲೋಕಕ್ಕೆ ಹೋದರೆಂಬ ಬಾಲ ಭಾಷೆಯ [1]ಕೇಳ[1]ಲಾಗದು. ಸಾಯದ ಮುನ್ನ ಸ್ವಯುವನಱ[2]ದ[2]ಡೆ ದೇವ ನೊಲಿವ ನಮ್ಮ ಗುಹೇಶ್ವರ.

### 607

ಕೋಣನನೂ ಕುದುರೆಯನೂ, ಹಾವನೂ ಹದ್ದನೂ, [3]ಮೊಲವನೂ ನಾಯನೂ, ಇಲಿಯನೂ ಬೆಕ್ಕನೂ, ಹುಲಿಯನೂ ಹುಲ್ಲೆಯನೂ[3] ಮೇ[4]ಳವಿ[4]ಸುವಂತೆ ಮೇಳವಿಲ್ಲದವನ [5]ಒಗತನ, ಆಳಿಯ ಬಾಳುವೆ[5]; [6]ಕಾಡ ಬೆಕ್ಕಿಂಗೆ ತುಯ್ಯಲನಿಕ್ಕುವಂತೆ[6], ಕೇಳು, ಗುಹೇಶ್ವರ ನಿರಾಳ ಬೋಳಿಂಗೆ ತೊಂಡಿಲ [7]ಮುಡಿ[7]ಸುವಂತೆ.

### 608

ಲಿಂಗವಂತಂಗೆ ಲಿಂಗವಾರ್ತೆಯ ನುಡಿವುದೆ ಭಂಗ; ಹಂಗು ನೋಡಾ, ಹಂಗಿನ ಶಬ್ದ ನೋಡಾ! ಕೊಡನ ತುಂಬಿದ ಹಾಲನೊಡೆಯ [8]ಹಾಯ್ಕಿ[8], ಇನ್ನು ಉಡುಗಿಹೆನೆಂದರೆ ಉಂಟೆ, ಗುಹೇಶ್ವರ?

### 609

ಶಬ್ದ[9]ಸಂಭ್ರಮ[9]ದಲ್ಲಿ ಹಿಂದುಗಾಣರು, ಮುಂದುಗಾಣರು. ತಮ್ಮ ತಾವಱಿಯರು. [10]ಇದು[10] ಕಾರಣ, [11]ಮೂಱು ಲೋಕವೆಲ್ಲವು[11] ಬಱು–ಸೂಱೆವೋಯಿತ್ತು, ಗುಹೇಶ್ವರ.

### 610

ಉರವಣಿಸುವ ಮನ ಮುಟ್ಟುವನ್ನ[A]ಬರ[A] ಕಾಡುವುದು. [12]ಘನ[12]–ಘನದಲ್ಲಿ ಮನ ನಂಬುವನ್ನಬರ ಕಾಡುವುದು. [13]ಮಹಂತ[13]ಗುಹೇಶ್ವರನೆಂಬ ಶಬ್ದ ಉಳ್ಳನ್ನ[14]ಬರ[14] ಕಾಡುವುದು.

---

1. ಹೇಳ (ಸ್ವ) ಕೇಳಲಾಗದು ಕೇಳ (ಟ) ಹೇಳಲಾಗದು ಕೇಳ (ತಲ) 2. ತ (ಟ) ವ (ಕ) 3. (ಐ) ; ಮೊಲವನೂ ಇಲಿಯನೂ (ಕಚಟದತ) ನಾಯನೂ ಮೊಲವನೂ, ಬೆಕ್ಕನೂ ಇಲಿಯನೂ (ಲ) 4. ಳೈ (ಟ) 5. ಒಕತನದಾಳಿಯ ಬಾಳುವೆ (ಐ) ಒಗತನ ಆಳಿಯಾದಾಳುವೆ (ತ) 6. ಬೆಕ್ಕಿಗೆ ತುಯ್ಯಲನಿಕ್ಕಿದಂತೆ(ಐ) ಬೆಕ್ಕಿಂಗೆ ತುಯ್ಯಲ ನೂಡಿದಂತೆ (ಟ) 7. ತೊಡಿ (ಟ) 8. ಹಾಯಿಕಿ (ಚ) 9. × (ಟ) 10. ತಮುದ ಕೀಲ ಬಲ್ಲವರಾರೋ ಇದು (ವ) 11. ನೆಱೆ ಮೂಱುಲೋಕ (ಟ) A ಕ್ಕ (ಐ) 12. ಘನಾ (ಐ) 13. ಶ್ರೀಮನ್ಮಹಾಂತ (ಐ) 14. ಕ್ಕ (ಐಐ)

611

ಕದನದೊಳಗಣ ಕಣ್ಣ ಕೆಂಪು, ಕದನದೊಳಗಣ ಮನದ ಕೆಂಪು, ಇದಾ-ವನಾವನ ಕಾಡದಯ್ಯ ? ಪದುಮದೊಳಗೆ ಬಿಂದು ಸಿಲುಕಿ ಅಲ್ಲಿಯೆ ಅದೆ ನೋಡಿರೇ ! ಗುಹೇಶ್ವರನೆಂಬ ಅನುಗ್ರಹ ತನ್ನ ನುಂಗಿ ಲಿಂಗವಿಲ್ಲೆ ನುತಿ[1]ದ್ದೆನು[1]

612

ಭಾವವಳಿಯದೆ, ಬಯಕೆ ಸವೆಯದೆ, ಐಕ್ಯವು ಆವ ಘನವೆಂದಡಹುದೆ ? ಶಬ್ದಸಂಭ್ರಮದ ಮದವಳಿಯದೆ, ತನ್ನ ಇದಿರಿನಲ್ಲಿ ಪ್ರತಿಯುಳ್ಳಡೆ, ಏನೆಂದಡೂ ಅಹುದೆ ? ಗುಹೇಶ್ವರನೆಂಬ ಶಬ್ದ [2]ಸಂದಳಿಯದೆ[2] ಬೇಸತ್ತು ಬಯಲಾದಡೆ ಆಯತವಹುದೆ ?

613

ಕೆಱೆಯ[3]ನುಂ[3]ಡು ತೊಱೆಯ [4]ಹೊಗಳುವರು.[4] [5]ಅತ್ಯುತ್ಕಟದ[5] ಪರಬ್ರಹ್ಮವನೆ ನುಡಿವರು. ಸಹಜಪಿನಾಕಿಯ ಬಲೆಯಲ್ಲಿ ಸಿಲುಕಿ ಭವವ [6]ಹಱಿ[6]ಯಲಱಿಯರು, ರುದ್ರನ ಛತ್ರವನುಂಡು ಇಲ್ಲವೆಯ ನುಡಿವ ಹಿರಿಯರಿಗೆ ಮಹದ ಮಾತೇಕೋ, ಗುಹೇಶ್ವರ.

714

ಪಂಚಭೂತಸಂಗದಿಂದ ಜ್ಯೋತಿಯಾಯಿತ್ತು. ಪಂಚಭೂತಸಂಗದಿಂದ ಕರ್ಪುರವಾಯಿತ್ತು. [7]ಈ[7] ಎರಡಱ ಸಂಗವೇನಾಯಿತ್ತು ಹೇಳಾ ?! ವಾಙ್ಮ-[8]ನಕ್ಕ[8]ತೀತ ಗುಹೇಶ್ವರ.

615

ಎರಡೆಂಬರಯ್ಯ ಕರಣದ [9]ಕಂಗಳಲ್ಲಿ[9] ನೋಡಿದವರು, ಎರಡುವನತಿ-ಗಳೆದು ಒಂದೆಂಬರಯ್ಯ. [10]ಕಾಮಿಸುವುದಿಲ್ಲಾಗಿ ಕಲ್ಪಿಸುವುದಿಲ್ಲ ; ಕಲ್ಪಿಸುವು-ದಿಲ್ಲಾಗಿ, ಭಾವಿಸುವುದಿಲ್ಲ ; ಗುಹೇಶ್ವರನೆಂಬುದಿಲ್ಲಾಗಿ ಬಯಲೆಂಬುದಿಲ್ಲ.[10]

616

ಹುಲ್ಲ ಕಿಚ್ಚುವ, [11]ಕಲ್ಲ ಬೀಜವ,[11] ನೀರ ನೆಳಲುವ, ಗಾಳಿಯ ನಾರುವ,

---

1. ದ್ದಿತ್ತು (ಟ) 2. ಸುಳಿಯದೆ (ಹ) 3. ಲು (ತಲಐ) 4. ಮೊಗವರು (ಲ) 5. ಅತಿ ಉತ್ಕೃಷ್ಟದ (ತಲ) 6. ಹಿಡಿ (ಬಟ) 7. × (ಟಬತಲ) 8. ನಾ (ಕ಼ಜಟ ದಬ) 9. ಕಂಗಳ (ವ) 10. ಒಂದು ಇಲ್ಲದ ನಿರಾಳವ ಕಾಮಿಸುವರಾಗಿ ಕಲ್ಪಿಸುವುದಿಲ್ಲ, ಭಾವಿಸುವುದಿಲ್ಲ ನೀ ಬಯಸುವುದಿಲ್ಲ, ಗೊಗೇಶ್ವರನೆಂಬುದಿಲ್ಲಾಗಿ ಮುಂದೆ ಬಯಲೆಂಬುದಿಲ್ಲ (ವ) 11. × (ವ)

ಅಗ್ನಿಯ ಹಗಿ[1]ನು[1]ವ [2]ಬಿಸಿಲಿನ[2] ರುಚಿಯು, ತನ್ನ ಬೆಳಗುವನಾರು ಬಲ್ಲರು, ಗುಹೇಶ್ವರ, ನಿಮ್ಮ ಶರಣರಲ್ಲದೆ ? !

617

ಹೊರಸಿ[3]ನೆಕ್ಕೆಯ[3] ಶಂಖದ ಮಣಿಯ ಪವಣಿಸಬಲ್ಲವರು ನೀವಾರಾದಡೂ ಪವಣಿಸಿ[4]ರಯ್ಯ[4] [5]ಇದ ನಾನಱಿಯೆನಯ್ಯ[5] ! ಒಂದು ತಾಳಮರದ ಮೇಲೆ ಮೂಱು ರತ್ನವಿಹುದ ನಾ ಬಲ್ಲೆ, ಒಂದು ರತ್ನ ಉತ್ಪತ್ತಿಸ್ಥಿತಿಲಯ ಕ್ಕೊ[6]ಳಗಾಯಿತ್ತು.[6] ಒಂದು ರತ್ನ ಹದಿನಾಲ್ಕು ಭುವನಕ್ಕೆ ಬೆಲೆಯಾಯಿತ್ತು. ಇನ್ನೊಂದು ರತ್ನಕ್ಕೆ ಬೆಲೆಯಿಲ್ಲವೆಂದೂ ! ಗುಹೇಶ್ವರಲಿಂಗೈಕ್ಯ[7]ವು 'ನಿಶ್ಯಬ್ದಂ ಬ್ರಹ್ಮ ಉಚ್ಯತೇ[7].'

618

ಅಂಗದ ಧರೆಯ ಮೇಲೆ ಮೂಱು ಭಾವಿಯುಂಟು. ಮೊದಲ ಭಾವಿಯ ಮುಟ್ಟಿದಾತ ಅಂಗಸಂಗಿಯಾದನು ; ನಡುವಣ ಭಾವಿಯ ಮುಟ್ಟಿದಾತ ಉತ್ಪತ್ತಿಸ್ಥಿತಿಲಯಕ್ಕೊಳಗಾದನು ; ಮೇಲಣ ಭಾವಿಯ ಮುಟ್ಟಿದಾತ ಜೀವನ್ಮುಕ್ತನಾದನು. ಇವ ತಟ್ಟದೆ ಮುಟ್ಟದೆ ಹೋದರು ನೋಡಾ ಪರಬ್ರಹ್ಮವ ದಾಂಟಿ ಗುಹೇಶ್ವರಲಿಂಗದಲ್ಲಿ ಹಂಗು ಹಱಿದ ಶರಣರು.

619

[8]ಒಟ್ಟೆಯ[8] ಮರಿ ಮೂ[9]ಱೊಟ್ಟೆ[9]ಯನಿಕ್ಕಿತ್ತು. ಕಟ್ಟುಗ್ರದಿಱುಹೆ ಕತ್ತಲೆಯ ನುಂಗಿತ್ತು. ಬೆಟ್ಟವ ಬೆಳ್ಳಕ್ಕಿ ನುಂಗಿತ್ತು. ಸುಟ್ಟುದು ಎದ್ದು ಕುಳ್ಳಿದ್ದುದಯ್ಯ. ಕಟ್ಟಿದ್ದುದು ತೋಱದೆ ಗುಹೇಶ್ವರನಲ್ಲಿಯೇ ಅಡಗಿತ್ತು ನೋಡಾ!

620

ಸ್ಥೂಲ[10]ವ[10] ಬ್ರಹ್ಮನಳವಡಿಸಿಕೊಂಡ. ಸೂಕ್ಷ್ಮ[10]ವ[10] ವಿಷ್ಣುವಳವಡಿಸಿಕೊಂಡ. [11]ಕಾರಣವ[11] ರುದ್ರನಳವಡಿಸಿಕೊಂಡ. [12]ನಿಷ್ಕಾಯವ[12] ಈಶ್ವರನಳವಡಿಸಿಕೊಂಡ. ನಿರಂಜನವ ಸದಾಶಿವನಳವಡಿಸಿಕೊಂಡ.

---

1. ನ (ತಲ) 2. ಬಿಸಿಲ ರಸವ ಹಿರಿ[=ಳಿ ?] ದ (ವ) 3. ನ ಎಕ್ಕೆಯಲ್ಲಿ (ಹ) ನ ಎಕ್ಕೆಗೆ (ಹವ್ಯಾ) ನ ಎಕ್ಕೆಯ (ಚಚವ್ಯಾಟಸ್ವಬಬವ್ಯಾ) ನೆಕ್ಕಿಗೆ (ಪ್ರ) 4. ಭೋ (ಟ) 5. × (ಟಟವ್ಯಾ) 6. ಳಗು (ಪ್ರ) 7. ರು ನಿಶ್ಯಬ್ದಂ ಬ್ರಹ್ಮ ಉಚ್ಯತ ಎಂದುದಾಗಿ (ಪ್ರ) 8. ಒಂಟೆಯ (ಹಟ) 9. ಱೊಂಟೆ (ಹ) ಱು ಒಟ್ಟೆ (ಟ) 10. ತನುವನು (ಟ) 11. ನಿರಾಕಾರ ತನುವನು (ಟ). 12. ನಿಃಕಾಯವ (ಟವತಲ)

[1]ನಿರವಯವ[1] ವ್ಯೋಮಾತೀತನಳವಡಿಸಿಕೊಂಡ. ಈ ಷಡುಸ್ಥಲದವರೆಲ್ಲಾ ಬಯಲನಳವಡಿಸಿಕೊಂಡು ಬಯಲಾ[2]ಯಿತ್ತು[2] ಕಾಣಾ, ಗುಹೇಶ್ವರ.

621

ಪೃಥ್ವಿಯೊಳಗಿಲ್ಲ, ಆಕಾಶದೊಳಗಿಲ್ಲ, ಚತುರ್ದಶ ಭುವ[3]ನಾದಿ[3] ಭುವನಂಗಳೊಳಗೆಯೂ ಇಲ್ಲ, ಹೊಱಗೆಯೂ ಇಲ್ಲ! ಏನಾಯಿತ್ತೆಂದಱಿಯೆನಯ್ಯ! ಗುಹೇಶ್ವರ ಅಂದೂ ಇಲ್ಲ, ಇಂದೂ ಇಲ್ಲ, ಎಂದೂ ಇಲ್ಲ.

622

ಹುಟ್ಟುವಾತ ನಾನಲ್ಲಯ್ಯ. ಹೊಂದುವಾತ ನಾನಲ್ಲಯ್ಯ. [4]ಏ[4]ನೆಂಬೆನಯ್ಯ, ಅದೆಂತೆಂಬೆನಯ್ಯ? ನಿಜವನಱಿದ ಬಳಿಕ [5]ಮರಳಿ[5] ಹುಟ್ಟಲುಂಟೆ, ಗುಹೇಶ್ವರ?

623

ಅಱಿದೆನೆಂಬುದು ತಾ ಬಯಲು: ಅಱಿಯೆನೆಂಬುದು ತಾ ಬಯಲು. ಅಱಿವಿನ, ಕುಱುಹಿನ, [6]ಮಱಹಿನೊಳಗೆ[6] ಗುಹೇಶ್ವರನೆಂಬುದು ತಾ ಬಯಲು.

624

ಹೊಸ ಮುತ್ತಿನ ಸುಪ್ಪಾಣಿಯಂತೆ ಲಿಂಗೈಕ್ಯವು. ಸ್ಫಟಿಕದ ಘಟದೊಳಗಣ ಪ್ರಭೆಯಂತೆ ಲಿಂಗೈಕ್ಯವು. ವಾಯುವಿನ ಸಂಚದ [7]ಪರಿಮಳದ[7] ನಿಲವಿನಂತೆ ಲಿಂಗೈಕ್ಯಸಂಬಂಧವದು, ಗುಹೇಶ್ವರ.

625

ಅಱಿದಱಿದು ಅಱಿವು ಬಂಜೆಯಾಯಿತ್ತು. [8]ಮಱ[8]ಮಱೆದು ಮಱಹು ಬಂಜೆಯಾಯಿತ್ತು. [9]ಗುಹೇಶ್ವರ[9]ನೆಂಬ ಶಬ್ದ [10]ಸಿನೆ[10]ಬಂಜೆಯಾಯಿತ್ತು.

626

ಹಸಿವಿನ ಪ್ರೇಮಕ್ಕೆ [11]ಬೋನವ ಹಿಡಿವರು. ತೃಷೆಯ ಪ್ರೇಮಕ್ಕೆ[11] ಮಜ್ಜನಕ್ಕೆಱೆವರು, [A]ದೇವರಿಲ್ಲ, ಭಕ್ತರಿಲ್ಲ; ನಾನೂ ಇಲ್ಲ, [12]ನೀನೂ[12] ಇಲ್ಲ;[A] [13]ಗುಹೇಶ್ವರ[13], ಪೂಜಿಸುವರೂ ಇಲ್ಲ, ಪೂಜೆಗೊಂಬವರೂ ಇಲ್ಲ.

---

1. ನಿರಾಮಯವ (ಟ) 2. ಗಿ ಹೋದರು (ಟ) 3. ನಾ (ಟಲ) 4. ಆದೇ (ಬಟ) 5. × (ಬಟ) 6. ಮಱವೆಯೊಳಗೆ (ತಲ) 7. × (ಲಿ) 8. ಮಱೆದು (ಟ) ಮಱ (ದ) 9. ನೆನೆನೆನೆದು ನೆನಹು ಬಂಜೆಯಾಯಿತ್ತು, ಗೊಗೇಶ್ವರ (ವ) 10. ಸಿನಿ (ಕ) ಸನೆ (ತ) 11. ಹುಸಿದು (ಬಟಲಿ) A ಅವರಿಗೆ ದೇವರಿಲ್ಲ ಭಕ್ತರಿಲ್ಲ; ನಾನು ಇಲ್ಲ, ನೀನು ಇಲ್ಲ; ಪೂಜಿಸುವರಿಲ್ಲ, ಪೂಜೆಗೊಂಬವರಿಲ್ಲ ಕಾಣಾ ಸಂಗನ ಬಸವಣ್ಣ (ಪ್ರ) 12. ಮತ್ತೆ ನೀನೂ(ಲಿ) 13. ಮತ್ತೇನೂ ಇಲ್ಲ ಗೊಗೇಶ್ವರ ಗೊಗೇಶ್ವರ (ಬಟ)

627

ಎರಡೆಂಬತ್ತು ಕೋಟಿ ವಚನವ ಹಾಡಿ, [1]ಹಲವ[1] ಹಂಬಲಸಿತ್ತೆನ್ನ ಮನವು. ಮನ ಘನವನನರಿಯದು, ಘನ ಮನವನನರಿಯದು. ಗುಹೇಶ್ವರನೆಂಬ ಲಿಂಗವನನರಿದ [2]ಬಳಿಕ, ಗೀತವೆಲ್ಲಾ[2] ಒಂದು ಮಾತಿನೊಳಗು.

628

[3]ಅವಿರಳ[3]ವಿಟನ ಮದುವೆಗೆ ನಿಬ್ಬಣಗಿತ್ತಿಯರೆಲ್ಲಾ ಬಂದು, ಕೆಂಡದಂಡೆಯನೆ ಮುಡಿದು, [4]ಅಂಡಜವೆಂಬ[4] ಅರಿಸಿನವ ಮಿಂದು, ಉರಿಯೆಂಬ ಹಚ್ಚಡದ ಹೊದಿಕೆಯಲ್ಲಿ [5]ನಿಬ್ಬಣಗಿತ್ತಿಯರು[5] ಬಪ್ಪ ಬರವ [6]ಕಂಡು[6], ನೀರ[7]ಲ[7]ಡಿಗೆಯ ಮಾಡಿ, ವಾಯದ ಕೂಸಿಂಗೆ ಮಾಯದ ಮದವಣಿಗ, ಸಂಗಸಂಯೋಗವಿಲ್ಲದೆ ಬಸುರಾಯಿತ್ತು, ಕೂಸೆದ್ದು ಕುಣಿದಾಡಿ ಸೂಲಗಿತ್ತಿಯ [8]ನವ[8]ಗ್ರಹಿಸಿತ್ತು, ಗುಹೇಶ್ವರ, ಒಬ್ಬನಿ[9]ಬ್ಬ[9]ಮೂವರು ತ್ರಿದೇವತೆಗಳು ಬಲ್ಲರೆ ಆ ಲಿಂಗದ ಘನ[10]ವನು[10]?

629

ಸತ್ತಾತನೊಬ್ಬ, ಹೊತ್ತಾತನೊಬ್ಬ. A[11]ಈ[11] ಇಬ್ಬರನೊಯ್ದುA ಸುಟ್ಟಾತನೊಬ್ಬ. ಮದವಣಿಗನಾರೋ, ಮದವಳಿಗೆಯಾರೋ?! ಮದುವೆಯ ನಡುವೆ ಮರಣವಡ್ಡ ಬಿದ್ದಿತ್ತಲ್ಲಾ! ಹಸೆಯಳಿಯದ ಮುನ್ನ ಮದವಣಿಗನಳಿದ, [12]ಗುಹೇಶ್ವರ, ನಿಮ್ಮ ಶರಣ[12]ನೆಂದೂ ಅಳಿಯ.

630

ಪಾದವಿಲ್ಲದ ಗುರುವಿಂಗೆ ತಲೆಯಿಲ್ಲದ ಶಿಷ್ಯನು. ಅನಾಚಾರಿ ಗುರುವಿಂಗೆ ವ್ರತಗೇಡಿ ಶಿಷ್ಯನು. ಈ ಗುರುಶಿಷ್ಯರಿಬ್ಬರೂ ಸತ್ತ ಸಾವ ನಿಮ್ಮಲ್ಲಿ ಅರಿಸುವೆ, ಗುಹೇ[13]ಶ್ವರ[13].

631

ಕಕ್ಷೆಯಲ್ಲಿ ಲಿಂಗವ ಧರಿಸಿಕೊಂಡಾತನು ಬ್ರಹ್ಮ; ಕರಸ್ಥಲದಲ್ಲಿ ಲಿಂಗವ ಧರಿಸಿಕೊಂಡಾತನು ವಿಷ್ಣು, ಉತ್ತಮಾಂಗದಲ್ಲಿ ಲಿಂಗವ ಧರಿಸಿಕೊಂಡಾತನು ರುದ್ರ; ಅಮಳೋಕ್ಯದಲ್ಲಿ ಲಿಂಗವ ಧರಿಸಿಕೊಂಡಾತನು ಈಶ್ವರ; ಮುಖಸೆಜ್ಜೆಯಲ್ಲಿ ಲಿಂಗವ ಧರಿಸಿಕೊಂಡಾತನು ಸದಾಶಿವ; ಅಂಗಸೆಜ್ಜೆಯಲ್ಲಿ ಲಿಂಗವ

---

1. × (ಬಟ) 2. ಬಳಿಕನಿತವೆಲ್ಲ (ಕ) 3. ವಿರಳ (ವ) 4. ಅಂಗಜನೆಂಬ (ವ) 5. ನಿಬ್ಬಣಿಗರು (ವ) 6. ಕಂಡೆ (ಹವ್ಯಾ ಚವ್ಯಾ) 7. ಲ್ಲಿ ಅ (ತ) 8. ನೆ (ಬಸ್ವತ) ನಿ (ಟ) 9. ಬ್ಬರು (ಬಟ) 10. ವೆಯ (ಟ) A ಇವರಿಬ್ಬರನೂ ಒಯ್ದು (ಲಿ) 11. × (ವ) 12. ಗೊಗೇಶ್ವರಲಿಂಗ (ವ) 13. ಶ್ವರ (ಐ).

ಧರಿಸಿಕೊಂಡಾತನು ಉಪಮಾತೀತ : ಇವರೆಲ್ಲರೂ ಬಯಲನೇ ಪೂಜಿಸಿ, ಬಯಲಾಗಿ ಹೋದರು. ನಾ ನಿತ್ಯವ ಪೂಜಿಸಿ, ಮಿಥ್ಯವ[1]ನಳಿದ[1] ಇರವಿನಲ್ಲಿ ಸುಖಿಯಾದೆನು, ಗುಹೇಶ್ವರ.

632

ಹೊಱಗನೆ ಕೊಯ್ದು, ಹೊಱಗನೆ ಪೂಜಿಸಿ, ಹೊಱಗಾಗಿ ಹೋಯಿತ್ತು [2]ತ್ರೈ[2]ಜಗವೆಲ್ಲಾ ! [3]ಆನದನಱಿಯದಂತೆ[3] ಪೂಜಿಸ ಹೋದರೆ ಕೈ ಲಿಂಗದಲ್ಲಿ ಸಿಲುಕಿತ್ತಲ್ಲಾ ! ಮನ[4]ಘುರ[4]ದಿಂದ ನಿಮ್ಮ ನೆನೆದಹೆನೆಂದಡೆ ತನು ಸಂದಣಿಸಿತ್ತು, ಗುಹೇಶ್ವರ.

633

ಶಯನಾಸನ ಪರವಿಲ್ಲೆಂದು[5]ದು[5]. ಜ್ಞಾನಾಜ್ಞಾನಭಾವನೋಟ ತಾನಲ್ಲ. ಅಱಿವಿನ ಭಾವ ಸ್ವತಂತ್ರವಿಲ್ಲ ಕಾಣಾ ! ಅಕಾಯದಲ್ಲಿ ಅದ್ವೈತ ಚರಿತ್ರ, ಅಱಿವಿನಲನುಗ್ರಹಿಸಿ ಸಕಾಯದಲ್ಲಿ ಸದ್ಭೈವ ಚರಿತ್ರ. ಮಱಹು ಉದಯಿಸಿದ [6]ನಿಱುಗೆ[6]ಯ ಪವನಬ್ರಹ್ಮರಂಧ್ರರಹಿತ. ಶಯನಾಸನವೆಂದಲ್ಲಿ ಗುಹೇಶ್ವರನೆನಲು ಹೇಸಿತ್ತು.

634

ನೀರಿಲ್ಲದ ಒರಳಿಂಗೆ, ನೆಳಲಿಲ್ಲದ ಒನಕೆ; ರೂಹಿಲ್ಲದ ನಾರಿಯರು ಬೀಜವಿಲ್ಲದ ಅಕ್ಕಿಯ [7]ಥ[7]ಳಿಸುತ್ತಲಿ, ಬಂಜೆಯ ಮಗನ ಜೋಗುಳವಾಡುತ್ತೈದಾರೆ. ಉರಿಯ ಚಪ್ಪರವಿಕ್ಕಿ ಗುಹೇಶ್ವರನ ಕಂದನು ಲೀಲೆಯ[8]ನಾ[8]ಡಿದನು.

635

[A]ಅಱಿದು ನೆನೆಯಲಿಲ್ಲ, ಮಱೆದು ಪೂಜಿಸಲಿಲ್ಲ[A]; ತೆಱಹಿಲ್ಲದ [B]ಘನಕ್ಕೆ[B] ಕುಱುಹು [C]ಮುನ್ನಿಲ್ಲ[C]. ತನಗೆ ಗುರುವಿಲ್ಲ, ಗುರುವಿಗೆ ತಾನಿಲ್ಲ. ಗುರುವಿಗೆ ಶಿಷ್ಯನು ಹೊಡವ[9]ಡುವ[9] ಕಾರಣ ಮುನ್ನಿಲ್ಲ. ಬಯ[10]ಲ[10] ಬಿತ್ತ[11]ಲಿ[11]ಲ್ಲ, [D]ಬೆಳೆಯ[12]ಲಿ[12]ಲ್ಲ[D]; ಒಕ್ಕ[11]ಲಿ[11]ಲ್ಲ, ತೂಱ[11]ಲಿ[11]ಲ್ಲ; ಗುಹೇಶ್ವರನೆಂಬ ಲಿಂಗಕ್ಕೆ ಕುಱುಹು ಮುನ್ನಿಲ್ಲ.

---

1. ನಱಿಯದ (ಐ) 2. ತ್ರಿ (ಬಟ) 3. ಆನಱಿಯದೆ ಲಿಂಗವ (ವ) 4. ದುರ (ಟಕ) ಘುರ (ಚವತದ) ದೃಢ (ಲ) ದೂರ (ಬ) ಘೂರ (ಬವ್ಯಾ) 5. ದುವೇದ (ಟ) 6. ನಿಱುಗೆ (ಟ) ನಿರ್ಣಯ (ಹತಲ) 7. ತೋ (ಓ) ಥ (ಸ್ವ) 8. ಲಾ (ಓಚಟತಲ) A ಅಱಿದು ಪೂಜಿಸಲಿಲ್ಲ, ಮಱೆದು ನೆನೆಯಲಿಲ್ಲ (ವ) B ಘನಲಿಂಗಕ್ಕೆ (ಐ) C ಮುನ್ನಲಿಲ್ಲ (ಟ) 9. ಡ (ಚಟಲದ) ಡದ (ತವಕ) 10. ಲು (ಟ) 11. ಲೂ ಇ (ಲಐ) D × (ವಐ)

636

ದೃಷ್ಟಕ್ಕೆ ದೃಷ್ಟ ಮುಂ[1]ದಿ[1]ಲ್ಲ ಇಲ್ಲ. [2]ನೋಡಿದಡೇನಹುದೋ? ಮಾಡಿದಡೇನಹುದೊ[2]? ಗುಹೇಶ್ವರನೆಂಬ ಅಜ್ಞಾನಿನ ಕುಜುಹು [3]ಮುಂದಿಲ್ಲ ಇಲ್ಲ[3], ಮಾಡಿದಡೇನಹು[4]ದೋ[4]?

637

ನಿಜವನಜಾದ ನಿಶ್ಚಿಂತನೇ, ಮರಣವ [5]ಗೆಲಿದ[5] ಮಹಂತನೆ, ಘನವ ಕಂಡ ಮಹಿಮನೆ, ಪರವನೊಳಕೊಂಡ ಪರಿಣಾಮಿಯೆ, ಬಯಲಲೊದಗಿದ ಭರಿತನೆ, ಗುಹೇಶ್ವರ[6]ಲಿಂಗ[6]ನಿರಾಳವನೊಳಕೊಂಡ ಸಹಜನೆ.

638

ಭವಿಯು ಕಳೆದೆವೆಂಬ ಅಪ್ರಮಾಣಿಗಳು ನೀವು ಕೇಳಿರೇ, ಭವಿಯ ಕಳೆದೆವೆಂಬ ಭವಭಾರಿಗಳು ನೀವು ಕೇಳಿರೆ: ಭವಿಗೆ ಕೊಡಲಾಗದೆಂಬ ಭಕ್ತನ ಮಾತ ಕೇಳಲಾಗದು. ನಾನು ಭವಿವಿಡಿದು ಭಕ್ತಿಯಿಂದ ಸುಖಿಯಾದೆ, ಗುಹೇಶ್ವರ.

639

ಬಯಲು ಬಯಲನೆ ಬಿತ್ತಿ, ಬಯಲು ಬಯಲನೆ ಬೆಳೆದು, ಬಯಲು ಬಯಲಾಗಿ ಬಯಲಾಯಿತ್ತಯ್ಯ. ಬಯಲ ಜೀವ[7]ನ[7], ಬಯಲ ಭಾವನೆ; ಬಯಲು ಬಯಲಾಗಿ ಬಯಲಾಯಿತ್ತಯ್ಯ. ನಿಮ್ಮ ಪೂಜಿಸಿದವರು ಮುನ್ನವೆ ಬಯಲಾದರು. ನಾ ನಿಮ್ಮ [8]ನಂಬಿ[8] ಬಯಲಾದೆ, ಗುಹೇಶ್ವರ.

640

ನಾರುಬೇರಿನ ಕುಟಿಲ[9]ಕಪಟದ[9] ಯೋಗ[10]ವಲ್ಲಿದು[10] ನಿಲ್ಲಿ ಭೋ! ಕಾಯಸಮಾಧಿ ಕರಣಸಮಾಧಿ[11]ಯೋಗ[11]ವಲ್ಲಿದು ನಿಲ್ಲಿ ಭೋ! [12]ಜೀವ ಸಮಾಧಿಯೆಂಬುದಲ್ಲ[12] ನಿಜ[13]ಸಹಜ[13] ಸಮಾಧಿ, ಗುಹೇಶ್ವರ.

641

ವಸ್ತುಕ ವರ್ಣಕ ತ್ರಿಸ್ಥಾನದ ಮೇಲೆ ನುಡಿವ ನುಡಿಗಳು ಇತ್ತಿತ್ತ

---

1. ದೆ ಇ (ಲಿಐಕಚದ) 2. ಮಾಡಿದಡೇನಹುದೋ ಮಾಡದಿದ್ದಡೇನಹುದೋ (ಕಚದತಲ) 3. ಮುಂದಿಲ್ಲಾಗಿ (ಐ) ಮುನ್ನಿಲ್ಲ (ಟ) ಮುಂದಿಲ್ಲ (ಬ) ಮುಂದೆ ಇಲ್ಲ ಇಲ್ಲ (ಲಿ) 4. ದೋ ಮಾಡದಿದ್ದಡೇನಹುದೋ (ಲಿ) 5. ನಿಲಿಸಿದ (ಟಐ) 6. ಲಿಂಗವ (ಟ) 7. ನೆ (ಕಚತದ) ನ (ಬಟಲಿಲಐ) 8. ಪೂಜಿಸಿ (ಐ) 9. ಕುಹಕದ ಕಪಟ (ಶೂಹಲ) ಕರ್ಮದ (ಪ್ರ) 10. ವಿದು (ಹ) 11. ಜೀವಸಮಾಧಿಯೋಗ (ಶೂಲ) 12. × (ಶೂ) 13. × (ಟ)

ಲಲ್ಲದೆ, ಅತ್ತಲಾರು ಬಲ್ಲರು? ಇವರೆತ್ತಲೆಂದಱಿಯರು, ಗಿಳಿವಿಂಡುಗೆಡೆವರು: ನಿಮ್ಮನೆತ್ತ ಬಲ್ಲರು, ಗುಹೇಶ್ವರ?

642

ಅಕ್ಷರದಲಭ್ಯಾಸವ ಮಾಡಿ, ಬರೆವ ತೊಡೆವ ಪರಿಯಿನ್ನೆಂತೋ? ಸ್ವರೂಪೆಂದಾವುದು, ನಿರೂಪೆಂದಾವುದೆಂದಱಿಯರಾಗಿ, ಆದಿ ನಿರಾಳ, ಮಧ್ಯ ನಿರಾಳ, [1]ಊರ್ಧ್ವ[1] ನಿರಾಳ ಗುಹೇಶ್ವರ.

643

ಕೈಯಲ್ಲಿ ಕರಸ್ಥಲ, ಮನದಲ್ಲಿ ಪರಸ್ಥಲ; ತನುವೆಲ್ಲಾ ಹುಸಿಯ ಸ್ಥಲ! ಶರಣನೆಂತೆಂಬೆ? ಮಾತಿನಂತುಟಲ್ಲ ಕ್ರಿಯಾ[2]ಗಮ[2]ಸ್ಥಲ. ಉತ್ಪತ್ತಿಸ್ಥಿತಿ ಲಯರಹಿತನಿಜಸ್ಥಲ ಗುಹೇಶ್ವರನೆಂಬ ಲಿಂಗೈಕ್ಯವೈಕ್ಯ.

644

ತೋ[3]ಱಿ[3]ದ ಭೇದವ ತೋ[3]ಱಿ[3]ದಂತೆ ಕಂಡಾತನಲ್ಲದೆ, ದೃಷ್ಟಿ[4]ವಾಳಕ ತಾನಲ್ಲ[4]. ಬೇಱೊಂದ [5]ವಿವರಿಸಿಹೆನೆಂದಡೆ[5] ಆಱ ಮೀಱಿದಲ್ಲದೆ ಅಱಿಯ ಬಾಗದು. [6]ಅಱಿವನಱಿದು[6], ಮಱಹ ಮಱೆಯದೆ, ಮನದ ಬೆಳಗಿನೊಳಗಣ ಪರಿಯನಱಿಯದೆ ವಾದಿಸಿ ಕೆಟ್ಟುಹೋದರು, ಗುಹೇಶ್ವರ, ಸಲೆಕೊಂಡ ಮಾಱಿಂಗೆ.

645

ಪರಿಣಾಮಪರಿಮಿತ ದೊರಕೊಂಡಾತಂಗೆ ಬಱುಮಾತಿನವರೊಡನೆ ಗೋಷ್ಠಿ ಬಳಿಕೇಕೋ? ಬಱಿಯ ಸಂಭ್ರಮಿಗಳೊಡತಣ[7]ದ[7]ನುಭಾವ [8]ಐವತ್ತೆರಡಕ್ಷರ[8] ತಮ್ಮಲ್ಲಿ ತಾವು ಉಲಿದಂತೆ ಉಲಿದವು. ಗುಹೇಶ್ವರನೆಂಬ ಲಿಂಗವನಱಿದಾತಂಗೆ ಬಳಿಕೇಕೋ?!

646

ಒತ್ತಿ ಹಣ್ಣ ಮಾಡಿದ[9]ಡೆ ಅದೆ[9]ತ್ತಣ ರುಚಿಯಪ್ಪುದೋ? ಕಾಮಿಸಿ ಕಲ್ಪಿಸಿ, ಭಾವಿಸಿದಡೆ ಅದೇ ಭಂಗ! ಭಾವಿಸುವ ಭಾವನೆ[10]ಗಿಂತ[10] ಸಾವುದೇ ಲೇಸು ಕಾಣಾ ಗುಹೇಶ್ವರ.

647

ನಿಮ್ಮ ನೆನೆವುತ್ತಿದ್ದಿತ್ತು [11]ನೆನೆವ[11] ಮುಖ[12]ವಾವುದೆಂ[12]ದಱಿಯದೆ,

---

1. ತುದಿ (ಹ) 2. ಸಮ (ಟಲ) 3. ಱ (ವ) 4. ವಾಳತಾನಲ್ಲ (ಬಟ) ವಾಳ ನಲ್ಲ (ವ) 5. ವಿವರಿಸದೆ (ಲ) 6. × (ವ) 7. ಅ (ಬ) 8 ಆಯಿತ್ತೆರಡಕ್ಷರ (ಟವ) 9. ರೆ (ವ) 10. ಯಿಂದ (ವಟ)ಗಿಂದ (ಚದ) ಗಿಂದವೂ (ಐ) 11. ಮತ್ತೆ ನೆನೆವ (ಲ) 12. ವೆಂ (ಬಟ)

ಪೂಜೆಯ ಪೂಜಿಸುತ್ತಿದ್ದಿತ್ತು ಪೂಜೆಯ ಮುಖ[A]ವಾವುದೆಂ[A]ದಱಿಯದೆ. ಆಡಿ ಹಾಡಿ ಬೇಡುತ್ತಿದ್ದಿತ್ತು ಬೇಡುವ ಮುಖ[A]ವಾವುದೆಂ[A]ದಱಿಯದೆ. ಕಾಯದಲಿಲ್ಲ, ಜೀವದಲಿಲ್ಲ, ಭಾವದಲಿಲ್ಲ, ಭರಿತವು ಅದು ತಾನಪ್ಪುದು, ತಾನಲ್ಲದುದೇನ ಹೇಳುವೆ ಕೌತುಕವ! ಗುಹೇಶ್ವರನೆಂಬ ಹೆಸರೊಳಗಿದ್ದುದ ಬೆಸಗೊಂಬ[1]ವರಿಲ್ಲ[1] ನಿರಾಳದ ಘನವ!

648

ನಿತ್ಯನಿರಂಜನ ತಾನೆಂದಱಿಯದೆ, ತತ್ತ್ವಮಸಿಯೆಂದು ಹೊಱಗನೆ ಬಳಸಿ, ಸತ್ತಿತ್ತಲ್ಲಾ ಜಗವೆಲ್ಲಾ ನಾಯಿ ಸಾವ! ತಮ್ಮ ತಾವಱಿಯದೆ, ಸತ್ತ-ವರ ಹೆಸರ ಪತ್ರವನೋದಿದಡೆ [2]ಅದೆತ್ತಣ[2] ಮುಕ್ತಿ, ಗುಹೇಶ್ವರ?

649

ಹುಟ್ಟಿದ ನೆಲೆಯ [3]ತೃಷ್ಣೆ[3] ಬಿಡದವರಿಗೆ ಲಿಂಗದ [4]ಅನುಭಾವವೇಕೋ[4]? ಮಾತಿನ ಮಾತಿನ ಮಹಂತರು [5]ಹಿರಿಯರು[5]. ಗುಹೇಶ್ವರನೆಂಬ ಲಿಂಗಸಾರಾಯವು ತೋಱದು ತೋಱದು ಬಹುಮುಖಿಗಳಿಗೆ.

650

ಭೂಮಿಯೊಳಗಿಲ್ಲ, ಆಕಾಶದೊಳಗಿಲ್ಲ; ಚತುರ್ದಶ ಭುವನದೊಳ[6]ಗಿಲ್ಲ[6] ಏನೆಂದಱಿಯರು, ಎಂತೆಂದಱಿಯರು, ಹೇಳಿರಯ್ಯ! ಕೃತಯುಗದದಂದಿನ ಮಾತು ಬೇಡ, ಗುಹೇಶ್ವರ [7]ಅಂದೂ ಇಲ್ಲ, ಇಂದೂ ಇಲ್ಲ[7].

651

ಅಱಿಸಲಿಲ್ಲದ [8]ಘನವ[8]ನಱಿಸುವುದದೇನೋ? ತಿಳಿವುದದೇನೋ? [9]ತಿಳುಹಿನ[9] ಮುಂದ[B]ಣ[B] ಸುಳುಹು ತಾನೇನೋ? [10]ಸರದ[10] ಸಮತೆಯ ಪರಿಣಾಮವ ನೋಡಾ! ಗುಹೇಶ್ವರನೆಂಬುದು ಅದೆ [11]ಕಂಡಾ[11]!

652

ಉಪಮೆ ಉಪಮಿಸಲಱಿಯದೆ ಉಪಮಾತೀತನೆನುತ್ತಿದ್ದಿತ್ತು. ಅಱಿವು ಅಱಿವಿನ ಮಱೆಯಲಿದ್ದುದನಱಿಯಲಱಿಯದೆ, ಅಱಿವು [12]ಪರಾಪರ[12]ವೆನುತ್ತಿದ್ದಿತ್ತು. ಧ್ಯಾನ ಧ್ಯಾನಿಸಲಱಿಯದೆ, ಧ್ಯಾನ [13]ರೂಪಾತೀತನೆಂದು[13]

---

A ವೆಂ (ಬಟ) 1. ರಿಲ್ಲದ (ಬಟ) 2. ಇನ್ನೆತ್ತಣ (ಕಚದ) ಎತ್ತಣ (ತಲ) 3. ಉದಕದ ತೃಷ್ಣೆ (ವ) 4. ಅನುಭಾವದ ಮಾತೇಕೋ (ಟತಲದಬ) 5. ಹಿರಿಯರ ಹಿರಿಯರೆ (ವ) 6. ಗಿಲ್ಲ ಹೊಱಗಿಲ್ಲ (ಬಲ) 7. ಅಂದೂ ಇಂದೂ ಅಲ್ಲ (ಬ) 8. ಮಹಾಘನವ (ಲ) 9. ತಿಳಿವಿನ (ಬಟ) B ಳ (ವ) 10. ಸರಸ (ಲ) 11. ಕಂಡಾ (ಬ) 12. ಪರಾತ್ಪರ (ವ) 13. × (ಬಟ)

ತದ್ಧ್ಯಾನಗೊಂಡಿತ್ತು. ಜ್ಞಾತೃಜ್ಞಾನಜ್ಞೇಯ[1]ಕ್ಕೆ[1] ಇನ್ನಾವ ಜ್ಞಾನವೋ? ವೇದವಿಜ್ಞಾನವೆಂದುದಾಗಿ, ತತ್ತ್ವಮಸಿ ವಾಕ್ಯಂಗಳೆಲ್ಲ[2]ವೂ[2] ಹುಸಿಯಾಗಿ ಹೋದವು. ಸಚ್ಚಿದಾನಂದವೆಂದುದಾಗಿ ದ್ವೈತಾದ್ವೈ[3]ತಿಗ[3]ಳೆಲ್ಲ ಸಂಹಾರವಾಗಿ ಹೋದರು. [4]ಬಂದೂ ಬಾರದ ನಿಂದ ನಿರಾಳ ಗುಹೇಶ್ವರ[4].

## 653

ಯುಗಜುಗ ಮಡಿವಲ್ಲಿ, ಬ್ರಹಾಂಡಗಳಳಿವಲ್ಲಿ, ಲಿಂಗವೆಂದಱಿತವ ರಾರೋ? ಶಿವಶಿವಾ! ವಾಯದಲೊದಗಿದ ಮಾಯಾವಾದಿಗಳು! ದೇವನೆಂದ ಱಿತವರಾರೋ? ಶಿವಶಿವಾ ಅಗ್ನಿ ತೃಣದೊಳಡಗಿ ಲೀಯವಾದಡೆ, ಗುಹೇಶ್ವರ, ನಿಮ್ಮ ಶರಣ ಬಲ್ಲ.

## 654

ಕಾಲಚಕ್ರದ [5]ವಚನ[5]: ಏಕಂ ಏಕವಾದ ವಸ್ತುವ [6]ಲೋಕಾ[6]ಲೋಕಂಗಳಱಿಯವು; ಸ್ಥೂಲ–ಸೂಕ್ಷ್ಮವೆನು[7]ತಿಪ್ಪ[7]ರೆಲ್ಲರೂ. ಆತನೀತ ಬೇಱೆ[3] ಮತ್ತೊಬ್ಬಾತನೆಂಬ ಭ್ರಮೆಯಲ್ಲಿ ಭೂತಪ್ರಾಣಿಗ[8]ಳವರೆ[8]ತ್ತ ಬಲ್ಲರು ಆತನ ಘನವ? ಚಿಟುಕು ಮುನ್ನೂಱಱುವತ್ತು ಕೂಡಿದಡೆ [9]ಒಂದು[9] ವಿಘಳಿಗೆ. [10]ಆ[10] ವಿಘಳಿಗೆ ಅಱುವತ್ತು ಕೂಡಿದಡೆ ಒಂದು ಘಳಿಗೆ, [10]ಆ[10] ಘಳಿಗೆ ಅಱುವತ್ತು ಕೂಡಿದಡೆ ಒಂದು ದಿನ. ದಿನ ಮುವ್ವತ್ತು ಕೂಡಿದಡೆ ಒಂದು ಮಾಸ. ಮಾಸ ಹನ್ನೆರಡು ಕೂಡಿದಡೆ ಒಂದು ವರುಷ. ವರುಷ ಅಱುವತ್ತು ಕೂಡಿದಡೆ ಒಂದು ಸಂವತ್ಸರ. [11]ಇಂತೀ[11] ಕಾಲಚಕ್ರಂಗಳು [11]ಈ ಪರಿಯಲ್ಲಿ[11]ತಿರುಗಿ ಬರುತ್ತಿಹವು ಕಾಣಿರೇ! ನಾಲ್ಕು ಯುಗಂಗಳು ಬೇಱೆ[3]ಬೇಱೆ[3] ಕಟ್ಟಿದ ಕಟ್ಟಳೆಯೊಳು–ಕೃತಯುಗ ಹದಿನೇಳು ಲಕ್ಷ[12]ವು ಇಪ್ಪತ್ತೆಂಟು[12] ಸಾವಿರ ವರ್ಷ ವರ್ತಿಸಿ ನಿಂದಿತ್ತು. [13]ತ್ರೇತಾಯುಗ ಹನ್ನೆರಡು ಲಕ್ಷವು ತೊಂಬತ್ತಾಱು ಸಾವಿರ ವರ್ಷ ವರ್ತಿಸಿ ನಿಂದಿತ್ತು. ದ್ವಾಪರಯುಗ ಎಂಟುಲಕ್ಷವು [A]ಅಱುವತ್ತು ನಾಲ್ಕು[A] ಸಾವಿರ ವರ್ಷ ವರ್ತಿಸಿ ನಿಂದಿತ್ತು. ಕಲಿಯುಗ ನಾಲ್ಕು ಲಕ್ಷವು ಮುವ್ವತ್ತೆರಡು ಸಾವಿರ ವರ್ಷ ವರ್ತಿಸಿ ನಿಂದಿತ್ತು. ಇಂತೀ[13] ನಾಲ್ಕು ಯುಗಂಗಳು [14]ಕೂಡಿ ಒಂದಾಗಿ[14]

---

1. ವಳಿದುದಕ್ಕೆ (ವ) 2. ×(ವಐ) 3. ತಂಗ (ಚಟವತಲ) ತ ಬ್ರಹ್ಮವಾದಿಗ (ಶೂಐ) 4. ಬಂದೂಬಾರದು; ಹೊಂದಿಯೂ ಹೊಂದದು; ನಿಂದ ನಿರಾಳ ಗುಹೇಶ್ವರ (ಶೂ)5. ವಚನಂಗಳು (ಕ) 6. ×(ಚ) 7. ತಿಪ್ಪವ (ಕಟಲ) 8. ಳೆ(ಟ) 9. × (ಟಲ) 10. × (ಟ) 11. × (ಲಟ) ಅ (ಕದ) 12. ಮೂವತ್ತೆರಡು (ಚ) 13. × (ಕಟ) A ಅಱುವತ್ತು (ತಟ) 14. ಒಂದಾಗಿ ಕೂಡಿ (ಟ)

ಮೇಳೈಸಿದಡೆ ನಾಲ್ವತ್ತುಮೂಱು ಲಕ್ಷವು ಇಪ್ಪತ್ತು ಸಾವಿರ ವರ್ಷ ಕಟ್ಟಳೆಯಾಯಿತ್ತು. ಈ ನಾಲ್ಕು ಯುಗಂಗಳು ಇಪ್ಪತ್ತೊಂದು ಬಾರಿ ತಿರುಗಿದಡೆ ಸುರಪತಿಗೆ ಪರಮಾಯು; ಬ್ರಹಂಗೆ ಜಾವ. [1]ಅಷ್ಟಾಶಿತಿ[1] ಸಹಸ್ರ ಋಷಿ[2]ಯರು[2] ಸಾವಿರ ಬಾರಿ ತಿರುಗಿದಡೆ ಬ್ರಹ್ಮಂಗೆ ಆಯುಷ್ಯ ನೂಱಪ್ಪುದು. ವಿಷ್ಣುವಿಂಗೆ ಜಾವವಪ್ಪುದು. [3]ಆ[3] ವಿಷ್ಣುವಿನ ಒಂದು ದಿನದೊಳಗೆ [4]ನಾಲ್ಕು[4] ಬಾರಿ [5]ಹುಟ್ಟಿ[5] ನಾಲ್ಕು ಬಾರಿ ಹೊಂದುವ [6]ಬ್ರಹ್ಮನು[6]; [7]ಆದಿ[7] ವಿಷ್ಣುವಿನ ಒಂದು ದಿನವಪ್ಪುದು. ಸಮಸ್ತ ಈರೇಳು ಭುವನಂಗಳೆಲ್ಲಾ ಭೂತಸಂಹಾರ; ಅಂಥಾ ಭೂತಸಂಹಾರಂಗಳು ಹದಿನೆಂಟು ಲಕ್ಷವು ಇಪ್ಪತ್ತೆಂಟು ಸಹಸ್ರ [8]ವರುಷ[8] ವಪ್ಪುದು—ಪೃಥ್ವಿಯೆಲ್ಲಾ ಜಲಪ್ರಳಯ; ಅಂಥಾ ಜಲಪ್ರಳಯ ವೆಂಟು ಬಾರಿ ತಿರಿಗಿದಡೆ ವಿಷ್ಣುವಿಂಗೆ ಮರಣ, ರುದ್ರಂಗೆ ನಿಮಿಷ. ರುದ್ರನ ಒಂದು ದಿನವಪ್ಪುದು. ಅತಳವಿತಳಸುತಳಮಹೀತಳರಸಾತಳತಳಾತಳಪಾತಾಳ ಇಂ[9]ತು[9] ಕೆಳಗೇಳು ಭುವನಂಗಳು; ಮೇಲೆ—[10]ಸತ್ಯ[10]ಲೋಕ, ಜನರ್ಲೋಕ [11]ತಪೋ[11]ಲೋಕ, ಮಹರ್ಲೋಕ, ಸುವರ್ಲೋಕ, ಭುವರ್ಲೋಕ, ಭೂಲೋಕ ಮೊದಲಾಗಿ, ಇಂತೀ ಲೋಕಾಲೋಕಂಗಳೆಲ್ಲ ಮುಳುಗಿ ಮಹಾಪ್ರಳಯವಾದಲ್ಲಿ, ರುದ್ರಲೋಕವೊಂ[12]ದುಳಿಯೆ[12], ಆ ರುದ್ರಂಗೆ ಒಂದು ದಿನ. ಅಂಥಾ ದಿನ ಮುನ್ನೂಱಱುವತ್ತು [13]ಕೂಡಿದಡೆ[13] ಒಂದು ವರ್ಷ. ಅಂಥಾ ವರುಷ ಶತಕೋಟಿ [14]ಕೂಡಿದಡೆ[14] ರುದ್ರಂಗೆ ಪರಮಾಯು. ಅಂಥಾ ರುದ್ರರು ಅನೇಕರು ಹೋದರಲ್ಲಾ, ಮತ್ತಂ ಪಶುಪತಿ–ಶಂಕರ–ಶಶಿಧರ–ಸದಾಶಿವ–ಗೌರೀಪತಿ–ಮಹಾದೇವ–ಈಶ್ವರರೆಂಬವರು ಆ ದಿನದಲ್ಲಿ ಇವರು ಪ್ರಥಮಗಣೇಶ್ವರರು; ತಪೋರಾಜ್ಯವನುಂಬರು, ತಪಕ್ಕೆ ಬಿಜಯಂಗೈವರು ಆ ರುದ್ರರು. ಲೋಕಾಲೋಕಂಗಳು ಕೂಡಿ ಭೂತ ವರ್ತಿಸುತ್ತಿದ್ದಿ[15]ತ್ತೊಂ[15]ದು ಕೆಲವು ಕಾಲ, ಅದು ತೊಡೆದು ಹೋಯಿತ್ತು. ಬಳಿಕ ಶೂನ್ಯ ವರ್ತಿಸುತ್ತಿದ್ದಿ[15]ತ್ತೊಂ[15]ದು ಕೆಲವು ಕಾಲ. ಅದು ತೊಡೆದು ಹೋಯಿತ್ತು. ಬಳಿಕ ಕಾಳಾಂ[16]ಧರ[16] ವರ್ತಿಸು[17]ತ್ತಿದ್ದಿತ್ತೊಂದು[17] ಕೆಲವು ಕಾಲ. ಅದು ತೊಡೆದು ಹೋಯಿತ್ತು. ಬಳಿಕ ಮಹಾಪ್ರಕಾಶದ ಬೆಳಗು. [18]ಇಂತಹ[18] ಕಾಲಂಗಳು ಈ ಪರಿಯಲ್ಲಿ ತಿರುಗಿ

---

1. ಅಂಥಾಶಿತಿ (ಚ) ಅಂಥಾ ಅಷ್ಟಾಸಿತಿ (ಲ) 2. ಗಳು (ಟ) 3. × (ಟ) 4. ಬ್ರಹ್ಮ ನಾಲ್ಕು (ಲ) 5. ಹುಟ್ಟುವ (ಟ) 6. × (ಲ) 7. × (ಲ) 8. × (ಲ) 9. ತೀ (ಟ) 10. ಸತ್ಯರ್ (ಕದಲ) 11. ತಪರ್ (ಕದಲ) 12. ದೆ ಉಳಿಯೆ (ಟ) 13. ಕೂಡಿ (ಟ) ಕೂಡಲು (ಲ) 14. ಕೂಡೆ (ಟಲ) 15. ತ್ತು ಒ (ಟ) 16. ಧಕಾರ (ಟ) 17. ತಿದ್ದಿತ್ತು (ಟ) 18. ಇಂಥಾ (ಟಲ)

ಬರುತ್ತಿಹವು ಕಾಣಿರೇ! ಅಂತಹ ಕಾಲಂಗಳೂ ಅಱಿಯವು; ಅಂತಹ ದಿನಂಗಳೂ ಅಱಿಯವು. ಅಂತಹ ದೇವತೆಗಳೂ ಅಱಿಯರು. ಅಪ್ರಮಾಣ, ಅಗಮ್ಯ ಅಗೋಚರ, ಉಪಮಿಸಬಾರದು; ಅಂತಿಂತೆನಲಿಲ್ಲ ಗುಹೇಶ್ವರಲಿಂಗ ನಿರಂಜನ [1]ನಿರಾಳ[1].

## 655

ಹಿಂದೆ [2]ಎಷ್ಟು[2] ಪ್ರಳಯ ಹೋಯಿತ್ತೆಂದಱಿಯೆ. ಮುಂದೆ [2]ಎಷ್ಟು[2] ಪ್ರಳಯ[3]ವಾಗುವು[3]ದೆಂದಱಿಯೆ, ತನ್ನ ಸ್ಥಿತಿಯ ತಾನಱಿದಡೆ ಅದೇ ಪ್ರಳಯ ವಲ್ಲಾ! ತನ್ನ ವಚನ ತನಗೆ ಹಗೆಯಾದಡೆ ಅದೇ ಪ್ರಳಯವಲ್ಲಾ! ಇಂಥ ಪ್ರಳಯ ನಿನ್ನ[4]ಲ್ಲುಂ[4]ಟೆ ಗುಹೇಶ್ವರ?

## 656

ಘನವ ಮನ ಕಂಡು ಅದನೊಂದು ಮಾತಿಂಗೆ ತಂದು [5]ನುಡಿದು ನೋಡಿ ದಡೆ[5] [6]ಅದಕ್ಕದೆ[6]ಕಿಱಿದು ನೋಡಾ! ಅದೇನೂ [7]ಇಲ್ಲದ[7] ನಿಸ್ಸಂಗದ ಸುಖವು, ಗುಹೇಶ್ವರ.

## 657

ಚರಾಚರವೆಂಬುದೊಂದು ಕಿಂಚಿತ್. ಚತುರ್ಯುಗವೆಂಬುದೊಂದು ಕಿಂಚಿತ್, ಅಪ್ಪುದೆಂಬುದೊಂದು ಕಿಂಚಿತ್, ಆಗದೆಂಬುದೊಂದು ಕಿಂಚಿತ್, [8]ತಾನು[8] ಶುದ್ಧವಾದ ಶರಣಂಗೆ ಗುಹೇಶ್ವರನೆಂಬುದೊಂದು ಕಿಂಚಿತ್.

## 658

ತಾ ಸುಖಿಯಾದಡೆ ನಡೆಯಲು ಬೇಡ, ತಾ ಸುಖಿಯಾದಡೆ ನುಡಿಯಲು ಬೇಡ, ತಾನು ಸುಖಿಯಾದಡೆ ಪೂಜಿಸಲು ಬೇಡ, [9]ಉಣ[9] ಬೇಡ. ಗುಹೇಶ್ವರ.

## 659

ನಾದ ಮುನ್ನವೋ, ಬಿಂದು ಮುನ್ನವೋ? ಜೀವ ಮುನ್ನವೋ, ಕಾಯ ಮುನ್ನವೋ? ಜೀವಕಾಯದ ಕುಳಸ್ಥಳಂಗಳ ಬಲ್ಲವರು ನೀವು ಹೇಳಿರೇ? ಗುಹೇಶ್ವರ, ನೀನು ಮುನ್ನವೋ, ನಾನು ಮುನ್ನವೋ, ಬಲ್ಲವರು ನೀವು ಹೇಳಿರೇ?

---

1. ನಿರಾಮಯನಿರಾಳ (ಟ) ನಿರಾಳ ನಿರಾಮಯ (ಲ) 2. ಏಸು (ಲ) 3. ವಾದು (ಚಕದ) 4. ಉಂ (ಕದ) 5. ನುಡಿದರೆ (ತಲ) 6. ಅದೇ (ಟಐ) 7. ಅಲ್ಲದ (ಟ) 8. ಅ (ಟ) ತಾ (ಕ) 9. ತಾ ಸುಖಿಯಾದಡೆ ಉಣ (ಲ).

660

ಅಱು[1]ವ[1]ಱುತು ಬೆಱಗು ಹತ್ತಿತ್ತೆಂಬ ಜ್ಞಾನವಿದೇನೋ? ನಾಹಂ ಎಂಬಲ್ಲಿ ತಾನಾರು? ಕೋಹಂ ಎಂಬಲ್ಲಿ ಮುನ್ನಾರು? ಪರಬ್ರಹ್ಮಸೋಹಂ ಎಂಬಲ್ಲಿ [2]ಮುನ್ನ ತಾನೇನಾಗಿದ್ದನೋ[2]? [3]ಚಿದೋಹಂ[3] ಎಂಬ ಹಮ್ಮಿನ [4]ಮಾಲೆ[4] ಇದೇ[5]ನು ಹೇಳಾ[5]! 'ನಿಶ್ಯಬ್ದಂ ಬ್ರಹ್ಮ ಉಚ್ಯತೇ' ಎಂಬ ಶಬ್ದ-ವಿಡಿದು ಬಳಲುವ ಕಾರಣವಿದೇನು ಹೇಳಾ ಗುಹೇಶ್ವರ.

661

ವಸುಧೆಯಿಲ್ಲದ ಬೆಳಸು [6]ರಾಜಾನ್ನದ[6] ಹೆಸರಿಲ್ಲದ ಓಗರ, ವೃಷಭ ಮುಟ್ಟದ ಹಯ[7]ನು[7]ಬೆಣ್ಣೆಯ ಹೊಸೆವರಿಲ್ಲದೆ ಕಂಡುಂಡೆ. ಶಿಶು ಕಂಡ ಕನಸಿನಂತೆ ಗುಹೇಶ್ವರನೆಂಬುದು ಹೆಸರಿಲ್ಲದ ಬಯಲು.

662

ಧರೆಯಗಲದ ಹುಲ್ಲೆ ಹರಿದು ಮೇಯಿತ್ತ ಕಂಡೆ. ಬಲೆಯ ಬೀಸುವ ಗಂಡರಾರೂ ಇಲ್ಲ, ಹರಿದು ಹಿಡಿವಹೆನೆಂದರೆ ತಲೆ ಕಾಣ ಬರು[8]ತ್ತದೆ[8]. ಶಿರವ ಹಿಡಿದಹೆನೆಂಬ[9]ವರಿನ್ನಾರೂ[9] ಇಲ್ಲ. ಹರಿದಾಡುವ ಹುಲ್ಲೆಯ ಕಂಡು, ಹಲವು ಬೆಳ್ಳಾರವ ಬಿಟ್ಟು, ಬೇಂಟೆಕಾಱ ಬಲೆಯ ಬೀಸಿದಡೆ ಹುಲ್ಲೆಯಂಜಿ ಹೋಯಿತ್ತು. ಮರುಳುದಲೆಯಲ್ಲಿ ಹುಲ್ಲೆಯನೆಸೆಯಬೇಕೆಂದು ಸರಳ ಬಿಟ್ಟು ಬಾಣವನೊಂದು ಕೈಯಲ್ಲಿ ಹಿಡಿದು, ಹಳ್ಳಕೊಳ್ಳವ ದಾಂಟಿ, ಘಟ್ಟ ಬೆಟ್ಟವ ಕಳಿದು, ಅತ್ತ ಬಯಲ ಮರನ ತಾ ಮಱೆಗೊಂಡಿತ್ತು. ಹತ್ತೆ ಸಾರಿದ ಮೃಗವ ತಾನೆಚ್ಚಡೆ ನಾಱು ಹಱಿದು, ಬಿಲ್ಲು ಮುಱಿದು, ಹುಲ್ಲೆ ಸತ್ತಿತ್ತು. ಅದ ಕಿಚ್ಚಿಲ್ಲದ ನಾಡಿಗೊಯ್ದು ಸುಟ್ಟು ಬಾಣಸವ [10]ಮಾಡಲು[10], ಸತ್ತ ಹುಲ್ಲೆ ಕರಗಿ [11]ಸಬ[11] ಉಳಿಯಿತ್ತು, ನಿಶ್ಚಿಂತವಾಯಿತ್ತು. ಗುಹೇಶ್ವರ, ನಿಮ್ಮ ಶರಣ ಕಟ್ಟದಿರ ಬಾಣಸದ ಮನೆಗೆ ಬಂದನು.

663

ಕಾಯದೊಳಗೆ ಕರುಳುಳ್ಳನ್ನಕ್ಕರ ಹಸಿವು ಮಾಣದು. ಕಾಯದೊಳ-ಗಣ ಕರುಳ ತೆಗೆದು, ಕಂಗಳ ಮೇಲೆ ಇರಿಸಿ [12]ಇದನಡಗಿ ಮಡಗಿ[12] ಗಡಣಿಸುತ್ತಿದ್ದೆ; ಏನೆಂಬೆ ಗುಹೇಶ್ವರ?

---

1. ವನ (ಟ) 2. ಮುಂ ತಾನಾಗಿರ್ದ (ವ) 3. ಚಿದಹಂ (ಲಿಶೂ) 4. ಭವ ಮಾಲೆ (ಲ) 5. ನೋ (ಶೂಐ) 6. ರಾಜಾನ್ನ (ಕಚಟತದಲ) 7. ನುವ (ಟಬ) 8. ತಲವೆ (ಟತಲಬ) 9. ವರಾರೂ (ಟ) ಗರುವರಿನ್ನಾರೂ (ದತಲ) 10. ಮಾಡಿ (ಟ) 11. ಸಲು (ಹ) ಶಬ್ದ (ಟ) 12. ಇದನಡಿಗೆಯ ಮಾಡಿ (ತಲ)

664

ಆಱು ಬಣ್ಣದ ವ್ಯೃಗವು ತೋಱೆಯಡಗಿತ್ತು. [1]ಬಯಲು[1] ಮೂಱು ಲೋಕದೊಳಗೆ ಸಾರಿ, ಹಜ್ಜೆಯ ನೋಡಿ, ತೊಱೆಯ ಬೆಂಬಳಿವಿಡಿದು ತೋಹಿ-ನಲ್ಲಿಗೆ ಬಂದಿತ್ತು; [2]ಮೃಗವು ಸೋಹಂ ಸೋಹಂ ಎನ್ನುತ್ತಿದ್ದಿತ್ತು[2], ಇಹ ಪರವ ಮೀಱಿ ನಿಂದಿತ್ತು. ತೋಱಲಿಲ್ಲದ ಬಿಲ್ಲು, ಬೇಱೆನಿಸಿದ ಬಾಣ; ಅಱಿವಿನ ಕೈಯಲ್ಲಿ [3]ಕುಱುಹ[3] ಬಾಣಸವ ಮಾಡಿ, [4]ತೆಱಹಿಲ್ಲದ ಪಾಕ[=ಸಾಕ? =ಶಾಖ]ದಲ್ಲಿ ಅಡಿಗೆಯ ಮಾಡಿದ ಬೋನವ[4] ಅರ್ಪಿತ ಮಾಡಿದ ಪ್ರಸಾದದಿಂದ ಸುಖಿಯಾದೆನು, ಗುಹೇಶ್ವರ.

665

ನಿರಾಳವೆಂಬ ಶಿಶುವಿಂಗೆ ಪೃಥ್ವಿಯೆಂಬ ತೊಟ್ಟಲು, ನಿಜೈಕ್ಯವೆಂಬ ತಾಯಿ ಬಂದು ಮೊಲೆಯ ಕೊಟ್ಟು ಬೆಣ್ಣೆಯನಿಕ್ಕಿ, ವಾಯು ಬಂದು ತೊಟ್ಟಲ ತೂಗಿ, ಜೋಗುಳವಾಡಿದಡೆ, ಆಕಾಶ ಬಂದು ಶಿಶುವನೆತ್ತಿಕೊಂಡು [5]ಬೆಳೆಯಿ-ತ್ತಲ್ಲಾ[5]! ನಿರಾಳವೆಂಬ ಹಸಿವು ತೃಷೆಯ ಶಿಶುವಿಂಗೆ ಬೇಕೆಂದು ಮುಗ್ಧೆಯ ಬೆಸಗೊಳಲಱಿಯರು ಮೂಱುಲೋಕ, ಗುಹೇಶ್ವರ.

666

ಉಲಿವ ಮರದ ಪಕ್ಷಿಯಂತೆ ದೆಸೆದೆಸೆಯನಾಲಿಸುತ್ತಿದ್ದೆ. ಅಱಿವರಿಲ್ಲ, ಅಱಿವರಿಲ್ಲ, ಅಱಿದು ಮಱೆಯಿತ್ತಯ್ಯ! ಮಡುವಿನೊಳಗೆ ಬಿದ್ದ ಆಲಿಕಲ್ಲಿನಂತೆ [6]ತಾನಿದ್ದನು[6] ಗುಹೇಶ್ವರಯ್ಯನು.

667

ಮೂಱಱಲ್ಲಿ ಮುಟ್ಟಲಿಲ್ಲ, ಆಱಱಲ್ಲಿ ತೋಱಲಿಲ್ಲ, ಎಂಟಱಲ್ಲಿ ಕಂಡುದಿಲ್ಲ, ಒಂದಱಲ್ಲಿ ನಿಂದುದಿಲ್ಲ, [7]ಏನೆಂದೆಂಬೆ[7]ನೆಂತೆಂದೆಂಬೆ! ಕಾಯದಲ್ಲಿ ಅಳಿ-ದುದಿಲ್ಲ, ಜೀವದಲ್ಲಿ ಉಳಿದುದಿಲ್ಲ; ಗುಹೇಶ್ವರನೆಂಬ ಲಿಂಗವು ಶಬ್ದಕ್ಕೆ ಬಂದುದಿಲ್ಲ.

668

ವಾಯು ನಿದ್ರೆಗೆಯ್ದಡೆ ಆಕಾಶ ಜೋಗುಳವಾಡಿತ್ತು. ಬಯಲು ಬಳ-

---

1. ಬಯಲು (ಚತದಬ) 2. ಸೋಹಸೋಹಮೆನುತಿದ್ದ ಮೃತವು (ತಲ) 3. ಕುಱುಹು (ಐಟ) 4. ತೆಱಹಿಲ್ಲದ ಪ್ರಸಾದವೆ ನೀನಾಗಿ ಅಗ್ನಿಯಿಲ್ಲದ ಪಾ [=ಸಾ ? =ಶಾ] ಕದಲ್ಲಿ ಅಡಿಗೆಯ ಮಾಡಿದ ಬೋನವ (ಐ) [ವ್ಯಾಖ್ಯಾನ: ಮಹಾಜ್ಞಾನಾಗ್ನಿಯಿಂದ ಸಮರಸಪಾಕವ ಮಾಡಿದ] 5. ಬೆಳಿಸಿತ್ತಲ್ಲಾ (ಲಟ) 6. ತನ್ನ ತಾನಿದ್ದನು (ದ) ತನ್ನ ತಾನಾಗಿದ್ದನು (ಕ) 7. ಇದು ಏನೆಂದೆಂಬೆ (ಐ)

ಲಿದೆನೆಂದಡೆ ನಿರಾಳ [1]ಮೊಲೆಗೊಟ್ಟಿತ್ತು[1]. ಆಕಾಶವಡಗಿತ್ತು, ಜೋಗುಳ ನಿಂದಿತ್ತು, ಗುಹೇಶ್ವರನೈದಾನೆ ಇಲ್ಲ[2]ದಂತೆ[2].

## 669

ಉಪಾಧಿಕ ಮನವು, ಉಪಾಧಿಕರಹಿತ ಮನವು, ನಿಂದಲ್ಲಿಯೆ ನಿವಾತ-ವಾಯಿತ್ತು. ಆನಂದಭಾವವು ಬಿಂದು [3]ತಾನುಳಿದು ನಿಂದಲ್ಲಿಯೆ ನಿವಾತ ವಾಯಿತ್ತು. [A]ಲಿಂಗ ಉದಯ[A] ಪ್ರಜ್ವಲಿಸುತ್ತಿದೆ ಗುಹೇಶ್ವರನೆಂಬ ಲಿಂಗ ತಾನೆಯಾಗಿ.[3]

## 670

ಶಿಶು ತಾಯ [4]ಮೊಲೆವಾಲ[4]ನೊಸೆದುಂಡು ತೃಪ್ತನಾಗಿ ಹೆಸರ ಬೆಸ-ಗೊಂಬಡದು ಉಪಮೆಗೆ ಸಾಧ್ಯವಲ್ಲಯ್ಯ. ಕಣ್ಣಾಲಿ ಕಪ್ಪ ನುಂಗಿ, [B]ಸಣ್ಣ ಬಣ್ಣಗಳು[5]ಡಿ[=ಡು]ಗೆ[5B], ಬಣ್ಣದೊಳಗಣ ಭ್ರಮೆಯಿನ್ನಾರಿಗಳವಡದು. ಬಣ್ಣ ಸಮುಚ್ಚಯವಾಗಿ, ಬಣ್ಣ ಬಗೆಯನೆ ನುಂಗಿ, ಗುಹೇಶ್ವರನೆಂಬ ನಿಲವ [6]ನಿಜದ ನಿಷ್ಪತಿ[6] ನುಂಗಿತ್ತು.

## 671

ಅಂಗೈಯೊಳಗಣ ನಾರಿವಾ[7]ಳ[7]ದ ಸಸಿ ಅಂಬರದೆರಳೆಯ ನುಂಗಿತ್ತಲ್ಲಾ ! ಕಂಭದೊಳ[8]ಗಣ[8] [9]ಮಾಣಿಕದ ಬಿಂದು[9] ನವಕೋಟಿಬ್ರಹ್ಮರ ನುಂಗಿತ್ತಲ್ಲಾ ! ಅಂಡಜವೆಂಬ [10]ತತ್ತಿ ಹಲವು ಪಕ್ಷಿಯ ನುಂಗಿ[10] ನಿರ್ವಯಲಾಯಿತ್ತು, ಗುಹೇಶ್ವರ.

## 672

[11]ಮನದ ಕೊನೆಯ ಮೊನೆಯ ಮೇಲೆ[11] ನೆನೆದ ನೆನಹು ಜನನ ಮರ-ಣವ [12]ನಿಲಿಸಿತ್ತು[12]. ಜ್ಞಾನಜ್ಯೋತಿಯ ಉದಯ ಭಾನುಕೋಟಿಯ [13]ಮೀಱಿ[13], ಸ್ವಾನುಭಾವದ ಉದಯಜ್ಞಾನ ಶೂನ್ಯದಲಡಗಿದ [14]ಘನವ ನೇನೆಂಬೆ[14], ಗುಹೇಶ್ವರ.

---

1. ಮೊಲೆಯನೂಡಿತ್ತಲ್ಲಾ (ಐ) 2. ದಂತೆ (ವ) 3. ತಾನಳಿದು ನಿಂದಲ್ಲಿ ನಿವಾಸವಾಯಿತ್ತು ಲಿಂಗಬೆಳಗು ಪ್ರಜ್ವಲಿಸುವುದ ಕಂಡೆನು ಗೊಹೇಶ್ವರ (ಶೂ) A ಲಿಂಗ ಉದಯದಲ್ಲಿ (ಲ) 4. ಮೊಲೆಯ (ಬಟ) B [ವ್ಯಾಖ್ಯಾನ : ಮಾಯಾಭ್ರಮೆಯೆಲ್ಲವು ಲೋಪವಾಯಿತ್ತು] 5. ಡಿಗೆಯ (ತಲಬಟ) 6. ನಿಜನಿಷ್ಪತಿ (ಟ) ನಿಜದ ನಿಃಪತ್ತಿ (ಬ) 7. ಣ (ಕಟಲಿ) 8. ಗೊಂದು (ಲಿ) 9. ಮಾಣಿಕವು (ಟ) 10. ಪಕ್ಷಿ ಹಲವು ತತ್ತಿಯ ನುಂಗಿ (ಟಲಿದ) 11. ಮನದ ಕೊನೆಯಿಂದ (ಐ) ಶ್ರೀಮನ್ಮನದ ಕೊನೆಯಿಂದ (ಏ) 12. ನಿಲಿಸಿ (ಟಲಿ) 13. ಮೀಱಿತ್ತು (ಲಿ) ನೆ ಮೀಱಿ (ಏ) 14. ಮಹಾ ಘನವನೇನೆಂಬೆ (ಲ) ಭೇದವನೇನೆಂಬೆ (ಐ) ಭೇದವನು ಏನೆಂಬೆನೋ ನೋಡಾ (ಫ)

673

ಭಾವ[1]ಕ್ಕಿಂ[1]ಬಿಲ್ಲ, ಶಬ್ದ ಮೀಸಲು ನೋಡಾ! ಸುಡಿಗೆ ಎಡೆಯಿಲ್ಲ, ಎಡೆಗೆ ಕಡೆಯಿಲ್ಲ, ಗುಹೇಶ್ವರನೆಂಬ ಶಬ್ದ ವೇದಿಸಲೊ[2]ಡನೆ.[2]

674

ನೆನಹ ನೆನೆವ ಮನದಲ್ಲಿಲ್ಲ, [3]ತನುವಿನಲ್ಲಿ ಆಶೆಯಿಲ್ಲ[3]. ನೆನೆವ ಮನವ-ನತಿಗಳೆದ ಘನಕ್ಕೆ ಘನವ[4]ನೆಂತೆಂಬೆ[4]? ತನ್ನಲ್ಲಿ ತಾನಾಯಿತ್ತು ಭಿನ್ನವಿಲ್ಲದೆ ನಿಂದ [5]ನಿಜವು[5]. [6]ಅನಾಯಾಸದ ಮನವ [6]ಕಂಡು ಆನು ಬೆಱಗಾದೆನಯ್ಯ. ಎಂತಿದ್ದುದು ಅಂತೆ ಅದೆ ಚಿಂತೆಯಿಲ್ಲದನುಭಾವ, ಗುಹೇಶ್ವರ.

675

ಬೆಳಗು ಕತ್ತಲೆಯ ನುಂಗಿ, [7]ಒಳಗೆ[7] ತಾನೊಬ್ಬನೆಯಾ[8]ಗಿ[8], ಕಾಬ ಕತ್ತಲೆಯ ಕ[9]ಳೆ[9]ದುಳಿದು ನಿಮಗಾನು ಗುಱಿಯಾದೆ ಗುಹೇಶ್ವರ.

676

ಕೆಟ್ಟುದನಱಸ ಹೋಗಿ [10]ತಾನೆ[10] ಕೆಟ್ಟಿತ್ತು. ಹೇಳಲೆಂತೂ ಬಾರದು. ಕೇಳಲೆಂತೂ ಬಾರದು. [11]ಎಂತಿದ್ದುದಂತೆ[11] ಸಹಜ. ಸ್ವಾನುಭಾವಸಮ್ಯ ಜ್ಞಾನವ ಅಜ್ಞಾನಿಬಲ್ಲನೆ, ಗುಹೇ[12]ಶ್ವರ?[12]

677

ಜಗದಗಲದ ಗಗನದ ಆನೆ ಕನಸಿನಲ್ಲಿ ಬಂದು ಮೆಟ್ಟಿತ್ತ ಕಂಡೆ. ಅದೇ-ನೆಂಬೆ ಹೇಳಾ! ಮಹಾಘನವನದೆಂತೆಂಬೆ ಹೇಳಾ! ಗುಹೇಶ್ವರನೆಂಬ ಲಿಂಗವ-ನಱಿದು ಮಱೆದಡೆ ಲೋಯಿಸರದ ಮೇಲೆ ಭಂಡಿ ಹರಿದಂತೆ.

678

ಕಡಲ ಮೇಲಣ [13]ಕಲ್ಲು[13] ಸಿಡಿಲು ಹೊಯ್ದ ಭಾವಿ ತಡ( = ಡೆ ?)ದ ರಕ್ಕಸಿಯು ಮಗಳಡವಿಯಲ್ಲಿ ಮುಡಿದಳು. ತೊಡೆಯಬಾರದ ಲಿಪಿಯ ಬರೆಯಬಾರದು ನೋಡಾ. ನಡುನೀರ ಜ್ಯೋತಿಯ [A]ವಾಯುವ[A] ಕೊನೆಯಲ್ಲಿ ನೋಡಾ! [B]ಮೊದಲಿಲ್ಲದ,[B] ಕಡೆಯಿಲ್ಲದ, ನಡು [14]ಏನೂ ಇಲ್ಲದ[14] ಊರೊಳಗೆ [15]ಹಿಡಿದಡೆ[15] ನುಂಗಿತ್ತು ನೋಡಾ ಹೆಮ್ಮಾರಿ, ಗುಹೇಶ್ವರ.

---

1. ಕ್ಕೆ ಇಂ (ಟಲಿವ) 2. ಡನೆ (ಶೂ) 3. ತನುವಿನಾಶೆಮುನ್ನಲಿಲ್ಲ (ತಲ) 4. ನೇನೆಂಬೆ (ಟ) 5. ನಿಜವನೇನೆಂಬೆ (ತಲ) 6. ಅನಾಯುಸದನುವ (ಲ) ಅನಾಯುಸದ ಮನವ (ದ) 7. × (ಟ) 8. ದೆ (ಲಿ) 9. ಳಿ (ಚಕಬ) 10. ತಾ (ವ) 11. ಎಂತಿದ್ದಂತೆ (ಟ) ಎಂತಿರ್ದುದಂತೆ (ವದಬ) 12. ಶ್ವರ (ಲಿ) 13. ಕಲ್ಲ (ವ) A ವಾಯುವಿನ (ಕ) B ಮೊದಲಿಲ್ಲದ ನಿಜ (ಕಚಟದಲ) 14. ವಿಲ್ಲದ (ವ) ವಿಲ್ಲ ಏನೂ ಇಲ್ಲದ (ಬ) 15. ಹಿಡಿದು (ವ)

679

ತುಂಬಿ ಪರಿಮಳವನುಂಡಿತೋ! ಪರಿಮಳ ತುಂಬಿಯನುಂಡಿತೋ! ಲಿಂಗ ಪ್ರಾಣವಾಯಿತೋ! ಪ್ರಾಣ ಲಿಂಗವಾಯಿತೋ! [1]ಗುಹೇಶ್ವರ, ಈ[1] ಉಭಯದ ಭೇದವ ನೀನೆ [2]ಬಲ್ಲೆ[2] !

680

ಬೆಣ್ಣೆಯ ಕಂದಲ [3]ಕರಗಲಿಟ್ಟರೆ[3] ಕಂದಲು ಕರಗಿತ್ತು, ಬೆಣ್ಣೆಯುಳಿಯಿತ್ತು! ತುಂಬಿಯಿದ್ದಿತ್ತು ಪರಿಮಳವಿಲ್ಲ! ಪರಿಮಳವಿದ್ದಿತ್ತು ತುಂಬಿಯಿಲ್ಲ! ತಾನಿದ್ದನು ತನ್ನ ಸ್ವರೂಪವಿಲ್ಲ; ಗುಹೇಶ್ವರನಿದ್ದನು ಲಿಂಗವಿಲ್ಲ!

681

ಎಂಬತ್ತುನಾಲ್ಕು ಲಕ್ಷ ಒಟ್ಟಿ ಮೂಱು ತತ್ತಿಯನಿಕ್ಕಿತ್ತ ಕಂಡೆ. ಆನೆ ಆಡ ಹೋದರೆ ಒಂದು [4]ಚಿಕ್ಕಾಡು[4] ನುಂಗಿತ್ತ ಕಂಡೆ. ನಾರಿಯಾಡ [5]ಹೋದರೆ[5] ಒಂದು ಚಂದ್ರಮತಿಯ ಕಂಡೆನು. ಪೃಥ್ವೀಮಂಡಲವನೊಂದು ನೊಣ ನುಂಗಿತ್ತ ಕಂಡೆನು. ಗುಹೇಶ್ವರನೆಂಬ ಲಿಂಗವ ಕಂಡವರುಳ್ಳಡೆ ಹೇಳಿರೇ.

682

ತೆಱಹಿಲ್ಲದ ಘನವು ಕುಱುಹಿಂಗೆ ಬಾರದ ಮುನ್ನ ತೋಱಿದವರಾರು ಹೇಳಾ? ಮಹಾಘನಲಿಂಗೈಕ್ಯವನು [6]ಆರೂಢದ[6] ಕೂಟದಲ್ಲಿ ನಾನಾರುವ ಸಾಕ್ಷಿಯ ಕಾಣೆನು. [7]ಬೇಱೆ[7] ಮಾಡಿ ನುಡಿಯಬಹುದೇ ಪ್ರಾಣಲಿಂಗವನು? ಅಱಿವು [8]ಸಯವಾಗಿ[8] ಮಱಹು ನಷ್ಟವಾದಲ್ಲಿ, ಗುಹೇಶ್ವರ, ನಿಮ್ಮ ಶರಣನುಪಮಾತೀತನು.

683

ಕರ್ಪೂರದ ಗಿರಿಯು [9]ಉರಿಯು ಹಿಡಿದಡೆ[9] ಇದ್ದಿಲುಂಟೆ? ಮಂಜಿನ ಶಿವಾಲಯಕ್ಕೆ ಬಿಸಿಲ ಕಳಶವುಂಟೆ? [10]ಕೆಂಡದ ಗಿರಿಯ[10]ನರಗಿನ ಬಾಣದ-ಲೆಚ್ಚಡೆ ಮರಳಿ ಬಾಣವನಱಿಸಲುಂಟೆ? [11]ಗುಹೇಶ್ವರನೆಂಬ ಲಿಂಗವನಱಿದು [A]ಮರಳಿ[A] ನೆನೆಯಲುಂಟೆ?[11]

———

1. ಗೊಹೇಶ್ವರ ಗೊಹೇಶ್ವರ ಇದರಂತುವ (ಟ) ಗುಹೇಶ್ವರ ಗುಹೇಶ್ವರ ಇವರ (ಕ) 2. ಬಲ್ಲೆ (ಐಲಿ) 3. ಒಲೆಯ ಮೇಲಿಟ್ಟಡೆ (ಟ) 4. ಚಿಕ್ಕ ಆಡು (ಬ) ಚಿಕ್ಕಾಡು (ಬವ್ಯಾ) 5. ಹೋದಲ್ಲಿ (ಬಟ) 6. ಆರೂಢಿಯ (ಲಿಕ) ಆಱೂಢಿಯ (ಚದ) ಆಱೂಢದ (ಲ) 7. ಬೇಱು (ಕಚಟದಬ) 8. ಸ್ವಯವಾಗಿ (ಲಿ) ಶಯವಾಗಿ (ಬ) 9. ನುರುಹಿದಡೆ (ವಟಬ) ಉರಿ ಹಿಡಿದ ಬಳಿಕ (ಶೂ) 10. ಉರಿಯ (ವ) 11. ಗುಹೇಶ್ವರಲಿಂಗವನಱಿದ ಬಳಿಕ ದೇವರೆಂದು ಅಱಿಸಲುಂಟೆ ಸಿದ್ಧರಾಮಯ್ಯ (ಶೂ) [A]× (ವ)

684

ಸೊಪ್ಪಡಗಿದ ಸುಮ್ಮಾನಿಗಳವರಲ್ಲಿ ಗತಿಯನಱಸುವರೆ? [1]ಅಂಗವೆಲ್ಲ ನಷ್ಟವಾಗಿ ಲಿಂಗಲೀಯವಾದವರಲ್ಲಿ ಗತಿಯನಱಸುವರೆ? ಅವರಲ್ಲಿ ಮತಿಯ ನಱಸುವರೇ[1] ಗುಹೇ[2]ಶ್ವರ[2]ನೆಂಬ ನಿಜ ನಿಂದವರಲ್ಲಿ?

685

ಅಟ್ಟೆ ಮುಟ್ಟಲಿಲ್ಲ, ಮುಟ್ಟೆ ಮರಳಲಿಲ್ಲ. ಏನೆಂಬೆ ಲಿಂಗವೇ, [3]ಎಂತೆಂಬೆ[3] ಲಿಂಗಯ್ಯ? ನಿಜವನಱಿದ ಬಳಿಕ ಮರಳಿ ಹುಟ್ಟಲಿಲ್ಲ ಕಾಣಾ, ಗುಹೇಶ್ವರ.

686

[4]ಸತ್ಯವನೊಳಕೊಂಡ[4] ಮಿಥ್ಯಕ್ಕೆ ಭಂಗ. ಮಿಥ್ಯವನೊಳಕೊಂಡ ಸತ್ಯಕ್ಕೆ ಭಂಗ. ಸತ್ಯಮಿಥ್ಯವನೊಳಕೊಂಡ ಮನಕ್ಕೆ ಭಂಗ. ಮನವನೊಳಕೊಂಡ ಜ್ಞಾನಕ್ಕೆ ಭಂಗ. ಜ್ಞಾನವನೊಳಕೊಂಡ ನಿಜಕ್ಕೆ ಭಂಗವುಂಟೇ ಗುಹೇ[5]ಶ್ವರ[5]?

687

ತನುವಿಲ್ಲದೆ ಕಂಡು ಕಂಡು ನಿಂದೆ, ಬೆಱಗಿಲ್ಲದೆ [6]ಕಂಡು ಕಂಡು[6] ಬೆಱ ಗಾದೆ. ರೂಹಿಲ್ಲದೆ ಕಂಡಱಿದೆ ಗುಹೇಶ್ವರನೆಂಬ ಲಿಂಗವ.

688

[7]ಘನವ[7] [A]ಕಂಡು ಮನ[A] [8]ಅ[8]ವಗ್ರಾಹಕವಾಯಿತ್ತು. ಕಂಡು ಕಂಡು [B]ಮನ[B] ಮಹಾಘನವಾಯಿತ್ತು. [9]ತಲ್ಲೀಯ[9]ವಾಯಿತ್ತು. ತದುಗತಶಬ್ದಮಗ್ಧ ವಾದುದನೇನೆಂಬೆ, ಗುಹೇಶ್ವರ.

689

ನಾ ನೀನೆಂಬ ಭೇದ ಅಂದೂ ಇಲ್ಲ ಇಂದೂ ಇಲ್ಲ. ಸಾಲೋಕ್ಯನಲ್ಲ, ಸಾಮೀಪ್ಯನಲ್ಲ [C]ಶರಣ[C]; ಸಾರೂಪ್ಯನಲ್ಲ ಸಾಯುಜ್ಯನಲ್ಲ ಶರಣ; ಸಕಾಯ-ನಲ್ಲ ಅಕಾಯನಲ್ಲ ಗುಹೇಶ್ವರಲಿಂಗ [10]ತಾನೆಯಾಗಿ.[10]

690

ಕರಿಯ ಮುತ್ತಿನ ಹಾರದ ಪರಿಯೊಂದು ಶೃಂಗಾರ. ಕರದ ಬಣ್ಣದ

---

1. × (ಕದಐ) ಅವರಲ್ಲಿ ಮತಿಯನಱಸುವರೇ (ಚ) 2. ಶ್ವರ ಗುಹೇಶ್ವರ (ಐ) 3. ಏನೆಂಬೆ (ವ) 4. ಸತ್ಯವಲ್ಲದವರೊಡನೊಳಕೊಂಡ (ಕ) 5. ಶ್ವರ (ಐ) 6. ಕಂಡು (ಚಟದಲ) 7. ಮಹಾಘನವ (ಟ) A ಮನ ಕಂಡು (ಲ) 8. ವ (ಬ) B × (ಲ) 9. ತತ್ತಲ್ಲೀಯ (ಬ) C × (ಐ) 10. ತಾನೆಯಾಗಿ (ಲಿ) ತಾನಾಗಿ (ಐ)

ನುಡಿಯ [1]ಬೆಳಗಿ[1]ನೊಳಗಡಗಿತ್ತು. ಸಿಡಿಲ ಬಣ್ಣವನುಟ್ಟು ಮಡದಿಯೊಂದೂರೊಳಗೆ ಕಡುಗಲಿಯ ವಿದ್ಯವನು ನೋಡೆ, ನೋಡದ ನಿರ್ಭಾವ ವೀರವಿತರಣೆಯಿಂದ; ಧಾರುಣಿಯ ರಚನೆಯ ಗುಹೇಶ್ವರನೆಂಬ ಲಿಂಗದ ಬೆಡಗು [2]ನುಂಗಿ[2] ಅಡಗಿತ್ತು.

## 691

ನುಡಿಯಿಂದ ನಡೆಗೆಟ್ಟಿತ್ತು, ನಡೆಯಿಂದ ನುಡಿಗೆಟ್ಟಿತ್ತು. ಭಾವದ [3]ಗುಸುಟು[3] [4]ಅದು[4] ತಾನೆ ನಾಚಿ[5] ನಿಂದಿತ್ತು.[5] ಗುಹೇಶ್ವರನೆಂಬ ಅಱಿವು [6]ಸಿನೆ[6]ಬಂಜೆಯಾಯಿತಲ್ಲಾ !

## 692

[A] [7]ನಿರ್ವಿಕಲ್ಪಿತವೆಂಬ ನಿಜದೊಳಗಯ್ಯ. ನಿರಹಂಭಾವದಲ್ಲಿ ನಾನಿದ್ದೆನಯ್ಯ.[7] ನೋಡಿಹೆನೆಂದರೆ ನೋಡಲಿಲ್ಲ. ಕೇಳಿಹೆನೆಂದರೆ ಕೇಳಲಿಲ್ಲ. ಘನ ನಿರಂಜನದ [B]ಬೆಳಗಿಂಬಾದು[8]ದೇ[8]ನೆಂಬೆ[B] ಗುಹೇಶ್ವರ.[A]

## 693

[C]ಅಂಗದೊಳಗಣ ಸವಿ, ಸಂಗದೊಳಗಣ ರುಚಿ; ಅಂಗನೆಯ ನಖದೊಳಗೆ ಒಂದು ಮೂರುತಿಯಾಯಿತ್ತು. ಚಂದ್ರಕಾಂತದ ಗಿರಿಗೆ ಬಿಂದುತೃಪ್ತಿಯ ಸಂಚ; ಅದಱಿಂದದೊಳಗಣ ಭ್ರಮೆಯ [9]ಪಿಂಡದಾಹುತಿ[9] ನುಂಗಿತ್ತು. ಚಂದ್ರಮನ ಷೋಡಶ ಕಳೆಯು [10]ಇಂದ್ರನ ವಾಹನ[10] ನುಂಗಿತ್ತು. ಗುಹೇಶ್ವರನೆಂಬ ನಿಲವ ನಖದ ಮುಃಖ ನುಂಗಿತ್ತು.[C]

## 694

[D]ಬಯಲ ಬೆಱಗಿನ ಸುಖದ ಸವಿಯ ಬೆಱಗಲ್ಲದೆ ಕಾಣೆ. ಕಾಣೆನೆಂಬ ನುಡಿಗೆಡೆಯ ಕಾಣೆ. [11]ಕುಱುಹುಗೆಟ್ಟ[11]ಱಿವ ನೆಱೆ[3]ಯಱಿದು ಬೆರಸಿದೆನೆಂಬ ಬಱುನುಡಿಯ ನುಡಿಗೆ ನಾಚಿದೆನಯ್ಯ ಗುಹೇಶ್ವರ.[D]

---

1. ಬೆಡಗಿ (ತಲದ) 2. ನಸ್ನಿ (ಟ) 3. ಗುಸುಟ್ಟು (ಚವ್ಯಾ) 4. × (ಟಲಿ) 5. ಮಾಡುದು (ಲಿಶೂ) ನಿಂದುವಲ್ಲಾ (ಐ) 6. ಸಿನಿ (ಕ) 7. ನಿರ್ವಿಕಲ್ಪಿತವೆಂಬ ನಿಜದೊಳಗೆ ನಿರಹಂಭಾವದಲಿರ್ದ ನೋಡಯ್ಯ (ಲಿ) A [ಈ ವಚನ 'ಟ' ಪ್ರತಿಯಲ್ಲಿಲ್ಲ] B ಬೆಳಗಿಂದಲಾದುದನೇನೆಂಬೆ (ಶೂ) 8. ದನೇ (ಲಿಕದಐ) C [ಈ ವಚನ 'ಟ' ಪ್ರತಿಯಲ್ಲಿಲ್ಲ.] 9. ಪಿಂಡದಾಹುಲ್ಲೆ (ಟತಲ) 10. ಇಂದ್ರವಾಹನ (ಕ) D [ಈ ವಚನ 'ಟ' ಪ್ರತಿಯಲ್ಲಿಲ್ಲ.] 11. ಕುಱುಹುಗೆಟ್ಟು ಅ (ಕ) ಕುಱುಹಳಿದು ಅ (ಶೂ) ಕುಱುಹುಗೆಟ್ಟ ಅ (ತಲ)

## ಅಲ್ಲಮನ ಅಧಿಕ ವಚನಗಳು

695

ಆದಿಯನಾದಿಗಳಿಲ್ಲದಂದಿನ ಕೂಗು! ನಾದ ಬಿಂದುಗಳಿಲ್ಲದಂದಿನ ಕೂಗ ಕಂಡು ಕೂಗಿದೆ! ಈಡಾಪಿಂಗಳಸುಷುಮ್ನನಾಳಮಧ್ಯದ ಕೂಗ ಕಂಡು ಕೂಗಿದೆ. ಗುಹೇಶ್ವರನೆಂಬ ತಲೆವೊಲನ ದಾಂಟೆ ಅಲ್ಲಮು ಕೂಗಿದ ಕೂಗು!

696

ಅನುಭಾವ ಅನುಭಾವವೆಂಬಣ್ಣಗಳು ನೀವು ಕೇಳಿರೇ! ಅನುಭಾವ ವೆಂಬುದೊಂದೆತ್ತು ಕೆಟ್ಟಿತ್ತು! ಎತ್ತು ಗೇಣುದ್ದ: ಕೊಂಬು ಮೊಳದುದ್ದ. ಕೆಟ್ಟೆಂಟು ದಿನ; ಕಂಡು ಹದಿನಾಱು ದಿನ! ನಿನ್ನೆ ಮೆಟ್ಟದ ನಾಟಿಯು ಮೊನ್ನೆ ಮೇವುದ ಕಂಡೆ. ಗುಹೇಶ್ವರ, ಅಱಸುವ ಬಾರ್ರೈ ಕಡೆಯ ಹೊಲಕೆ.

697

ನಿರೂಪ ಕಾಣಬಾರದು, ಪೂಜಿಸುವ ಪರಿಯೆಂತಯ್ಯ? ರೂಪಿಂಗೆ ಕೇಡುಂಟು, ಪೂಜಿಸುವ ಪರಿಯಿನ್ನೆಂತಯ್ಯ? ಸಕಲನಿಃಕಲವು ಪೂಜೆಗೆ ಕಾರಣ ವಲ್ಲ, ಇನ್ನೆಂತಯ್ಯ ಲಿಂಗವಂತರಿಗೆ ಪೂಜಿಸುವ ಪರಿ? ಲಿಂಗದ ಪರಿಯಿ ನ್ನೆಂತಯ್ಯ? ಗುಹೇಶ್ವರಯ್ಯ, ಅಱಿಯಬಾರದ ಲಿಂಗವ ಅಱಿವಂತೆ ಮಾಡಿ ಕೊಟ್ಟನು ಶ್ರೀಗುರು.

698

ಒಂದೆರಡಾದುದ ಬಲ್ಲವರಾರೋ? ಎರಡಱೊಳಗಣ ಮೂಱ ಬಲ್ಲವ ರಾರೋ? ಮೂಱಱ ಮುಖವನಱಿದು ಕೂಡಿ ಮಾಡಬಲ್ಲವರಾರೊ? ಗುಹೇ ಶ್ವರಲಿಂಗದಲ್ಲಿ ಸಂಗನ ಬಸವಣ್ಣನೊಬ್ಬನೆ!

699

ಮೂಱುಲೋಕದ ಧೀರೆ ನಿದ್ರಾಂಗನೆ ಎಲ್ಲರನೂ ಹಿಂಡಿ, ಹೀರಿ, ಪ್ರಾಣಾ ಕರ್ಷಣೆಯ ಮಾಡಿ ಘಟ್ಟಿಗೆಡಹಿದಳಲ್ಲಾ! ಇವಳ ಗೆಲ್ಲುವ ಧೀರರನಾರನೂ ಕಾಣೆ. ಇವಳ ಬಾಣಕ್ಕೆ ಗುರಿಯಾಗಿ, ಏಳುತ್ತ ಬೀಳುತ್ತಲಿದ್ದರೆಲ್ಲರು; ಗುಹೇಶ್ವರ.

700

ಮನಸುಖವನಱಿಯನಾಗಿ ಲಿಂಗವೆಂದಱಿದನು. ಧನಸುಖವನಱಿಯ ನಾಗಿ ಜಂಗಮವೆಂದಱಿದನು. ತನುಸುಖವನಱಿಯನಾಗಿ ಪ್ರಸಾದವೆಂದಱಿ ದನು. ಗುಹೇಶ್ವರ, ನಿಮ್ಮ ಶರಣ ಸಂಗನಬಸವಣ್ಣ ಸ್ವಯಲಿಂಗವಾದ ಕಾರಣ.

701

ಮನವ ಮಱೆದು ಮಾಡಿದಡೆ ಲಿಂಗರೂಪಾಯಿತ್ತು. ಧನವ ಮಱೆದು ಮಾಡಿದಡೆ ಜಂಗಮರೂಪಾಯಿತ್ತು, ತನುವ ಮಱೆದು ಮಾಡಿದಡೆ ಪ್ರಸಾದ–ರೂಪಾಯಿತ್ತು. ಇಂತೀ ತ್ರಿವಿಧವಱೆದು ಮಾಡಿದಡೆ ಬಯಲ ರೂಪಾಯಿತ್ತು. ಮನವನಱೆಯನಾಗಿ ಲಿಂಗವನಱೆತ, ಧನವನಱೆಯನಾಗಿ ಜಂಗಮವನಱೆತ. ತನುವನಱೆಯನಾಗಿ ಪ್ರಸಾದವನಱೆತ. ಈ ತ್ರಿವಿಧಸುಖವ ಮಱೆದನಾಗಿ ಬಯಲೆಂದಱೆತ. ಮನವನೇ ಲಿಂಗ ಒಳಕೊಂಡಿತ್ತು, ಧನವನೇ ಜಂಗಮ ಬಳಕೊಂಡಿತ್ತು. ತನುವನೇ ಪ್ರಸಾದ ಒಳಕೊಂಡಿತ್ತು. ಇಂತೀ ತ್ರಿವಿಧ–ರೂಪನು ಬಯಲು ಒಳಕೊಂಡಿತ್ತು, ಗುಹೇಶ್ವರ.

702

ಭವಿಯೊಂದು ಕುಲ, ಭಕ್ತನೊಂದು ಕುಲವೆಂದು ವಿವರಣೆಯ ಮಾಡಿದ ಬಳಿಕ, ಮರಳಿಯಾ ಭವಿಯ ನಂಟನೆಂದು ಬೆರಸುವುದು ಪಂಚಮಹಾ ಪಾತಕವೋ! ಬಸವಶ್ರೀಗುರು ಪೂರ್ವಾಶ್ರಯವ ಕಳೆದು ಪುನರ್ಜಾತನ ಮಾಡಿದ ಬಳಿಕ, ಪಂಚಭೂತಕಾಯವ ಕಳೆದು ಪ್ರಸಾದಕಾಯವ ಮಾಡಿದ ಬಳಿಕ, ವಾಯುಪ್ರಾಣಿಯ ಕಳೆದು ಲಿಂಗಪ್ರಾಣಿಯ ಮಾಡಿದ ಬಳಿಕ, ಎಲ್ಲಿಯ ಕುಲ–ಸೂತಕ? ಎಲ್ಲಿಯ ಛಲಸೂತಕ? ಎಲ್ಲಿಯ ತನುಸೂತಕ? ಎಲ್ಲಿಯ ಮನ ಸೂತಕ? ಎಲ್ಲಿಯ ನೆನಹುಸೂತಕ? ಎಲ್ಲಿಯ ಭಾವಸೂತಕ? ಇವನೆಂದೂ ಹಿಡಿಯಲಾಗದು. ಕುಲಸೂತಕ ಉಳ್ಳನ್ನಕ್ಕ ಭಕ್ತನಲ್ಲ, ಛಲಸೂತಕ ಉಳ್ಳನ್ನಕ್ಕ ಮಾಹೇಶ್ವರನಲ್ಲ, ತನುಸೂತಕ ಉಳ್ಳನ್ನಕ್ಕ ಪ್ರಸಾದಿಯಲ್ಲ, ಮನಸೂತಕ ಉಳ್ಳನ್ನಕ ಪ್ರಾಣಲಿಂಗಿಯಲ್ಲ, ನೆನಹುಸೂತಕ ಉಳ್ಳನ್ನಕ್ಕ ಶರಣನಲ್ಲ, ಭಾವ ಸೂತಕ ಉಳ್ಳನಕ್ಕ ಲಿಂಗೈಕ್ಯನಲ್ಲ. ಇಂತೀ ಸೂತಕವ ಮುಂದುಗೊಂಡಿಪ್ಪವರ ಮುಖವ ನೋಡಲಾಗದು, ಗುಹೇಶ್ವರ.

703

ಹವಣಿಲ್ಲದ ಶಾಖೆಯ ಕಪಿ ಹಿಡಿಯಲೊಲ್ಲದು. ಗಮನವಿಲ್ಲದೆ ಪಿಕಶಿಶು ನುಡಿಯದು. ಪ್ರಭಾವಿಸಿದಲ್ಲದೆ ಉಲಿಯದು ಕುಕ್ಕುಟ. ಇಂತೀ ತ್ರಿವಿಧ ಭೇದವ ನೋಡಿರೇ ಭಕ್ತರಪ್ಪಡೆ. ಹೂಮಿಡಿಯ ಹಱೆದಡೆ ಹಣ್ಣಪ್ಪುದೆ? ಹಸಿವು ತೃಷೆವಿಷಯ ಉಳ್ಳನ್ನಕ್ಕ ಅದ್ವೈತ ಉಂಟೆ ಜಗದೊಳಗೆ? ತನ್ನ ಮಱೆದು ಲಿಂಗವ ಮಱೆವುದು, ತನ್ನ ಮಱೆಯದೆ ಲಿಂಗವ ಮಱೆವ ಯೋಗವಿನ್ನೆಂಥಾದೋ? ಸುಡು ಸುಡು ಅವಂದಿರು ಗುರುದ್ರೋಹಿಗಳು, ಆಚಾರಭ್ರಷ್ಟರು. ಈ ಉಭಯತನುಗುಣ ನಾಸ್ತಿಯಾಗದನ್ನಕ ಸತ್ಕ್ರಿಯಿಂದ ಮಾಡುವುದು ಲಿಂಗದಾಸೋಹವ. ಭಯಭಕ್ತಿಯಿಂದ ಮಾಡುವುದು ಜಂಗಮದಾಸೋಹವ.

ತನು ಕರಗಿ ಮನ ಬೆರಸಿ ನಿಮಗೆ ಮಾಡದ ವ್ರತಗೇಡಿಗಳ ಎನಗೆ ತೋಱದಿರಾ ಗುಹೇಶ್ವರ.

704

ಪರುಷದ ಪುತ್ಥಳಿಗೆ ಕಬ್ಬುನದ ಆಭರಣಗಳುಂಟೇ ಅಯ್ಯ? ಲೋಕದೊಳಗೆ ಲಿಂಗ, ಲಿಂಗದೊಳಗೆ ಲೋಕವಾದಡೆ, ಹಿಂದಣ ಪ್ರಳಯಂಗಳೇಕಾದವು? ಇನ್ನು ಮುಂದಣ ಪ್ರಳಯಗಳಿಗಿನ್ನೆಂತೋ? ಲೋಕವು ಲೋಕದಂತೆ, ಲಿಂಗವು ಲಿಂಗದಂತೆ; ಈ ಉಭಯದ ಭೇದವ, ಗುಹೇಶ್ವರ, ನಿಮ್ಮ ಶರಣನೆ ಬಲ್ಲ.

705

ವಿಭೂತಿ ಯಾವ ಭೂಷಣದೊಳಗು? ಹುಲಿಚರ್ಮವಾವ ವಸ್ತ್ರದೊಳಗು? ಖಟ್ವಾಂಗವಾವ ಆಯುಧದೊಳಗು? ನೀನಿಡುವುದಿಂತುಟು! ನೀ ಹೊದೆವುದಿಂತುಟು! ನೀ ಹಿಡಿವುದಿಂತುಟು! ನೀ ಕೊಡುವುದಿಂದ್ರಪದವಿ, ಗುಹೇಶ್ವರ!

706

ಧರೆಯಾಕಾಶವಿಲ್ಲದಂದು, ತ್ರೈಮಂಡಲ ನೆಲೆಗೊಳ್ಳದಂದು, ಹೋಮ ನೇಮ ಜಪತಪವಿಲ್ಲದಂದು, ನಿಮ್ಮನಾರು ಬಲ್ಲರು? ಹರಿಬ್ರಹ್ಮರಿಗೆ ಅಗೋಚರ, ನಿರ್ಲೇಪ ನಿಃಪತಿ ನಿರಂಜನನಾಗಿ ವೇದಂಗಳಱಿಯವು. ಶಾಸ್ತ್ರ ಶ್ರುತಿ ಸ್ಮೃತಿಗಳು ನಿಮ್ಮನಱಿಯವು. ಗಗನಕಮಲಕುಸುಮಪರಿಮಳದಿಂದತ್ತಲು, ಗುಹೇಶ್ವರ, ನಿಮ್ಮ ನಿಲವನಾರು ಬಲ್ಲರು?

707

ಮತಿಯೊಳಗೆ ದುರ್ಮತಿ ಹುಟ್ಟಿ, ಕಲಿ–ಗಸಣಿಗೊಳಗಾದ ಪರಿಯ ನೋಡಾ! ಜ್ಞಾನವನು ಅಜ್ಞಾನ ಬಂದು ನುಂಗಿದಡೆ, ಭಾನು ಗ್ರಹಣಕ್ಕೊಳಗಾದಂತಾದುದಲ್ಲ! ಕ್ಷೀರವುಳ್ಳ ಪಶು ಕಱುವನಗಲಿ ಅಱಿಯದ ಸ್ನೇಹದಂತಿದ್ದುದಲ್ಲಾ! ಹೇಳುವಲ್ಲಿ ಯುಕ್ತ, ಕೇಳುವಲ್ಲಿ ಮುಕ್ತನೆಂಬುದೆಲ್ಲವು. ಅಜ್ಞಾನ ಭಾವಕ್ಕೆ ಬಂದುದಲ್ಲಾ! ನೀರ ಮೇಲಣ ಲಿಪಿಯನೋದಬಲ್ಲವರಾರು ಸಾರಾಯ ವೇದ್ಯರು? ಕನ್ನಡಿಯೊಳಗೆ ನೋಡೆ, ಭಿನ್ನವಿದ್ದುದೆ ಅಯ್ಯ, ತನ್ನ ಕಣ್ಣಿಂಗೆ ಕಾಣದಂತಿದ್ದುದಲ್ಲದೆ? ದರ್ಪಣದೊಳಗಣ ಬೆಳಗು, ಬೆಳಗಿನೊಳಗಣ ಬೆಳಗು! ಗುಹೇಶ್ವರನಿಪ್ಪೆಡೆಯ ತಿಳಿದು ನೋಡಿರೆ!

708

ಶೂಲದ ಮೇಲಣ ತಲೆಯ ವೈಭೋಗವನಾರು ಬಯಸಿದಡೆಲ್ಲಿಯದು? ಉಂಬರೆ ಒಡಲಿಲ್ಲ, ಲಿಂಗಾರ್ಚನೆಯಿಲ್ಲ, ಅಂಗಭೋಗಕ್ಕೆ ಕರಚರಣಂಗಳಿಲ್ಲ. ಅಂಗವಿಲ್ಲೆಂಬ ಮಾತು ನಿಮಗೇಕೆ? ಸುಡು ಭಂಗ! ಲಿಂಗ ನಿರಾಳ, ಗುಹೇಶ್ವರ.

709

ನೆನೆನೆನೆದು ಮನವ ಘನ ವೇದಿಸಿತ್ತು. ಕಂಡು ಕಂಡು ಮನವಾ ವರಿಸಿತ್ತಯ್ಯ, ತತ್ತಲ್ಲೀಯವಾಯಿತ್ತು, ತದುಗತಶಬ್ದಮುಗ್ಧವಾಯಿತ್ತು. ಎತ್ತಣ ಗುಹೇಶ್ವರನೆಂದಱಿಯದೆ ಉಭಯಲಿಂಗ ಒಳಕೊಂಡಿತ್ತಯ್ಯ.

710

ಅಂಗವಿಕಾರ ಆಚಾರದೊಳಡಗಿ, ಆಚಾರಕ್ರೀಗಳು ಗುರುವಿನೊಳಡಗಿ, ಗುರುವೆನ್ನಂಗದೊಳಡಗಿ, ಅಂಗ ಲಿಂಗತೃಪ್ತಿಯೊಳಡಗಿ; ಲಿಂಗನಿಷ್ಠೆ ಅಂಗದಾ ಚರಣೆಯ ಆಚಾರವಾವರಿಸಿ, ಆಚಾರದ ನಿಲವ ಗುರುಮೂರ್ತಿಯಾವರಿಸಿ, ಗುರುಮೂರ್ತಿಯ ಸರ್ವಾಂಗವಾವರಿಸಿ, ಸರ್ವಾಂಗವ ಲಿಂಗನಿಷ್ಠೆಯಾವರಿಸಿ, ಲಿಂಗನಿಷ್ಠೆಯ ಸಾವಧಾನವಾವರಿಸಿ, ಸಾವಧಾನವ ಸುವಿಚಾರವಾವರಿಸಿ, ಸುವಿಚಾರವ ಮಹಾಜ್ಞಾನವಾವರಿಸಿ, ಮಹಾಜ್ಞಾನದೊಳಗೆ ಪರಮಾನಂದ-ನಿಜ ನಿಂದು; ನಿಜದೊಳಗೆ ಪರಮಾಮೃತ ತುಂಬಿ ಮೊದಲ ಕಟ್ಟೆಯನೊಡೆದು, ನಡುವಣ ಕಟ್ಟೆಯನಾಂತುನಿಂದು, ನಡುವಣ ಕಟ್ಟೆಯೂ ಮೊದಲ ಕಟ್ಟೆಯೂ ಎರಡೂ ಕೂಡಿ ಬಂದು, ಕಡೆಯಣ ಕಟ್ಟೆಯನಾಂತುದು. ಈ ಮೂಱು ಕಟ್ಟೆಯೊಡೆದ ಮಹಾಜಲವನು ಪರಮಪದವಾಂತುದು. ಆ ಪದದಲ್ಲಿ ನಾನು ಎಱಗಿ ಪಾದೋದಕವ ಕಂಡು, ಎನ್ನ ನಾನಱಿಯದಾದೆ ಕಾಣಾ, ಗುಹೇಶ್ವರ.

711

ಅನಾದಿಯ ಶರಣಹೃತ್ಕಮಲಮಧ್ಯದ ತೇಜೋಮಯವನೇನೆಂದುಪ ಮಿಸುವೆ: ಜಲವೆ ಪದಶಿಲೆ, ಪೃಥ್ವಿಯೆ ಪಿಂಡಿಗೆ, ಆಕಾಶವೆ ಲಿಂಗ, ಸಪ್ತ ಸಮುದ್ರಂಗಳೆ ಪಂಚಾಮೃತ, ಮೇಘವೆ ಅಗ್ಘವಣಿಯ ಬಿಂದಿಗೆ, ಮಳೆಗಾಲವೆ ಮಜ್ಜನ, ಚಂದ್ರಮನೆ ನೊಸಲುಗಂಧ, ನಕ್ಷತ್ರವೆ ಅಕ್ಷತೆ, ತರುಮರಾದಿಗಳೆ ಪತ್ರೆ ಪುಷ್ಪ, ಮೊಳಗೆ ಪಂಚಮಹಾಶಬ್ದ, ಮಾಗಿಯೆಂಬ ಪರಿಯಾಣವ ಬೆಳಗಿ, ಬೇಸಗೆಯೆಂಬ ಓಗರವ ಗಡಣಿಸಿ, ಸರ್ವ ಪರಿಮಳದ ತುಪ್ಪವನೆಱೆದು, ಪರವೆಂಬ ಮೇಲೋಗರವನಿಕ್ಕಿ, ಬೆಳಗುಕತ್ತಲೆಯೆಂಬ ಕಣ್ಣಡಕವ ಕಟ್ಟಿ, ಲಿಂಗವ ಆರೋಗಣೆಯ ಮಾಡಿಸಿ, ಸುಜ್ಞಾನದಲ್ಲಿ ಕೈಗೆಱೆದು, ಭಾವವೆಂಬ ವೀಳೆಯವ ಕೊಟ್ಟು, ಆನು ನೀನೆಂಬ ಅನುಲೇಪಗಂಧವ ಪೂಸಿ, ವಾಯುವೆಂಬ ವಸ್ತ್ರವ ನುಡಿಸಿ, ಎಲೆ, ಗುಹೇಶ್ವರನೆಂಬ ಲಿಂಗ ಪರಿಪೂರ್ಣವಾಗಿದ್ದ ಬಳಿಕ, ಮಜ್ಜನ ಕ್ಕೆಱೆವ ಠಾವಾವುದೈ ಸಂಗನ ಬಸವಣ್ಣ ?

712

ನಿಶ್ಚಲವೆಂಬ ಭಾಜನದಲ್ಲಿ ನಿಜಜ್ಞಾನವೆಂಬ ಅಕ್ಕಿಯ ತುಂಬಿ, ಪರಮಾ ನಂದವೆಂಬ ಜಲವನೆಱೆದು, ಸ್ವಯಂಪ್ರಕಾಶವೆಂಬ ಅಗ್ನಿಯಿಂದ ಪಾಕವಾದ

ಲಿಂಗದೋಗರವು ಮಹಾಘನದಲ್ಲಿ ನಿಂದು ಘನತೃಪ್ತಿಯನೀವುತಿದ್ದಿತ್ತು ಕಾಣಿರೇ. ಅದ ಕಣ್ಣಿಲ್ಲದೆ ಕಂಡು, ಕೈಯಿಲ್ಲದೆ ಕೊಂಡು, ಬಾಯಿಲ್ಲದೆ ಉಂಡು, ತೃಪ್ತಿಯ ಅಱಿವಿಲ್ಲದಱಿವಿಂದಱಿದು ಸುಖಿಯಾದೆನು ಕಾಣಾ, ಗುಹೇಶ್ವರ.

713

ಭಕ್ತ ಪ್ರಸಾದವ ಕೊಂಡು ಪ್ರಸಾದವಾದ; ಪ್ರಸಾದ ಭಕ್ತನ ನುಂಗಿ ಭಕ್ತನಾಯಿತ್ತು. ಭಕ್ತನೂ ಪ್ರಸಾದವೂ ಏಕಾರ್ಥವಾಗಿ ಲಿಂಗಸಂಗವ ಮಱೆದು, ಭಕ್ತನೆ ಭವಿಯಾದ, ಪ್ರಸಾದವೆ ಓಗರವಾಯಿತ್ತು. ಮತ್ತೆ ಆ ಓಗರವೆ ಭವಿ, ಭವಿಯೆ ಓಗರವಾಯಿತ್ತು. ಓಗರ ಭವಿ ಎಂಬೆರಡೂ ಇಲ್ಲದೆ ಓಗರವೆ ಆಯಿತ್ತು, ಗುಹೇಶ್ವರ.

714

ಅಱಿವಿನ ಹೃದಯ ಕಂದೆಱೆಯ ಬೇಕೆಂದು, ಗುರುವೆಂದು ಕಲ್ಪಿಸಿ ಕೊಂಡರಲ್ಲದೆ, ಗುರುವೆಂದೆನಲುಂಟೆ ಶಿಷ್ಯಂಗೆ, ಶಿಷ್ಯನೆಂದೆನಲುಂಟೆ ಗುರುವಿಂಗೆ? ಗಮನಾಗಮನ ನಾಸ್ತಿಯಾದ ಲಿಂಗಕ್ಕೆ ಅಂಗವೆಲ್ಲಿಯದು ಹೇಳಾ, ಗುಹೇಶ್ವರ.

715

ಕರಿಯು ಸ್ಪರ್ಶನೇಂದ್ರಿಯದಿಂದ ಬಂಧನವಡೆದಳಿಯಿತ್ತು. ಪತಂಗನು ರೂಪೇಂದ್ರಿಯದಿಂದ ಬಂಧನವಡೆದಳಿಯಿತ್ತು. ಭೃಂಗನು ಗಂಧೇಂದ್ರಿಯದಿಂದ ಬಂಧನವೆಡೆದಳಿಯಿತ್ತು. ಕುರಂಗನು ಶಬ್ದೇಂದ್ರಿಯದಿಂದ ಬಂಧನವಡೆದಳಿಯಿತ್ತು. ಮತ್ಸ್ಯವು ರಸನೇಂದ್ರಿಯದಿಂದ ಬಂಧನವಡೆದಳಿಯಿತ್ತು. ಇಂತೀ ಒಂದೊಂದು ಇಂದ್ರಿಯೋದ್ರೇಕದಿಂದ ಒಂದೊಂದು ಪ್ರಾಣಿಯು ಪ್ರಳಯವಾಯಿತ್ತು. ಪಂಚೇಂದ್ರಿಯಂಗಳ ಒಂದು ಘಟದಲ್ಲಿ ತಾಳಿಹ ಮನುಷ್ಯಪ್ರಾಣಿಗಳಿಗೆ ಮಱವೆ ಎಡೆಗೊಂಡು, ದೇಹಮೋಹಭ್ರಾಂತು ಮುಸುಕಿ, ಮಾಯೆಯ ಬಾಯ ತುತ್ತಹುದು ಚೋದ್ಯವೇನು ಹೇಳಾ, ಗುಹೇಶ್ವರ?

716

ಘುಟಿಕಾಸಿದ್ಧರ ಘುಟಿಕೆಯುರುಳಿತ್ತು, ಯಂತ್ರಿಗಳ ಯಂತ್ರ ಎದ್ದು ಹೋಯಿತ್ತು. ಮಂತ್ರಿಗಳ ಮಂತ್ರ ಮಱೆತು ಹೋಯಿತ್ತು. ಔಷಧಿಗಳ ಔಷಧವನಾರಡಿಗೊಂಡಿತ್ತು. ಸರ್ವವಿದ್ಯಾಮುಖದ ಜ್ಯೋತಿ ನಂದಿತ್ತು. ಈ ವಿಷದ ಲಹರಿಯಲ್ಲಿ ಮೂಱುಲೋಕದವರೆಲ್ಲರು ಮೂರ್ಛಿತರಾದರು ಕಾಣಾ, ಗುಹೇಶ್ವರ.

717

ಮೂಱುಲೋಕದ[1]ವರನೆಲ್ಲರನು ಸಿದ್ರಾಂಗನೆ[1] ಹಿಂಡಿ ಹೀರಿ ಪ್ರಾಣಾಕರ್ಷಣೆಯಂ ಮಾಡಿ ತಟ್ಟುಗೆಡಹಿದಳಲಾ! ಇವಳ ಗೆಲುವ ಧೀರರನಾರನೂ ಕಾಣೆ. ಇವಳ ಬಾಣಕ್ಕೆ ಗುರಿಯಾಗಿ ಏಳುತ್ತ ಬೀಳುತ್ತಲಿದ್ದರೆಲ್ಲರು ಗುಹೇ[2]ಶ್ವರ[2].

718

ಭುವನತ್ರಯವೆಂಬ ಪಂಜರದೊಳಗೆ ಸಂಸಾರಚಕ್ರಕ್ಕೆ ಈಡಾಗಿ, ಅನಂತ ಜೀವಿಗಳು ಹೊನ್ನು ಪ್ರಾಣವೇ ಪ್ರಾಣವಾಗಿ, ಹೆಣ್ಣು ಪ್ರಾಣವೇ ಪ್ರಾಣವಾಗಿ, ಮಣ್ಣು ಪ್ರಾಣವೇ ಪ್ರಾಣವಾಗಿ, ಆ ಸುಖದ ಸೊಕ್ಕು ತಲೆಗೇಱಿ ಈಸಾಡುತ್ತಿದ್ದರಲ್ಲಾ ಭವಸಾಗರವ, ಬಹುವಿಧದವ್ಯವಹಾರಿಗಳು ನಮ್ಮ ಗುಹೇಶ್ವರಲಿಂಗವ ನಱಿಯದ ಕಾರಣ!

719

[3]ಭೂಮಿ ನಿನ್ನದಲ್ಲ, ಹೇಮ ನಿನ್ನದಲ್ಲ,[3] ಕಾಮಿನಿ ನಿನ್ನವಳಲ್ಲ. [4]ಅವು[4] ಜಗಕಿಕ್ಕಿದ ವಿಧಿ, ನಿ[5]ನ್ನೊ[5]ಡವೆಯೆಂಬುದು [6]ಗುರುಲಿಂಗಜಂಗಮಕ್ಕೆ ದಾಸೋಹಮಾಡುವ[6] ಜ್ಞಾನರತ್ನ. ಅಂತಪ್ಪ [7]ದಿವ್ಯ[7]ರತ್ನವ ಕೆಡಗುಡದೆ [8]ಆ ರತ್ನವ[8] ನೀನಲಂಕರಿಸಿದೆಯಾದಡೆ ನಮ್ಮ ಗುಹೇಶ್ವರಲಿಂಗದಲ್ಲಿ ನಿನ್ನಿಂದ ಬಿಟ್ಟು ಸಿರಿವಂತ[8]ರಾರು ಇಲ್ಲ[8] ಕಾಣಾ, ಎಲೆ ಮನವೆ.

720

ಒಲ್ಲೆನೊಲ್ಲೆ ಮರ್ತ್ಯದ ಹಂಗ. ಹಿಂದಣ ಮಱವೆಯಿಂದ ಬಂದು ನೊಂದೆ. ಸಾಕು ಇನ್ನಱದೆ, ತ್ರಿವಿಧಪಾಶವ ಹಱದೆ. ಗುಹೇಶ್ವರ, ಇನ್ನು ಮರ್ತ್ಯದ ಸುಖವ ಮನದಲ್ಲಿ ನೆನೆದೆನಾದಡೆ ನಿಮ್ಮಾಣೆ ನಿಮ್ಮ ರಾಣಿವಾಸದಾಣೆಯಯ್ಯಾ!

721

ಜಿನನು ದೇವರೆಂಬರು, ಜಿನನು ದೇವರಲ್ಲ. ಅದೆಂತೆಂದಡೆ: ನಾಭಿರಾಜ ಮರುತಾದೇವಿಯರಿಗೆ ಶಾಂತಿನಾಥ ಪುಟ್ಟ, ಕಾಳೋದರರೆಂಬವರು ವರ್ತಿಸುವಲ್ಲಿ, ಬೇಂಟೆಗೆ ಹೋಗಿ ತೋಹಿನಲ್ಲಿದ್ದ ಗೂಳಿಯನೆಚ್ಚು ಕೊಂದಲ್ಲಿ, "ಈ ಗೂಳಿಯ ಕೊಂದ ಪಾತಕಕ್ಕೆ ಹದಿನೆಂಟು ಲಕ್ಷ ಹೊನ್ನಿನಲ್ಲಿ ಗೂಳಿಯ ಮಾಡಿ,

---

1. ಧೀರೆ ಸಿದ್ರಾಂಗನೆ ಎಲ್ಲರನು (ನ) 2. ಶ್ವರ (ವ) 3. ಹೇಮನಿನ್ನದಲ್ಲ ಭೂಮಿನಿನ್ನದಲ್ಲ (ಆ–ವ) 4. ಅದು (ಲಿ) ಇದು (ಆ-ವ) 5. ನ್ನ ಒ (ಆ-ವ) 6. × (ಲಿ ಆ-ವ) 7. ಜ್ಞಾನ (ಆ–ವ) 8. ರಿಲ್ಲ (ಲಿ ಆ-ವ).

ಆ ಗೂಳಿಯ ದಾನವ ಕೊಟ್ಟಲ್ಲಿ ಈ ಪಾಪ ಹೋಹುದೇ," ಎಂದು ಮುನ್ನಿನ ಹಿರಿಯರುಗಳ ಕೇಳಿದಲ್ಲಿ, ಆ ಹಿರಿಯರುಗಳು ಆ ಪಾತಕವು ಹಾಗೆ ಹೋಗ ದೆಂದರು. ಆ ಗೂಳಿಯ ಒಂದೊಂದು ರೋಮ ಒಂದೊಂದು ಲಿಂಗಸ್ವರೂಪವು; ಅದುಕಾರಣ–ಆ ಪಾಪವು ಹೋಗದು. ಮತ್ತೆ ಹೇಗೆ ಹೋಹುದೆಂದರೆ ಚಂದ್ರಶೇಖರಲಿಂಗಕ್ಕೆ ಅಭಿಷೇಕವ ಮಾಡಿಸುವಲ್ಲಿ ಚಪ್ಪರವನಿಕ್ಕಿಸಿ ಆ ಗೂಳಿಯನಾ ಚಪ್ಪರದ ಮೇಲೆ ಮಲಗಿಸಿ, ತಾನು ನಿರ್ವಾಣವಾಗಿ ಕೆಳಗೆ ನಿಂದಿರಲಾಗಿ, ಆ ಗೂಳಿಯ ರುಧಿರ ತನ್ನ ನೆತ್ತಿಯ ಮೇಲೆ ಬೀಳುವ ಹಾಗೆ ಮರಣವಾದ [?]. ಅದು ಕಾರಣ ಬಸವನ ಚರ್ಮವಂ ತಟ್ಟಾಗಿ ಹೊದ್ದು, ಆ ಬಸವನ ಅಂಡಮುಂ ಜವಳಿಗುಂಡಿಗೆಯಾಗಿ ಪಿಡಿದು, ಆ ಬಸವನ ಬಾಲಮಂ ಯಂತ್ರಮುಟ್ಟಿ ಕುಂಚಿಗೆಯಾಗಿ ಪಿಡಿದು, ಆ ಬಸವನ ಹೆಸರ ಬಸದಿಯಂ ಕಟ್ಟಿಸಿ, ತನ್ನ ಪಾತಕವ ಕಳೆದುಕೊಂಬವನ ದೇವರೆಂದು ಬೊಗಳುವ ನಾಯ ಬಾಯಿ ಯಮುಪಾಕುಳ, ತಪ್ಪುದು, ಗುಹೇಶ್ವರಾ.

722

ಆದಿಸ್ವಯಂಭುವಿಲ್ಲದ ಮುನ್ನ, ಸಂಗ ನಿಸ್ಸಂಗವಿಲ್ಲದ ಮುನ್ನ, ನಕ್ಷತ್ರ ಗ್ರ[1]ಹ[1]ಗಳಿಲ್ಲದ ಮುನ್ನ, ಯೋಗ ಕರ[2]ಣ[2]ಗಳಿಲ್ಲದ ಮುನ್ನ, ಖೇಚರ ಭೂಚರ ರಿಲ್ಲದ ಮುನ್ನ, [3]ಆರೂ ಆರೂ[3] ಇಲ್ಲದ ಮುನ್ನ, ಆಕಾಶ ಮಾರುತ[4]ವಿ[4]ಲ್ಲದ ಮುನ್ನ, ಅಂಬುಧಿ ಕಮಠ[4]ವಿ[4]ಲ್ಲದ ಮುನ್ನ, ಹರಿ ಬ್ರಹ್ಮಾದಿಗಳಾರ ನಿಲವಿಲ್ಲದ ಮುನ್ನ, ಹಿಮಕರ ದಿನಕರರ ಸುಳುಹಿಲ್ಲದ ಮುನ್ನ, [5]ಹಿಂದಿಲ್ಲ ಮುಂದಿಲ್ಲ ಒಂದೂ ಇಲ್ಲದ ಮುನ್ನ, ಗುಹೇಶ್ವರ ತಾನಿದ್ದ[5] ತನ್ನ ತಾನಱಿಯದಂತೆ.

723

ತಪವೆಂಬುದು ತಗಹು, ನೇಮವೆಂಬುದು ಬಂಧನ, ಶೀಲವೆಂಬುದು ಸೂತಕ, ಭಾಷೆಯೆಂಬುದು ಪ್ರಾಣಘಾತಕ. ಇಂತೀ ಚತುರ್ವಿಧದೊಳಗಿಲ್ಲ, ಗುಹೇಶ್ವರ, ನಿಮ್ಮ ಶರಣರಗ್ರಗಣ್ಯರು.

724

ಹಠಯೋಗ ಲಂಬಿಕೆಯೆಂದು, ಆಕುಂಚನವೆಂದು, ವಜ್ರಿ ಅಮರಿಯ ಕಲ್ಪವೆಂದು ಮಲಮೂತ್ರಂಗಳಂ ಸೇವಿಸುತ, ಇದು ಪೂರ್ವನವನಾಥಸಿದ್ಧರ ಘುತೋಕ್ತವೆಂದು ಕಾಪಾಲಿಕಾಚರಣೆಯನಾಚರಿಸುವರಲ್ಲ ಶರಣರು! ಮೇಣು ತಲೆಯೊಳಗಣ ವಾತಪಿತ್ತಶ್ಲೇಷ್ಮವ ತೆಗೆದು ಅಮೃತವೆಂದು ಬಿನುಗುದೃಷ್ಟವ

---

1. ಹಂ (ಲಿ) 2. ಣಂ (ಲಿ) 3. ಆರಾರೂ (ಲಿ) 4. ರಿ (ಲಿ) 5. ಹಿಂದೂ ಇಲ್ಲ ಮುಂದೂ ಇಲ್ಲ ಒಂದೂ ಇಲ್ಲದಂದು ಗುಹೇಶ್ವರನಿದ್ದ (ಲಿ).

ತೋಱುವರಲ್ಲ ಶರಣರು! ದ್ರವಿಸುವ ದೇಹದಲ್ಲಿ ಅಪ್ಪುವಿನ ಫಲರಸಕ್ಷೀರ ಮೊದಲಾದವ ಸೇವಿಸುತ್ತ, ಅನ್ನವ ಬಿಟ್ಟೆವೆಂಬ ಭೂತಚೇಷ್ಟಕರಲ್ಲ ಶರಣರು. ಇವೆಲ್ಲವು ಕಾಕು ಸಟೆ ಭ್ರಾಂತೆಂದು ತಿಳಿದು ನಿರ್ಧರನಿಜದಿ ನಿಂದರು. ಗುಹೇ–ಶ್ವರ, ನಿಮ್ಮ ಶರಣರು ಅಗ್ರಗಣ್ಯರು.

725

ಚಂದ್ರಮನ ಕಾಂಬುದಕೆ ಆ ಚಂದ್ರಮನಿಂದೊದಗಿದ ಬೆಳಗೇ ಮುಖ್ಯ. ಸೂರ್ಯನ ಕಾಂಬುದಕೆ ಆ ಸೂರ್ಯನಿಂದೊದಗಿದ ಬೆಳಗೇ ಮುಖ್ಯ. ಜ್ಯೋತಿಯ ಕಾಂಬುದಕೆ ಆ ಜ್ಯೋತಿಯಿಂದೊದಗಿದ ಬೆಳಗೇ ಮುಖ್ಯ. ರತ್ನವ ಕಾಂಬುದಕೆ ಆ ರತ್ನದಿಂದೊದಗಿದ ಕಳಾಲಹರಿಯೇ ಮುಖ್ಯ. ನಮ್ಮ ಗುಹೇಶ್ವರಲಿಂಗವ ಕಾಂಬುದಕೆ ಆ ಮಹಾವಸ್ತುವಿನ ದಿವ್ಯ ತೇಜದಿಂದೊದಗಿದ ಭಸಿತವೇ ಮುಖ್ಯ ಕಾಣಿರಣ್ಣ.

726

ಮುನಿಯದಿರಿ ಮುನಿಯದಿರಿ, ನಿಮಗೊಂದು ಯುಕ್ತಿಯ ಹೇಳುವೆನು. ಅದೆಂತೆಂದರೆ: ನೀವೆನ್ನ ವಂಶೀಭೂತರಾದ ಕಾರಣ, ನಿಮ್ಮ ಹೆಚ್ಚು ಕುಂದು ಎನ್ನದಾಗಿ, ನಿಮ್ಮ ಅಸ್ತಿನಾಸ್ತಿ ಎನ್ನದಾಗಿ, ನಿಮ್ಮ ಹಾನಿವೃದ್ಧಿ ಎನ್ನದಾಗಿ, ಹಾವ ಹಿಡಿದವರು ಬೇಲಿಯ ಹೊಗದೆ ಹೋಹುದೇ ಅಯ್ಯಾ?! ವ್ಯಾಧನು ಸೂಸಲ ಚೆಲ್ಲಿ ಜಂತ್ರವ ಹಣ್ಣಿ, ಅಡಿಗಲ್ಲನೊಡ್ಡಿ ಹೋದ ಬಳಿಕ, ಸೂಸಲ ಕಂಪಿಗೆ ಹೆಗ್ಗಣ ಬಂದು ಬಿದ್ದಂತೆ ಬಿದ್ದಿರಲ್ಲಾ ಮಾಯದ ಬಲೆಯಲ್ಲಿ! ಕೋಪವೆಂಬ ರಾದನೊಡ್ಡಿ, ತಾಪವೆಂಬ ಅರೆಗಲ್ಲನಿರಿಸಿ, ಹುಸಿಯೆಂಬ ಮೀಟುಗವಣೆಯ ಜಂತ್ರಿಸಿ, ಹೊನ್ನು ಹೆಣ್ಣು ಮಣ್ಣೆಂಬ ಅಡಿಗಲ್ಲನೊಡ್ಡಿ ಕೆಡಹಿದನಲ್ಲಾ ನಿಃ–ಕರುಣಿ ಮುಕ್ಕಣ್ಣ ವ್ಯಾಧನು!? ಅದೆಂತೆಂದೆಡೆ ಶಿವರಹಸ್ಯದಲ್ಲಿ—

ನಿಸ್ಸಂಗಿ ಚ ನಿರಾಭಾರಿ ನಿಸ್ಸೀಮಂ ನಿರುಪಾಧಿಕಂ ।
ನಿರ್ದೇಹಂ ನಿರ್ಮಲಂ ನಿತ್ಯಂ ಸತ್ಯಂ ಜಂಗಮಲಕ್ಷಣಂ ॥

ಇಂತೆಂಬ ಶ್ರುತ್ಯರ್ಥವ ಕೇಳದೆ ಜಂಗಮವಾಗಿ ಸುಳಿವ ಮರುಳುಗಳಿರಾ?! ಇದಕ್ಕೆ ಮತ್ತೆಯೂ—

ಸುಖಂ ಚ ಬಿಂದುಮಾತ್ರೇಣ ದುಃಖಂ ಪರ್ವತ ಏವ ಚ ।
ಹರಿಣೀಪಾದಮಾತ್ರೇಣ ಬಂಧಿತಂ ಚ ಜಗತ್ರಯಂ ॥

ಇಂತೆಂಬ ಶ್ರುತಿಗೊಳಗಾಗದೆ, ಹೊನ್ನು ಹೆಣ್ಣು ಮಣ್ಣಿನಾಶೆಯುಂ ಬಿಟ್ಟು, ಕೋಪ ತಾಪಮಂ ಬಿಟ್ಟು, ಭ್ರಾಂತಿ ಭ್ರಮೆಯುಂ ಬಿಟ್ಟು ಜಂಗಮವಾಗಬೇಕು ಕಾಣಿರೆ, ಮರುಳುಗಳಿರಾ! ಇಂತೀ ಷಡುಲೋಭದ ರುಚಿ ಹಿಂಗಿ ಜಂಗಮವಾದಲ್ಲದೆ ಭವ ಹಿಂಗದು ಕಾಣಾ ಗುಹೇಶ್ವರ.

727

ಜಂಗಮಕ್ಕೆ ಲಕ್ಷಣವಾವುದೆಂದರೆ ಲಿಂಗರೂಪಾಗಿ ಪಾದಾರ್ಚನೆಯ ಮಾಡಿಸಿಕೊಳ್ಳಬೇಕು, ಭಕ್ತಂಗೆ ಲಕ್ಷಣವಾವುದೆಂದರೆ ಭೃತ್ಯನಾಗಿ ಪಾದಾರ್ಚನೆಯ ಮಾಡಬೇಕು. ಜಂಗಮವು ಲಿಂಗರೂಪವಹ ವಿವರವೆಂತೆಂದಡೆ ಮಾತಿನಲ್ಲಿ ನಾನು ಲಿಂಗರೂಪೆಂದಡೆ ಹರಿಯದು ; ತನು-ಮನ-ಧನತ್ರಯಂಗಳಂ ಹಿಡಿಯದೆ ಮಾಡಿಸಿ ಕೊಂಬುದೀಗ ಜಂಗಮಕ್ಕೆ ಲಕ್ಷಣವು, ಆ ಸುಳುಹಿಂಗೆ ಭವಂ ನಾಸ್ತಿ. ಭಕ್ತನು ಭೃತ್ಯರೂಪವಹ ವಿವರವೆಂತೆಂದಡೆ : ಮಾತಿನಲ್ಲಿ ಭೃತ್ಯರೂಪೆಂದರೆ ಹರಿಯದು. ತನು-ಮನ-ಧನತ್ರಯಂಗಳು ಜೀವನಗುಣಕ್ಕೆ ಇಕ್ಕದೆ, ಗುರುಲಿಂಗಜಂಗಮಕ್ಕೆ ಸಂದಳಿದು ದಾಸೋಹವ ಮಾಡುವುದೀಗ ಭಕ್ತಂಗೆ ಲಕ್ಷಣವು, ಆ ನಿಲವಿಂಗೆ ಭವಂನಾಸ್ತಿ. ಇಂತೀ ಉಭಯ ಕುಳಸ್ಥಳದ ಸಂದಳಿದು ಒಂದಾಗಿ ನಿಂದ ನಿಜವು ಗುಹೇಶ್ವರಲಿಂಗದಲ್ಲಿ ಐಕ್ಯವು.

728

ಅಂಗದ ಮೇಲಣ ಲಿಂಗವ ಹಿಂಗಿ, ಸ್ಥಾವರಲಿಂಗಕ್ಕೆಱಗುವ ಈ ಭಂಗಿತರ ಮುಖವ ನೋಡಲಾಗದು. ಅದೆಂತೆಂದಡೆ, ತನ್ನ ಗಂಡನ ಬಿಟ್ಟು ಅನ್ಯ ಗಂಡರಿಗೆಱಗುವ ಹಾದರಗಿತ್ತಿಯಂತೆ ಅವಂದಿರ ಭಕ್ತಿ. ಅಂತಪ್ಪ ಪಂಚಮಹಾಪಾತಕರ ಮುಖದತ್ತ ತೋಱದಿರಾ, ಗುಹೇಶ್ವರ.

729

ಬೆಳಗಪ್ಪ ಜಾವದಲ್ಲಿ ಲಿಂಗವ ಮುಟ್ಟಿ, ಪೂಜಿಸಿ ಪ್ರಾತಃಕಾಲದಲ್ಲಿ ಜಂಗಮದ ಮುಖವ ನೋಡಿದರೆ ಹುಟ್ಟೇಳು ಜನ್ಮದ ಪಾಪ ಹಿಂಗುವುದು. ಅದೆಂತೆಂದಡೆ—

" ಅರುಣೋದಯವೇಲಾಯಾಂ ಕರೋತಿ ಶಿವಪೂಜನಂ |
ಋಣತ್ರಯವಿನಿರ್ಮುಕ್ತಸ್ತಸ್ಯಾಂತೇ ಬ್ರಹ್ಮ ತತ್ಪರಂ ||

ಇಂತಪ್ಪ ಸತ್ಕ್ರಿಯೆಯಿಲ್ಲದವರನೊಲ್ಲ ನಮ್ಮ ಗುಹೇಶ್ವರ.

730

ಎನ್ನ ನೇತ್ರದಾಹಾರವನು ಜಂಗಮಕ್ಕೆ ನೋಡಿಸಿದಲ್ಲದೆ ನಾನು ನೋಡಿದೆನಾದಡೆ ನಿಮ್ಮಾಣೆ, ನಿಮ್ಮ ಪ್ರಮಥರಾಣೆ. ಎನ್ನ ಶ್ರೋತ್ರದಾಹಾರವನು ಜಂಗಮಕ್ಕೆ ಕೇಳಿಸಿದಲ್ಲದೆ ನಾನು ಕೇಳಿದೆನಾದಡೆ ನಿಮ್ಮಾಣೆ, ನಿಮ್ಮ ಪ್ರಮಥರಾಣೆ. ಎನ್ನ ಘ್ರಾಣದಾಹಾರವನು ಜಂಗಮಕ್ಕೆ ವಾಸಿಸಿದಲ್ಲದೆ ನಾನು ವಾಸಿಸಿದೆನಾದಡೆ ನಿಮ್ಮಾಣೆ, ನಿಮ್ಮ ಪ್ರಮಥರಾಣೆ. ಎನ್ನ ಜಿಹ್ವೆಯಾಹಾರವನು ಜಂಗಮಕ್ಕೆ ಊಡಿಸಿದಲ್ಲದೆ ನಾನು ಭುಂಜಿಸಿದೆನಾದಡೆ ನಿಮ್ಮಾಣೆ, ನಿಮ್ಮ ಪ್ರಮಥರಾಣೆ, ಎನ್ನಸ್ಪರ್ಶದಾಹಾರವನು ಜಂಗಮಕ್ಕೆ ಮುಟ್ಟಿಸಿದಲ್ಲದೆ ನಾನು

ಮುಟ್ಟಿದೆನಾದಡೆ ನಿಮ್ಮಾಣೆ ನಿಮ್ಮ ಪ್ರಮಥರಾಣೆ. ಎನ್ನಂಗದಾಹಾರ ಮಜ್ಜನ ವನು ಜಂಗಮಕ್ಕೆ ಮಾಡಿಸಿದಲ್ಲದೆ ನಾನು ಮಜ್ಜನವ ಮಾಡಿದೆನಾದಡೆ ನಿಮ್ಮಾಣೆ ನಿಮ್ಮ ಪ್ರಮಥರಾಣೆ. ಎನ್ನಂಗದಾಹಾರ ವಸ್ತ್ರ ಕಪ್ಪಡವನು ಜಂಗಮಕ್ಕೆ ಹೊದಿಸಿದಲ್ಲದೆ ನಾನು ಹೊದ್ದೆನಾದರೆ ನಿಮ್ಮಾಣೆ, ನಿಮ್ಮ ಪ್ರಮಥ ರಾಣೆ. ಎನ್ನಂಗದಾಹಾರ ಸ್ತ್ರೀಯನು ಜಂಗಮಕ್ಕೆ ಸಂಯೋಗವ ಮಾಡಿಸಿದಲ್ಲದೆ ನಾನು ಸ್ತ್ರೀಯ ಸಂಯೋಗವ ಮಾಡಿದೆನಾದರೆ ನಿಮ್ಮಾಣೆ, ನಿಮ್ಮ ಪ್ರಮಥ ರಾಣೆ. ಎನ್ನಂಗದಾಹಾರ ಮಂಚ ಸುಪತ್ತಿಗೆಯ ಜಂಗಮಕ್ಕೆ ಕೊಡದೆ ನಾನು ಮಂಚ ಸುಪತ್ತಿಗೆಯ ಮೇಲೆ ಮಲಗಿದಡೆ ನಿಮ್ಮಾಣೆ, ನಿಮ್ಮ ಪ್ರಮಥ ರಾಣೆ. ಎನ್ನಂಗದಾಹಾರ ಗದ್ದುಗೆಯನು ಜಂಗಮಕ್ಕೆ ಕೊಡದೆ ನಾನು ಕುಳಿತೆನಾದಡೆ ನಿಮ್ಮಾಣೆ, ನಿಮ್ಮ ಪ್ರಮಥರಾಣೆ. ಎನ್ನಂಗದಾಹಾರ ಗೃಹವನು ಜಂಗಮಕ್ಕೆ ಕೊಡದೆ ನಾನು ಆನೆ ಕುದುರೆ ದಂಡಿಗೆಯನೇಱಿದೆನಾದಡೆ ನಿಮ್ಮಾಣೆ, ನಿಮ್ಮ ಪ್ರಮಥರಾಣೆ. ಎನ್ನಂಗದಾಹಾರ ಸತ್ತಿಗೆ ಚಾಮರಂಗಳನು ಜಂಗಮಕ್ಕೆ ಕೊಡದೆ ನಾನೇ ಉಚಪರಿಸಿಕೊಂಡಡೆ ನಿಮ್ಮಾಣೆ, ನಿಮ್ಮ ಪ್ರಮಥರಾಣೆ. ಎನ್ನಂಗದಾಹಾರ ಚರಣರಕ್ಷೆಯನು ಜಂಗಮಕ್ಕೆ ಮೆಟ್ಟಿ ಸದೆ ನಾನು ಮೆಟ್ಟಿದೆನಾದಡೆ ನಿಮ್ಮಾಣೆ, ನಿಮ್ಮ ಪ್ರಮಥರಾಣೆ. ಎನ್ನಂಗದಾ ಹಾರ ದೇಹವನೊತ್ತಿಸಿಕೊಂಬಲ್ಲಿ ಜಂಗಮಕ್ಕೊತ್ತಿಸದೆ ನಾನು ಒತ್ತಿಸಿ ಕೊಂಡೆನಾದಡೆ ನಿಮ್ಮಾಣೆ, ನಿಮ್ಮ ಪ್ರಮಥರಾಣೆ. ಇಂತೀ ಹಡಿನಾಱು ತೆಱನ ಭಕ್ತಿಯನು ಜಂಗಮಕ್ಕೆ ಮಾಡುವಲ್ಲಿ ಅದರೊಳಗೆ ಒಂದನಾದರೂ ನಾನು ವಂಚಿಸಿ ಭೋಗಿಸಿದೆನಾದಡೆ ನಿಮ್ಮಾಣೆ, ನಿಮ್ಮ ಪ್ರಮಥರಾಣೆ. ಇಂತೀ ಪ್ರಕಾರ ದಲ್ಲಿ ಜಂಗಮಲಿಂಗವನರ್ಚಿಸಿ ಪೂಜಿಸಿ ಪಾದೋದಕ ಪ್ರಸಾದವ ಕೊಂಬ ಸದ್ಭ ಕ್ತಂಗೆ ಗುರುವುಂಟು ಲಿಂಗವುಂಟು ಜಂಗಮವುಂಟು, ಪಾದೋದಕವುಂಟು, ಪ್ರಸಾದ ಉಂಟು ಆಚಾರವುಂಟು ಸದ್ಭಕ್ತಿಯುಂಟು. ಈ ಕ್ರಮದಲ್ಲಿ ಜಂಗಮ ಕರ್ಪಿಸದೆ, ಪೂಜಿಸದೆ, ತನ್ನ ಸಂಸಾರದೊಡನೆ ಒಡಲ ಹೊರೆವವಂಗೆ ಗುರುವಿಲ್ಲ ಲಿಂಗವಿಲ್ಲ, ಜಂಗಮವಿಲ್ಲ, ಪಾದೋದಕವಿಲ್ಲ ಪ್ರಸಾದವಿಲ್ಲ. ಅವನು ಅವಿಚಾರಿ, ಅವನು ಅಶ್ರೇಷ್ಠ, ಅವನು ಅಪೂಜ್ಯ, ಅವನು ಭವಿ, ಅವನು ರೋಗಿ, ಅವನು ಮತ್ತ, ಅವನು ದರ್ಪಕ, ಅವನು ಪಂಚಮಹಾಪಾತಕನಯ್ಯ, ಗುಹೇಶ್ವರ.

731

ಕ್ಷೀರಸಾಗರದೊಳಗಿದ್ದ ಹಂಸೆ ಹಾಲ ಬಯಸಲುಂಟೆ? ಪುಷ್ಪದೊಳಗಿದ್ದ ತುಂಬಿ ಪರಿಮಳವನಱಸಲುಂಟೆ? ಕಡಲೊಳಗಿದ್ದ ಕಪ್ಪೆ ಜಲವ ಬಯಸಲುಂಟೆ? ಇದೆಂತಯ್ಯಾ? ತಾ ಲಿಂಗದೊಳಗಿದ್ದು ಬೇಱೆ ಇತರ ಕಾಮ್ಯದೊಳಗಿಪ್ಪ ಭ್ರಾಂತರನೇನೆಂಬೆನಯ್ಯ, ಗುಹೇಶ್ವರ.

732

ಶಿವಶರಣನು ನಿದ್ರೆಗೈದಡೆ ಜಪ ಕಾಣಿರಣ್ಣ! ಶಿವಶರಣನು ಎದ್ದಿದ್ದರೆ ಶಿವರಾತ್ರಿ ಕಾಣಿರಣ್ಣ! ಶಿವಶರಣನು ನೋಡಿದಡೆ ಪಾಪಕ್ಷಯ ಕಾಣಿರಣ್ಣ! ಶಿವಶರಣನು ನಡೆದುದೇ ಪಾವನ ಕಾಣಿರಣ್ಣ, ಶಿವಶರಣನು ನುಡಿದುದೇ ಶಿವತತ್ತ್ವ ಶಿವಮಂತ್ರ ಕಾಣಿರಣ್ಣ! ಶಿವಶರಣ ಮುಟ್ಟಿದುದೇ ಸರ್ವಸಿದ್ಧಿ ಕಾಣಿರಣ್ಣ! ಶಿವಶರಣನ ಮನವೇ ಲಿಂಗ ಕಾಣಿರಣ್ಣ! ಶಿವಶರಣನ ಕಾಯವೇ ಕೈಲಾಸ ಕಾಣಿರಣ್ಣ. ಗುಹೇಶ್ವರ, ನಿಮ್ಮ ಶರಣನ ಚಾರಿತ್ರವು ವಿಪರೀತವು.

733

ಆವ ಜಾತಿಯಲ್ಲಾದಡೂ ಆಗಲಿ, ಪುರಾತನರ ಚಾರಿತ್ರದಲ್ಲಿ ನಡೆದು ಗುರುಲಿಂಗ ಜಂಗಮಕ್ಕೆ ಅರ್ಥಪ್ರಾಣಾಭಿಮಾನವಂ ಕೊಟ್ಟು ಅಹಂಕಾರವಳಿದಂಥಾ ಪುರಾತನರ ಬಾಯ ತಂಬುಲವ ಮೆಲುವೆ. ಬೀಳುಡಿಗೆಯ ಹೊದಿವೆ. ಆತನ ಪಾದರಕ್ಷೆಗಳೆರಡನೂ ಮಂಡೆಯ ಮೇಲೆ ಹೊತ್ತುಕೊಂಡು ಬದುಕುವೆನಯ್ಯ. ಆ ಗಣಂಗಳ ದಾಸನ ದಾಸ ನಾನು ಜನ್ಮ ಜನ್ಮದಲ್ಲಿ ಆಗುವೆ, ಕಾಣಾ ಗೊಹೇಶ್ವರ.

734

ವ್ಯಡನೇ, ನಿಮ್ಮ ಪುರಾತನರ ಕಾಣುತ್ತ ತಡೆಯದೆ ಇದಿರೆದ್ದು ಪೊಡಮಡೆನಾಗಿ ಬಿಡದು ನಾಚಿಕೆ. ಸುಡಲಿಕೆನ್ನ ನುಡಿಹ, ಸಡಿಲದೆನ್ನ ಅಹಂಕಾರವು ನೋಡಯ್ಯ. ಬಡಮನದವನ ಜಡಿದು ನಡೆಸಯ್ಯ, ಗುಹೇಶ್ವರ.

735

ಉಪಪಾತಕ ಮಹಾಪಾತಕವ ಮಾಡಿದ ಕರ್ಮಂಗಳು ಕೋಟ್ಯನುಕೋಟಿ ಒಬ್ಬ ಶಿವಭಕ್ತನ ಅಂಗಳವ ಕಂಡಲ್ಲಿ ಅಳಿದು ಹೋಯಿತ್ತು ನೋಡಾ! ಅದೇನು ಕಾರಣವೆಂದರೆ :

ನಾಹಂ ವಸಾಮಿ ಕೈಲಾಸೇ ನ ಮೇರೌ ಚ ನ ಮಂದರೇ ।
ಮದ್ಭಕ್ತಾ ಯತ್ರ ತಿಷ್ಠಂತಿ ತತ್ರ ತಿಷ್ಠಾಮಿ ಪಾರ್ವತಿ ॥

ಎಂದುದಾಗಿ ಇಂತಹ ಶಿವನೊಲಿದ ಸದ್ಭಕ್ತನ ಅಂತರಂಗದಲ್ಲಿ ಶಿವನಿಪ್ಪನಾಗಿ, ಶಿವನಿದ್ದಲ್ಲಿ ಕೈಲಾಸವಿರುವುದು. ಕೈಲಾಸವಿದ್ದಲ್ಲಿ ಅಷ್ಟಷಷ್ಟಿ ತೀರ್ಥಂಗಳಿಪ್ಪವು. ಆ ತೀರ್ಥಂಗಳಲ್ಲಿ ಸಮಸ್ತ ರುದ್ರಗಣಂಗಳಿಪ್ಪರು. ಇಂತಪ್ಪ ಪುರಾತನರ ಮನೆಯಂಗಳವ ಕಂಡೆನಾಗಿ ನಮ್ಮ ಗುಹೇಶ್ವರಲಿಂಗದ ಕಂಗಳಿಗೆ ತೃಪ್ತಿಯಾಯಿತ್ತು, ಕಾಣಾ ಸಿದ್ಧರಾಮಯ್ಯ.

736

ಏನೂ ಏನೂಯಿಲ್ಲದ ಬಯಲೊಳಗೊಂದು ಬಗೆಗೊಳಗಾದ ಬಣ್ಣ ತಲೆದೋಱಿತ್ತು. ಆ ಬಯಲನಾ ಬಣ್ಣ ಶೃಂಗರಿಸಲು ಬಯಲು ಸ್ವರೂಪುಗೊಂಡಿತ್ತು. ಅಂತಪ್ಪ ಸ್ವರೂಪಿನ ಬೆಡಗು ತಾನೆ ನಮ್ಮ ಗೊಹೇಶ್ವರ ಲಿಂಗದ ಪ್ರಥಮಭಿತ್ತಿ.

737

ನಿಮ್ಮ ತೇಜವ ನೋಡಲೆಂದು ಹೆಱಿಸಾರಿ ನೋಡುತ್ತಿರಲು, ಶತಕೋಟಿ ಸೂರ್ಯರು ಮೂಡಿದಂತೆ ಇರ್ದುದಯ್ಯ. ಮಿಂಚಿನ ಬಳ್ಳಿಯ ಸಂಚವ ಕಂಡಡೆ ಎನಗಿದು ಸೋಜಿಗವಾಯಿತ್ತು! ಗೊಹೇಶ್ವರಾ, ನೀನು ಜ್ಯೋತಿರ್ಲಿಂಗವಾದಡೆ ಉಪಮಿಸಿ ನೋಡಬಲ್ಲವರಿಲ್ಲಯ್ಯ.

738

ತಾಯಿ ತಂದೆಯಿಲ್ಲದ ಕಂದಾ, ನಿನಗೆ ನೀನೇ ಹುಟ್ಟಿದೆಯಲ್ಲಾ! ನಿನ್ನ ಪರಿಣಾಮವೆ ನಿನಗೆ ಪ್ರಾಣತೃಪ್ತಿಯಾಗಿರ್ದೆಯಲ್ಲಾ! ಭೇದಕರಿಗೆ ಅಭೇದ್ಯನಾಗಿ, ನಿನ್ನ ನೀನೇ ಬೆಳಗುತಿರ್ದೆಯಲ್ಲಾ! ನಿನ್ನ ಚಾರಿತ್ರ ನಿನಗೆ ಸಹಜ, ಗುಹೇಶ್ವರ.

739

ಬ್ರಹ್ಮ ವಿಷ್ಣು ರುದ್ರ ಈಶ್ವರ ಸದಾಶಿವ ಪರಮೇಶ್ವರರೆಂಬ ಸಂದಣಿ ತಲೆದೋಱದ ಮುನ್ನ, ಅಲ್ಲಿಂದತ್ತ ಬಯಲೆ ಸ್ವರೂಪಾಯಿತ್ತು. ಆ ಸ್ವರೂಪಿನ ಘನತೆಯನುಪಮಿಸಬಾರದು. ನೋಡಬಾರದ ಬೆಳಗು, ಕೂಡಬಾರದ ಮೂರ್ತಿ, ಅಖಂಡ ಅಪ್ರತಿಮ ನಮ್ಮ ಗೊಹೇಶ್ವರಲಿಂಗದ ಬೆಳಗಿನ ಮೂಲವ ಲಿಂಗಸಂಗಿಗಳಲ್ಲದೆ ಮಿಕ್ಕಿನ ಅಂಗವಿಕಾರಿಗಳೆತ್ತ ಬಲ್ಲರೋ ?

740

ಚಿತ್ತುವೆಂಬ ಬಿತ್ತು ಬಲಿದು ಎರಡಾದಲ್ಲಿ, ಲಿಂಗವೆಂಬ ಕಳೆ ಅಂಕುರಿಸಿ ಮೂರ್ತಿಯಾಯಿತ್ತು. ಆ ಮೂರ್ತಿಯ ಘನತೆಯನೇನೆಂದುಪಮಿಸಬಾರದು. ನೋಡಿದಡೆ ಮೂರ್ತಿ, ಹಿಡಿದಡೆ ಬಯಲು; ಆ ಮೂರ್ತಿಯೊಳಗದೆ ಈರೇಳು ಲೋಕದ ಪ್ರಾಣಕಳೆ. ಆ ಕಳೆಯು ಬೆಳಗು ತಾನೆ ನಮ್ಮ ಗೊಹೇಶ್ವರ ಲಿಂಗದ ಲೀಲಾಮೂಲದ ಪ್ರಥಮಭಿತ್ತಿ.

741

ಅಯ್ಯಾ, ತತ್ತ್ವವಿತತ್ತ್ವಗಳಿಲ್ಲದಂದು, ಪ್ರಕೃತಿ ಪುರುಷರಿಲ್ಲದಂದು, ಜೀವಪರಮರೆಂಬ ಭಾವ ತಲೆದೋಱದಂದು, ಏನೂ ಏನೂ ಇಲ್ಲದಂದು, ಬಯಲು ಬಲಿದೊಂದು ಬಿಂದುವಾಯಿತ್ತು ನೋಡಾ. ಆ ಬಿಂದು ಅಕ್ಷರತ್ರಯದ

ಗದ್ದುಗೆಯಲ್ಲಿ ಕುಳ್ಳಿರಲು ಓಂಕಾರ ಉತ್ಪತ್ತಿಯಾಯಿತ್ತು. ಆ ನಾದ [1]ಉತ್ಪತ್ತಿಯಾ[1]ದಲ್ಲಿ ಮೂರ್ತಿಗೊಂಡನೊಬ್ಬ ಶರಣನು, ಆ ಶರಣನಿಂದಾಯಿತ್ತು ಪ್ರಕೃತಿ. ಆ ಪ್ರಕೃತಿಯಿಂದಾಯಿತ್ತು ಲೋಕ, ಈ ಲೋಕಲೌಕಿಕವನತಿಗಳೆದು ನಿಜದಲ್ಲಿ ನಿವಾಸಿಯಾಗಿಪ್ಪ ಗೊಹೇಶ್ವರನ ಶರಣ ಚೆನ್ನಬಸವಣ್ಣನ ಘನವನು ಬಸವಣ್ಣನ ಕೃಪೆಯಿಂದ[1]ಲಾನ[1]ರಿದು ನಮೋ ನಮೋ ಎನುತಿರ್ದೆನು.

742

ಸಹಜದಿಂ[2]ದ[2] ನಿರಾಲಂಬವಾಯಿತ್ತು, ನಿರಾಲಂಬದಿಂ[2]ದ[2] ನಿರಾಳವಾಯಿತ್ತು, ನಿರಾಳದಿಂ[2]ದ[2] ನಿರವಯುವಾಯಿತ್ತು, ನಿರವಯುದಿಂ[2]ದ[2] [3]ಅನಾದಿ[3]ಯಾಯಿತ್ತು. [4]ಅನಾದಿಯಲ್ಲಿ ಮೂರ್ತಿಯಾದನೊಬ್ಬ ಶರಣ,[4] ಆ ಶರಣನ ಮೂರ್ತಿಯಿಂದ ಸದಾಶಿವನಾದ, ಆ ಸದಾ ಶಿವನ ಮೂರ್ತಿಯಿಂದ [5]ಶಿವ[5]ನಾದ, ಆ [5]ಶಿವನ[5] ಮೂರ್ತಿಯಿಂದ ರುದ್ರನಾದ, ಆ ರುದ್ರನ ಮೂರ್ತಿಯಿಂದ ವಿಷ್ಣುವಾದ, ಆ ವಿಷ್ಣುವಿನ ಮೂರ್ತಿಯಿಂದ ಬ್ರಹ್ಮನಾದ. ಆ ಬ್ರಹ್ಮನ ಮೂರ್ತಿಯಿಂದಲಾದವು ಸಕಲ [6]ಜಗತ್ತುಗಳೆಲ್ಲ.[6] [7]ಇ[7]ವರೆಲ್ಲಾ ನಮ್ಮ ಗೊಹೇಶ್ವರನ ಕರಸ್ಥಲದ ಹಂಗಿನಲ್ಲಿ [8]ಹುಟ್ಟಿ[8] ಬೆಳೆದರು.

743

ಅನಾದಿಯ ಮಗನು ಆದಿ. ಆದಿಯ ಮಗನತೀತ. ಅತೀತನ ಮಗನು ಆಕಾಶ. ಆಕಾಶನ ಮಗನು ವಾಯು. ವಾಯುವಿನ ಮಗನಗ್ನಿ. ಅಗ್ನಿಯ ಮಗ ಅಪ್ಪು. ಅಪ್ಪುವಿನ ಮಗ ಪೃಥ್ವಿ. ಪೃಥ್ವಿಯಿಂದ ಸಕಲ [9]ಜೀವರೆಲ್ಲರೂ ಉದ್ಭವ[9] ಗೊಹೇಶ್ವರ.

744

ಒಂದೆರಡಾದುದನಾರೂ ಅರಿಯರು. ಆ ಒಂದು ಒಂದೆಯಾಯಿತ್ತು, ತ್ರಿತತ್ತ್ವವಾಯಿತ್ತು, ವೇದಾತೀತವಾಯಿತ್ತು, ಭರಿತವಾಯಿತ್ತು, ಪ್ರಾದೇಶಿಕವಾಯಿತ್ತು, ಭಕ್ತಿಗೆ ಸಾಧ್ಯವಾಯಿತ್ತು. ಅದಕ್ಕೆ ಆಧಾರ ದೇಹವಾಯಿತ್ತು. ಅದು ಅಷ್ಟವಿಗ್ರಹ ಸ್ವರೂಪವಾಗಿರುತ್ತಿಪ್ಪುದು. ಮತ್ತಿದ್ದ ಒಂದು ಮಾಯಾ ಶಕ್ತಿಯಂ ಕೂಡಿ, ಗುಣತ್ರಯಂಗಳಂ ಕೂಡಿ ನಾನಾತ್ಮನೆನಿಸಿಕೊಂಡು, ವಿಷಯಾತ್ಮ, ಇಂದ್ರಿಯಾತ್ಮ, ಭೂತಾತ್ಮ, ಜೀವಾತ್ಮ, ಪರಮಾತ್ಮನೆನಿಸಿಕೊಂಡು, ಪ್ರಾಣಾದಿ ವಾಯುಗಳಂ ಕೂಡಿಕೊಂಡು, ಜಡಪ್ರಕೃತಿಗಳಂ ಹೊತ್ತು

---

1 × (ಶೂ) 2. ದೆ (ಪ್ರ) 3. ಆದಿ (ಪ್ರ) 4. ಆ ಆದಿಯ ಮೂರ್ತಿಯಿಂದಲೊಬ್ಬ ಶರಣನಾದ (ಪ್ರ) 5. ಈಶ್ವರ (ಪ್ರ) 6. ಜಗದ ಜೀವ ಜಂತುಗಳು (ಪ್ರ) 7. ಇಂತಿ (ಪ್ರ) 8. × (ಪ್ರ) 9. ಜೀವಿಗಳೆಲ್ಲ ಉದ್ಭಯಿಸಿದವಯ್ಯ (ಗ)

ಕೊಂಡು, ಸಂಕಲ್ಪ ವಿಕಲ್ಪವೆಂಬ ಉಭಯಕರ್ಮಂಗಳಂ ಕಲ್ಪಿಸಿ, ನಾನಾಯೋನಿ ಪ್ರಾಪ್ತನಾಗುತ್ತಿರ್ದು, ಲೋಕಾದಿಲೋಕಂಗಳೊಳು ತೊಳಲಿ ಬಳಲಿ, ತನ್ನ ಮೊದಲ ಕೂಡುವ ಪ್ರಕಾರಮಂ ಬಯಸಿ, ನಾನಾ ಪಥದಿಂದ ಅಱಿಸಿ ಹರಿವು ತ್ರಿಪ್ಪರಖಿಳ ಜೀವಿಗಳೆಲ್ಲರು. ಇದ ಬೆರಸದೆ ಬೆರಸಿದ ಸಂಗನ ಬಸವಣ್ಣನ ನೆನೆದವಂಗೆ ಇದು ಸಾಧ್ಯವೆಂದಱಿದೆನಾಗಿ ನಾನು ಬಸವಣ್ಣನ ನೆನೆನೆನೆದು ಶರಣೆಂದು ಶುದ್ಧನಾದೆ, ಕಾಣಾ ಗೊಹೇಶ್ವರ.

745

ಅಕಲ್ಪಿತ ನಿತ್ಯನಿರಂಜನ ನಿಸ್ಸೀಮ ನಿರವಯ ಅಖಂಡಪರಿಪೂರ್ಣ ಪರಂಜ್ಯೋತಿಯಾದ ಮಹಾಘನವಸ್ತುವಿನಲ್ಲಿ ಪರಮಾತ್ಮನುತ್ಪತ್ತಿ. ಆ ಪರಮಾತ್ಮನಿಂದ ಅಂತರಾತ್ಮನುತ್ಪತ್ತಿ. ಆ ಅಂತರಾತ್ಮನಿಂದ ಜೀವಾತ್ಮನುತ್ಪತ್ತಿ. ಈ ತ್ರಯಾತ್ಮರೊಳಗೆ ಜೀವಾಂತರಾತ್ಮಾದಿಗಳೆ ಪಾಶಬದ್ಧರು. ಪರಮಾತ್ಮನೆ ಪಾಶಮುಕ್ತನು. ಈ ಸಂಚವನಱಿದ ದ್ವಂದ್ವರಹಿತ ತಾನೆ ನಮ್ಮ ಗೊಹೇಶ್ವರ ಲಿಂಗದಲ್ಲಿ ಯಂತ್ರವಾಹಕನೆನಿಸುವನು.

746

ವಾರಿ ಬಲಿದು ವಾರಿಕಲ್ಲಾದಂತೆ, ಶೂನ್ಯವೇ ಸ್ವಯಂಭುವಾಯಿತ್ತು. ಆ ಸ್ವಯಂಭುಲಿಂಗದಿಂದಾಯಿತ್ತು ಮೂರ್ತಿವತ್ತು. ಆ ಮೂರ್ತಿಯಿಂದಾ-ಯಿತ್ತು ವಿಶ್ವೋತ್ಪತ್ತಿ. ಆ ವಿಶ್ವೋತ್ಪತ್ತಿಯಿಂದಾಯಿತ್ತು ಸಂಸಾರ. ಆ ಸಂಸಾರದಿಂದಾಯಿತ್ತು ಮಱವೆ. ಆ ಮಱವೆಯೆಂಬ ಮಹಾಮಾಯೆ ವಿಶ್ವವ ಮುಸುಕಿದಲ್ಲಿ, ನಾ ಬಲ್ಲೆ ಬಲ್ಲಿದರೆಂಬ ಅಱುಹಿರಿಯರೆಲ್ಲ ತಾಮಸಕ್ಕೊಳಗಾಗಿ ಮೀನಕೇತನನ ಬಲೆಗೆ ಸಿಲುಕಿ, ಮಾಯೆಯ ಬಾಯ ತುತ್ತಾದರಲ್ಲಾ, ಗೊಹೇಶ್ವರ.

747

ನಾನೆಂಬಹಂಕಾರ ತಲೆದೋಱಿದಲ್ಲಿ ಆಟಮಟಕುಟಿಲಕುಹಕವೆಂಬ ಬಿಱುಗಾಳಿ ಹುಟ್ಟಿತ್ತು. ಆ ಬಿಱುಗಾಳಿ ಹುಟ್ಟಲೊಡನೆ ಜ್ಞಾನಜ್ಯೋತಿ ಕೆಟ್ಟಿತ್ತು. ಜ್ಞಾನಜ್ಯೋತಿಕೆಡಲೊಡನೆ ನಾ ಬಲ್ಲೆ ಬಲ್ಲಿದರೆಂಬ ಅಱುಹಿರಿಯರೆಲ್ಲರು ತಾಮಸಕ್ಕೊಳಗಾಗಿ ಸೀಮೆದಪ್ಪಿ ಕೆಟ್ಟರು ಕಾಣಾ ಗೊಹೇಶ್ವರ.

748

ಎಲೆ ಮನವೆ, ನೀ ನಿನ್ನ ನಿಜವ ತಿಳಿವಡೆ ಆ ನಿನ್ನ ನಿಜವ ಹೇಳುವೆ ಕೇಳು: ಅದು ಕೇವಲ ಜ್ಯೋತಿ, ಅದು ವರ್ಣಾತೀತ. ನೀನದನಱಿಸುವಾಗ ನಿನಗಾ-ವಲ್ಲಿ ನಿಶ್ಚಯ ತೋಱಿತ್ತು ಅದೀಗ ನಿನ್ನ ಪರಿಪೂರ್ಣತ್ವದ ನೆಲೆ. ಆ ನಿನ್ನ ನಿಜವ ನಿಶ್ಚೈಸಿ ನಿರ್ಗಮನಿಯಾದಲ್ಲಿ, ಅದೇ ನಿನ್ನ ಸಮ್ಯಜ್ಞಾನದ ತೋಱಿಕೆ.

ಆ ತೋಱಿಕೆಯ ಅಖಂಡಬೆಳಗಿನ ಹೊಳಹಿನೊಳಗೆ ನೀ ನಮ್ಮ ಗೊಹೇಶ್ವರ ಲಿಂಗದ ಶ್ರೀಚರಣವನಱಿಸಿಕೊಂಡು ನಿಶ್ಚಿಂತನಾಗೆಲೆ ಮನವೇ.

749

ಎಲೆ ಮನವೇ, ಎಲ್ಲಿ ಹವಣಿಸಬಾರದ ಅಖಂಡ ಬೆಳಗು ತೋಱುತ್ತಿಹುದು ಅದೀಗ ನಿನ್ನ ನಿಜ. ಎಲೆ ಮನವೇ, ಆವಲ್ಲಿ ನೀನೆಂಬ ಶಂಕೆ ಹಿಂಗಿ ತಾನೆ ತೋಱುತ್ತಿಹುದು ಅದೀಗ ನಿನ್ನ ನಿಜ. ಎಲೆ ಮನವೇ, ನಿನ್ನ ನಿಜವ ನೆಱೆಯಬಲ್ಲಡೆ ಅದೇ ಬ್ರಹ್ಮಜ್ಞಾನ. ಅದೇ ಕೇವಲ ಮುಕ್ತಿ. ಅದೇ ನಮ್ಮ ಗೊಹೇಶ್ವರ ಲಿಂಗವನಱಿವ ಸಹಜಭಕ್ತಿಯ ಕುಳ ಕಣಾ, ಎಲೆ ಮನವೆ, ನೀನಿದ ನಿಶ್ಚಯಿಸಿಕೋ ಮಱೆಯದೆ.

750

[A]ಸ್ಫಟಿಕ ಘಟದೀಪದಂತೆ[A] [B]ಒಳಹೊರ[1]ಗು ಇ[1]ಲ್ಲ[B] ನೋಡಾ. ವಿಗಡ ಚರಿತ್ರಕ್ಕೆ [2]ನಾ[2] ಬೆಱಗಾದೆನು. ನೋಡುವರೆ ಕಾಣಬರುತ್ತಿ[C]ದೆ.[C] ಮುಟ್ಟುವರೆ ಕೈಗೆ ಸಿಲುಕದು. [D]ಹೊದ್ದಿದರೆ[D] ಸಮೀಪ; [E]ಹತ್ತೆ[E] [3]ಸಾರಿದಡತ್ತತ್ತ[3] ತೋಱು[4]ತ್ತಿ[4]ದೆ. [5]ಆಕಾರನಿರಾಕಾರವ[5] ನುಂಗಿ, [6]ಬಯಲು[6]ಸಮಾಧಿಯಲ್ಲಿ ಸಿಲುಕಿತ್ತು ನೋಡಾ, ದರುಶನದಿಂ[7]ದ ಅ[7]ಮೃತಾಹಾರವಾಯಿತ್ತು. ಬೆರ[8]ಸಿ[8] ದಡಿನ್ನೆಂತೋ ಗೊಹೇಶ್ವರ.

751

ಕಾಣಬಾರದ ಗುರು ಕಣ್ಗೆ ಗೋಚರವಾದಡೆ ಹೇಳಲಿಲ್ಲದ ಬಿನ್ನಪ. ಮುಟ್ಟಲಿಲ್ಲದ ಹಸ್ತಮಸ್ತಕಸಂಯೋಗ. ಪೂಸಲಿಲ್ಲದ ವಿಭೂತಿಯ ಪಟ್ಟ. ಕೇಳಲಿಲ್ಲದ ಕರ್ಣಮಂತ್ರ. ತುಂಬಿ ತುಳುಕದ ಕಳಶಾಭಿಷೇಕ. ಆಗಮವಿಲ್ಲದ ದೀಕ್ಷೆ. ಪೂಜೆಗೆ ಬಾರದ ಲಿಂಗ. ಸಂಗವಿಲ್ಲದ ಸಂಬಂಧ [9]ಸ್ವಯ[9]ಮಪ್ಪನುಗ್ರಹ[10]ವ[10] ಅನುಗೊಂಬಂತೆ ಮಾಡಾ, ಗೊಹೇಶ್ವರ.

752

ಅಱಿಸುವ ಬಳ್ಳಿ, ಕಾಲ ಸುತ್ತಿತೆಂಬಂತೆ, ಬಯಸುವ ಬಯಕೆ ಕೈಸಾ[11]ರಿದಂತೆ[11], ಬಡವ ನಿಧಾನವನೆಡಹಿ ಕಂಡಂತೆ, ನಾನಱಿಸುತ್ತಲಱಿಸುತ್ತ ಬಂದು,

---

[A]ಸ್ಫಟಿಕಘಟದಂತೆ (ಲಿ) [B]ಒಳಗಲ್ಲ ಹೊಱಗಲ್ಲ (ವ) 1. ಗಿ (ಶೂ) 2. × (ಶೂವ) [C]ದೇನು (ವ) [D]ಹೊದ್ದುವಡೆ (ಲಿ) [E] ಹತ್ತ (ಲಿ) 3. ಸಾರುವರತ್ತತ್ತ (ಶೂ) 4. ತ್ತ (ಶೂ) 5. ಆಕಾರವ ನಿರಾಕಾರ (ಶೂ) 6. ಬಯಲ (ಶೂವ) 7. ದ (ಶೂ) 8. ಸ (ಲಿ) 9. ಸಯ (ಶೂ) 10. ಮಂ (ಲಿ) 11. ರುವಂತೆ (ಶೂ)

ಭಾವಕ್ಕಗಮ್ಯ[1]ವಾದ[1] [2]ಮೂರ್ತಿಯ ಕಂಡೆ ನೋಡಾ.[2] [3]ಎನ್ನ ಅಱುವಿನ ಹರುವ ಕಂಡೆ ನೋಡಾ.[3] ಎನ್ನ ಒಳ ಹೊಱಗೆ [4]ಎಡೆದೆಱಹಿಲ್ಲದೆ ಥಳಥಳಿಸಿ ಹೊಳೆವುತಿಪ್ಪ ಅಖಂಡ[4] ಜ್ಯೋತಿಯ ಕಂಡೆ ನೋಡಾ. ಕುಱುಹಳಿದ ಕರ-ಸ್ಥಳದ ನಿಬ್ಬೆಱಗಿನ ನೋಟದ ಎನ್ನ ಪರಮಗುರುವ ಕಂಡು ಬದುಕಿದೆ[5]ನು[5] ಕಾಣಾ, ಗೊಹೇಶ್ವರ.

## 753

ನೀನೆನಗೆ ಗುರುವಪ್ಪಡೆ, ನಾ ನಿನಗೆ ಶಿಷ್ಯನಪ್ಪಡೆ, [6]ಎನ್ನ ಕರಣಾದಿ ಗುಣಂಗಳ ಕಳೆದು ಎನ್ನ ಕಾಯ ಧರ್ಮವ ತೊಡೆದು[6], ನೀನೆನ್ನ ಕಾಯದ [7]ಲ[7]ಡಗಿ, ನೀನೆನ್ನ ಪ್ರಾಣದ[8]ಲ[8]ಡಗಿ, ನೀನೆನ್ನ ಭಾವದ[8]ಲ[8]ಡಗಿ, ನೀನೆನ್ನ ಕರಸ್ಥಲಕೆ ಬಂದು ಕಾರುಣ್ಯವ ಮಾ[9]ಡು[9], ಗೊಹೇಶ್ವರ.

## 754

ಇಷ್ಟಲಿಂ[10]ಗ[10] ಪ್ರಾಣಲಿಂ[10]ಗವೆಂಬ[10] ಭೇದವನಾರು ಬಲ್ಲರು ಹೇಳಾ. ಅಂತರಂಗವೆಂಬ ಶಬ್ದಕ್ಕೆ ಬಹಿರಂಗ ಮುಂದುಗೊಂಡಿಪ್ಪುದು. [11]ಬಹಿರಂಗವೆಂಬ ಶಬ್ದಕ್ಕೆ ಅಂತರಂಗ ಮುಂದುಗೊಂಡಿಪ್ಪುದು[11]. ಮನವನೆಡೆಗೊಂಡ ಲಿಂಗದ ಅಱುವು ವಿಚಾರವ್ಯಾಕುಲ[12]ಕ್ಕೊ[12]ಳಗಾಗಬಾರದೆಂದು ಮನ ಭಾವ ಜ್ಞಾನ ನೋಟವ ತಂದು ಕರಸ್ಥಲದಲ್ಲಿ ನಿಕ್ಷೇಪಿಸಿ, ಅಂತರಂಗ ಬಹಿರಂಗ[13]ವೆರಡಱಿಯದೆ[13] ಅ[14]ನಿಮಿಷ[14]ನಾಗಿಪ್ಪನಾ ಶರಣನು. ಪ್ರಾಣಲಿಂಗದ [15]ಪ್ರಸನ್ನದ ಮುಖವ[15] ನೋಡಿ ಪರಿಣಾಮಿಸ[16]ಲೋಸುಗ[16] ತೇಜನೆಂಬ ದರ್ಪಣವ [17]ಹಿಡಿದಿಪ್ಪ[17] ನೋಡಯ್ಯ! ಗೊಹೇಶ್ವರಲಿಂಗದಲ್ಲಿ ನಿಜವನೈದಿಹೆನೆಂಡಡೆ ಕುಱುಹುವಿಡಿದು ಕುಱುಹುಗೆಡಬೇಕು [18]ನೋಡಾ[18], ಸಿದ್ಧರಾಮಯ್ಯ.

## 755

ಆ ಇಷ್ಟಲಿಂಗವೆ ಅಂಗಲಿಂಗ ಪ್ರಾಣಲಿಂಗ ಮನೋಲಿಂಗವಾಯಿತ್ತು ನೋಡಾ. ಅಂಗ ಲಿಂಗವಾಗಿ ನಡೆನುಡಿ ಗತಿಯನಱಿಯದು. ಪ್ರಾಣ ಲಿಂಗವಾಗಿ ನವನಾಳದ ಸುಳುಹನಱಿಯದು. ಮನ ಲಿಂಗವಾಗಿ ನೆನಹು

---

1. ನ (ಶೂ) 2. ಕಂಡೆನಯ್ಯ (ಶೂ) 3. ಎನ್ನ ಅಱುವಿನ ಹರಿವ ಕಂಡೆನಯ್ಯ (ಶೂ) 4. ಸರ್ವಾಂಗ ಪರಮಪ್ರಕಾಶದೊಳು ಬೆಳಗುವ (ಶೂ) 5. × (ಶೂ) 6. ಎನ್ನ ಕಾಯದ ಕರ್ಮವ ತೊಡೆದು, ಎನ್ನ ಕರಣಾದಿಗುಣಂಗಳ ಕಳೆದು (ಶೂ) 7. ಲ್ಲಿ ಅ (ಶೂ) 8. ಕ್ಕೆ (ಶೂ) 9. ಡಾ (ಶೂ) 10. ಗದ (ಶೂ) 11. × (ಶೂ) 12. ಕ್ಕೆ ಒ (ವ) 13. ವೆಂದಱಿಯದೆ (ವ) 14. ನುಮಿಷ (ಲಿ) 15. ಪ್ರಸನ್ನ ಮುಖವ (ವಶೂ) 16. ಲೋಸ್ಕರ (ವ) ಲೋಸುಗರ (ಶೂ) 17. ಹಿಡಿದಿಪ್ಪರು (ವ) ಹಿಡಿದು ಇರ್ಪನ (ಶೂ) 18. ನು × (ಶೂ)

ಗೆಟ್ಟಿತ್ತು, ಅನುಭಾವ ಲಿಂಗವಾಗಿ ವಿಚಾರವಱಿತಿತ್ತು. ಭಾವ ಲಿಂಗವಾಗಿ ನಿರ್ಭಾವವಳವಟ್ಟಿತ್ತು. ಸರ್ವಕ್ರೀಗಳೆಲ್ಲ ಲಿಂಗವಾಗಿ ಮಾರ್ಗಕ್ರೀಯ ಹೊಲಬನಱಿಯದು. ಅಱಿವು ಲಿಂಗವಾಗಿ ಮಱಹುಗೆಟ್ಟಿತ್ತು. ಅಂತರಂಗ ಲಿಂಗವಾಗಿ ಬಹಿರಂಗವೆಂತೆಂದಱಿಯದು. ಬಹಿರಂಗ ಲಿಂಗವಾಗಿ ಅಂತರಂಗದ ಸುದ್ದಿಯನಱಿಯದು. ಇಂತು ಸರ್ವಾಂಗ ಲಿಂಗವಾಗಿ ಸರ್ವೇಂದ್ರಿಯ ಗಮನಗೆಟ್ಟಿತ್ತು. ಮಹಾಘನವಿಂಬುಗೊಂಡಿತ್ತಾಗಿ ನಿಷ್ಪತಿ ಕಱಿಗೊಂಡಿತ್ತು. ಗೊಹೇಶ್ವರ ಲಿಂಗದಲ್ಲಿ ಪ್ರಾಣಲಿಂಗಸಂಬಂಧ ಸ್ವಯವಾಯಿತ್ತು ನೋಡಾ, ಸಿದ್ಧರಾಮಯ್ಯ.

## 756

ಅಂಗದ ಮೇಲೆ ಲಿಂಗಸಂಬಂಧವಾದ ಬಳಿಕ, ಪ್ರಾಣನ ಮೇಲೆ ಜ್ಞಾನ ನಿರ್ಧರವಾಯಿತ್ತು ನೋಡಾ. ಒಳಹೊಱಗೆಂಬ ಉಭಯವು ಏಕಾರ್ಥವಾಯಿತ್ತು. ಗೊಹೇಶ್ವರ ಲಿಂಗವನಿಂತು ನೆರೆದು ಸುಖಿಯಾದೆನು ಕಾಣಾ, ಸಿದ್ಧರಾಮಯ್ಯ.

## 757

ಆಚಾರಲಿಂಗವಿಡಿದು ಗುರುಲಿಂಗವ ಕಾಣಬೇಕು. ಗುರುಲಿಂಗವಿಡಿದು ಶಿವಲಿಂಗವ ಕಾಣಬೇಕು. ಶಿವಲಿಂಗವಿಡಿದು ಜಂಗಮಲಿಂಗವ ಕಾಣಬೇಕು. ಜಂಗಮಲಿಂಗವಿಡಿದು ಪ್ರಸಾದಲಿಂಗವ ಕಾಣಬೇಕು. ಪ್ರಸಾದಲಿಂಗವಿಡಿದು ಮಹಾಲಿಂಗವ ಕಾಣಬೇಕು. ಇಂತೀ ಷಡುಸ್ಥಲದ ಧಾತುವ ಸಂಬಂಧಿಸಿ ಒಂದು ಮಾಡಿಕೊಂಡಿಪ್ಪ ಈ ಕರಸ್ಥಲದ ಅನುವ ಗೊಹೇಶ್ವರನ ಶರಣ ಸಂಗನ ಬಸವಣ್ಣ ಬಲ್ಲ; ಬೆಸಗೊಂಬ ಬಾರಾ ಸಿದ್ಧರಾಮಯ್ಯ.

## 758

ಆದಿಯಾಧಾರವಿಲ್ಲದ, ಆಗಮನಾಸ್ತಿಯಾಗಿಪ್ಪ ಸಾಗರವಿರಹಿತನನಾರು ಅಱಿಯರಲ್ಲಾ. ದಶಮುಖದ ಮಾಣಿಕ್ಯ[1]ದೆಸಳ ಕಂಗಳು[1] ಪರ್ಬಿ ಪಸರಿಸಿ[2]ರ್ದುದ[2]ನಾರೂ ಅಱಿಯರಲ್ಲಾ. ಸಿರಿದೊಂದು ವೃಕ್ಷವು ಅತಿಶಯದ ರೂಪಾಗಿ ಪೃಥ್ವಿಗಿಂಬಾಗಿರ್ದುದನಾರೂ ಅಱಿಯರಲ್ಲಾ. ಅಂತರಂಗದ [3]ಭುವನವ[3] ಮೆಟ್ಟಿ [4]ನೋಡುತಿಪ್ಪ[4] [5]ಬೆಡಗಿನ ತಾವರೆಯ ಮಧ್ಯದ ತಾರಕಿಯನಾರೂ[5] ಅಱಿಯರಲ್ಲಾ. [6]ರವಿ[6]ಶಶಿಗಳಿಬ್ಬ[7]ರೂ[7] ನಯನ ನೋಟದ [8]ಪುಷ್ಪ ಪರಿಮಳವಾಗಿರ್ದುದ[8]ನಾರೂ ಅಱಿಯರಲ್ಲಾ. ಇಂಬುನಯನದಲ್ಲಿ ಸಂಭ್ರಮ

---

1. ವೆಸಳು ಕಂಗಳ (ವ) ದ ಎಸಳ ಕಂಗಳು (ಶೂ) 2. ದುದ (ಶೂವ) 3. ಭವನ (ವ) 4. ನಿಂದು ನೋಡುವ (ವ) ನೋಡುತ್ತ (ಶೂ) 5. ತಾರೆಯನಾರೂ (ವ) 6. ಇನ (ಶೂ) 7. ರ (ವ) 8. ಕುಳಿಯೊಳಗೆ ಪರಿಮಳವಿದ್ದುದ (ವ)

ವಿಲ್ಲದ ರೂಪು ಮಹತ್ತಾಗಿರ್ದುದನಾರೂ ಅಱಿಯರಲ್ಲಾ. ಸಾಗರದೊಳಗಣ ಜ್ಯೋತಿಯಂತೆ ಗೊಹೇಶ್ವರಲಿಂಗದೊಳಗೆ ಎನ್ನ ಪರಮಾರಾಧ್ಯರು ಸಂಗನ ಬಸವಣ್ಣ ನಿಂದ ನಿಲವನುಪಮಿಸಬಾರದು ಕಾಣಾ, ಸಿದ್ಧರಾಮಯ್ಯ.

759

ಶಿವ ಗುರುವೆಂದು ಬಲ್ಲಾತನೆ ಗುರು. ಶಿವ ಲಿಂಗವೆಂದು ಬಲ್ಲಾತನೆ ಗುರು. ಶಿವ ಜಂಗಮವೆಂದು ಬಲ್ಲಾತನೆ ಗುರು. ಶಿವ ಆಚಾರವೆಂದು ಬಲ್ಲಾತನೇ ಗುರು. ಇಂತೀ ಪಂಚವಿಧವೆ ಪಂಚಬ್ರಹ್ಮವೆಂದು ಅಱಿದ ಮಹಾಮಹಿಮ ಸಂಗನ ಬಸವಣ್ಣನು ಎನಗೆಯೂ ಗುರು, ನಿನಗೆಯೂ ಗುರು; ನಿಜವೆಲ್ಲಕ್ಕೆಯೂ ಗುರು ಕಾಣಾ, ಗೊಹೇಶ್ವರ.

760

ಲಿಂಗವನಱಿಯದೆ ಏನನಱಿದಡೆಯೂ ಫಲವಿಲ್ಲ, ಲಿಂಗವನಱಿದ ಬಳಿಕ ಮತ್ತೇನನಱಿದಡೆಯೂ ಫಲವಿಲ್ಲ. ಸರ್ವಕಾರಣ [1]ಲಿಂಗವೆಂದುದಾಗಿ[1], ಲಿಂಗವನೆ ಅಱಿದೆ.[2] ಅಱಿದಱಿದು[2] ಲಿಂಗಸಂಗವನೆ ಮಾಡುವೆ. ಸಂಗಸುಖದೊ[3]ಳಗೋ[3]ಲಾಡುವೆ, ಗೊಹೇಶ್ವರ.

761

ಕ್ರಿಯಾಮಥನವಿಲ್ಲದೆ ಕಾಣಬಂದುದೇ ಇಕ್ಷುವಿನೊಳಗಣ ಮಧುರ? ಕ್ರಿಯಾಮಥನವಿಲ್ಲದೆ ಕಾಣಬಂದುದೇ ತಿಲದೊಳಗಣ ತೈಲ? ಕ್ರಿಯಾಮಥನವಿಲ್ಲದೆ ಕಾಣಬಂದುದೇ ಕ್ಷೀರದೊಳಗಣ ಘೃತ? ಕ್ರಿಯಾಮಥನವಿಲ್ಲದೆ ಕಾಣಬಂದುದೇ ಕಾಷ್ಠದೊಳಗಣ ಅಗ್ನಿ? ಇದು ಕಾರಣ, ನಮ್ಮ ಗೊಹೇಶ್ವರಲಿಂಗವ ತನ್ನೊಳಱಿದೆನೆಂಬ ಮಹಂತಂಗಲ್ಲದೆ, ಸತ್ಕ್ರಿಯಾಚರಣೆಯೇ ಸಾಧನ ಕಾಣ ಭೋ.

762

ಅಂಗದಲ್ಲಿ ಆಚಾರಸ್ವಾಯತವ ಮಾಡಿಕೊಂಡನು. ಆಚಾರದಲ್ಲಿ ಪ್ರಾಣಸ್ವಾಯತವ ಮಾಡಿಕೊಂಡನು. ಪ್ರಾಣದಲ್ಲಿ ಲಿಂಗಸ್ವಾಯತವ ಮಾಡಿಕೊಂಡನು. ಲಿಂಗದಲ್ಲಿ ಜಂಗಮಸ್ವಾಯತವ ಮಾಡಿಕೊಂಡನು. ಜಂಗಮದಲ್ಲಿ ಪ್ರಸಾದಸ್ವಾಯತವ ಮಾಡಿಕೊಂಡನು. ಪ್ರಸಾದದಲ್ಲಿ ನಿತ್ಯಸ್ವಾಯತವ ಮಾಡಿಕೊಂಡನು. ನಿತ್ಯದಲ್ಲಿ ದಾಸೋಹಸ್ವಾಯತವ ಮಾಡಿಕೊಂಡನು. ದಾಸೋಹದಲ್ಲಿ ತನ್ನ ಮಱೆದು ನಿಶ್ಚಿಂತನಿವಾಸಿಯಾ[4]ಗೈ[4]ದಾನೆ. ನಮ್ಮ

---

1. ಲಿಂಗವಾಗಿ (ಶೂ) 2. ಅಱಿದಱಿದು (ಶೂ) 3. ಳೋ (ಶೂ) 4. ಗಿಐ (ಶೂ).

ಗೊಹೇಶ್ವರಲಿಂಗದಲ್ಲಿ ಸಂಗನ ಬಸವಣ್ಣನ ಶ್ರೀಪಾದಕ್ಕೆ ಶರಣೆಂದು ಧನ್ಯನಾಗಬೇಕು ನಡೆಯಾ, ಸಿದ್ಧರಾಮಯ್ಯ.

763

ಪೃಥ್ವಿಯನತಿಗಳೆದು ಅಪ್ಪುವಿಲ್ಲ. ಅಪ್ಪುವನತಿಗಳೆದು ಅಗ್ನಿಯಿಲ್ಲ. ಅಗ್ನಿಯನತಿಗಳೆದು ವಾಯುವಿಲ್ಲ. ವಾಯುವನತಿಗಳೆದು ಆಕಾಶವಿಲ್ಲ. ಆಕಾಶವನತಿಗಳೆದು ನಾದವಿಲ್ಲ. ನಾದವನತಿಗಳೆದು ಬಿಂದುವಿಲ್ಲ. ಬಿಂದುವನತಿಗಳೆದು ಕಳೆಯಿಲ್ಲ. ಕಳೆಯನತಿಗಳೆದು ಆತ್ಮವಿಲ್ಲ. ಆತ್ಮವನತಿಗಳೆದು ಗೊಹೇಶ್ವರನೆಂಬ ಲಿಂಗವಿಲ್ಲ.

764

ಜೀವವ ತಪ್ಪಿಸಿ ಜೀವಿಸಬಾರದಾರಿಗೆಯೂ. ಅಹಿಂಸಾ ಪರಮೋ ಧರ್ಮ ಎಂಬ ಶ್ರಾವಕರ ನಾನಾರನೂ ಕಾಣೆ :

ಪೃಥ್ವೀ ಬೀಜಂ ತಥಾ ಮಾಂಸಂ ಅಪ್‌ದ್ರವ್ಯಂ ಸುರಾಮಯಂ ।
ಆತ್ಮಾ ಜೀವಸಮಾಯುಕ್ತಂ ಜೀವಂ ಜೀವೇನ ಭಕ್ಷಯೇತ್ ॥

ಇಂತೆಂದುದಾಗಿ ಲಿಂಗಾರ್ಪಿತ ಶುದ್ಧ ; ಮಿಕ್ಕುದು ಜೀವಮಯ, ಗೊಹೇಶ್ವರ.

765

ಅರ್ಪಿತ ಅನರ್ಪಿತವನಾರು ಬಲ್ಲರಯ್ಯ? ಅರ್ಪಿಸಿ ಕೊಂಬುದು ಅನರ್ಪಿತ. ಅರ್ಪಿಸದೆ ಕೊಂಬುದು [1]ಅನರ್ಪಿತ[1]. ಅರ್ಪಿಸಿ ಅರ್ಪಿಸದೆ ಕೊಳ [2]ಬಲ್ಲ[2], ಗೊಹೇಶ್ವರಾ, ನಿಮ್ಮ ಪ್ರಸಾದಿ.

766

ಅಂಗ ಮುವ್ವತ್ತಾಱಱ ಮೇಲೆ ಲಿಂಗ. ನಿಸ್ಸಂಗವೆಂಬ ಕರದಲ್ಲಿ ಪಿಡಿದು ಅಂಗವಿಸಿ ಅಹುದಾಗದೆಂಬ ನಿಸ್ಸಂಗದರ್ಪಣವಮಾಡಿ ಸುಸಂಗಪ್ರಸಾದವ ಕೊಳಬಲ್ಲವಂಗೆ, ಗೊಹೇಶ್ವರ, ಮುಂದೆ ಬಯಲು ; ಬಯಲು ಬಟ್ಟಬಯಲು!

767

ಆತ್ಮ ಸಂಗವಾದವರ್ಗೆ ಬಹಿರ್ಭಾವವಿಲ್ಲ. ಇಂದ್ರಿಯಂಗಳು ಲಿಂಗವಾದವರ್ಗೆ ವಿಷಯಸೂತಕವಿಲ್ಲ. ಕರಣಂಗಳು ಲಿಂಗವಾದವರ್ಗೆ ಹಿಂದು ಮುಂದೆಂಬ [3]ಸಂದೇಹ[3]ವಿಲ್ಲ. ಲಿಂಗಾಲಯ ಮನವಾದವರ್ಗೆ ಇಹಪರವೆಂಬ [4]ಸಂಶಯ[4]ವಿಲ್ಲ. ಲೋಕದಂತೆ ನಡೆವರು. ಲೋಕದಂತೆ ನುಡಿವರು. ಮನವು [5]ಮಹಾಲಿಂಗದಲ್ಲಿ[5] ಪರಿಣಾಮಿಗಳು. [6]ಅಂತಪ್ಪ ಲಿಂಗಾನುಭಾವಿಗಳ[6] ಲೋಕದ

---

1. ಅರ್ಪಿತ (ಶೂ) 2. ಬಲ್ಲರೆ (ಶೂ) 3. ಸಂಶಯ (ಆ–ವ) 4. ಸಂಬಂಧ (ಆ–ವ) 5. ಮಹದಲ್ಲಿ (ಆ–ವ) 6. ಇಂತಪ್ಪ ಶರಣರ (ಆ–ವ)

[1]ಪ್ರಪಂಚಿಗಳೆಂದಡೆ[1] ಮನೋಮಧ್ಯದಲ್ಲಿಪ್ಪ [2]ಜ್ಯೋತಿರ್ಲಿಂಗವು[2] ನಗ-[3]ದಿಪ್ಪ[3]ನೇ ಗೊಹೇಶ್ವರ.

768

ಆಕಾಶ ಒಂದಂಡಜ. ಪೃಥ್ವಿ ಒಂದು ಪಿಂಡಜ. ಎರಡಱ ಮಧ್ಯದಲ್ಲಿ ಪಕ್ಷಿ ಮರಿಗಳನಿಕ್ಕಿತ್ತ ಕಂಡೆ. ತುಪ್ಪುಳು ಬಾರದು. ಅದಱೊಪ್ಪವನೇನೆಂದೆಂಬೆನು ಗುರುವೇ ?! ಬಯಲನೆ ಉಡುಗಿತ್ತು. ನಿರ್ವಯಲನೆ ಗೂಡು ಮಾಡಿತ್ತು. ಉರಿಯನೇ ಉಂಡಿತ್ತು. ಮಧುರಸವನೇ ಹಿಂಡಿತ್ತ ಕಂಡೆ. ಪಕ್ಷಿಗೆ ಪಕ್ಕ ಬಂದಿತ್ತು. ಗಗನಕ್ಕೆ ಹಾಱಿತ್ತು. ಹಾಱಿ ಹೋಗುತ್ತ ನಮ್ಮ ಗೊಹೇಶ್ವರಲಿಂಗವ ಕೂಡಿತ್ತ ಕಂಡೆ.

769

ಸ್ಥೂಲ ಸೂಕ್ಷ್ಮದೊಳಗೆ ಬೆಳಗು ಮಹಾಬೆಳಗಾಗಿ ಹೊಳೆವ ಜ್ಞಾನ-ಜ್ಯೋತಿ ದಳಗಳಿಲ್ಲವ ಮೀಱಿ, ನೆಳಲ ನುಂಗಿದ ಬಿಸಿಲಿನೊಳಗೆ ಚಂದ್ರಮನುದಯ. ಜಲಧಿವಳಯದ ಬೆಳಸ ಹೇಳಲಾರಳವಲ್ಲ. ಆಳು ಆಳ್ದನ ನುಂಗಿ, ಈರೇಳು ಭುವನವ ದಾಂಟ, ಗೊಹೇಶ್ವರ ನಿಂದ ನಿಲವು ಹೊಱಗು ಒಳಗನೆ ನುಂಗಿತ್ತು.

770

ಲಿಂಗವೇ ಪ್ರಾಣ, ಪ್ರಾಣವೇ ಅಂಗವಾಯಿತ್ತು. ಆ ಅಂಗವೇ ಲಿಂಗಾಂಗವಾಯಿತ್ತು. ಗೊಹೇಶ್ವರ ಲಿಂಗದಲ್ಲಿ ಸರ್ವಾಂಗಪ್ರಾಣಲಿಂಗ ಸ್ವಾಯತವಾಯಿತ್ತು ಕಾಣಾ, ಚೆನ್ನಬಸವಣ್ಣ.

771

ತೆರೆಯ ಮಱೆಯ ಕುಱುಹೆಂಬುದೇನೋ? ಒಳಗೆ ಲಿಂಗದ ಅನುವಿಡಿದ ಬಳಿಕ [4]ಪೂಜಿಸುವನಾರೋ? ಪೂಜಿಸಿಕೊಂಬ ದೇವನಾರೋ[4]? ಹಿಂದು ಮುಂದು, ಮುಂದು ಹಿಂದಾಯಿತ್ತು. ಗೊಹೇಶ್ವರ, ನಾನು ನೀನು, ನೀನು ನಾನಾದ [5]ಬಳಿಕ[5] [6]ಮತ್ತೇನುಂಟು ಹೇಳಾ ?![6]

772

ಕರಸ್ಥಲದ ಲಿಂಗ ಮನಸ್ಥಲಕ್ಕೆ ವೇದ್ಯವಾಗಿ, ಮನಸ್ಥಲದ ಲಿಂಗವೆನ್ನ ಸರ್ವಾಂಗದಲ್ಲಿ ವೇದ್ಯವಾದ ಬಳಿಕ, ಇನ್ನು ಭಿನ್ನಭಾವಕ್ಕೆ ತೆಱಹುಂಟೆ?

---

1. ಮಾನವರೆಂದರೆ (ಅ-ವ) 2. ಜ್ಯೋತಿರ್ಮಯಲಿಂಗವು(ಅ-ವ) 3. ದಿಹ (ಅ-ವ) 4. ಪೂಜೆಗೊಂಬ ದೇವನಾರು ಪೂಜಿಸುವ ಭಕ್ತನಾರು (ಐ) 5. ರೆ (ಐ) 6. × (ಐ)

ಗೊಹೇಶ್ವರನೆಂಬ ಲಿಂಗವ ಬೆರಸಿ ಸಮರಸವಾದ ಬಳಿಕ, ಎರಡೆಂಬುದಿಲ್ಲ ನೋಡಾ ಚೆನ್ನಬಸವಣ್ಣ.

773

ತನುವೆಂಬ ಏರಿಗೆ ಮನವೆಂಬ [1]ಕಟ್ಟೆಯ ಮಾಡಿ, ಬಲಿದು ಷಡ್ವಿಧಭಕ್ತಿಯೆಂಬ ಸೋಪಾನದಿಂದ;[1] ಪರಮಾನಂದಜಲವ ತುಂಬಿ, ಕೆಱೆಯ ಕಟ್ಟಬಲ್ಲವರನಾರನೂ ಕಾಣೆ. ನಾನು ಕಟ್ಟಿದ ಕೆಱೆ ಸ್ಥಿರವಾಯಿತ್ತು ಗೊಹೇಶ್ವರ ನಿಮ್ಮಾಣೆ.

774

ಭೂತವೈದಱಿಂದ ಸ್ಥೂಲತನು. ಮನ ಬುದ್ಧಿ ಅಹಂಕಾರದಿಂದ ಸೂಕ್ಷ್ಮ ತನು. ಭಾವ ಜ್ಞಾನದಿಂದ ಕಾರಣತನು. ಈ ತ್ರಿವಿಧವು ಚೈತನ್ಯವಿಡಿದ ಕಾರಣ ಭೂತಾಂತಃಕರಣಭಾವಜ್ಞಾನಕ್ಕೆ ಸ್ವತಂತ್ರತೆಯಿಲ್ಲ. ಆ ಚೈತನ್ಯಕ್ಕೆ ಶರೀರ-ಭಾವವಿಲ್ಲದಿರ್ದಡೆ ತೋಱಿಕೆಯಿಲ್ಲವಾಗಿ, ಆ ಚೈತನ್ಯವೇ ತನ್ನ ಲೀಲೆಯಿಂದ ಶರಣನೆನಿಸಿತ್ತು. ಆ ಶರಣನ ಪಂಚಭೌತಿಕ ತನುವ ಇಷ್ಟಲಿಂಗವಿಂಬುಗೊಂಡಿಹ ಕಾರಣ, ಕಾಯ ಪಂಚಬ್ರಹ್ಮಮಯವಾಯಿತ್ತು. ಅಂತಃಕರಣ ಅಂತಃಪ್ರೇರಕ ಪ್ರಾಣಚೈತನ್ಯಲಿಂಗವೊಳಕೊಂಡ ಕಾರಣ, ಶರಣನ ಕರಣಂಗಳೇ ಲಿಂಗ ಕರಣಂಗಳಾದವು. ಭಾವಜ್ಞಾನವನೆಡೆಗೊಂಡು ತೃಪ್ತಿಸ್ವರೂಪದಿಂದ ಆನಂದ ಮಯವಾಗಿಪ್ಪ ಕಾರಣ ಸಚ್ಚಿನ್ಮಯನಾದ. ಇದು ಕಾರಣ ಗೊಹೇಶ್ವರ ನಿಮ್ಮ ಶರಣರ ದೃಷ್ಟಲಿಂಗವೆಂಬೆ.

775

ಹರಿವ ನದಿಗೆ ಮೈಯೆಲ್ಲ ಕಾಲು. ಉರಿವ ಕಿಚ್ಚಿಗೆ ಮೈಯೆಲ್ಲ ಬಾಯಿ. ಬೀಸುವ ಗಾಳಿಗೆ ಮೈಯೆಲ್ಲ ಕೈ. ಇದು ಕಾರಣ, ಗೊಹೇಶ್ವರ, ನಿಮ್ಮ ಶರಣಂಗೆ ಸರ್ವಾಂಗವೆಲ್ಲ ಲಿಂಗಮಯವಯ್ಯ.

776

ಖಂಡಿತವಿಲ್ಲಾಗಿ ಸರ್ವಾಂಗವೆಲ್ಲವೂ ನಾಸಿಕವಾಯಿತ್ತು ; ತಾನಲ್ಲದನ್ಯ ವಾಸನೆಯಿಲ್ಲವಾಗಿ, ಅಲ್ಲಿಯೇ ಮಹತ್ತಪ್ಪ ಪೃಥ್ವಿಯಡಗಿತ್ತು. ಖಂಡಿತ ವಿಲ್ಲಾಗಿ ಸರ್ವಾಂಗವೆಲ್ಲವೂ ಜಿಹ್ವೆಯಾಯಿತ್ತು ; ತಾನಲ್ಲದನ್ಯ ರುಚಿಯಿಲ್ಲ ವಾಗಿ, ಅಲ್ಲಿಯೇ ಮಹತ್ತಪ್ಪ ಅಪ್ಪುವಡಗಿತ್ತು. ಖಂಡಿತವಿಲ್ಲಾಗಿ ಸರ್ವಾಂಗ ವೆಲ್ಲವೂ ನೇತ್ರವಾಯಿತ್ತು ; ತಾನಲ್ಲದನ್ಯ ರೂಹಿಲ್ಲವಾಗಿ, ಅಲ್ಲಿಯೇ ಮಹ-ತ್ತಪ್ಪ ಅಗ್ನಿಯಡಗಿತ್ತು. ಖಂಡಿತವಿಲ್ಲಾಗಿ ಸರ್ವಾಂಗವೆಲ್ಲವೂ ತ್ವಕ್ಕಾಯಿತ್ತು;

---

1. ಕಟ್ಟೆ ; ಆಚಾರವೆಂಬ ಸೋಪಾನ (ಶೂ)

ತಾನಲ್ಲದನ್ಯ ಸೋಂಕಿಲ್ಲವಾಗಿ, ಅಲ್ಲಿಯೇ ಮಹತ್ತಪ್ಪ ವಾಯುವಡಗಿತ್ತು. ಖಂಡಿತವಿಲ್ಲಾಗಿ ಸರ್ವಾಂಗವೆಲ್ಲವೂ ಶ್ರೋತ್ರವಾಯಿತ್ತು; ತಾನಲ್ಲದನ್ಯ ಶಬ್ದ ವಿಲ್ಲಾಗಿ, ಅಲ್ಲಿಯೇ ಮಹತ್ತಪ್ಪ ಆಕಾಶವಡಗಿತ್ತು. ಇಂತು ಪಂಚಭೂತಂಗಳಡ ಗಿದರೆ ಪಂಚಬ್ರಹ್ಮಮಯವಾಯಿತ್ತು. ಅದಱೊಳಗೆ ಜಗತ್ತಡಗಿದ ಭೇದ. ಅದೇ ಪಂಚವರ್ಣಾತೀತವಾಗಿ ಮಹತ್ತನೊಳಕೊಂಡ ಆ ಶರಣನ ಭೇದವ ನೇನೆಂದುಪಮಿಸುವೆನಯ್ಯ, ಗೊಹೇಶ್ವರ.

777

ದೇವಲೋಕದವರ ತೃಣವೆಂಬೆ. ಮರ್ತ್ಯಲೋಕದವರ ಕ್ಷಣವೆಂಬೆ, ಅಹಂಕಾರವೆಂಬ ಶೃಂಗಾರವ ಮಾಣೆ, ನಾನಲ್ಲದನ್ಯವ[1] ನಲ್ಲೆಂಬೆ[1] ಗೋಹೇಶ್ವರ [2]ಲಿಂಗ ತಾನೆಯಾಗಿ[2].

778

ಕಾಯಗುಣ ಕೆಟ್ಟ ಮತ್ತೆ ಅರ್ಚನೆ ಹಿಂಗಿತ್ತು. ಪ್ರಾಣಗುಣ ಕೆಟ್ಟ ಮತ್ತೆ ಅರ್ಪಿತ ಹಿಂಗಿತ್ತು. ಭಾವಗುಣ ಕೆಟ್ಟ ಮತ್ತೆ ಉಭಯ ಜಂಜಡ ಹಿಂಗಿತ್ತು. ಇಂತಾದ ಕಾರಣ, ನಮ್ಮ ಗೋಹೇಶ್ವರನ ಶರಣನು ಲಿಂಗ ಭೋಗೋಪಭೋಗವೆಂಬ ಖಂಡಿತಬುದ್ಧಿಯ ಮೀಱಿ ಅಖಂಡಾದ್ವೈತಬ್ರಹ್ಮ ದಲ್ಲಿ ತಲ್ಲೀಯವಾದನು.

779

ಕರಸ್ಥಲದ ಲಿಂಗವೇ ಕಾಯಕ್ಕೆ ವೇಧಿಸಿದಲ್ಲಿ ಕಾಯ ಲಿಂಗವಾಯಿತ್ತು. ಅಂತಾದ ಮಹಾಘನಲಿಂಗವೇ ಪ್ರಾಣಕ್ಕೆ ವೇಧಿಸಿದಲ್ಲಿ ಪ್ರಾಣ ಲಿಂಗವಾಯಿತ್ತು, ಅಂತಾದ ಮಹಾಘನಲಿಂಗವೇ ಭಾವಕ್ಕೆ ವೇಧಿಸಿದಲ್ಲಿ ಭಾವ ಲಿಂಗವಾಯಿತ್ತು. ಅಂತಾದ ಮಹಾಘನಲಿಂಗವೇ ಜ್ಞಾನಕ್ಕೆ ವೇಧಿಸಿದಲ್ಲಿ ಜ್ಞಾನ ಲಿಂಗವಾಯಿತ್ತು. ಅಂತಾದ ಕಾರಣ ನಮ್ಮ ಗೋಹೇಶ್ವರನ ಶರಣಂಗೆ ಆಱುವಱಿಹು, ಕುಱುಹು ನಿಷ್ಪತಿಯಾಗಿ, ತಾನೆಂಬ ಭಾವವು ಉರಿಯುಂಡ ಕರ್ಪುರದಂತಾಯಿತ್ತು.

780

ಜ್ಞಾತೃವೇ ಅಱುಹಿಸುವುದು. ಜ್ಞಾನವೇ ಅಱಿವುದು, ಜ್ಞೇಯವೇ ನಿಶ್ಚಯಿಸುವುದು, ಈ ಜ್ಞಾತೃ ಜ್ಞಾನ ಜ್ಞೇಯವೆಂಬ ತ್ರಿವಿಧಸಾಧನದಿಂದ ಲಿಂಗವನಱಿಸಿ ಲಿಂಗವನಱಿದು ಲಿಂಗವ ಬೆಱಸಿ ಲಿಂಗವಾದ ಮತ್ತೆ, ಜ್ಞಾತೃ ಜ್ಞಾನಜ್ಞೇಯವೆಂಬ ತ್ರಿವಿಧಭ್ರಾಂತಿಸೂತಕ ಹೋಯಿತ್ತು, ನಿಜವಾಯಿತ್ತು ಕಾಣಾ, ಗೊಹೇಶ್ವರ.

---

1. ನಲ್ಲಾ ಎಂಬೆ (ಅ-ವ) 2. ನೆಂಬಾತನಾಗಿ (ಲಿ)

781

[1]ಕಾಯಗುಣವಳಿದು[1] ಜೀವನ್ಮುಕ್ತನಾದ ಬಳಿಕ, ಸಮ್ಯಜ್ಞಾನ[2]ವೆಂಬ ಶಾಂತಿ[2] ದೊರೆಕೊಂಡಿತ್ತು ನೋಡಿರೇ. ಅಂತರಂಗ ಬಹಿರಂಗವೆಂ[3]ಬುದ[3]ನಳಿ[4]ಯ[4]ನಾಗಿ, ದ್ವೈತಾದ್ವೈತವ ನೀಕರಿಸಿ, ನಿರ್ವಾಣ ನಿಷ್ಪತಿಯಾಗಿ, ಗೊಹೇಶ್ವರ, ನಿಮ್ಮ ಶರಣನನುಪಮ[5]ಸುಖಿ[5].

782

[A]ಪ್ರಥಮದಲ್ಲಿ[A] ವಸ್ತು ಏನೂ ಏನೂ [6]ಇಲ್ಲದಂದು[6] ಮಹಾಘನಶೂನ್ಯಬ್ರಹ್ಮವಾಗಿದ್ದಿತ್ತು. ಅಂತಿರ್ದ [7]ಪರಬ್ರಹ್ಮವಸ್ತು[7] ತಾನೆ [8]ತನ್ನ[8] ದಿವ್ಯಾನಂದಸಲೀಲಾಸ್ವಭಾವದಿಂದಾದುದು ಆತ್ಮ ತತ್ತ್ವವೆಂಬಂಗಸ್ಥಲ. ಅಂತಾದ ಜೀವಾತ್ಮನೆಂಬ ಅಂಗಸ್ಥಲಕ್ಕೆ ಸೇರಿದ ತತ್ವಗಳಿಪ್ಪತ್ತೈದು. ಅವಾವುವಯ್ಯ ಎಂದಡೆ: ಶ್ರೋತ್ರಾದಿ ಜ್ಞಾನೇಂದ್ರಿಯಂಗಳೈದು, ವಾಗಾದಿ ಕರ್ಮೇಂದ್ರಿಯಂಗಳೈದು, ಶಬ್ದಾದಿ[9]ವಿಷಯಂ[9]ಗಳೈದು, ಪ್ರಾಣಾದಿವಾಯುಗಳೈದು, ಮನ ಬುದ್ಧಿ ಚಿತ್ತ ಅಹಂಕಾರ ಜೀವಂಗಳೈದು. ಅಂತು ಅಂಗ ತತ್ತ್ವಂಗಳಿಪ್ಪತ್ತೈದು. ಇಂತು ಅಂಗ[10]ತತ್ತ್ವಗಳಿ[10]ಪ್ಪತ್ತೈದು. ತನ್ನೊಳಗೆ ಸಮರಸತ್ವವನೆಯ್ದಿಸಲೋಸುಗ ಭಕ್ತಿತದರ್ಥವಾಗಿ ಆ ಮಹಾಘನಪರಾತ್ಪರ ವಪ್ಪ ದಿವ್ಯಲಿಂಗವು ಹನ್ನೊಂದು ತತ್ತ್ವವಾಯಿತ್ತು. ಇಂತೀ ಹನ್ನೊಂದು ತತ್ತ್ವದ ಪರಿಕ್ರಮವೆಂತೆಂದಡೆ: ಶಾಂತ್ಯಾದಿ ಶಕ್ತಿಗಳೈದು, ಶಿವಾದಿ ಕರ್ತೃಗಳೈದು, ಪರಶಿವ ತತ್ತ್ವವೊಂದು. ಇಂತೀ ಲಿಂಗ ತತ್ತ್ವ ಹನ್ನೊಂದು; ಆ ಅಂಗ ತತ್ತ್ವ ವಿಪ್ಪತ್ತೈದು; ಅಂಗತತ್ತ್ವ ಲಿಂಗತತ್ತ್ವವೆಂಬ ಉಭಯತತ್ತ್ವ ಮುವ್ವತ್ತಾಱು. ಇಂತಿವಱ ಸಮರಸೈಕ್ಯವೆಂತುಟಯ್ಯ ಎಂದಡೆ: ನಿವೃತ್ತಿ ಶಕ್ತಿಯ[11]ನೈದಿ[11] ವಾಗಾದಿ ಕರ್ಮೇಂದ್ರಿಯಂಗಳೈದು ಕರ್ಮಸಾದಾಖ್ಯವನೊಡಗೂಡಿದಲ್ಲಿ ಪೃಥ್ವೀತತ್ತ್ವ ಬಯಲಾಯಿತ್ತು. ಪ್ರತಿಷ್ಠಾ ಶಕ್ತಿಯನೈದಿ ಶಬ್ದಾದಿವಿಷಯಂಗಳೈದು ಕರ್ತೃಸಾದಾಖ್ಯವನೊಡಗೂಡಿದಲ್ಲಿ ಅಪ್ಪುತತ್ತ್ವ ಬಯಲಾಯಿತ್ತು. ವಿದ್ಯಾಶಕ್ತಿಯನೈದಿಶ್ರೋತ್ರಾದಿ ಜ್ಞಾನೇಂದ್ರಿಯಂಗಳೈದು ಮೂರ್ತಿಸಾದಾಖ್ಯವನೊಡಗೂಡಿದಲ್ಲಿ ತೇಜಸ್ಸತ್ತ್ವ ಬಯಲಾಯಿತ್ತು. ಶಾಂತಿ ಶಕ್ತಿಯನೈದಿ ಪ್ರಾಣಾದಿವಾಯುಗಳೈದು ಅಮೂರ್ತಿಸಾದಾಖ್ಯವನೊಡಗೂಡಿ

---

1. ಕಾಯಗುಣಂಗಳಳಿದು (ಐ) 2. ವೆಂಬುದೊಂದು ಶಾಂತವು (ಐ) 3. ಬವ (ಐ) 4. ಯೆ (ಐ) 5. ಸುಖಿಯಾಗಿರ್ದ (ಐ) A ಪ್ರಭುದೇವರ ಸೃಷ್ಟಿಯ ವಚನ: ಪ್ರಥಮದಲ್ಲಿ (ಥ) 6. ಇಲ್ಲದ (ಲಿ) 7. ಪರವಸ್ತು (ಲಿ) 8. ತನ್ನ ಲೀಲೆಯಿಂದ ತನ್ನ (ಲಿ) 9. ಪಂಚೇಂದ್ರಿಯಂ (ಥ) 10. ಸ್ಥಲವಿ (ಥ) 11. ನೈದು (ಥ).

ದಲ್ಲಿ ವಾಯುತತ್ತ್ವ ಬಯಲಾಯಿತ್ತು. ಶಾಂತ್ಯತೀತಶಕ್ತಿಯನ್ನೈದಿ ಮನ ಬುದ್ಧಿ ಚಿತ್ತ ಅಹಂಕಾರ ಜೀವಂಗಳೈದು ಶಿವಸಾದಾಖ್ಯನನೊಡಗೂಡಿದಲ್ಲಿ ಆಕಾಶತತ್ತ್ವ ಬಯಲಾಯಿತ್ತು. ಇಂತೀ ಪಂಚವಿಂಶತಿ ತತ್ತ್ವಂಗಳು ಲಿಂಗೈಕ್ಯವಾಗಲೊಡನೆ, ಲಿಂಗತತ್ತ್ವ ಹನ್ನೊಂದು ತಾವು ಒಂದೊಂದನೊಡ ಗೂಡಿ ಏಕಾರ್ಥವಾದಲ್ಲಿ ಕುಳಸ್ಥಳವಡಗಿತ್ತು. ಇಂತು ಕುಳಸ್ಥಳವಡಗ ಲೊಡನೆ ಮಹಾಘನಪರಾತ್ಪರವಪ್ಪ ದಿವ್ಯ ಲಿಂಗವು ವಾರಿಕಲ್ಲು ಕರಗಿ ನೀರಾ ದಂತೆ ತನ್ನ ಪರಮಾನಂದದಿಂದವೆ ಸರ್ವಶೂನ್ಯವಾಯಿತ್ತು. ಅದೆಂತೆನಲು :

ಅನಾದಿಸಿದ್ಧಸಂಸ್ಕಾರಂ ಕರ್ತೃಕರ್ಮವಿವರ್ಜಯೇತ್ ।
ಸ್ವಯಮೇವ ಭವೇದ್ದೇಹೀ ಸ್ವಯಮೇವ ವಿಲೀಯತೇ ॥
ಅಂತಶ್ಶೂನ್ಯಂ ಬಹಿಶ್ಶೂನ್ಯಂ ಶೂನ್ಯಶೂನ್ಯಾ ದಿಶೋ ದಶ ।
ಸರ್ವಶೂನ್ಯಂ [1]ನಿರಾಕಾರಂ[1] ನಿರ್ದ್ವಂದ್ವಂ ಪರಮಂ ಪದಂ ॥

ಎಂದುದಾಗಿ, ಇಂತೀ ಅಂಗತತ್ತ್ವವಿಪ್ಪತ್ತೈದು, ಲಿಂಗತತ್ತ್ವ ಹನ್ನೊಂದು ಇಂತೀ ಉಭಯತತ್ತ್ವ ಮುವ್ವತ್ತಾಱೂ ಏಕಾರ್ಥವಾಗಿ ಸರ್ವಶೂನ್ಯವ ನೆಯ್ದಿದ ಪರಿಕ್ರಮದ ನಿರ್ಣಯದ ಬೆಡಗು ತತ್ತ್ವಮಸ್ಯಾದಿ ವಾಕ್ಯಾರ್ಥಂಗಳಲ್ಲಿ ಕಾಣಲಾಯಿತ್ತು. ಅದೆಂತೆಂದಡೆ : ತತ್ಪದವೇ ಲಿಂಗ, ತ್ವಂ ಪದವೇ ಅಂಗ, ಈ ಎರಡಱ ಐಕ್ಯವೇ ಅಸಿ ಎಂದುದಾಗಿ. ಇಂತು ಸಕಲನಾಗಬಲ್ಲ, ಸಕಲ ನಿಃಕಲನಾಗಬಲ್ಲ ಸಕಲನಿಃಕಲಾತೀತನಾಗಿ, ಏನೂ ಏನೂ ಇಲ್ಲದ ಮಹಾಘನ ಶೂನ್ಯಬ್ರಹ್ಮವಾಗಿ ಇರಬಲ್ಲನಯ್ಯಾ ನಮ್ಮ ಗೊಹೇಶ್ವರಲಿಂಗವು.

783

ಕುಲದೊಳಗೆ ಹುಟ್ಟಿ ಕುಲವ ಬೆರಸದೆ ತಮ್ಮ ನಿಲವ ಬಲಿದಿಪ್ಪ[2]ವರು ಇನ್ನಾರು[2] ಹೇಳಾ. ಹಬ್ಬಿದ ಮೂಱು ಬೆಟ್ಟಕ್ಕೆ ತನ್ನ ಮನವ ಹಬ್ಬಲೀಯದೆ ಲಿಂಗಜಂಗಮಕ್ಕೆ ಸವೆಸಿ ಸ್ವಯಲಿಂಗವಪ್ಪವರಿನ್ನಾರು ಹೇಳಾ. ಸ್ವಯೋಲಿಂಗ, ಸ್ವಯೋಶರಣ, ಸ್ವಯೋಭೋಗವೆಂದುದಾಗಿ, ಗೊಹೇಶ್ವರ, ನಿಮ್ಮ ಶರಣ ಸಂಗನ ಬಸವ[3]ಣ್ಣನ ನಿಲವಿಂಗೆ[3] ನಮೋ ನಮೋ ಎಂಬೆನು.

784

ಅಱಿದೆನೆಂಬುದು ತಾ ಬಯಲು. ಅಱಿಯೆನೆಂಬುದು ತಾ ಬಯಲು. ಮಱೆದೆನೆಂಬುದು ತಾ ಬಯಲು. ಅಱುಹಿನ ಕುಱುಹಿನ ಮಱ[4]ಹಿ[4]ನೊಳಗೆ ಗೊಹೇಶ್ವರನೆಂಬುದು ತಾ ಬಯಲು[5]ನೋಡಾ[5] !

---

1. ನಿರಾಲಂಬಂ (ಥ) 2. ರಾರು (ಶೂ) 3. ಣಂಗೆ (ಶೂ) 4. ವಿ (ಲಿ) 5. × (ಶೂ)

785

ಕಂಡುದೆಲ್ಲ ಪಾವನ, [1]ಕೇಳಿತ್ತೆಲ್ಲ[1] ಪರಮಬೋಧೆ. ಮುಟ್ಟಿತ್ತೆಲ್ಲ ಪರುಷದ ಸೋಂಕು, ಒಡನೆ ನುಡಿದವರೆಲ್ಲರೂ ಸದ್ಯೋನ್ಮುಕ್ತರು. ಸುಳಿದ ಸುಳುಹೆಲ್ಲ ಜಗತ್ಪಾವನ. ಮೆಟ್ಟಿದ ಧರೆಯೆಲ್ಲವೂ ಅವಿಮುಕ್ತಿಕ್ಷೇತ್ರ. ಸೋಂಕಿದ [2]ಜಲ[2]ವೆಲ್ಲವೂ ಪುಣ್ಯತೀರ್ಥಂಗಳು. ಶರಣೆಂದು [3]ಭಕ್ತಿಯ[3] ಮಾಡಿದವರೆಲ್ಲರೂ ಸಾಯುಜ್ಯರು. [4]ಗೊಹೇಶ್ವರನ ಶರಣನ[4] ಸುಳುಹಿನ ಸೊಗಸನುಪಮಿಸಬಾರದು.

786

ಅಱಸಿ ಅಱಸಿ ಹಾಹಾ ಎನುತಿದ್ದೆನು. ಬೆದಕಿ ಬೆದಕಿ ಬೆದಬೆದ ಬೇವುತ್ತಿದ್ದೆನು. ಗೊಗೇಶ್ವರ, ಕಣ್ಣ ಮೊದಲಲ್ಲಿದ್ದವನ ಕಾಣೆನು !

787

ಅಳಿವರ ಉಳಿವರ ಸುಳಿವರ ನಿಲವ ನೋಡಿ ಕಂಡು, ಸೋಂಕಿಲ್ಲದ ರೂಪಿಲ್ಲದ ನಿಜವ ಬಯಸುತ್ತಿದ್ದೆ; ಕಾಲಿಲ್ಲದೆ ನಡೆವುತ್ತಿದ್ದೆ, ಕಣ್ಣಿಲ್ಲದೆ ನೋಡುತ್ತಿದ್ದೆ ಗೊಗೇಶ್ವರ.

788

ಅರೂಪ ಕಾಣಬಾರದು. ಪೂಜೆಯ ಪರಿಯಿನ್ನೆಂತೋ ? ರೂಪಿಂಗೆ ಕೇಡುಂಟು, ಪೂಜಿಸುವ ಪರಿಯಿನ್ನೆಂತೋ ? ಸಕಲ ನಿಃಕಲಪೂಜೆಗೆ ಕಾರಣವಲ್ಲ, ಇನ್ನೆಂತಯ್ಯ ಲಿಂಗವಂತರಿಗೆ ಪೂಜಿಸುವ ಪರಿ ? ಲಿಂಗದ ಪರಿಯೆಂತಯ್ಯ? ಅಱಿಯ ಬಾರದ ಲಿಂಗವ ಅಱವಂತೆ ಮಾಡಿಕೊಟ್ಟನು ಶ್ರೀ ಗುರು ; ಶ್ರೀ ಗುರುವಂ ಯೀರೆಡವನಱದು (?) ಪೂಜಿಸಬೇಕು, ಗೊಗೇಶ್ವರ.

789

ಆಱು ದರುಶನ ಅನಾಚಾರವ ನಡೆದವು, ಸುರೆಯ ಕುಡಿದವು, ಮಾಂಸವ ತಿಂದವು. ಆಱು ದರುಶನಕ್ಕೆ ಆನಾಚಾರ ಸಾಲದೆಂದು ನಾನು ಗುರುವಾದೆ, ಗೊಗೇಶ್ವರ.

790

ಇಬ್ಬರ ಹಿಡಿವಡೆ ಒಬ್ಬನ ಕೊಲಬೇಕು. ಒಬ್ಬನ ಕೊಂದರೆ ಎಲ್ಲರು ಸಾವರು. ಎಲ್ಲರು ಸತ್ತು ಹಿಡಿದವರಿಬ್ಬರುಳಿದರೆ, ಆ ಇಬ್ಬರ ನಂಬಿ ಬಯಲಾದೆ, ಗೊಗೇಶ್ವರ.

---

1. ಕೇಳುವುದೆಲ್ಲಾ (ಲಿ) 2. ಜಗ (ಲಿ) 3. ಭಕ್ತ (ಲಿ) 4. ಗುಹೇಶ್ವರಾ ನಿಮ್ಮ (ಶೂ)

791

ಈಶ್ವರನ ದ್ರೋಣವ ಮಾಡಿ, ಪದ್ಮನಾಭನ ನಾರಿಯ ಮಾಡಿ, ಕಮಲಜ ನೆಂಬ ಬಾಣವ ತೊಟ್ಟು [1]ಮೂಱು[1] ಭುವನವನೆಚ್ಚವರಾರೋ ? ! ಚಂದ್ರ ಸೂರ್ಯರ ಬೆನ್ನ ಮೆಟ್ಟಿ ಸುವರ್ಣದ ಮಳೆಯ ಕಱೆಸಿದವರಾರೋ ? ! ದೇವ ದಾನವ ಮಾನವರೆಲ್ಲ ಈ ಬಾಣಕ್ಕೆ ಗುರಿಯಾಗಿ [2]ಬಿದ್ದುದ ಕಂಡೆ[2]; ಗೊಗೇಶ್ವರ ಶೂನ್ಯನಿಶ್ಶೂನ್ಯದೊಳಗೆ.

792

ಉದಕದೊಳಗೊಂದು ಸೆಜ್ಜೆಯಾಯಿತ್ತು. ಸೆಜ್ಜೆಯೊಳಗೊಂದು ಕಿಚ್ಚು ಹುಟ್ಟಿತ್ತು. ಇದೇನೋ ಇದೆಂತೋ ! ನೀನರಸಿಹೆನೆಂಬ ಸಂಬಂಧವಿಲ್ಲ. ಇದೇನೋ ಇದೆಂತೋ ! ನೀನೊಲಿಸಿಹೆನೆಂಬ ಸಂಬಂಧವಿಲ್ಲ. ಉದಯ ಮುಖದಲ್ಲಿ ಕತ್ತಲೆಯಡಗಿತ್ತು. ಗೊಗೇಶ್ವರನೆಂಬ ನಾಮವಲ್ಲಿಯೇ ನಿಂದಿತ್ತು.

793

ಉಲಿವ ತರುವಲಿಗಳೆಲ್ಲ ಗಿಳಿವಿಂಡುಗೆಡೆದಿಹರು. ಅಱಿಯದ ಮೌನಿಯ ಮುಕ್ತಿಯದೇನೋ ! ಅಱಿದರದೇನು, ಅಱಿಯದಿದ್ದರೇನು, ತನ್ನಲ್ಲಿದ್ದ ವಸ್ತುವ ತಾನಱಿಯದನ್ನಕ್ಕ ? ಅಂಗದಲ್ಲಿ ಒದಗಿದ ಲಿಂಗವನಱಿಯದೆ ಭಂಗ ಬಟ್ಟರು ಕಾಣಾ, ಗೊಗೇಶ್ವರ.

794

ಎಡದ ಕೈಯ ಲಿಂಗವ ಬಲದ ಕೈಯಲ್ಲಿ ಮುಟ್ಟಿ ಸ್ಪರ್ಶವ ಮಾಡುವ ಕರ್ಮಿಯ ನಾನೇನೆಂಬೆ. ಭವ ಭವದಲ್ಲಿ ಬಹ ಕರ್ಮಿಯ ನಾನೇನೆಂಬೆ. ಸತ್ಯವೇನವದಿರ ? ಮಿಥ್ಯವೇನವದಿರ ? ಹಿಡಿದ ಕೈಯಿ ತಾನೆ ಎಂದಱಿಯರಾಗಿ ಗೊಗೇಶ್ವರ ಲಿಂಗವು ಬೆಱಗಾದನು.

795

ಎಲ್ಲಿಯೂ ಇಲ್ಲೆಂಬುದ ಹುಸಿಮಾಡಿ, ಶಿಲಾಲಿಖಿತವ ಗುರುವಿನ ವಶವಾಗಿ, ಅಲ್ಲಲ್ಲಿಗೆ ಉಂಟೆಂಬುದ ತನು ನಿಲ್ಲದೆ ತೋಱು ಮಾಡಿದನು ಶಿಷ್ಯ, ತಾನು ಬಲ್ಲಿದ. ಷಡುವಿಧ ಜವನಿಕೆಯ ಮಱೆಯಲ್ಲಿಯೆ ಗೊಗೇಶ್ವರ ಲಿಂಗ ದಱಿವು !

796

ಒಡಲಡಗ ಮುಚ್ಚಿದಾತನ ಅಚ್ಚಶರಣನೆಂಬೆ. ಮಡಿಲಡಗ ಮುಚ್ಚಿದಾತನ ಅಚ್ಚಲಿಂಗವಂತನೆಂಬೆ. ಈ ಒಡಲಡಗು ಮಡಿಲಡಗಿನೊಳಗೆ ಒಂದ

---

1. ತ್ರಿ (ಮೂ) 2. ಬಿದ್ದರು (ಮೂ)

ಮಚ್ಚದಿದ್ದರೆ ಪ್ರಳಯ ತಪ್ಪದು. ಸದ್ಗುರು ಮಹಾಲಿಂಗವಲ್ಲಿ ಒಡಲಡಗ ಮಚ್ಚಿ ಅಚ್ಚ ಭವಿಯಾದ ಶರಣನೊಬ್ಬನೆ, ಗೊಗೇಶ್ವರ.

797

ಓಡಿನಲೂಟ ಕಾಡಿನಲಾಟ ವಿಪರೀತಚರಿತ್ರ. ಮರುಳಿನ ಕೂಟ, ಕೋವಿದ ಕೋವಿದ ಅವಿದ ಅವಿದ ಲಿಂಗ. ಗೋಗೇಶ್ವರನೆಂಬಾತನೊಬ್ಬನೆ ಹೊಱಗು, ಉಳಿದವರೆಲ್ಲರೂ ಸೂತಕರಯ್ಯ.

798

ಅಂಗದೊಳಗಣ ಲಿಂಗ, ಲಿಂಗದೊಳಗಣ ಅಂಗ; ಅಂಗಲಿಂಗ ಸಂಗ ಹಿಂಗದಂತೆ ಮಾಡದರೆ ದೇವ ಎಂಬಿರಿ ಬಲ್ಲವರು: ಲಿಂಗವ ಬಲ್ಲವರು ಹಿಡಿದು ಕೊಳಿರೋ, ತಾ ಸತ್ತು ಲಿಂಗವ ಕೂಡಿಹೆನೆಂದರೆ ಗೊಗೇಶ್ವರಂಗೆ ಬೇಱೊಂದು ಠಾವುಂಟೆ ಹೇಳಿರೇ ?

799

ಅಂದಂದಿಗೆ ಬಂದ ಧನವನಂದೆ ವೆಚ್ಚವ ಮಾಡಿ, ಹಿಂದು ಮುಂದ ಸಮವ ಮಾಡಿ, ಮಧ್ಯ ನಿರಾಳ ಊರ್ಧ್ವ ತಾಗಿದ್ದು ಇಲ್ಲದಂತಿಪ್ಪಡೆ ಇದೇ ತೆರನು ಕಂಡಯ್ಯ. ಅವರ ವಶವಲ್ಲದ ಪುರುಷನೊಬ್ಬನ ಸಾಧಿಸಿಕೊಳಬಲ್ಲಡೆ ಆ ಹಿರಿಯರಿಬ್ಬರೂ ತನ್ನವರಪ್ಪರು. ಆ ಹಿರಿಯರಿಬ್ಬರೂ ತನ್ನವರಾದರೆ ಸರ್ವವೂ ಸಾಧ್ಯವಪ್ಪುದು. ಸರ್ವವೂ ಸಾಧ್ಯವಾದಡೆ ತಾನಿಲ್ಲ; ಬಯಲಪ್ಪು ದಕ್ಕೆ ಇದೆ ಚಿಹ್ನ. ಹೀಗೆಂದು ನಂಬುವುದು. ನಂಬದಿದ್ದರೆ ಚೆನ್ನಬಸವಣ್ಣನ ಹೊಣೆಯ ಕೊಡುವೆ ಕಾಣಾ, ಗೊಗೇಶ್ವರ.

800

ಅಂಗದ ಮೇಲಣ ಲಿಂಗವ ಹಿಂಗಿದಾತನ ಭವಿಯೆಂಬರು, ಅಂಗದ ಮೇ[1]ಲೆ[1] ಲಿಂಗವಿಪ್ಪಾತ[2]ನ[2] ಭಕ್ತನೆಂಬರು, ಅಂಗದೊಳಗೆ [3]ನೆಲಸಿಪ್ಪ[3] ಲಿಂಗದ ಹೊಲಬನಱಿಯದೆ. ಲಿಂಗವಿಲ್ಲದೆ ಒಂದು ಕ್ಷಣ ಒಂದಂಗ ಸುಳಿದು ದುಂಟೆ ಜಗದೊಳಗೆ? ಅಂಗದೊಳಗಣ ಲಿಂಗವನು ಹಿಂಗಿದವರಿಗೆ ಭವಮಾಲೆ ಯುಂಟು; ಹಿಂಗದವರಿಗೆ ಭವಮಾಲೆಯಿಲ್ಲ, ಗೊಗೇಶ್ವರ.

801

ಕಾಮ ತೃಷೆಯು ಮಱೆಯಿತ್ತು, ಮೋಹ ಮುಂದುಗೆಟ್ಟಿತ್ತು, ಆಮಿಷ ತಾಮಸವೆಲ್ಲಾ ಎಳತಟವಾದವು, ಅಕ್ಕಟಾ ಅಯ್ಯಲಾ ನಿಮ್ಮ ಕಂಡವಂಗೆ! ಅಳಿವಿಲ್ಲದ ಸ್ನೇಹಕ್ಕೆ ಮರಣವೇ ಮಹಾನವಮಿ, ಗೊಗೇಶ್ವರ.

---

1. ಲಣ (ಶೂ) 2. ನೆ (ಶೂ) 3. ಬೆರಸಿಪ್ಪ (ಶೂ).

802

ಕಾಯಕ್ಕೆ ಕಾಯವಾಗಿ, ಜೀವಕ್ಕೆ ಜೀವನಾಗಿ, ಭಾವಕ್ಕೆ ಭಾವವಾಗಿ ಇದ್ದುದನಾರು ಬಲ್ಲರೋ! ಅದನು ದೂರವೆಂದು, ಸಮೀಪವೆಂದು, ಮಹಾಂತ ಗೊಗೇಶ್ವರನ ಒಳಗೆಂದು, ಹೊಱಗೆಂದು, ಅಱಿಯದೆ ಬಱುಸೂಱೆವೋದರು.

803

ಕಿಚ್ಚಿಗೆ ಮೈಯಿ ಹುಗುಳುವುಟ್ಟಿತ್ತು. ಉದಕಕ್ಕೆ ಛಳಿಯಾಗಿ, ಸ್ಫಟಿಕ ಗಿರಿಯಲ್ಲಿ ಹಣ್ಣು ಹುಟ್ಟಿತ್ತು. ಅಟ್ಟಿತ್ತೊಂದು ತಲೆ ಹೋ! ಹಣ್ಣನದೆ ನುಂಗಿತ್ತುರೆ! ಹೆಂಡತಿಯಿಲ್ಲದ ಗಂಡಂಗೆ ಆಱು ಮಾನಿಸಮಕ್ಕಳು; ಅಖಂಡಿತ ಗೊಗೇಶ್ವರ, ಹಾ ನಿರಾಳುರೆ!

804

ಕಾಯ ಲಿಂಗೈಕ್ಯವೇ? ಅಲ್ಲ ನಿಲ್ಲು. ಜೀವ ಲಿಂಗೈಕ್ಯವೇ? ಅಲ್ಲ ನಿಲ್ಲು. ಕಾಯ ಜೀವ ಸಂಬಂಧವ ಬಲ್ಲಡೆ ಆತ ಲಿಂಗೈಕ್ಯ. ಒಂಬತ್ತನೆಯ ದ್ವಾರಮಂ ಕಳಿದು, ಹತ್ತನೆಯ ದ್ವಾರದಲ್ಲಿ ನಿಲ್ಲ ಬಲ್ಲಡೆ ಆತನೇ ಗುರು ಕಣಾ, ಗೋಗೇಶ್ವರ!

805

ಕಲಿ ತನ್ನ ತಲೆಯನರಿದು ಕೈಯಲಿ ಹಿಡಿದು, ಹಲವು ದ್ವೀಪಕ್ಕೆ ಹೋಗಿ ತೊಳಲುತ್ತೈದಾನೆ. ಕಂಡವರು ತೋಱಿ, ಕೇಳಿದವರು ಹೇಳಿ [1]ಬುದ್ಧಿ. ತೊಳೆದುಕೊಂಡ ಬಳಿಕ ಮಜ್ಜನಕ್ಕೆಱೆವಿರಿ. ತಾನು ಲಿಂಗವೋ, ತನ್ನ ಕೈಯದು ಲಿಂಗವೋ? ಆವುದು ಲಿಂಗ ಹೇಳಿರೇ. ಲಿಂಗಸ್ಥಲವನಱಿಯದೆ ಎರಡಱಿಂದ ಕೆಟ್ಟರು, ಗೊಗೇಶ್ವರ[1].

806

ಕಾಮಿಸಿ, ದೃಷ್ಟಿ ನಟ್ಟು ನಿಬ್ಬೆಱಗಾದವರ ಕಂಡೆನಯ್ಯ. ಕಲ್ಪಿಸಿ, ದೃಷ್ಟಿ ನಟ್ಟು, ನಿಬ್ಬೆಱಗಾದವರ ಕಂಡೆನಯ್ಯ. ಭಾವಿಸಿ, ದೃಷ್ಟಿ ನಟ್ಟು, ನಿಬ್ಬೆಱಗಾದವರ ಕಂಡೆನಯ್ಯ. ರೂಪಿಸಿ, ದೃಷ್ಟಿ ನಟ್ಟು, ನಿಬ್ಬೆಱಗಾದವರ ಕಂಡೆನಯ್ಯ. ಪೂರ್ವಾಚಾರ್ಯ ಸಂಗನಬಸವಣ್ಣನ ಕಂಡು, ಗೊಗೇಶ್ವರ ಲಿಂಗವು ಅಱಿಯೆ, ಆನು ಪ್ರುತನಯ್ಯ.

---

1. ಬುದ್ಧಿಗೆಟ್ಟವ ಸುದ್ದಿಯು ಬೆಸಗೊಳುತ್ತೈದಾನೆ. ತಲೆ ತಲೆಯನೆ ನುಂಗಿ, ಹಲವು ದೇಶಕ್ಕೆ ಹೋಯಿತ್ತು ಗುಹೇಶ್ವರ, ತಲೆಯ ಮೊದಲಿಲ್ಲ (ನಮೂ)

807

ಕರ್ಮದ ಕಟ್ಟನೆ ಕೊಯ್ದು ಬ್ರಹ್ಮದ್ವಾರ[1]ವ[1] ಕಂಡೆ! ಮೇಲೊಂದು ಕಂಭವ ಕಂಡೆ[2]ನಲ್ಲಾ[2]! ಕಂಭವ [3]ಖಂಡಣೆ[3]ಯ ಮಾಡಿ ಮಹಾಬೆಳಗನೆ ಕಂಡೆ! ಗೊಗ್ಗೇಶ್ವರನೆಂಬ ಲಿಂಗ[4]ವ[4]ಲ್ಲಿಯೇ ನಿಂದನು!

808

ಕನ್ನಡಿಯೊಳಗಣ ರೂಪನರಸಿಯೂ ಕಾಣರು; ಹೊಳೆವುತ್ತದೆ ಧ್ರುವ ಮಂಡಲದೊಳಗೆ. ಇದ ಬಲ್ಲವರೊಳಗಿಪ್ಪ ಗೊಗ್ಗೇಶ್ವರ.

809

ಕೆಲವರು ಕಂಡೆವೆಂಬರು; ತಾರಾಮಂಡಲವೆ, ಸೂರ್ಯಮಂಡಲವೆ? ಗೊಗ್ಗೇಶ್ವರನಿಪ್ಪುದು ಚಂದ್ರಗಿರಿಯ ಪಟ್ಟಣವು.

810

ಗಗನ ಪವನದ ಮೇಲೆ ಉದಯಮುಖ[5]ವ[5]ನುಭಾವ ಸದಮುದಗಜವ ನಿಲಿಸುವ ಮಾವತಿಗ ಬಂದ. ಅಷ್ಟದಳ ಕಮಲ[6]ದಲ್ಲಿ ಸೃಷ್ಟಿಯಾಕೃತಿ[6] ಭಜನೆ; ಮೆಟ್ಟಿ ನಿಂದಾತ ಪರಮಯೋಗಿಯಾಗದೆ ಮಾಣ. ಬಯಲ [7]ಬಣ್ಣವ ತುಂಬಿ[7], ನೆಳಲ ಶೃಂಗಾರವ ಮಾಡಿ, ಗೊಗ್ಗೇಶ್ವರನ ಶರಣ ಚೆನ್ನಬಸವಂಗೆ ಶರಣೆನುತ್ತಿದ್ದೆನು.

811

ತಲೆಯಿಲ್ಲದ ಮೃಗ ಒಡಲಿಲ್ಲದೆ ಆಹಾರವ ಕೊಂಡಿತ್ತು, [8]ಹಜ್ಜೆ[8] ಯಿಲ್ಲದೆ ಹರಿಯಿತ್ತು. ಅದ ಶುದ್ಧಿಯ ಮಾಡ ಹೋದಾತನಿನ್ನೂ [9]ಮರ ಳನು[9]. ವೆಜ್ಜವಿಲ್ಲದ ಮಣಿಯ ದಾರವಿಲ್ಲದೆ ಪವಣಿಸುವ, ಗೊಗ್ಗೇಶ್ವರ, ನಿಮ್ಮ ಶರಣನ ಪರಿಯ ನೋಡಾ.

812

ತನುವ ತೋಟವ ಮಾಡಿ, ಮನವ ಗುದ್ದಲಿ ಮಾಡಿ, ಅಗೆದು ಕಳೆದೆ ನಯ್ಯ ಭ್ರಾಂತಿನ ಬೇರೊಡೆದು. ಸಂಸಾರದ ಹೆಂಟೆಯ ಬಗಿದು, ಬಿತ್ತಿದೆನಯ್ಯ ಬ್ರಹ್ಮಬೀಜವ. ಅಖಂಡ ಮಂಡಲವೆಂಬ ಭಾವಿ, ಪವನವೆ ಋಾಟಾಳ, ಸುಷುಮ್ನ ನಾಳದಿಂದವೆ ಉದಕವ ತಿದ್ದಿ, ಬಸವಗಳೈವರು ಹಸಗೆಡಿಸಿಹರೆಂದು ಸಮತೆ

---

1. ವನೆ (ನ) 2. ನಯ್ಯ (ನಮೂ) 3. ಖಂಡಣೆ (ಮೂ) 4. ವು ಅ (ಮೂ). 5. ದ (ಶೂ) 6. ದೊಳು ಸೃಷ್ಟಿಯಂಕುರ (ಶೂ) 7. ಬಣ್ಣಕೆ ತಂದು (ಶೂ) 8. ಪೂಜೆ (ವನ) 9. ಮರುಳನು (ನಮೂ)

ಸ್ಮೈರಣೆಯೆಂಬ ಬೇಲಿಯನಿಕ್ಕಿ, ಆವಾಗಳೂ ಈ ತೋಟದೊಳಗೆ ಜಾಗರವಿದ್ದು [1]ಈ[1] ಸಸಿಯ ಸಲಹಿದೆ ಕಾಣಾ, ಗೊಗೇಶ್ವರ.

813

ನೀರಲೊಗೆದ [A]ಮರಕ್ಕೆ[A] ಕಾಣಬಾರದ ನೆಳಲು ; ಬೀಜವಿಲ್ಲದ ಮರನ ಹೆಸರೇನೆಲವೋ ? ಇದನೇನ ಬಲ್ಲಿ[2]ರಿ[2], ಇದನೇನ ಬಲ್ಲಿ[2]ರಿ[2], [3]ಅಜಾವಿನ ಮಜ್ಜೆಯ[3] ಘನಕ್ಕೆ ಘನವಾದುದ? ಕಾಸಲಿಲ್ಲದ ತುಪ್ಪ, ವಾಸನೆಯಿಲ್ಲದ ಪರಿಮಳ! ಗೊಗೇಶ್ವರನಿಪ್ಪ ನಿರಾಳ[4]ವ[4] ನೋಡಯ್ಯ !

814

ನಾದ ಬಿಂದುವಿನೊಳಗಣ ಪದ್ಮಾಸನದ ಮೇಲೆ ಕುಳ್ಳಿರ್ದು ಘಳಿಗೆ ಗೊಮ್ಮೆ ಸುಳಿದು ಹೋಹ ಕಳ್ಳನನಾರಯ್ಯ ಬಲ್ಲವರು? ಹಾಱುವ ಹಂಸೆಯು ತಲೆಗಿಂಬು ಮಾಡಿದವರ [5]ಬಸವ[5] ಬಲ್ಲ ಕಾಣಾ, ಗೊಗೇಶ್ವರ.

815

ನೆಲೆಯಿಲ್ಲದ ಮಹಾಜಲದೊಳಗೆ ಮಲಗಿರ್ದ ಸರ್ಪನ ಫಣವ ನೋಡಲು ಬೆಳಬೆಳಗುತಿದ್ದವು ರಜತಹೇಮವೆಂಬೆರಡು ಕುಲಗಿರಿ.! ಎಡದ ಕೈಯಲ್ಲಿ ರಜ ತಾದ್ರಿಯ ಹಿಡಿದು, ಬಲದ ಕೈಯಲ್ಲಿ ಹೇಮಾದ್ರಿಯ ಹಿಡಿದು, ಮಹಾದಂಡಿಯ ಫಣಿಯ ಹೊಡೆಯಲು ನೆಗಹಿತೀರೇಳು ಭುವನವ. ಅಲ್ಲಿಂದ ಮೇಲೆ ಗಿರಿ ಯೆರಡು ವರ್ಣವಳಿದು ಅಡಗಿತ್ತು ಚಿಕ್ಕಾಡಿನ ಹೃದಯದಲ್ಲಿ. ಚಿಕ್ಕಾಡು ಕಂದೆಱೆದು ಕಂಡಿತ್ತು ಚಿದಾಕಾಶವೆಂಬ ಶಿವಾಲಯ. ಅಂಗವಿಲ್ಲದ ಶೃಗಾರಕ್ಕೆ ಭಂಗವುಂಟೆ ? ಇಲ್ಲವಾಗಿ, ಗೊಗೇಶ್ವರನೆಂಬ ನಾಮದ ಶಬ್ದ ಬ್ರಹ್ಮಕ್ಕೆ ಮುದ್ರಿಕೆಯಾಯಿತ್ತು.

816

ಪೂಜೆಯಾಯಿತ್ತಿದೇನೋ, ಪೂಜೆಯ ಮೇಲೆ ಸಿಂಹಾಸನವಿದೇನೋ? ಧೂಪದೀಪನಿವಾಳಿಯಿದೇನೋ? ತಳದಲ್ಲಿ ಜ್ಯೋತಿ, ಮೇಲೆ ಪ್ರಣತೆ, ಕಳಸದ ಮೇಲಣ ನೆಲಗಟ್ಟ ಕಂಡು ನೋಡಿ ಬೆಱಗಾದೆ, ಗೊಗೇಶ್ವರ.

817

ಬೆಳಗಿನೊಳಗಣ ಬೆಳಗ ಕಡೆದರೆ ಮರಳಿ ಕೂಡಿತ್ತಲ್ಲ! ಮೇರುವನೆ ಬೋನವ ಮಾಡಿ ಸವಿದ ಭಕ್ತರ ನೋಡಾ. ಅಡಗನಾರೋಗಣೆಯ ಮಾಡಿದ ಲಿಂಗವ ಕೊಡಗೂಸು ನುಂಗಿತ್ತ ಕಂಡೆ, ಗೊಗೇಶ್ವರ.

---

1. × (ಶೂ) A ಮಠಕ್ಕೆ (ನ) 2. ರೆ (ಮೂ) 3. ಅಜಾದವ ಮಜ್ಜೆಯ (ಮೂ) 4. ವಂ (ನ) 5. ಬಸವಣ್ಣ (ಐ).

818

ಬೇಡುವೆನೆ ಇಂದ್ರಪದವಿಯನಿನ್ನು?! ಮೂಡುವ ಸೂರ್ಯನ ಪ್ರಭೆಯಂತೆ ಓಡದಿರು ಓಡದಿರು, ಎನ್ನ ಮುಂದಣ ಮಾಣಿಕ್ಯದ ಹೊಳಹಿನಂತೆ. ನೋಡು, ಮಾತಾಡು; ಕೃತಕದ ಪದವಿಯ ಬೇಡುವ ಲಿಂಗವೆನ್ನಲಿದ್ದುದೆ, ಗೊಗೇಶ್ವರ?

819

ಮರ್ತ್ಯಲೋಕದ ಕವಿಗಳೆಲ್ಲರೂ ಎನ್ನ ತೊತ್ತಿನ ಮಕ್ಕಳು. ದೇವಲೋಕದ ಕವಿಗಳೆಲ್ಲರೂ ಎನ್ನ ಕರುಣದ ಕಂದಗಳು. ಹಿಂದೆ ಮುಂದೆಯಾಡುವ ಕವಿಗಳೆಲ್ಲರು ಎನ್ನ ಲೆಂಕ ಡಿಂಗರಿಗರು. ಹರಿಬ್ರಹ್ಮರುದ್ರ ಈ ಮೂವರೂ ಎನ್ನ ಕಕ್ಷೆಯ ಒಕ್ಕಲು. ಗೊಗೇಶ್ವರ, ನೀನಳಿಯ ನಾ ಮಾವ.

820

ಮೂಱು ಲೋಕಕೊಂದು ಪುಷ್ಪ! ಆ ಪುಷ್ಪದ ಬಂಡುಣ ಬಂದ ತುಂಬಿಯ ನೋಡಾ! ತಂಬುದ (?) ಕೆಡಹುತಲೈಧಾವೆ ಅವು ತಮ್ಮ ಪೂರ್ವಜನ್ಮಂಗಳಿಗೆ. ಆದಕಿಕ್ಕಿದೆನೋಱೆಯ, ಕಟ್ಟಿದೆನು ತೊಡರ. ಓಡದ ಬಿಱುದು; ಗೊಗೇಶ್ವರ.

821

[1]ಲಿಂಗಗಂಭೀರಸುನಾದವೆ ತನುಗುಣಚರಿತ್ರ, ಜಂಗಮಗಂಭೀರ ಅನಾಹತವೆ ಮನಗುಣಸ್ವಭಾವ, ಈ ಎರಡಱ ಸಂಬಂಧವೆ ಸಹಜಜ್ಞಾನವೆ[1] ಒಡಲು. ಪರಮಾನಂದ ಜಲದಲ್ಲಿ ಅಲುಬಿ, ಮಹಾಪ್ರಕಾಶದಲ್ಲಿ [2]ಆಱಿಸಿ[2], ಅನಾಹತಮಥನದಲ್ಲಿ ಘಟ್ಟಿಸಿ, ಆ ವಸ್ತ್ರವನೆನಗೆ ಕೊಟ್ಟರೆ, ಉಡದ ಮುನ್ನವೆ ಉರಿ ಹತ್ತಿತ್ತು ನೋಡಾ! ಆ ಉರಿಯು ಕಣ್ಣಿಂಗೆ ಕಾಣಬಾರದು; ಮನಕ್ಕೆ ನೆನೆಯಬಾರದು! [3]ಉರಿ ಉಂಟು ಉಷ್ಣವಿಲ್ಲ[3]! ಆ ಸ್ವಯಂಜ್ಯೋತಿಯ ನಿಜನಿವಾಸದಲ್ಲಿ ನಿಶ್ಚಿಂತನಾಗಿ[4]ದ್ದ[4] ಮಡಿವಾಳನ ಕೃಪೆಯಿಂದ ನಾನು ಬದುಕಿದೆ ಕಾಣಾ, ಗೂಗೇಶ್ವರ.

822

ವೀರಧಾರಿಣಿಯೊಳಗೆ ನಾಱಿ(=ರಿ) ಶೃಂಗಾರವ ಮಾಡಿ ಈರೇಳು ಭುವನವ ಮಾಡಿ, ಬಿಂದುಶಕ್ತಿಯ ಭೇದ ಸಂದ ಯೋಗದ ಸುಖವ ತಂದು, ಮೂರ್ತಿ

---

1. ಲಿಂಗಗಂಭೀರ ಸುನಾದ, ಜಂಗಮಗಂಭೀರ ತನುಗುಣಚರಿತ್ರ ಜಂಗಮಗಂಭೀರ ಅನಾಹತವೆ ಮನಗುಣಚರಿತ್ರ ಈ ಎರಡಱ ಸಂಬಂಧವೆ (ಶೂ) 2. ಅರಸಿ (ವ) 3. ಉರಿವುಂಡ ಉಷ್ಣವಿಲ್ಲದ (ಶೂ). 4. ದ್ದು (ಶೂ)

ಗೊಳಿಸಿದವರಾರು ? ! ಒಂದೆರಡಱಿ ನುಡಿಯ ಮತ್ತೊಂದು ಗ್ರಹಿಸಿತ ಕಂಡೆ. ಬಿಂದುವಿನ ರಸದ ಪರೀಕ್ಷೆಯ ಭೇದವ, ಚಂದ್ರಕಾಂತದ ಗಿರಿಯರ( = ರು)ಣ ಚಂದ್ರನೊಡನೆ ಇಂಬಿನಲ್ಲಿಪ್ಪ ಪರಿಯು ನೋಡಾ ! ಅಂಗೈಯ ತಳದೊಳು ಮೊಲೆ, ಕಂಗಳಲ್ಲಿ ಕರಸನ್ನೆ, ಇಂಬಿನಲ್ಲಿ ನೆರೆದ ಸುಖವೊಂದೆ ! ಅಂದಿನಾದಿಯ ಪ್ರತಿಬಿಂಬ ಇಂದೆನಗೆ ತೋಱಿತ್ತು. ಗೊಗೇಶ್ವರನ ಶರಣ ಚನ್ನಬಸವಣ್ಣಂಗೆ ಶರಣೆನುತ್ತಿದ್ದೆನು.

823

ಸತ್ತು ಮುಂದೆ ದೇವರ ಕೂಡುವುದುಳ್ಳಡೆ ಸಾಯಲೇ ಬೇಕು ; ಹಿಂದೆ ನೋಯಲೇಕಯ್ಯ ? ತಮ್ಮಿಂದ ತಾವು ಸತ್ತು, ನಿಮ್ಮ ಮೇಲೆ ಇಡುವರು. ಲೋಕದ ದುರ್ಜನವ ಹೊತ್ತೆ ಕಾಣಾ, ಗೊಗೇಶ್ವರ !

824

ಸತ್ತು ಮುಂದೆ ದೇವರ ಕೂಡಿಹೆವೆಂಬಿರಿ ; ಸಾಯದ ಮುನ್ನ ಸತ್ತಿದ್ದರೆ ಎಂತಯ್ಯ ? ನಿಮ್ಮ ಲಿಂಗೈಕ್ಯದ ಪರಿ ಎಂತಯ್ಯ ? ನಿಮ್ಮ ಪ್ರಮಥರ ಪರಿ ಅಂಗದ ಅವಸ್ಥೆಯಲ್ಲದೆ, ಲಿಂಗಾವಸ್ಥೆ ಆರಿಗೂ ಇಲ್ಲ ; ಗೊಗೇಶ್ವರ.

825

ಹಿರಿಯರನೆಲ್ಲರ ಹುಟ್ಟಿಸಿದಾತನ[1]ನಱಿಯಿರೋ[1] ಹಿರಿಯರ ಮಕ್ಕಳಿರಾ! ಇಂದೆಂದೇನೋ, ನಾಳೆಂದೇನೋ, ಎಂದೂ ಒಂದೇ ಮಕ್ಕಳಿರಾ, ಗೊಹೇಶ್ವರ [2]ನೆಂಬ ಲಿಂಗ[2]ಸಂಯೋಗ. ಇದ [3]ಬೆರಸ[3]ಲಱಿಯಿರೋ, ಹಿರಿಯರ ಮಕ್ಕಳಿರಾ!

826

ಹುಸಿಯಿಲ್ಲದ ಗೂಡಿನೊಳಗೆ ಹೊಸ ಬಣ್ಣದ [4]ಹಕ್ಕಿಯ[4] ಭಸ್ಮವ ಮಾಡಿ ಆ [5]ಗೂಡನೆಯ್ದೆ[5] ನುಂಗಿ, [6]ಶಿಶು[6] ತಾಯ ಬೆಸಲಾಗಿ, ತಾಯಿ [6]ಶಿಶು[6]ವ[7]ನೆ[7] ನುಂಗೆ, [6]ಶಿಶು[6] ಕೋಪದಿಂದ ತಾಯ[8]ನೆಯ್ದೆ[8], ಹೊಸದೇಶದಿಂದೊಬ್ಬ-[9]ನಾರಯ್ಯ[9] ಬಂದಾತ ಹೆಸರಿಲ್ಲದಂತೆ [10]ಇಬ್ಬರನೆಯ್ದೆ[10] ನುಂಗೆ, ಬಸವ ಚೆನ್ನ ಬಸವ ಅನಿಮಿಷಗೊಗೇಶ್ವರ ಸಹಿತ[7]ವಾಗಿಯೆ[7] ಶಿಶುವಿನ ಕರಸ್ಥಲದಲ್ಲಿ[7]ಯೆ[7] ಸುಖಿಯಾದರು.

---

1. ನಱಿಯರೋ (ವ) 2. ಲಿಂಗ ಹಂಗಿಲ್ಲದ (ನ) 3. ಬೇಗ (ವಮೂ) 4. ಹಕ್ಕಿ (ವ) 5. ಗೂಡನೆಯಿದಿ (ಮಿ–ಸ್ತೋ) 6. ಸಿಸು (ವ) 7. × (ಮಿ–ಸ್ತೋ) 8. ನೆಯಿದೆ (ಮಿ–ಸ್ತೋ) 9. ಆರಯ್ಯ (ಮಿ–ಸ್ತೋ) 10. ಇಬ್ಬನೆಯಿದೆ (ಮಿ–ಸ್ತೋ)

827

ಹುಟ್ಟು ಬಂಜೆಯ ಮಗನೊಬ್ಬ ಈನದೆಮ್ಮೆಯ [1]ಗಿಣ್ಣ[1] ಬೇಡಿದನು, ಕೊಂಬಿಲ್ಲದ ಮರ[2]ನ[2]ನೇಱಿ, ಹೊಟ್ಟೆ ತುಂ[3]ಬ[3] ಹಣ್ಣ ಮೆ[4]ಲಿ[4]ದನು. ಗೊಗೇಶ್ವರ ಗೊಗೇಶ್ವರ, [5]ಇಳಿ ಇಳಿ[5] ಎಂದರೆ ಅಳುತೈದಾನೆ.

828

[A]ಕ್ಷೀರಸಾರಗದೊಳಗೆಯಿರುತ ಹಾಲ ಬಯಸುವರೆ? ಪುಷ್ಪದೊಳ[6]ಗಣ[6] ತುಂಬಿ ಪರಿಮಳವ ಬಯಸುವಂತೆ ನೋಡಾ ಲಿಂಗವೆ! ಅಕಟಕಟ ಕಪಟವೆ!? ಕಡಲೊಳ[7]ಗಣ[7] ಕಪ್ಪೆ ನೀರ ಬಯಸುವಂತೆ ನೋಡಾ ಲಿಂಗವೆ! ತಾವು ಲಿಂಗದೊ[8]ಳ[8]ರುತ, ಹೊಱಗ ಬಯಸುವರೆ, [9]ಗೊಗೇಶ್ವರ?[9][A]

829

ಲಿಂಗವನಱಿಯದೆ ಏನನಱಿ[10]ದಡೆಯೂ[10] ಫಲವಿಲ್ಲ, ಲಿಂಗವನಱಿದ ಬಳಿಕ ಮತ್ತೇನನಱಿ[10]ದಡೆಯೂ[10] ಫಲವಿಲ್ಲ. ಸರ್ವಕಾರಣ ಲಿಂಗವಾಗಿ ಲಿಂಗವನೆ [11]ಅಱಿದೆನು. ಅಱಿದು[11] ಲಿಂಗಸಂಗವ[12]ನೆ[12] ಮಾಡುವೆ[12]ನು,[12] [13]ಸಂಗ[13]ಸುಖದೊಳೋಲಾಡುವೆ[12]ನು,[12] ಗೊಗೇಶ್ವರ.

830

ಪಂಚಮಹಾಪಾತಕಗಳು ಬೇವ ಠಾವ ಕಂಡೆ. ಸರ್ವ ದುಃಖಗಳು ಹೋಹ ಠಾವ ಕಂಡೆ. ಕಾಮನ ಕಯ್ಯ ಕೊಯ್ವ ಠಾವ ಕಂಡೆ, ಮಾಯೆಯ ಬಾಯ ಕಟ್ಟುವ ಠಾವ ಕಂಡೆ, ಗೊಗೇಶ್ವರ ಲಿಂಗದಲ್ಲಿ ಕಣ್ಣು ತುಂಬಿ.

831

ಪದ್ಮಾಸನದಲ್ಲಿ ಕುಳ್ಳಿರ್ದು ಕುಂಡಲಿಯ [14]ಸ್ಥಾನವನಱಿದು[14] ಆಂಡ

---

1. ಗೆಣ್ಣ (ವ) 2. × (ಮೂ) 3. ಬಿ (ಮೂ) 4. ಲೆ (ಮೂ) 5. ಇಳಿ (ವ) A ಕ್ಷೀರಸಾಗರದೊಳಗಿದ್ದ ಹಂಸೆ ಹಾಲ ಬಯಸಲುಂಟೆ? ಪುಷ್ಪದೊಳಗಿದ್ದ ತುಂಬಿ ಪರಿಮಳವನಱಸಲುಂಟೆ? ಕಡಲೊಳಗಿದ್ದ ಕಪ್ಪೆ ಜಲವ ಬಯಸಲುಂಟೆ? ಇದೆಂತಯ್ಯ? ತಾ ಲಿಂಗದೊಳಗಿದ್ದು ಬೇಱೆ ಇತರ ಕಾಮ್ಯದೊಳಿರ್ಪ ಭ್ರಾಂತರನೇನೆಂಬೆನಯ್ಯ ಗುಹೇಶ್ವರ. (ಗ). 6. ಗಿರ್ದು (ನ)ಗೆ (ಮೂ) 7. ಗಿರ್ದ (ನ) ಗಿದ್ದ (ಮೂ) 8. ಳಗಿ (ನ) 9. ಗುಹೇಶ್ವರನ ಮನ ಮುಟ್ಟಪೂರ್ದೆಂಬುದು ಅಘಟಿತವಯ್ಯ (ನ) 10. ತೂ (ಐ) 11. ಅಱಿದಱಿದು (ಐ) 12. × (ಐ) 13. ಆ ಸಂಗ (ಐ) 14. ಸ್ಥಾನಕವನಱಿದು (ಐ).

[1]ಲೆವ ಅಧೋಗಮನ ವಾಯುವ[1] ಊರ್ಧ್ವ ಮುಖವ ಮಾಡಿ ಷಡಂಗುಲ[2]ಮಂ ಒತ್ತಿ[2] ; ಊರ್ಧ್ವವಾಯುವನಧೋಮುಖಕ್ಕೆ ತಂದು, [3]ಉತ್ತರ ದಕ್ಷಿಣ ಪೂರ್ವವನತಿಗಳೆದು, ಪಶ್ಚಿಮಸುಷುಮ್ನೆಯಲ್ಲಿ[3] ಮನಶ್ಶಕ್ತಿ ಸಂಧಾನ ಸಂಯೋಗ ದಿಂದ ಸಹಸ್ರದಳ ಕಮಲದಲ್ಲಿ [4]ನಾದಬ್ರಹ್ಮವನೆಯ್ದಿ[4], ಮಹಾವಾಸನಾಮೃತವ ದಣಿಯುಂಡು [5]ತ್ರಿಸಂಧ್ಯಾನ[5] ಒಂದಾದ ಬಳಿಕ, ಆತ್ಮ ಪರಮಾತ್ಮನು ಇಂತಾಗಿ ಅಂತರಾತ್ಮ ವಿಚಾರಕ್ಕೆ ಇಳಿದಲ್ಲಿ ಅಭ್ಯಾಸಕ್ಕೆ ಬರಲಾಗದು. [6]ಅದೆಂತೆಂದಡೆ ದೇವಲೋಕಕ್ಕೆ ಸಂದು, ಮರಳಿ ಮಾನವನಪ್ಪುದೆ? ಅದೇ ಪಾತಕ![6] ಹಸಿದವ [7]ದಣಿವುಂಡು[7] ಮರಳಿ ಹಸಿದುಂಡಹೆ[8]ನೆಂದರೆ ಅದೇ[8] ಪ್ರಕೃತಿಗುಣ, ಇದು ಕಾರಣ [9]ಪರಮಾತ್ಮನು ತಾನಾದಾತನು[9] ಪರಮಾತ್ಮ [10]ತಾನಾದನಾಗಿ, ತನ್ನಲ್ಲಿ ತಾನೆ ಏಕೀ[10]ಭವಿಸಿರಬೇಕು, ಗೊಗೇಶ್ವರ.

832

ಗುದಲಿಂಗನಾಭಿಕಮಲದಿಂದ ಮೇಲೆ, ಷಡಂಗುಲವನೊತ್ತಿದರೆ, ಕಣ್ಣಿಲ್ಲದೆ ಕಾಣಬಹುದು ಲಿಂಗಪ್ರಕಾಶವ. ಕಿವಿಯಿಲ್ಲದೆ ಕೇಳಬಹುದು ಮಹಾನಾದವ ಸುನಾದವ. ಕಂಡು ಕೇಳದ ಬಳಿಕ, ಮನ ನಂಬದಿದ್ದರೆ ಮಕ್ಕಳಾಟಿಕೆ ತಪ್ಪದು, ಗೊಗೇಶ್ವರ.

833

ಹರಹರಾ [11]ನೀನಿಪ್ಪ[11] ಠಾವನರಿಯದೆ, ಅಷ್ಟ ವಿಧಾರ್ಚನೆ ಷೋಡಶೋಪಚಾರ[12]ಮಂ ಮಾಡಿಹೆನೆಂಬವರ[12] ದಿಟ್ಟತನವ ನೋಡಾ. ಶಿವಶಿವಾ ನಿಮ್ಮ ಶ್ರೀಮುಖವನರಿಯದೆ ಸಕಲಪದಾ[13]ರ್ಥಂಗಳ[13] ನಿಮಗರ್ಪಿಸಿ, ಪ್ರಸಾದವ ಕೊಂಡೆ[14]ವೆಂ[14]ಬವರ ಎದೆಗಲಿತನವ ನೋಡಾ. ಹಗರಣದ ಹಣ್ಣಮೆದ್ದು ಹಸಿವು ಹೋಯಿತ್ತೆಂದಡೆ ಆರು ಮೆಚ್ಚುವರು ಹೇಳಾ, ಗೊಗೇಶ್ವರ.

834

ತೋಱಬಾರದ ಠಾವಿನಲ್ಲಿ ಒಂದು ಹೊಸ ಬಣ್ಣವು ಸುಳಿಯಿತ್ತಯ್ಯ. ಸೋಹಂ ಸೋಹಂ ಎಂಬುದೊಂದೇ ಬ್ರಹ್ಮವು, ಮುಟ್ಟಿಯೂ ಮುಟ್ಟದ ಬ್ರಹ್ಮವ ನೆಟ್ಟನೆ ಮುನ್ನಱಿಯದೆ ಕಟ್ಟಣೆಯಿಲ್ಲದ ಇರವು, ಗೊಗೇಶ್ವರ, ನಿಮ್ಮ ನಿಲವು.

---

1. ಅಂಡಲೆದು ಅಧೋವಾಯುವ (ಐ) 2. ವನೆತ್ತಿ (ಐ) 3. ಉತ್ತರ ಪೂರ್ವ ದಕ್ಷಿಣಮಂ ನೇತಿಗಳೆದು ಪಶ್ಚಿಮದ (ಐ) 4. ನಾಳದ ಭ್ರಮರನೆಱಗಿ (ಐ) 5. ತ್ರಿಗಂಧ್ಯಾನ (ವ) 6. ಆ ಲೋಕಕ್ಕೆ ಸಂದು ಮರಳಿ ಮಾನವರಪ್ಪರೆ ಅದೇಕೋ ಪಾತಕ (ವ) 7. ಅಮೃತವ ದಣಿಯುಂಡು (ಐ) 8. ನೆಂದರೆಂದು (ವ) 9. ಪರಮಾತ್ಮನಾದಾತನು (ಐ) 10. ನಾಗಿ ತನ್ನಲ್ಲಿ ತಾನೇಕೀ (ಐ) 11. ನೀವಿಪ್ಪ (ಮೂ) ನೀವಿರ್ಪ (ನ) 12. ವ ಮಾಡುವ (ನಮೂ) 13. ರ್ಥವನು (ನಮೂ) 14. ವೆಂದೆಂ (ನಮೂ)

835

ಬಿತ್ತದೆ ಬೆಳೆಯದೆ ತುಂಬಿದ ರಾಸಿಯ ಕಂಡಲ್ಲಿ ಸುಖಿಯಾಗಿ ನಿಂದವ ರಾರೋ! ಇದ ಹೇಳಲು ಬಾರದು! ಗೊಗೇಶ್ವರ, ನಿಮ್ಮ ಶರಣನು ಲಚ್ಚಣವಳಿ ಯದೆ ರಾಸಿಯನಳೆವನು.

836

ಕನ್ನಡಿಯೊಳಗಣ ರೂಪವನಱಿಸಿಯೂ ಕಾಣರು. ಹೊಳೆವುತ್ತದೆ ಭ್ರೂಮಂಡಲದೊಳಗೆ; ಇದ ಬಲ್ಲವರೊಳಿಪ್ಪ ಗೊಗೇಶ್ವರ.

837

ಒಡಲೊಳಗಿದ್ದು, ಒಡಲಿಂಗಾಧಾರವಾಗಿ, ಒಡಲ ಸೋಂಕದೆ, ಒಡಲ ಬೆಳಗುವ, ಪರಿಯ ನೋಡಾ! ಬೆಳಗಿಂಗೆ ಬೆಳಗಾಗಿ ಬೆಳಗುವ ಪರಿಯು ನೋಡಾ! ಪರಮಚೈತನ್ಯ ನಿರಾಳಗೊಗೇಶ್ವರಲಿಂಗ[1]ವು[1] ನೋಡಾ.

838

ಅಭ್ಯಾಸವ ಮಾಡುವ ಕೋಲಿಂಗೆ ಶರಣೆಂದರೆ ಮುಂದಣ ಬವರಕ್ಕಲ-ಗಾಗಬಲ್ಲುದೇ? ಅಯ್ಯಾ, ಇಷ್ಟಲಿಂಗವೆಂದು ಮುಟ್ಟಿ ಪೂಜಿಸುತ್ತಿದ್ದರೆ ಮುಂದಣ ಶಂಕೆಗಿನ್ನೆಂತೋ? ಲಿಂಗವೆಂದಡೆ ನಿಸ್ಸಂಗದಲದೆ, ಜಂಗಮವೆಂದಡೆ ಆಶ್ರಯ ದಲದೆ, ಲಿಂಗಜಂಗಮವನೊಂದೆಂದಡೆ ಮುಂದಣ(=ಣಾ ?)ಲಯಕ್ಕಿ ನ್ನೆಂತೋ? ಎಲೆ ಗೊಗೇಶ್ವರ, ನಿಮ್ಮ ಶರಣ ಚತುರ್ವಿಧಫಲಂಗಳಿಗೆ ಹೊಱಗು.

839

ಆಕಾಶವನಡರುವಂಗೆ [2]ಅಟ್ಟಗೋಲ[2] ಹಂಗೇಕೋ? ಸಮುದ್ರವ ದಾಂಟು ವಂಗೆ ಹಱುಗೋಲ ಹಂಗೇಕೋ? ಸೀಮೆಯ ಮೀಱಿದ ನಿಸ್ಸೀಮಂಗೆ ಸೀಮೆಯ ಹಂಗೇಕೋ? ಗೊಗೇಶ್ವರಲಿಂಗದಲ್ಲಿ ನಿಸ್ಸೀಮ ಸಿದ್ಧರಾಮಯ್ಯ ದೇವರಿಗೆ ಲಿಂಗವೆಂದೇನು ಹೇಳಾ, ಚೆನ್ನಬಸವಣ್ಣ.

840

ಇಷ್ಟಲಿಂಗವ ಪೂಜಿಸಿದರಾಗಿ ನಿಷ್ಠೆ ನೆಲೆಗೊಳ್ಳದು. ಬಹುಲಿಂಗವ ಪೂಜಿಸಿದರಾಗಿ ಭ್ರಮಿತರಾದರು, ಅನ್ಯಲಿಂಗವ ಪೂಜಿಸಿ ಭಿನ್ನರಾದರು. ಸ್ಥಾವರಲಿಂಗವ ಪೂಜಿಸಿ ಸಾವಿಂಗೊಳಗಾದರು. ಬಳ್ಳಲಿಂಗವೆಂದು ಪೂಜಿಸಿ ಏನುವನಱಿಯದೆ ಹೋದರು. ಗೊಗೇಶ್ವರನೆಂಬ ಲಿಂಗವ ಪೂಜಿಸಿ ನಿಮ್ಮ ಶರಣರು ಅಲ್ಲಿಗಲ್ಲದೆ ಇಲ್ಲಿಗಲ್ಲದೆ ಹೋದರು, ನೋಡಾ!

---

1. ವ (ಮೂ) ವು (ನ) 2. ಅಟ್ಟಕೋಲ (ವ)

841

ಓಂ ನಮಶ್ಶಿವಾಯ ಎಂಬ ದೇವನಿರಲು ಒಡಲುವಿಡಿದು ಪಾಷಾಣಕ್ಕೆ ಹಂಗಿಗರಾದಿರೇ! ಶರೀರ ರೂಹಿಸಿದ ರೂಹಿಂಗೆ ಮಾಯದ ಬಲೆಯಲ್ಲಿ ಸಿಲುಕಿ ಅಂಗಸಂಗಿಗಳೆಲ್ಲರೂ ಮಹಾಘನವನಱಿಯದೇ ಹೋದಿರೋ! ಹುಸಿಯನೇ ಕೊಯ್ದು ಹುಸಿಯನೇ ಪೂಜಿಸೆ ನೇಮದೊಳಗಿದು ಸಲ್ಲದು. ಗೋಗೇಶ್ವರ, ನಿಮ್ಮ ಶರಣ ಸಂಬಂಧವು ತೋಱದು ತೋಱದು ಬಹುಮುಖಿಗಳಿಗೆ.

842

ಅಂಗಸೋಂಕೆಂಬುದು ಅಧಮವು. ಉರಸೆಜ್ಜೆಯೆಂಬುದು ಎದೆಯ ಗಂಡ. ಕಕ್ಷವೆಂಬುದು ಕವುಚಿನ ತವರುಮನೆ. ಅಮಳೋಕ್ಯವೆಂಬುದು ಬಾಯ ಬಗದಳ. ಮುಖಸೆಜ್ಜೆಯೆಂಬುದು ಪಾಂಡುರೋಗ. ಕರಸ್ಥಳವೆಂಬುದು ಮರವಡದ ಕುಳಿ. ಉತ್ತಮಾಂಗವೆಂಬುದು ಸಿಂಬಿಯ ಕಪ್ಪಡ. ಎಲ್ಲರಿಗೆ ಸೋಂಕಾಯಿತ್ತು ಈ ಹಸಿಯ ಗುಂಟದಲ್ಲಿ. ಬಿಡು, ಬಾಲಭಾಷೆಯ ಭಂಡರ ನುಡಿಯ ಕೇಳಲಾಗದು ; ಗೊಗೇಶ್ವರ.

843

ಅಂಗದ ಕೈಯಲ್ಲಿ ಲಿಂಗ, ಮನದ ಕೈಯಲ್ಲಿ [1]ಸಂಸಾರ[1] ; ಎಂತಯ್ಯ [2]ನಿನ್ನ[2] ಪ್ರಾಣಲಿಂಗ[3]ವೆಂಬೆ[3] : ಹೊಱಗೆ ಕುಱುಹಾಗಿ ತೋಱುತ್ತಿದೆ. [4]ತನುವಿಗೆ ತನು ಸಯವಾಗದು, ಮನಕ್ಕೆ ಮನ ಸಯವಾಗದು ; ಎಂತಯ್ಯ ನಿನ್ನ ಪ್ರಾಣಲಿಂಗವೆಂತೆಂಬೆ, ಗೊಗೇಶ್ವರ[4].

844

ಕಾಯಕ್ಕೆ ಜೀವಕ್ಕೆ ಸಂದು ಮುನ್ನುಳ್ಳಡೆ ಅದು ಪ್ರಾಣಲಿಂಗವಲ್ಲ ಕಾಣಿರೋ. ಲೋಕಾಚಾರದ ಕೂಳನುಂಡು ಲೀಲೆಯೊಳಗಾಡುತಿಹರಲ್ಲದೆ, ಸಲೆ ಸಂದವರಪ್ಪರೆ? ಈ ಕಲ್ಲವಿಡಿದಾತನಾ ಕಲ್ಲನೆತ್ತ ಬಲ್ಲ? ಇವರೊಬ್ಬರ ಕರೆ ಕರೆದಡೆ ಒ(=ಇ?)ಬ್ಬರೂ ಓ ಎಂಬರಂತೆ, ಇವರಿಬ್ಬರ ಭಾವ ಹುರುಳಿಲ್ಲ ಕಾಣಾ, ಗೊಗೇಶ್ವರ.

---

1. ನಿಸ್ಸಂಸಾರ (ಶೂ) 2. × (ಶೂ) 3. ವೆಂದು ಭಿನ್ನವಿಟ್ಟು ನುಡಿವೆನು (ಶೂ) 4. ಇದು ಕೃತಯುಗದಲ್ಲಿ ಮೂರ್ತಿಯಾದ ಕರಸ್ಥಲವಲ್ಲ. ಇದು ತ್ರೇತಾಯುಗದಲ್ಲಿ ಮೂರ್ತಿಯಾದ ಕರಸ್ಥಲವಲ್ಲ, ದ್ವಾಪರದಲ್ಲಿ ಮೂರ್ತಿಯಾದ ಕರಸ್ಥಲವಲ್ಲ, ಕಲಿಯುಗದಲ್ಲಿ ಮೂರ್ತಿಯಾದ ಕರಸ್ಥಲವಲ್ಲ ; ಕೆಳಗೇಳು ಲೋಕ ಮೇಲೇಳು ಲೋಕ ಹುಟ್ಟದಲ್ಲಿಂದತ್ತತ್ತ ಮುನ್ನಲಾದ ಕರಸ್ಥಲ. ಸಂಗನ ಬಸವಣ್ಣನ ಕರಸ್ಥಲದೊಳಗೆ ಗುಹೇಶ್ವರನೆಂಬ ಲಿಂಗ ತೊಳಗಿ ಬೆಳಗುತ್ತಿರ್ದುದ ಕಂಡು, ನಮೋ ನಮೋ ಎನುತ್ತಿರ್ದೆನು (ಶೂ).

845

ಕೈಯಲ್ಲಿ ಕಟ್ಟುವರು, ಕೊರಳಲ್ಲಿ ಕಟ್ಟುವರು, ಮಂಡೆಯಲ್ಲಿ ಕಟ್ಟುವರು, ಮನದಿ ಲಿಂಗವ ಕಟ್ಟರಾಗಿ. ಆದ್ಯರು ಹೋದರೆಂದು ವಾಯಕ್ಕೆ ಸಾವುದು ವಿಚಾರವೆ, ಗೊಗೇಶ್ವರ ?

846

ನಡೆವಲ್ಲಿ ನುಡಿವಲ್ಲಿ ಪ್ರಾಣಲಿಂಗವೆಂದೆಂಬರು. ಕೆಡೆಯಲೊಡನೆ ಹೆಣನದೇ ಎಂಬರು, ಹಿರಿಯ ಭೂವಿಯಲ್ಲಿ ನಿಮ್ಮ ಹೆಸರಿಲ್ಲ, ಗೊಗೇಶ್ವರ.

847

ಪೃಥ್ವಿಯ ಪಾಷಾಣ ಪೃಥ್ವಿಯ ಮೇಲೆ ಬಿದ್ದರೆ, ಬಿಂದು ಹೋದರೆ, ಪ್ರಾಣಲಿಂಗ ಹೋಯಿತ್ತು, ಪ್ರಾಣಲಿಂಗ ಹೋಯಿತ್ತು, ಪ್ರಾಣಲಿಂಗ ಹೋಯಿತ್ತೆಂಬಿರಿ, ಪ್ರಾಣಲಿಂಗ ಹೋದರೆ ನೀವು ನುಡಿವ ಪರಿಯೆಂತು ? ಅಂತರಂಗ ಪ್ರಾಣಲಿಂಗ ಸಂಬಂಧದ ಶುದ್ಧಿ(=ಸುದ್ದಿ)ಯನಱಿಯರಾಗಿ ಗೊಗೇಶ್ವರ, ನೀ ಮಾಡಿದ ಬೆಡಗು ಬಿನ್ನಾಣಕ್ಕೆ ನಾನು ಬೆಱಗಾದೆ.

848

ಒಂ[1]ದು[1] ಮನದಲ್ಲಿ ಲಿಂಗತ್ರಯವನೊಂದೆ ಬಾರಿ ನೆನೆವ ಪರಿ[2]ಯೆಂ[2]-ತೋ ? ಅರಿದರಿದು ಲಿಂಗ[3]ಜಾಣಿಕೆ.[3] ಮುಂ[4]ದ[4] ನೆನೆದರೆ ಹಿಂದಿಲ್ಲ, ಹಿಂ[4]ದ[4] ನೆನೆದರೆ ಮುಂದಿಲ್ಲ. [5]ಒಂದಱೊಳಗೆರಡಿಪ್ಪವೆಂದರದು[5] ಭಾವಭ್ರಮೆಯಲ್ಲದೆ ಸಹಜವಲ್ಲ. ನಿರುಪಾಧಿಕಲಿಂಗವನುಪಾಧಿಗೆ ತರಬಹುದೆ ? ಸ್ವತಂತ್ರ ಲಿಂಗ[6]ವ[6] ಪರತಂತ್ರಕ್ಕೆ ತರಬಹುದೆ ? ಗೊಗೇಶ್ವರ, [7]ನಿಮ್ಮ[7] ಬೆಡ[8]ಗು[8] ಬಿನ್ನಾಣವನಱಿದೆನಾಗಿ [9]ಎಂತಿರ್ದುದಂತೆ ಸಂತ.[9]

849

ಸಿಡಿಲೊಡನೆ ಕಾದುವಂಗೆ ಕೊಡೆಯೊಂದು ಮಱೆಯೆ ? ಪರ್ವತವ ಹೊಱುವಂಗೆ ಸಿಂಬೆಯೊಂದು ಸಹಾಯವೆ ? ಸಕ್ಕರೆಯ ಸವಿವುದಕ್ಕೆ ಬೇವೊಂದು ಪದಾರ್ಥವೇ ? ಗೊಗೇಶ್ವರನನಱಿವುದಕ್ಕೆ ಕುಱುಹು ಮುನ್ನೇಕೆ ?

850

ಇಬ್ಬರ ಮಧ್ಯದಲೊಂದು ಮಗು ಹುಟ್ಟಿತ್ತು. ಆ ಮಗುವಿನ ಹುಟ್ಟ

---

1. ದೇ (ನಮೂ) 2. ಯಿನ್ನಂ (ನಮೂ) 3. ಜಾಣಿಕೆ ನೆನೆವ ಮನ ತಾನಾದವರಿಗಲ್ಲದೆ (ನಮೂ) 4. ದೆ (ನಮೂ) 5. ಒಂದೊಂದರೊಳಗೆರಡಿರದಿರ್ಪವೆಂದರೆ ಅದು (ನ ಮೂ) 6. ವನ (ಮೂ) 7. ನೆಂಬ (ಮೂ) 8. ಗಿನ (ನ ಮೂ) 9. ಎಂತಿರ್ದಂತೆ ಸಂತು (ನ) ಎಂತಿರ್ದಂತೆ ಸಂತ (ಮೂ)

ತಾಯೂ ಅಱಿಯಳು ; ತಂದೆಯೂ ಅಱಿಯನು. ಹೆಸರಿಟ್ಟು ಕರೆದು ಜೋಗುಳ ವಾಡುತ್ತೈದಾರೆ [1]ನೋಡಾ[1]. ಕೈ ಬಾಯಿಗೆ ಬಂದ ಶಿಶು ಮೈದೋಱದಿದ್ದರೆ ಕಂಡು ನಾನು ನಾಚಿದೆನು [1]ಕಾಣಾ[1], ಗೊಗೇಶ್ವರ.

851

ಇಷ್ಟಲಿಂಗವೆ ಪ್ರಾಣಲಿಂಗವೆಂಬ [2]ಮಿಟ್ಟೆಯ[2] [3]ಭಂಡರ ಮಾತ ಕೇಳ ಲಾಗದು.[3] ಇಷ್ಟಲಿಂಗವನೂ ಕಾಯವನೂ ಮೆಟ್ಟ ಹೂಳುವಾಗ, ಬಿಟ್ಟು ಹೋಹ ಪ್ರಾಣಕ್ಕೆ ಇನ್ನಾವುದು ಲಿಂಗವೊ? [4]ಇಷ್ಟಲಿಂಗದಲ್ಲಿ ಪ್ರಾಣಲಿಂಗವ ನಱಿಯದವರು ಕೆಟ್ಟ ಕೇಡಿಂಗೆ ಅವಧಿಯುಂಟೆ, ಗೊಗೇಶ್ವರ.[4]

852

ಕೆಱೆಯ ಮೇರೆಯ ಕುಱುಹೆಂಬುದೇನೋ?! ಒಳಗೆ ಅನಿಮಿಷನಂದಿ ನಾಥನಿರಲು ಪೂಜಿಸುವ ಭಕ್ತನಾರೋ, ಪೂಜೆಗೊಂಬ ದೇವನಾರೋ? ಮುಂದು ಹಿಂದು, ಹಿಂದು ಮುಂದಾಯಿತ್ತು, ಗೋಗೇಶ್ವರಲಿಂಗ ನಿಶ್ಚಿಂತನಿವಾಸಿಯಾದ ಬಳಿಕ!

853

ಶಂಕಿನಿನಾಡಿಯ ಸು(=ಸ?)ಪುರನಾಳದೊಳಗಣ ಸಣ್ಣ ಬಣ್ಣದ ಹೊಲ ಬನು ಅಣ್ಣಗಳೆತ್ತ ಬಲ್ಲರು; ಲಿಂಗದ ಹಂಗಿನ ಪ್ರಾಣ, ಪ್ರಾಣದ ಹಂಗಿನ ದೇಹ, ದೇಹದ ಹಂಗಿನ ಲಿಂಗವ ಪೂಜಿಸಲು. ಆಳಿನಾಳಿನ ಕೀಳಾಳು ಪಟ್ಟಕ್ಕೆ ಸಲುವನೆ? ಗೊಗೇಶ್ವರನೆಂಬ ಸಹಜದ ನಿಲವು ಸಂತೆಯ ಪಸರಕ್ಕೆ ಬಂದರೆ ನಾಚಿತ್ತೆನ್ನ ಮನವು.

854

ವೇದ ದೈವವೆಂದು ನುಡಿವರು. ಶಾಸ್ತ್ರ ದೈವವೆಂದು ನುಡಿವರು. ಪುರಾಣ ದೈವವೆಂದು ನುಡಿವರು. ಕಲ್ಲು ದೈವವೆಂದು ನುಡಿವರು. ಕಾಷ್ಠ ದೈವವೆಂದು ನುಡಿವರು. ಪಂಚಲೋಹ ದೈವವೆಂದು ನುಡಿವರು. ಇವರೆಲ್ಲ ಸಕಲಸಂದೇಹವನೆ ಪೂಜಿಸಿ ಸತ್ತುಹೋದರಲ್ಲಾ ಸಮಸ್ತ ಪ್ರಾಣಿಗಳೆಲ್ಲರೂ! ತಾಯನಱಿಯದ ತರ್ಕಿಗಳು, ತಂದೆಯನಱಿಯದ ಸಂದೇಹಿಗಳು. ತನು ಪೃಥ್ವಿಯಿಂದಲಾಯಿತ್ತು; ಮನ ವಾಯುವಿನಿಂದಲಾಯಿತ್ತು. ಕಲ್ಲು ಕಾಷ್ಠ ಸಲಿಲ ನಿಷ್ಕಲದಿಂದಲಾಯಿತ್ತು. ವಾಯುವಾಧಾರದ ಪವನಸಂಯೋಗದ ಅನಾಹತಚಕ್ರದಿಂದ ಮೇಲಣ ಆಜ್ಞಾಚಕ್ರದಲ್ಲಿ ನಿಂದು, ಅನಂತಕೋಟಿ

---

1. × (ನಮೂ) 2. ಮಿಟ್ಟೆಯ (ಪ್ರ) 3. ಭಂಡರು ನೀವು ಕೇಳಿರೇ (ಪ್ರ) 4. ಹೇಳಾ ಗೋಹೇಶ್ವರ (ಪ್ರ)

ಬ್ರಹ್ಮಾಂಡಗಳ ಮೆಟ್ಟಿ, ಕಾಯದ ಕಣ್ಣ ಮುಚ್ಚಿ, ಜ್ಞಾನದ ಕಣ್ದೆಱೆದು ನೋಡಲಿಕೆ ಅಲ್ಲಿ ಒಂದು ನಿರಾಕಾರ ಉಂಟು. ಆ ನಿರಾಕಾರದಲ್ಲಿ ನಿಂದು, ನಿರ್ಣಯಿಸಿ ನೋಡಲ್ಕೆ ಅಲ್ಲಿ ಒಂದು ನಿಶ್ಶೂನ್ಯವುಂಟು. ಆ ನಿಶ್ಶೂನ್ಯದಲ್ಲಿ ನಿಂದು ನಿಶ್ಚಯಿಸಿ ನೋಡಲ್ಕೆ ಕತ್ತಲೆಯಲ್ಲ ಬೆಳಗಲ್ಲ ಬಚ್ಚಬಯಲಲ್ಲ, ಗೊಗೇಶ್ವರ.

855

ಮಣಿಯುನೆಣಿಸಿ [1]ಕಾಲವ[1] ಕಳೆ[2]ಯ[2] ಬೇಡ. [3]ಕ[3]ಣಿಯ ಪೂಜಿಸಿ [1]ಕಾಲವ[1] ಕಳೆ[2]ಯ[2] ಬೇಡ. ಕ್ಷಣವಾದ[4]ಡೆಯೂ ಆಗಲಿ[4] ನಿಜದ ನೆನಹೇ ಸಾಕು. [5]ಕ್ಷಣಾರ್ಧವಾದಡೆಯೂ ಆಗಲಿ[5] ನಿಜದ ನೆನಹೇ ಸಾಕು. [6]ಬೆಂಕಿಯೊಳಗುಳ್ಳ[6] ಗುಣ ಬಿಸಿನೀ[7]ರಲುಂ[7]ಟೇ, ಗೊಗೇಶ್ವರ ?

856

ಅಗ್ಘವಣಿಯ ತಂದು ಮಜ್ಜನವ ಮಱೆದವನ, ಪುಷ್ಪವ ತಂದು ಪೂಜೆಯ ಮಱೆದವನ, ಓಗರವ ತಂದು ಅರ್ಪಿತವ ಮಱೆದವನ, ಲಿಂಗವ ಕಂಡು ತನ್ನ ಮಱೆದವನ ಮಹಾಘನ ಒಳಕೊಂಡಿತ್ತು, ಗೊಗೇಶ್ವರ.

857

ಅಭ್ಯಾಸದ ಮಾತಲ್ಲ, ಶ್ರೋತ್ರದ ಸುಖವಲ್ಲ, ಶಾಸ್ತ್ರದನುಭಾವದ ಮಾತು ಮುನ್ನಲ್ಲ, ಒಳಗಣ ಮಾತಲ್ಲ, ಹೊಱಗಣ ಮಾತಲ್ಲ. ಇದಱಿಂತರವನಱಿಯದೆ ಅನುಭಾವವ ಮಾಡಿ ಫಲವೇನು ? ಗೊಗೇಶ್ವರನೆಂಬ ಲಿಂಗ ಉಪಮಾತೀತ ನೋಡಾ !

858

ಅರಿದರಿದು ನಿಮ್ಮ ನೆನೆವ ಪರಿಕರ ಹೊಸತು ! ಕುಱುಹುಗೆಟ್ಟವನ, ಬಂದ ಬಟ್ಟೆಯಲ್ಲಿ ಬಾರದೆ ಹೋದವನ, ಕಂಗಳ ಉಂಡವನ, ಮನದಲ್ಲಿ ದಣಿದವನ, ಕಿಚ್ಚಿಲ್ಲದೆ ಬೆಂದ ಅಚ್ಚಲಿಂಗೈಕ್ಯನ, ಕೈಯಿಲ್ಲದೆ ಕೊಂದವನ, ಬಡಲಿಲ್ಲದವಗ್ರಹಿಸಿದ ನಮ್ಮ ಗೊಗೇಶ್ವರನಲ್ಲಮನ !

859

ಅರಿದು ನಿಮ್ಮ ನೆನೆವ ಪರಿಕರ ಹೊಸತು, ಅಲಗನೇಱಿ ಹೂವ ಕೊಯ್ದು ಇಳಿದು ಬರುವಂತೆ, ಗೊಗೇಶ್ವರ ಗೊಗೇಶ್ವರ, ನಿಮ್ಮ ಶರಣ ಚೆನ್ನಬಸವಣ್ಣಂಗಲ್ಲದೆ !

---

1. ದಿನವ (ನಮೂ) 2. ಯಲು (ನಮೂ) 3. ಖ (ಮೂ) 4. ರು (ನ) ರೂ (ಮೂ) 5. ಕ್ಷಣದೊಳಗರ್ಧವಾದರೂ (ನ) ಕ್ಷಣಡೊಳಗಣ ಅರ್ಧವಾದರೂ (ಮೂ) 6. ಕಿಚ್ಚಿನಲ್ಲಿ ಉಳ್ಳ (ವ) 7. ರಿಗುಂ (ನ) ರೊಳಗುಂ (ಮೂ)

860

ಇದ್ದಿತ್ತೆಂದಱಿಯೆ, ಇಲ್ಲವೆಂದಱಿಯೆ, ಏನೆಂದಱಿಯೆ. ಪಂಚಭೂತ ಪ್ರಾಣಿ ಬಂದು ಸೋಂಕಿದಡೆ ಎಹಂಗೆ ಇದ್ದಿತ್ತು ಆಹಂಗೆ ಇದ್ದಿತ್ತಾಗಿ ಇದನೇನೆಂದಱಿಯೆ, ಗೊಗೇಶ್ವರಲ್ಲಯ್ಯ ತನ್ನಂತೆ ಮಾಡಿದನಾಗಿ ಇದನೇನೆಂದಱಿಯೆ!

861

ಅಂಗವಿಲ್ಲದನುಭವಕ್ಕೆ ನೇಮವಿಲ್ಲದ ನೆನಹಯ್ಯ! ತಾಗು ಕಡೆಯಿಲ್ಲದ ಸುಮಾನದ ಸುಖ ಕಂಡಾ! ಗೊಗೇಶ್ವರ ನಿರಾಳ ಕಂಡಾ!

862

ಕಾಯವೆ ಕಡವಸವಾಗಿ, ಮನವೆ ಯೋಗವಟ್ಟಗೆಯಾಗಿ, ಇಂದ್ರಿಯ [1]ವಿಸಂಚಿನಿಂ[1]ದಾ[2]ದು[2]ಪಮೆಯಯ್ಯ! ಏನೆಂದೆ[3]ನ್ನ[3] ಬಹುದು, ಎಂತೆಂದೆ[3]ನ್ನ[3] ಬಹುದು! ಸುಖದ ಸೋಂಕಿನಲಾದ ಸಮಾಧಿಯಯ್ಯ! ಅಂತರಂಗ[4]ದ ಕಂಥೆ[4] ಚಿಂತೆಗೆಟ್ಟುದು, ಬ್ರಹ್ಮ ಗೊಗೇಶ್ವರಲಿಂಗದಲ್ಲಿ ಸಂಗವಯ್ಯ!

863

ಕಾಯದ ಕಳವಳಕ್ಕಂಜಿ ಪ್ರಾಣ ಹೋದಲ್ಲಿ ಭವ ಹಿಂಗದು, ಪ್ರಕೃತಿ ಬಿಡದು, [5]ವಾಯಕ್ಕಾದರೆ[5] ಸತ್ತು ದೇವರ ಕೂಡಿ[6]ದೆವೆಂ[6]ಬರು. ಈ ವಾಯದ ಮಾತಿಂಗಾನು ಬೆಱಗಾದೆನು. ಕಾಯ[7]ವಿದ್ದಲ್ಲಿ[7], ಸಾಯದ ಸಾವ ಬಲ್ಲರೆ, ಬೇಱಿಲ್ಲ ಗೊಗೇಶ್ವರ ತಾನೆ.

864

ಗಂಗಾದೇವಿ ಮುಂಡೆಯಾದಳು, ಗೌರೀದೇವಿ ಓಲೆಯ ಕಳೆದಳು, ಚಂದ್ರಸೂರ್ಯರಿಬ್ಬರೂ ನೀರಿಳಿದ[8]ರಲ್ಲಾ[8]! ವಾಯುದೇವ ವಿಮಾ[9]ನವ[9] ಹೊತ್ತು, ವಾಸುದೇವ ತಲೆಗೊಳ್ಳಿಯನಿರಿದ, ಅಲ್ಲಿಂದತ್ತ, ಗೊಗೇಶ್ವರ ಸತ್ತನೆಂಬ [10]ಸು[10]ದ್ದಿ.

865

ಗಂಗೆಯ ತಡಿಯಲೊಂ[11]ದು ಐ[11]ವಾಗಿಲ [12]ಪಟ್ಟಣದ[12] ಕಾಲು [13]ವಳ್ಳಿ[13]ಯಲ್ಲಿ ಹುಟ್ಟಿ ಬೆಳೆದೆ ನಾನು. ತರುವಕ್ಕಳ ಕೂಡಿ ನೀರಾಟವ ಹೊಕ್ಕು

---

1. ವಿಷಸಂಚದಿಂ (ವ) 2. ದ ಉ (ಮೂ) 3. ನ (ನಮೂ) 4. ವ ಕಂಡೆ (ವ) 5. ವಾಯಕಾರದರೆ (ಮೂ) 6. ದನೆಂ (ಮೂ) 7. ವಿಲ್ಲದಲ್ಲಿ (ವ) 8. ರು (ನಮೂ) 9. ನ (ನ) 10. ಶು (ವ) 11. ದೈ (ನ) 12. ಪಟ್ಟದ (ಮೂ) 13. ವಳಿ (ನ)

ಉಟ್ಟುದ ಹೋಗಾಡಿ[1]ಹನೆಂದು[1] ಬಾಯ [2]ಬಾಯ[2]ಕುಟ್ಟಿ, ಬ್ರಹ್ಮಪಾಶವೆಂಬ ಕಿಱುಗೆಯನುಗಿದುಕೊಂಡಳು ನಮ್ಮವ್ವೆ. ಇಂತಪ್ಪ ತಾಯಿತಂದೆಯರ ಕೂಡೆ ಮುನಿದು ಹೋಗಿ ಗೊಗ್ಗೇಶ್ವ[3]ರಲ್ಲ[3]ಯ್ಯನ ಮಱ[4]ಯೊಕ್ಕೆ[4]. ಇನ್ನು ಮರಳಿ ಬಂದಾ ಕಿಱುಗೆಯ[5]ನುಟ್ಟೆ[5]ನಾದರೆ ನಿಮ್ಮಾಣೆ ನಿಮ್ಮ ಪ್ರಮಥರಾಣೆ.

## 866

ಗುರುತತ್ತ್ವದಲ್ಲಿ ಹುಟ್ಟಿ, ಶಿವತತ್ತ್ವದಲ್ಲಿ ಬೆಳೆದು, ಪರತತ್ತ್ವದಲ್ಲಿ [6]ಮಗ್ನನಾಗಿ[6], ಶರಣಂಗೆ [7]ಕಾಯವಿಡಿದಡೇನು[7], ಕಾಯವಳಿದು ನಿರ್ವಯಲಾದಡೇನು ? [8]ಕಾ[8]ಯಸಮಾಧಿ, ಕರಣಸಮಾಧಿ, ಭಾವಸಮಾಧಿಯಾದ ಬಳಿಕ, ಗೊಹೇಶ್ವರಲಿಂಗದಲ್ಲಿ ಬಯಲಭ್ರ್ರಮೆ[9]ಯಳಿದು[9] ಜ್ಞಾನಸಮಾಧಿಯನೆಯ್ದ ಬಲ್ಲಡೆ [10]ಅದೇ[10] ನಿಜಸಮಾಧಿ ಕೇಳಾ, ಸಿದ್ಧರಾಮಯ್ಯ.

## 867

ನಿರ್ವಿಕಲ್ಪಿತವೆಂಬ ನಿಜದೊಳಗಯ್ಯ, ನಿರಹಂಭಾವದಲ್ಲಿ ನಾನಿದ್ದೆನಯ್ಯ. ನೋಡಿಹೆನೆಂದರೆ ನೋಡಲಿಲ್ಲ ; ಕೇಳಿಹೆನೆಂದರೆ ಕೇಳಲಿಲ್ಲ. ಘನ ನಿರಂಜನದ [11]ಬೆಳಗಿನಿಂಬಾದುದೇನೆಂಬೆ[11], ಗೊಗ್ಗೇಶ್ವರ ?

## 868

ಬಟ್ಟ ಬಯಲ [12]ಮಹಾ[12]ಮನೆಯೊಳಗೊಂದು [13]ಹುಟ್ಟದ ಹೊಂದದ[13] ಶಿಶುವ ಕಂಡೆ. ಮುಟ್ಟಿ ಪೂಜಿ[14]ಸಿದರೆ[14] ನೆಟ್ಟನೆಯಾ ಶಿಶು [15]ತನ್ನು[15]ವ ನುಂಗಿತ್ತು. ಮುಟ್ಟಲಿಲ್ಲ ನೋಡಲಿಲ್ಲ, ಪೂಜೆಗೆ, ಕಟ್ಟಳೆ ಮುನ್ನಿಲ್ಲ. ಗೊಗ್ಗೇಶ್ವರ ಬಯಲು.

## 869

[16]ಸೆಱಗನು ಹಿಡಿದು ಸೀರೆಯ ಹಱಿದ![16] ಹುಟ್ಟು ಮುಱಿದ, ಕಂದಲ ನೊಡೆದ! ಭಂಡನವ್ವಾ, [17]ಅಚ್ಚ[17]ಭಂಡನವ್ವಾ, ಕಂಡರೆ ನುಡಿಸದಿರೆಲೆ ಮಾಯಾದೇವಿ, ಆಯುಷ್ಯ[18]ವು[18] ಹಿರಿದು, ಭಾಷೆ ಕಿಱಿದು, ಭವಗೆಟ್ಟು ಹೋದ ಗೊಗ್ಗೇಶ್ವರಲ್ಲಯ್ಯಂಗೆ ಮೂಗಿಲ್ಲ ತಂಗಿ.

---

1. ಹಳೆಂದು (ಮೂ) 2. ಬಯ (ನ) 3. ರ (ನ) 4. ಹೊಕ್ಕೆ(ನ) ಹೊಕ್ಕು (ಮೂ) 5. ನುಂಟೆ (ನ) 6. ಮಗ್ನವಾದ (ಶೂ) 7. × (ಶೂ) 8. ಕಂಥೆಯ ಕಳೆದು ನಿರ್ವಯಲಾದರೇನು ಕಾ (ಶೂ) 9. ಯ ಕಳೆದು ಸು (ಶೂ) 10. ಅದು (ಶೂ) 11. ಬೆಳಗಿಂದಲಾದುದನೇನೆಂಬೆ (ಶೂ) 12. ಮಹ(ವ) 13. ಹುಟ್ಟದ(ಮೂ) 14. ಸ ಹೋದಡೆ (ನಮೂ) 15. ತನು (ನಮೂ) 16. ಸೆರಗ ಹಿಡಿದನು ಸೀರೆಯ ಹರಿದನು (ನಮೂವ) 17. ಲಜ್ಜೆ (ನಮೂ) 18. × (ಶೂ)

870

[A]ಹೂವ ಕೊಯ್ಯ ಹೋಗಿ ಕರಡಗೆಯ ಮಱೆದೆ. ಪೂಜಿಸ ಹೋಗಿ ಲಿಂಗವ ಮಱೆದೆ[A]. ಗಾಡಿಗರೊಡನಾಡಿ ಜೇನ[1]ನ[1]ಳಿದು ತುಪ್ಪವ ಮಱೆದೆ. ಅವರೆಲ್ಲರ ಒಡನಾಡಿಯಾ[2]ಗಿ[2] ಗೊಗ್ಗೇಶ್ವರನೆಂಬ ಲಿಂಗವ ಮಱೆದೆ.

871

ಇಂದ್ರನಂತೆ ಮಾಡುವೆ, ಚಂದ್ರನಂತೆ, ಮಾಡುವೆ, ಮಾಣಿಕ್ಯದ ಹೊಳಹಿನಂತೆ ಮಾಡುವೆನಯ್ಯ. ನೀನೋಡದಿರಯ್ಯ ; ಮಾಡುವೆನು ಸೂರ್ಯನ ಪ್ರಭೆಯಂತೆ ನೀನೋಡಿ ಮತ್ತಡಗುವ ಕೃತಕವ ನಾನು ಬಲ್ಲೆ. ಬೆಡಗು ನಿರಾಳ ಗೊಗ್ಗೇಶ್ವರ.

872

ಕಬ್ಬಿನ ರಸದೊಳಗಣ ಮುತ್ತ ನೋಡಲು, ಹುಬ್ಬಿನ ಮೇಲಣ ನೀಲದ ಪ್ರಭೆ ನೋಡಾ. ವಜ್ರದ ಚಂಡಿ( =ದ್ರಿ ?)ಕೆಯಲ್ಲಿ ಕಟ್ಟಯಾಳುವರು. ಉಭಯಕವಿಗಳಿಗೆ ಅಱಿಯಬಾರದು, ಗೊಗ್ಗೇಶ್ವರನ ಸ್ವಾನುಭಾವಿಗಳಿಗಲ್ಲದೆ ತಿಳಿಯಬಾರದು.

873

ಗಗನದ ಗುಂಡಿಗೆ, ಆಕಾಶದ ಗಂಗೆಯ ಅಗ್ಘವಣಿ, ಚಂದ್ರಸೂರ್ಯರಿಬ್ಬರೂ ಪುಷ್ಪ ನೋಡಾ! ಬ್ರಹ್ಮ ಧೂಪ, ವಿಷ್ಣು ದೀಪ, ರುದ್ರನೋಗರ. ಸಯವು ನೋಡಾ, ಗೊಗ್ಗೇಶ್ವರ ಲಿಂಗಕ್ಕೆ ಪೂಜೆ ನೋಡಾ!

874

ಶಿವ ಶಿವ ಎಂಬ ವಚನವ ಬಿಡದಿರು. ಮಡದಿಯರೊಲುಮೆಯ ನಚ್ಚದಿರು. ದರ್ಪಣದೊಪ್ಪವ ತಪ್ಪದಿರು. ವಾಯುವ ಕಡೆಕಡೆಗೆ ತಿದ್ದದಿರು. ಹಿಡಿವಡೆ ದೃಢವಾಗಿ ಹಿಡಿಯಿರೆಲವೋ! ಗೊಗ್ಗೇಶ್ವರ ಸಿಲುಕಿದಲ್ಲಮಂಗೆ.

875

ಆದಿತ್ಯವಾರ, ಸೋಮವಾರ, ಮಂಗಳವಾರವ ಹೊಸತಿಟ್ಟು ನುಡಿವರು ; ನಾವಿದನಱಿಯೆವು. ಗೊಗ್ಗೇಶ್ವರನ ಶರಣ ಚೆನ್ನಬಸವಣ್ಣಂಗೆ ಮೂಱು ವಾರ.

876

ಮಂತ್ರ ಕಲಿತಡೇನು, ಪುನಶ್ಚರಣೆ ಮಾಡಿದಲ್ಲದೆ ಸಿದ್ಧಿಸದು. ಮದ್ದ

---

A ಪೂಜಿಸಹೋಗಿ ಲಿಂಗವ ಮರೆದೆ ಹೂವ ಕೊಯ್ಯ ಹೋಗಿ ಕರಡಗೆಯ ಮರೆದೆ (ಮೂ) 1. ವ (ವ) 2. ಡಿ (ನಮೂ)

ನಱಿಂದು ಫಲವೇನು. ಪ್ರಯೋಗಿಸಿಕೊಂಡಲ್ಲದೆ ರೋಗ ಮಾಣದು. ಲಿಂಗವ ನಱಿದಡೇನು, ನೆನೆದಲ್ಲದೆ ಸಿದ್ಧಿಸದು ಕಾಣಾ, ಗೊಗೇಶ್ವರ.

## 877

ಅಳಿಯ ಬಳಿಯ ಸುಳಿ[1]ವ[1]ನಲ್ಲ. ಪ್ರಳಯವಿಲ್ಲದ ವಿಜ[2]ಯ! ಕಳವಳದ ಮಾತುಧಾತಿನ[2] ಅಂಗಸಂಗಿಯಲ್ಲ. [3]ಅಣಿಮಾದಿ ಗುಣರಹಿತ ಅಕಲ್ಪಿತನ ನೇನೆಂಬೆ[3]. ನೆಳಲ ಕಳವಳದ [4]ಮಾತುಧಾತಿನ ವಿವರದ ಬಳಿಯ ಬಪ್ಪ ರೂಪನಲ್ಲ, ಬೆಳಗಿನೊಳಗಣ ಬೆಳಗು, ಗೊಗೇಶ್ವರ, ನಿಮ್ಮ ಶರಣ (+ನ?) ನಿಲವು.[4]

## 878

ಆಕಾಶಗಂಗೆಯಂತರಂಗದಲ್ಲಿ ತೋಱುವ ಸಕಲ ವರ್ಣಂಗಳ ವರ್ಣಿಸುವರು ನಿಮ್ಮನೆತ್ತ ಬಲ್ಲರು? ಅಱಿವನಾಶ್ರಯಿಸಿ ಮನವ ಮುಂದುಗೊಂಡು ನೆನಹಿಂಗೆ ಗುರಿಯಾದವರೆಲ್ಲರೂ ನಿರವಯದ ನಿಲವನೆತ್ತ ಬಲ್ಲರು? ಅಱಿಪುವ ರತಿಯು ಮಱಹನಾಶ್ರಯಿಸಿ, ಸಕಲವರ್ಣಂಗಳನೇಕವರ್ಣಂಗಳೆಂಬವರು ನಿರವಯದ ನಿಲವನೆತ್ತ ಬಲ್ಲರು? ವರ್ಣನಾಮವಳಿಯದಾಗಿ ಆಕಾಶದಲಂತರಂಗ ಬಹಿರಂಗವೆನಲಿಲ್ಲದ ನಿರವಯವು ಗೊಗೇಶ್ವರನೆನಲಿಲ್ಲದ ನಿರ್ನಾಮದನಿಲಕ್ಕೆ ಸೊಲ್ಲು ಸಲ್ಲುವುದೆ?!

## 879

ನೆನೆವ ಮನದಲಿಲ್ಲ, ತನುವಿನಲಿ ಮುನ್ನಿಲ್ಲ. ನೆನೆವ ಮನವನೊಳಕೊಂಡ ಘನಕ್ಕೆ ಘನವನೇನೆಂಬೆ? ತನ್ನಲ್ಲಿ ತಾನೆಯಾಯಿತ್ತು, ಭಿನ್ನವಿಲ್ಲದೆ ನಿಂದ ನಿರಾಳ! ಅನಾಯಾಸದನುವ ಕಂಡು ಆನು ಬೆಱಗಾದೆನು. ಅಂತು ಇಂತು ಎನಲಿಲ್ಲ. ಚಿಂತೆಯಿಲ್ಲದ ಮಹಾ ಘನವು! ಗೊಗೇಶ್ವರಲಿಂಗವ ಹೊಱಗೆಡಿಸಲಿಲ್ಲಯ್ಯ.

## 880

ನೆಳಲು ಸತ್ತಿತ್ತು. ಭ್ರಾಂತು ಬೆಂದಿತ್ತು. ಅಱಿವು ಮಱೆಯಿತ್ತು. ಕುಱುಹುಗೆಟ್ಟಿತ್ತು. ಗತಿಯನಱಿಸಲುಂಟೆ, ಮತಿಯನಱಿಸಲುಂಟೆ?! ಅಂಗ

---

1. ದ (ವ) 2. ಯನು ಕಳಾಕುಳದ ಆತ್ಮನ (ಶೂ) 3. ಸುಳುಹಿನೊಳಗಣ ಸೂಕ್ಷ್ಮವ ತಿಳಿದು ನೋಡುವರೆ ಅಣಿಮಾದಿ ಗುಣರಹಿತನ ಅಕಲ್ಪಿತಮಹಿಮನನೇನೆಂಬೆನು (ಶೂ) 4. ಬಳಿಯ ಭಾವರೂಪನಲ್ಲ.. ಬೆಳಗಿನೊಳಗಣ ಬೆಳಗು ಗುಹೇಶ್ವರನೆಂಬ ನಿಲವು ಸಂಗನ ಬಸವಣ್ಣನ ಕರಸ್ಥಲದೊಳಗೆ ತೊಳಗಿ ಬೆಳಗುತ್ತಿದ್ದಿತ್ತು (ವ).

ವೆಲ್ಲಾ ನಷ್ಟವಾಗಿ, ಲಿಂಗಲೀನವಾಗಿ, ಕಂಗಳಂಗದ ಕಳೆಯ ಬೆಳಗಿನ ಭಂಗ ವಳಿಯಿತ್ತು, ಗೊಗೇಶ್ವರ.

881

ಬಿಂದುವೇ ಪೀಠವಾಗಿ, ನಾದವೇ ಲಿಂಗವಾದರೆ, ಅದು ಭಿನ್ನಲಿಂಗ ನೋಡಾ. ಕಳೆಯೆಂಬ ಪೂಜೆ ನಿರ್ಮಾಲ್ಯವಾಗಿ, ನಾದಬಿಂದು ಕಳಾತೀತ ನೋಡಾ ; ಮಹಾ ಘನಲಿಂಗೈಕ್ಯವು [1]ನೋಡಾ. ಅಲ್ಲಲ್ಲಿ ಸಿಲುಕದ ಅಚಲ ವಪ್ಪ ನಿರಾಳವ[1] ಪ್ರಣವರೂಪವೆಂದು ಹೆಸರಿಡಬಹುದೆ? ನಮ್ಮ ಗೊಗೇಶ್ವರನ ನಿಲವು ನಿಶ್ಯಬ್ದಂ ಬ್ರಹ್ಮ ಉಚ್ಯತೇ–ಎಂಬುದನಱಿಯಾ, ಸಿದ್ಧರಾಮಯ್ಯ.

882

ಮನ ಮುಟ್ಟದ ಮಜ್ಜನ, ತನು ಮುಟ್ಟದ ದೇಹಾರ, ಭಾವ ತಾಗದ ಪೂಜೆ, ವಿವೇಕ ತಾಗದ ನೋಟ, ವಾಯು ತಾಗದ ಠಾವ ತೋಱೈ, ಗೊಗೇಶ್ವರ.

883

ಐದ ಕಟ್ಟಿ, ಐದ ನೆಗಪಿ, ಮನಪವನಧ್ಯಾನದೃಢದಿಂದ ; ಧ್ಯಾನದಿ ನೋಡಿ, ಕಾಯದ ಗಾಳಿಯ ಸಂಚವ ಶೋಧಿಸಿ, ಒಳಗೆ ಜಾಱುದ ಅಮೃತವನು ವಾಯುಮಂಡಲದಲೆತ್ತಿ, ನಾಭಿ ಮಂಡಲದಲ್ಲಿ ನುಂಗಿ, ಮಾಯಾಮಂಡಲ ತೋಱಲಱಿಯ ಬಲ್ಲಡೆ, ಗೊಗೇಶ್ವರ ಲಿಂಗದಲ್ಲಿ ಆತ ಶಿವಯೋಗಿ.

884

ಅನುಭವಿಗಳನುಭವಿಗಳೆಂಬಣ್ಣಗಳು ನೀವು ಕೇಳಿರೇ. ಅನುಭವವೆಂಬು ದೊಂದೆತ್ತು ಕೆಟ್ಟಿತ್ತು, ಆ ಎತ್ತಿನ ಕುಱುಹೆಂತೆಂದರೆ : ಎತ್ತು ಗೇಣುದ್ದ, ಕೊಂಬು ಮೊಳನುದ್ದ ; ಕೆಟ್ಟೆಂಟು ದಿನ, ಕಂಡು ಹದಿನಾಱು ದಿನ. ನೆನ್ನೆ ಬಿತ್ತಿದ ನಾಟಿಯ ಮೊನ್ನೆ ಮೇದು ಹೋಯಿತ್ತು. ಗೊಗೇಶ್ವರನೆಂಬೆತ್ತು ನಿಮ್ಮೊಳಗೈ ದಾನೆ ಅಱಿಸಿಕೊಳ್ಳಿರೋ.

885

ಅಕಟಕಟಾ ದೇಹಾರ ಅಭ್ಯಾಸವಾಯಿತ್ತಲ್ಲಾ ! ಅಕಟಕಟಾ ಓಗರ ಉಪಹಾರವಾಯಿತ್ತಲ್ಲ ! ಅಕಟಕಟಾ ಅನುಭಾವ ಹೊಲಬುಗೆಟ್ಟು ಹೋಯಿ ತ್ತಲ್ಲ ! ಅಕಟಕಟಾ ಷೋಡಶೋಪಚಾರವಱಿಯದೆ ಕೆಟ್ಟರಲ್ಲ, ಗೊಗೇಶ್ವರ !

886

ಅಷ್ಟವಿಧಾರ್ಚನೆ ಷೋಡಶೋಪಚಾರಂಗಳ ನಾನು ಹೆಂಗು ಹೆಱು

---

1. ಅಲ್ಲಿ ಇಲ್ಲಿ ಸಿಲುಕದು ಅಚಳವಪ್ಪ ನಿರಾಳ (ಶೂ)

ಯಿಲ್ಲದೆ ಮಾಡುವೆ. ನಾನು ಮಾಡುವ [1]ಕ್ರಿಯೆ[1]ಗಳೆಲ್ಲವೂ [2]ನೀವೆ[2]ಯಾದ ಕಾರಣ, ಗೊಗೇಶ್ವರ ನಿಮ್ಮಲ್ಲಿ ತಡವಾ[3]ಗಿದ್ದೆ[3]

887

ಗಗನಕ್ಕೆ ನಿಚ್ಚಣಿಗೆಯನಿಕ್ಕಿದವರುಂಟೆ ? ವಾಯುವಿನ ಸ್ಥಳವನಱಿದವರುಂಟೆ ? ಅಂಬುನಿಧಿಯ ಗುಣ್ಪನಳೆದವರುಂಟೆ ? ಲಿಂಗದ ಪ್ರಮಾಣ ಹೇಳಬಹುದೇ ? ಚಂದ್ರಮಂಡಲ ತಾರಾಮಂಡಲ ಸೂರ್ಯಮಂಡಲವಿತ್ತಿತ್ತಲಯ್ಯ! ಪಂಚಮುಖವಾಗಿ ನೊಸಲ ಕಣ್ಣು ಚತುರ್ಭುಜ ಅಣುಮಾತ್ರವೆ ಒಬ್ಬನೆಯಾಗಿ ಶರಣನಾಗಿ ಗೊಗೇಶ್ವರನೆಂಬ ಘನ ನೆಲೆಗೊಂಡಡೆ ಅಲ್ಲಿಂದತ್ತ ಶರಣು ಶರಣು.

888

ಎಲ್ಲರಂತೆ ನುಡಿದು, ಎಲ್ಲರಂತೆ ನಡೆದು, ಎಲ್ಲರಂತೆ ಸಂಸಾರವ ಬಳಸುತ್ತಿಪ್ಪರೆಂದು, ಎಲ್ಲರಂತೆ ಕಾಣಬಹುದೆ ನಿಜದೊರೆಕೊಂಡ ನಿರ್ಮಲ ಜ್ಞಾನಿಗಳ ? ಅವರ ಮನೋಮಧ್ಯದಲ್ಲಿ ತೊಳಗಿ ಬೆಳಗುವ ಶಿವಜ್ಞಾನಬೀಜವು ಫಲಿಸದೆ ಹೋಗಲ್ಕಪ್ಪುದೆ ? ಉರಿಯದಿದ್ದರೂ ಕಿಚ್ಚನೊಱಲೆ ಕೊಂಬುದೆ, ಗೊಗೇಶ್ವರ ?

889

ತನು ಹೊಱಗಿರಲು, [4]ಒಳಗೆ ಪ್ರಸಾದವಿರಲು, ಏನಯ್ಯ[4], ನಿಮ್ಮ ಮನಕ್ಕೆ ಮನ ನಾಚದು ? ಪ್ರಾಣಲಿಂಗದಲ್ಲಿ ಪ್ರಸಾದವ ಕೊಂಡರೆ ವ್ರತಕ್ಕೆ ಭಂಗ ಗೊಗೇಶ್ವರ !

890

ಅಮೃತಕಲೆಯ ಸೂಡಿದವನಂಬಲಿಯನುಂಬನೇ ? ಶಿವನಾರು ಮಾಂಸವಾರು ? ಚೋಳಿಯಕ್ಕನೆಂಜಲ ಹಸಿದುಂಡನೆನಬಹುದೇ ? ಹಸುಳೆಯ ಬಾಯ ಹಾಲನಾರು ಕಿತ್ತುಕೊಂಬರು ? ಗೊಗೇಶ್ವರ, ನೀನು ಭಕ್ತಿಪ್ರಿಯನೆಂಬುದ ಮೂಲೋಕವಱಿಯದೆ ?

891

ಅನಂತಕೋಟಿ ಪ್ರಕಾಶವೆಂದು ಗಣಿಸಬಾರದ ಬ್ರಹ್ಮ[5]ದ[5] ಬೆಳಗು, ನೋಡಬಾರದ ಘನವು, ತೆಱಹಿಲ್ಲದ [6]ಬೆಳಗು ಮಹಾಬೆಳಗು[6] ತನ್ನಿಂದ ತಾನಾದ ಸ್ವಯಸುಖದ [7]ನಿಜದ[7] ನಿತ್ಯನಿಜರೂಪು ನಿರಂಜನ ನಿಗಮಕ್ಕತೀತ ಹರಿಯಜರಿಗೆಟ್ಟದ ಜ್ಯೋತಿರ್ಮಯ ತಾನೇ ಲೀಲೆಗೆ ಮೂಲವಾದ. ಗುಹೇಶ್ವರ ಲಿಂಗದ ಘನಕ್ಕೆ ಘನವಾವುದು ?

---

1. ಕ್ರೀ (ಶೂ) 2. ನೀನೆ (ಶೂ) 3. ದೆನು (ಶೂ) 4. ಪ್ರಸಾದ ಒಳಗಿರಲು ಏನೆಂಬೆನಯ್ಯ (ಪ್ರ) 5. ದಾ (ನ) 6. ಬೆಳಗು (ವ) 7. ನಿಜ (ನಮೂ)

892

ಧರೆಯಾಕಾಶ ತಾರಾಮಂಡಲ ಸಪ್ತಸಮುದ್ರಂಗಳಿಲ್ಲದಂದು ಒಂದು ಮಹಾವೃಕ್ಷವಿದ್ದಿತ್ತಯ್ಯ. ಆ ವೃಕ್ಷವ ಕಂಡು ನಾನು ಓಂ ನಮಶ್ಶಿವಾಯ ಎನುತಿದ್ದೆನು. ಆ ವೃಕ್ಷದಿಂದ ಷಡುಸಾದಾಖ್ಯಂಗಳು ಹುಟ್ಟಿದವು. ಆ ಷಡು ಸಾದಾಖ್ಯಂಗಳ ನೆಳಲಲ್ಲಿ ಕುಳ್ಳಿರ್ದು ನಾನು ಬಸವ, ಬಸವ ಎನುತಿರ್ದೆನು ಕಾಣಾ, ಗೊಹೇಶ್ವರ.

893

ಪ್ರಾಣಲಿಂಗದ ಪೂರ್ವಾಶ್ರಯವ ಕಳೆಯಲೆಂದು ಲಿಂಗಪ್ರಾಣಿಯಾ[1]ದನಯ್ಯ ಬಸವಣ್ಣ[1]! ಲಾಂಛನದ ಪೂರ್ವಾಶ್ರಯವ ಕಳೆಯಲೆಂದು ಜಂಗಮ ಪ್ರಾಣಿಯಾ[1]ದನಯ್ಯ ಬಸವಣ್ಣ[1]! ಪ್ರಸಾದದ ಪೂರ್ವಾಶ್ರಯವ ಕಳೆಯಲೆಂದು ಮಹಾಪ್ರಸಾದಿಯಾ[1]ದನಯ್ಯ ಬಸವಣ್ಣ[1]! ಈ ತ್ರಿವಿಧದ ಪೂರ್ವಾಶ್ರಯವ ಕಳೆಯಲೆಂದು ಬಸವಣ್ಣ ಮರ್ತ್ಯಕ್ಕೆ ಬಂದನು ಕಾಣಾ, ಗೊಹೇಶ್ವರ.

894

ಅಂಗದಲ್ಲಿ ಆಚಾರಸ್ವಾಯತವ ಮಾಡಿಕೊಂಡನಯ್ಯ ಬಸವಣ್ಣನು. ಆಚಾರದಲ್ಲಿ ಪ್ರಾಣಸ್ವಾಯತವ ಮಾಡಿಕೊಂಡನಯ್ಯ ಬಸವಣ್ಣನು. ಪ್ರಾಣ ದಲ್ಲಿ ಲಿಂಗಸ್ವಾಯತವ ಮಾಡಿಕೊಂಡನಯ್ಯ ಬಸವಣ್ಣನು. ಲಿಂಗದಲ್ಲಿ ಜಂಗಮ ಸ್ವಾಯತವ ಮಾಡಿಕೊಂಡನಯ್ಯ ಬಸವಣ್ಣನು. ಜಂಗಮದಲ್ಲಿ ಪ್ರಸಾದ ಸ್ವಾಯತವ ಮಾಡಿಕೊಂಡನಯ್ಯ ಬಸವಣ್ಣನು. ಪ್ರಸಾದದಲ್ಲಿ ನಿತ್ಯಸ್ವಾಯತವ ಮಾಡಿಕೊಂಡನಯ್ಯ ಬಸವಣ್ಣನು. ನಿತ್ಯದಲ್ಲಿ ದಾಸೋಹಸ್ವಾಯತವ ಮಾಡಿ ಕೊಂಡನಯ್ಯ ಬಸವಣ್ಣನು. ದಾಸೋಹದಲ್ಲಿ ತನ್ನ ಮಱೆದು ನಿಶ್ಚಿಂತನಿವಾಸಿ ಯಾಗೈದಾನೆ ಗೊಹೇಶ್ವರಲಿಂಗದಲ್ಲಿ. ಸಂಗನ ಬಸವಣ್ಣಂಗೆ ಶರಣೆಂದು ಧನ್ಯ ರಾಗಬೇಕು ನಡೆಯಾ, ಸಿದ್ಧರಾಮಯ್ಯ.

895

ಕೌಪು ಕಾಷಾಂಬರವ ಕಟ್ಟಿ, ಮಂಡೆ ಬೋಳಾದರೇನಯ್ಯ, ಮನದಲ್ಲಿ ನಿಜವಿಲ್ಲದನ್ನಕ್ಕರ? ಹೊನ್ನು–ಹೆಣ್ಣು–ಮಣ್ಣು ತ್ರಿವಿಧವ ತೊಱೆದರೇನಯ್ಯ ಮನದಲ್ಲಿ ವ್ರತಿಯಾಗದನ್ನಕ್ಕರ? ಹಸಿವು ತೃಷೆ ವ್ಯಸನಾದಿಗಳ ಬಿಟ್ಟರೇನಯ್ಯ ಅರ್ಥದಿಚ್ಛೆ ಮನದಲ್ಲಿ ಹಿಂಗದನ್ನಕ್ಕರ? ಆನು ಜಂಗಮವೆ, ಆನು ಹಿರಿಯ ನಾದೆನಲ್ಲದೆ, ಆನು ಜಂಗಮವೆ? ಒಡಲಿಲ್ಲದಾತ ಬಸವಣ್ಣ, ಪ್ರಾಣವಿಲ್ಲದಾತ

---

1. ದ (ಪ್ರ)

ಬಸವಣ್ಣ, ಬಸವಣ್ಣನಾಗಿ ಹುಟ್ಟಿಸದೆ, ಎನ್ನ ಪ್ರಭುವಾಗಿ ಹುಟ್ಟಿಸಿದೆ ಗೊಹೇಶ್ವರ.

896

ಸತಿಯ ಕಂಡು ವ್ರತಿಯಾದ ಬಸವಣ್ಣ. ವ್ರತಿಯಾಗಿ ಬ್ರಹ್ಮಚಾರಿಯಾದ ಬಸವಣ್ಣ. ಬ್ರಹ್ಮಚಾರಿಯಾಗಿ ಭವಗೆಟ್ಟನಯ್ಯ ಬಸವಣ್ಣ. ಗೊಹೇಶ್ವರ ನಿಮ್ಮಲ್ಲಿ ಬ್ರಹ್ಮಚಾರಿಯಾದ ಬಸವಣ್ಣನೊಬ್ಬನೇ.

897

ಕುಂಡಲಿಗನ ಕೀಟಕನಂತೆ ನೈ ಮಣ್ಣಾಗದಂತೆ ಇದ್ದೆಯಲ್ಲ ಬಸವಣ್ಣ ! ಜಲದೊಳಗಣ ತಾವರೆಯಂತೆ ಹೊದ್ದಿ ಹೊದ್ದದಂತೆ ಇದ್ದೆಯಲ್ಲ ಬಸವಣ್ಣ ?! ಜಲದಿಂದಾದ ಮೌಕ್ತಿಕದಂತೆ ಜಲವು ತಾನಾಗದಂತಿದ್ದೆಯಲ್ಲ ಬಸವಣ್ಣ ?! ಗೊಹೇಶ್ವರಲಿಂಗದಾಣತಿ ವಿಡಿದು ತನುಗುಣಮತ್ತರಾಗಿದ್ದ ಐಶ್ವರ್ಯಾಂಧಕರ ಮತವನೇನ ಮಾಡಿ ಬಂದೆಯ್ಯ, ಸಂಗನ ಬಸವಣ್ಣ ?

898

ಅಂಗಸಂಸಾರ ಲಿಂಗದಲಱಿತು, ಕಾಯವೆಂಬ [1]ಸಂದು[1] ಸಂಶಯ[2]ವಿಲ್ಲದೆ[2] ನಿಸ್ಸಂದೇಹಿಯಾಗಿಪ್ಪನು ನೋಡಾ ಬಸವಣ್ಣನು! ಪ್ರಾಣಭಾವ[3]ವಳಿದು[3] ಶಂಕೆ ತಲೆದೋಱದೆ ನಿಶ್ಶಂಕ[4]ನಾಗಿ[4] ನಿಜೈಕ್ಯನಾಗಿಪ್ಪನು ನೋಡಾ ಬಸವಣ್ಣನು. ಆ ಬಸವಣ್ಣನ ಅಂತರಂಗದೊಳಗೆ ನಿಶ್ಚಿಂತನಿವಾಸಿಯಾಗಿದ್ದೆನು. ಆ ಬಸವಣ್ಣನ ಬಹಿರಂಗದಲ್ಲಿ ನಿರಾಲಂಬಜ್ಞಾನಿಯಾಗಿದ್ದೆನು. [4]ಆ[4] ಬಸವಣ್ಣನೊಳಗೆ ನಾನು ಅಳಿದುಳಿದೆನು. [4]ಆ[4] ಬಸವಣ್ಣ ಎನ್ನಂತರಂಗದೊಳಗೆ ನಿಜನಿವಾಸಿಯಾಗಿದ್ದನು. [4]ಇದು ಕಾರಣ[4] ಒಂದಕ್ಕೊಂದ ಬಿಚ್ಚಿ ಬೇಱು ಮಾಡ[5]ಬಾರದು,[5] ಗೊಹೇಶ್ವರ[6]ಲಿಂಗದಲ್ಲಿ[6] "ಬಸವ–ಪ್ರಭು"ವೆಂಬ ಎರಡು ಭಾವಭ್ರಾಂತಿಯಳಿದುಳಿದು [7]ವಿ[7]ಭ್ರಾಂತಿ ಎಡೆಗೊಂಡಿತ್ತು [8]ಕಾಣಾ[8], ಚೆನ್ನ ಬಸವಣ್ಣ.

899

ಆದಿ ಜಂಗಮು, ಅನಾದಿ ಭಕ್ತನೆಂಬುದನಾರು ಬಲ್ಲರು ಹೇಳಾ, ಬಸವಣ್ಣ, [9]ನೀನಲ್ಲದೆ ?[9] ನಿತ್ಯನಿರಾಕಾರ ಘನವು ಶಕ್ತಿಯಿಲ್ಲ[10]ದಿದ್ದರೆ[10] [11]ವಾಳಿ[11] ಬಯಲಾ[12]ದಹು[12]ದೆಂದು, ನೀನು ಘನಚೈತನ್ಯವೆಂಬ ಕಾಯವ

---

1. ಸಂಬಂಧ (ಶೂ) 2. ವಳಿದು (ಶೂ) 3. ವೆಂಬ (ಶೂ) 4. × (ಶೂ) 5. ಬಾರದು ನೋಡಾ (ಶೂ) 6. ನ ಶರಣ ಸಂಗನ (ಶೂ) 7. ನಿ (ಶೂ) 8. ನೋಡಾ (ಶೂ) 9. × (ಶೂ) 10. ದೆ ಇದ್ದರೆ (ಶೂ) 11. ಆಗಳೇ (ಶೂ) 12. ದು (ಶೂ)

ಧರಿಸಿದಡೆ, ಆ ಬಯಲು ಪರಬ್ರಹ್ಮವೆಂಬ ನಾಮವನೆಯ್ದಿತ್ತು ನೋಡಾ [1]ಬಸವಣ್ಣ, ನಿನ್ನಿಂದ.[1] ಆ [2]ಘನವು[2] [3]ನಿನ್ನ[3] ವಿನೋದದಿಂದ ಸಾಕಾರವನೆಯ್ದಿದಡೆ [1]ನೀನು[1] ಧರ್ಮ[4]ಕಾ[4]ಯವ ಧರಿಸಿ ಆ ಮೂರ್ತಿಗಾಧಾರವಾದೆಯಾಗಿ ಜಗದ ಕರ್ತ ಶಿವನೆಂಬ ನಾಮವಾಯಿ[5]ತ್ತು[5] [1]ನೋಡಾ[1] ಬಸವಣ್ಣ, ನಿನ್ನಿಂದ! ಜಂಗಮವೇ ಲಿಂಗವೆಂದು [6]ಭಾ[6]ವಿಸಲಾಗಿ ನಿನ್ನ ಸನ್ನಿಧಿಯಿಂದ ಪ್ರತಿನಿಧಿಯಾಯಿತ್ತು ನೋಡಾ ಬಸವಣ್ಣ, [1]ನಿನ್ನಿಂದ[1]. ಲಿಂಗವ ಹಿಡಿದು ನೀನು ಪೂಜಿಸಲಾಗಿ ಲಿಂಗವು ಹೆಸರುವಡೆಯಿತ್ತು ನೋಡಾ ಬಸವಣ್ಣ, [1]ನಿನ್ನಿಂದ[1]! ಪ್ರಸಾದವ ನೀನು ಕೊಂಡು ಪಥವ ತೋಱಿದೆಯಾಗಿ ಪ್ರಸಾದವು [7]ಹೆ[7]ಸರಾಯಿತ್ತು ನೋಡಾ ಬಸವಣ್ಣ, [1]ನಿನ್ನಿಂದ[1]! ಇದುಕಾರಣ ನೀನೇ ಅನಾದಿ ಭಕ್ತನು. ನಾನೇ ಅನಾದಿಯಿಂದಿತ್ತಿತ್ತ. ನೀ ಮಾಡಲಾನಾದೆನೆಂಬುದ ನಮ್ಮ ಗೊಹೇಶ್ವರಲಿಂಗವು ಬಲ್ಲನು ಕಾಣ, ಸಂಗನ ಬಸವಣ್ಣ.

900

ಕೆಳಗೇಳು ಲೋಕಂಗಳಿಲ್ಲ[8]ದ ಮುನ್ನ, ಮೇಲೇಳು ಲೋಕಂಗಳಿಲ್ಲದ ಮುನ್ನ, ಸಮಸ್ತ[8] ಬ್ರಹ್ಮಾಂಡಗಳಿಲ್ಲ[9]ದ ಮುನ್ನ ಅಲ್ಲಿಂದತ್ತತ್ತ[9], ಬಸವಣ್ಣ, ನೀನು ಲಿಂಗಭಕ್ತ, ಜಂಗಮಪ್ರಾಣಿ! ಶಶಿಧರನ ಶರಣಂಗೆ ವೃಷಧರಸ್ವಾಯತ[10]ವಾಗಿ[10], ನಮ್ಮ ಗೊಹೇಶ್ವರಲಿಂಗಕ್ಕೆ ಸಂಗನ ಬಸವಣ್ಣನೇ ಭಕ್ತ[11]ನೆಂದಱಿದು ನಾನು ಬಸವಣ್ಣನ ಶ್ರೀಪಾದಕ್ಕೆ ನಮೋ ನಮೋ ಎನುತಿದ್ದೆನು.[11]

901

ಶತಕೋಟಲೋಕಂಗಳೆಲ್ಲ ಬಸವಣ್ಣನ ಕೋಡಿಲಿರ್ದವು ನೋಡಾ! ಅತೀತವಪ್ಪ ಪರಶಿವನು ಬಸವಣ್ಣನ ಹಿಳಿಲ ಕೆಳಗೆ ಸೂಕ್ಷರೂಪಾಗಿರ್ದನು ನೋಡಾ! ಸಕಲ ಶ್ರುತಿಸ್ಮೃತಿಗಳೆಲ್ಲಾ ಬಸವಣ್ಣನ ಹೊಗಳಲಱಿಯದೆ ಕೆಟ್ಟವು ನೋಡಾ! ಕರ್ತನಾದನಲ್ಲದೆ ಭೃತ್ಯನಲ್ಲ, ಬಿನ್ನಾಣವ ಹೋಲಲಱಿಯೆ. ಒಂದೆ–ತ್ತಿಲ್ಲದಿರ್ದಡೆ ಕತ್ತಲೆಯಾಗದೇ ಈ ಜಗವೆಲ್ಲವು!? ಹರಿವ ನದಿಗಳೆಲ್ಲ ಅಮೃತವಾದವು ಕಾಣಾ, ಬಸವಣ್ಣ, ನಿನ್ನಿಂದ. ಹರಿಹನ್ನಿಕೋಟಿ ಯುಗಜುಗಂಗಳು ನಿನ್ನ ಉಸಿರಲ್ಲಿ ಒತ್ತಿದಡೆ, ಬ್ರಹ್ಮಾಂಡಕ್ಕೆ ಹೊಂ(=ಹೋ?)ದವು; ಬಿಟ್ಟಡೆ ಬಿದ್ದವು, ಕಾಯ್ದಡೆ ಬದುಕಿದವು, ನೀನು ಹೊರೆವ ಯುಗಜುಗಂಗಳು ಒಂದು

---

1. × (ಶೂ) 2. ಮಹಾಘನವು (ಶೂ) 3. ತನ್ನ (ಶೂ) 4. ವೆಂಬ ಕಾ (ಶೂ) 5. ತ್ತಲ್ಲಾ(ಶೂ) 6. ನೀ ಭಾ (ಶೂ) 7. ನಿನ್ನಿಂದ ಹೆ (ಶೂ) 8. ದಂದು ಸಹಸ್ರ (ಬ–ಸ್ತೋ) 9. ದಲ್ಲಿಂದತ್ತ (ಶೂ) 10. ನಾಗಿ (ಬ–ಸ್ತೋ) 11. ನೆಂದು ಇಂದಱಿದೆನಯ್ಯ (ಶೂ)

ತೃಣಮಾತ್ರವಾದ ಕಾರಣ, ನಿನ್ನ ಹಸುಮಕ್ಕಳವರೆನುತಿದ್ದೆನಯ್ಯ. ನಿನ್ನ ಗೋಮಯದ ಷಡುಸಮ್ಮಾರ್ಜನೆಯ ಮೇಲೆ ಕುಳ್ಳಿತು ಗೊಹೇಶ್ವರನೆಂಬ ಲಿಂಗವು ಶುದ್ಧನಾದ ಕಾಣಾ, ಬಸವಣ್ಣ.

902

ಅನಾದಿ ಪುರಾತ ಬಸವಣ್ಣ, ಕಾಲ ಮಾಯೆಗಳೆರಡೂ ನಿಮ್ಮ ಮುಂದಿರ್ದು ನಿಮ್ಮ ಕಾಣೆನೆನುತಿಹವು! ಆದಿಪುರುಷ ಬಸವಣ್ಣ, ಸುರಾಸುರರು ನಿಮ್ಮ ಮುಂದಿರ್ದು ನಿಮ್ಮ ಕಾಣೆನೆನುತಿಹರು! ನಾದಪುರುಷ ಬಸವಣ್ಣ, ನಾದ ಮಂತ್ರಗಳು ಪಂಚಮಹಾ ವಾದ್ಯಂಗಳು ನಿಮ್ಮ ಮುಂದಿರ್ದು ನಿಮ್ಮ ಕಾಣೆನೆನುತಿಹವು! ವೇದಪುರುಷ ಬಸವಣ್ಣ, ವೇದಶಾಸ್ತ್ರಾಗಮಂಗಳು ನಿಮ್ಮ ಮುಂದಿರ್ದು ನಿಮ್ಮ ಕಾಣೆನೆನುತಿಹವು! ಆಗಮ್ಯ ಪುರುಷ ಬಸವಣ್ಣ, ಅಂಗಾಲ ಕಣ್ಣವರು, ಮೈಯೆಲ್ಲ ಕಣ್ಣವರು, ನಂದಿವಾಹನರು, ಗಂಗೆವಾಳುಕರೆಲ್ಲಾ ನಿಮ್ಮ ಮುಂದಿರ್ದು ನಿಮ್ಮ ಕಾಣೆನೆನುತಿಹರು! ಅಗೋಚರ ಪುರುಷ ಬಸವಣ್ಣ, ಗೋಚರಿಸಿದ ಮನುಮುನಿ ದೇವದಾನವ ಮಾನವರೆಲ್ಲಾ ನಿಮ್ಮ ಮುಂದಿರ್ದು ನಿಮ್ಮ ಕಾಣೆನೆನುತಿಹರು! ಅಪ್ರಮಾಣ ಪುರುಷ ಬಸವಣ್ಣ, ಈ ಪ್ರಮಾಣರೆಲ್ಲರೂ ನಿಮ್ಮ ಮುಂದಿರ್ದು ನಿಮ್ಮ ಕಾಣೆನೆನುತಿಹರು! ಸರ್ವಜ್ಞ ಪುರುಷ ಬಸವಣ್ಣ, ಈ ಸರ್ವರೂ ನಿಮ್ಮ ಬಳಸಿರ್ದು ನಿಮ್ಮ ಕಾಣೆನೆನುತಿಹರು! ಇಂತೀ ಸರ್ವ ಪ್ರಕಾರದವರೆಲ್ಲರೂ ನಿಮ್ಮ ಸಾಧಿಸಿ, ಭೇದಿಸಿ, ಪೂಜಿಸಿ, ತರ್ಕಿಸಿ, ಹೊಗಳಿ, ಕಾಣೆನೆಂದು, ನಿಮ್ಮಿಂದಲೇ ಉತ್ಪತ್ತಿ ಸ್ಥಿತಿಲಯಂಗಳಾಗುತಿಹರು! ಅದು ಕಾರಣ, ಗೊಹೇಶ್ವರಲಿಂಗದೊಳಗೆ ಭಕ್ತಿವಡೆದ ಅನಂತಭಕ್ತರೆಲ್ಲಾ ಬಸವಣ್ಣ, ಬಸವಣ್ಣ, ಬಸವಣ್ಣ ಎನುತ್ತ ಬದುಕಿದರಯ್ಯ.

903

ಆದಿ ಅನಾದಿ ಎಂಬೆರಡಱ ಮೂಲವನೆತ್ತಿ [1]ತೋಱಿದನಯ್ಯ ಬಸವಣ್ಣ[1]! ಆದಿ ಲಿಂಗ, ಅನಾದಿ [2]ಶರಣನೆಂಬ[2] ಭೇದವ ವಿವರಿಸಿ ತೋಱಿದನಯ್ಯ ಬಸವಣ್ಣ! ಕಾಯದ ಜೀವದ ಸಂಬಂಧವ ಅಸಂಬಂಧವ ಮಾಡಿ ತೋಱಿದನಯ್ಯ ಬಸವಣ್ಣ! ಎನ್ನ ಆದಿ ಅನಾದಿಯನು ಬಸವಣ್ಣನಿಂದ[3]ಱಿದು[3] [4]ಗೊ[4]ಹೇಶ್ವರ ಲಿಂಗದಲ್ಲಿ ಸುಖಿಯಾದೆನು [5]ಕಾಣಾ[5], ಚೆನ್ನಬಸವಣ್ಣ!

904

ಆಯಿತ್ತು ಬಸವಾ, ನಿನ್ನಿಂದ ಗುರುಸ್ವಾಯತವೆನಗೆ. ಆಯಿತ್ತು ಬಸವಾ

---

1. × (ಶೂ) 2. ಜಂಗಮವೆಂಬ (ಶೂ) 3. ತಿಳಿದು (ಶೂ) 4. ನಮ್ಮ ಗೊ (ಶೂ) 5. ಕೇಳಾ (ಶೂ)

ನಿನ್ನಿಂದ ಲಿಂಗಸ್ವಾಯತವೆನಗೆ. ಆಯಿತ್ತು ಬಸವಾ, ನಿನ್ನಿಂದ ಜಂಗಮ ಸ್ವಾಯತವೆನಗೆ. ಆಯಿತ್ತು ಬಸವಾ, ನಿನ್ನಿಂದ ಪ್ರಸಾದಸ್ವಾಯತವೆನಗೆ. ಇಂತೀ ಚತುರ್ವಿಧ[1]ವನಾಗು[1] ಮಾಡಿದೆಯಾಗಿ [2]ಗೊ[2]ಹೇಶ್ವರಲಿಂಗಕ್ಕೆ ವಿಳಾಸ ವಾದೆಯಲ್ಲೈ ಸಂಗನ ಬಸವಣ್ಣ.

905

ತನು ಶುದ್ಧವಾಯಿತ್ತು, ಬಸವ, ಇಂದೆನ್ನ! ಮನ ಶುದ್ಧವಾಯಿತ್ತು, ಬಸವ ಇಂದೆನ್ನ! ಭಕ್ತಿ[3]ಯುಕ್ತಿ[3] ಶುದ್ಧವಾಯಿತ್ತು, ಬಸವ, ಇಂದೆನ್ನ! [4]ಇಂತೀ ಸರ್ವವೂ ಶುದ್ಧವಾಯಿತ್ತು[4], ಬಸವ, ಇಂದೆನ್ನ! [5]ಗೊ[5]ಹೇಶ್ವರ ಲಿಂಗಕ್ಕೆ ಆದಿ ಯಾಧಾರವಾದೆ[6]ಯಲ್ಲಾ[6], ಬಸವಣ್ಣ.

906

ಗುರುಸ್ಥಲ, ಲಿಂಗಸ್ಥಲ, ಜಂಗಮಸ್ಥಲ, ಪ್ರಸಾದಸ್ಥಲ ಬಸವಣ್ಣನ ಕರ ಸ್ಥಲದೊಳಗಡಗಿತ್ತಲ್ಲಾ! ಇನ್ನಾರಿಗಹುದೀ ಭಕ್ತಿಸ್ಥಲ? [7]ಇನ್ನಾರಿಗಹುದೀ ಲಿಂಗಸ್ಥಲ ಬಸವಣ್ಣಂಗಲ್ಲದೆ? ಗೊಹೇಶ್ವರ, ಸಂಗನ ಬಸವಣ್ಣನ ಶ್ರೀಪಾದಕ್ಕೆ ನಮೋ ನಮೋ ಎನುತಿರ್ದೆನು[7]!

907

ಬಸವಣ್ಣನ ಉಂಗುಷ್ಠದಲ್ಲಿ ಅಷ್ಟಷಷ್ಟಿಸ್ಥಾನಗಳ ಉದಕವ ಮೀಱಿದ ಮಹಾತೀರ್ಥದೊಟ್ಟಿಲ ಕಂಡೆನಯ್ಯ! ಬಸವಣ್ಣನ ಆಧಾರಲಿಂಗನಾಭಿಪರಿ ಯಂತರವೂ ಗುರುಸ್ವರೂಪದೊಟ್ಟಿಲ ಕಂಡೆನಯ್ಯ! ಬಸವಣ್ಣನ ನಾಭಿಹೃದಯ ಗಳ ಪರಿಯಂತರವು ಜಂಗಮಸ್ವರೂಪದೊಟ್ಟಿಲ ಕಂಡೆನಯ್ಯ! ಬಸವಣ್ಣನ ಗಳ ಮುಖಭ್ರೂಮಧ್ಯ ಉನ್ಮನಿಉತ್ತಮಾಂಗಪರಿಯಂತವು ಲಿಂಗಸ್ವರೂಪದೊಟ್ಟಿಲ ಕಂಡೆನಯ್ಯ! ಬಸವಣ್ಣನ ವಿಶ್ವತೋಮುಖಶರೀರವನುಳ್ಳ ಶರೀರದೊಳಗೆ ಈ ಪರಿಯ ಕಂಡಾತನೇ ಭಕ್ತ, ಜಂಗಮವೆಂಬೆನು ಕಾಣಾ, ಗೊಹೇಶ್ವರ.

908

ಬಸವಣ್ಣಾ, ನಿನ್ನ ಕಂಡು ಕಂಡು ಎನ್ನ ತನು ಬಯಲಾಯಿತ್ತು. ಬಸ ವಣ್ಣಾ, ನಿನ್ನ ಮುಟ್ಟಿ ಮುಟ್ಟಿ ಎನ್ನ ಕ್ರೀ ಬಯಲಾಯಿತ್ತು. ಬಸವಣ್ಣಾ,

---

1. ಸ್ವಾಯತವನು ನೀನೆ (ಶೂ) 2. ನಮ್ಮ ಗೊ (ಶೂ) 3. ಯುಕ್ತಿ ಮುಕ್ತಿ (ಶೂ) 4. ಇವೆಲ್ಲ ಶುದ್ಧವಾದವು (ಶೂ) 5. ನಮ್ಮ ಗೊ (ಶೂ) 6. ಯಲ್ಲೈ ಸಂಗನ (ಬ–ಸ್ತೋ) 7. ಇನ್ನಾರಿಗೆ ಸಾರುವುದೀ ಲಿಂಗಸ್ಥಲ? ಗುಹೇಶ್ವರ, ಸಂಗನ ಬಸವಣ್ಣನ ಮಱೆಹೊಕ್ಕು ಬದುಕಿದೆನು (ಶೂ)

ನಿನ್ನ ನೆನೆನೆನೆದು ಎನ್ನ ಮನ ಬಯಲಾಯಿತ್ತು. ಬಸವಣ್ಣಾ, ನಿನ್ನ ಮಹಾನುಭಾವವ ಕೇಳಿಕೇಳಿ ಎನ್ನ ಭವಂ ನಾಸ್ತಿಯಾಯಿತ್ತು. ನಮ್ಮ ಗೊಹೇಶ್ವರ ಲಿಂಗದಲ್ಲಿ ನೀನಜಾತನೆಂಬುದ ನೆಲೆಮಾಡಿ ಭವಪಾಶಂಗಳ ಹಱಿ[1]ದಿಪ್ಪೆಯಾಗಿ[1] ನಿನ್ನ [2]ಸನ್ನಿಧಿಯಿಂದಾನು[2] ಬದುಕಿದೆನು [3]ಕಾಣಾ, ಸಂಗನ ಬಸವಣ್ಣ[3].

## 909

'ಬ' ಎಂಬಲ್ಲಿ [4]ಎನ್ನ ಭವ ಹಱಿಯಿತ್ತು.[4] 'ಸ' ಎಂಬಲ್ಲಿ ಸರ್ವ[5]ಜ್ಞನಾ[5]ದೆನು. 'ವ' ಎಂಬಲ್ಲಿ ವಹಿಸುವರೆ ಚೈತನ್ಯಾತ್ಮಕನಾದೆನು. ಇಂತೀ ಬಸವಾಕ್ಷರತ್ರಯ ಎನ್ನ ಸರ್ವಾಂಗದಲ್ಲಿ ತೊಳಗಿ ಬೆಳಗು[6]ವುದ ಕಂಡು, ಆನು ನೀನು[6], ಬಸವಾ, ಬಸವಾ, ಬಸವಾ ಎನುತಿರ್ದೆ[7]ನಯ್ಯ[7] ಗೊಹೇಶ್ವರ.

## 910

ಅದ್ವೈತವೆಂಬ ಶಿಶುವೆನ್ನ ಕರಸ್ಥಲಕ್ಕೆ ಬಂದು ಸೋಂಕಲೊಡನೆ, ಎನ್ನ ತನ್ನಂತೆ ಮಾಡಿತ್ತಾಗಿ, ಎನ್ನ ನಾನೆಂಬ ವಿಚಾರವಱತುಹೋಯಿತ್ತು ನೋಡಾ! ಮತ್ತನ್ಯ ವಿಚಾರವನೆಂತೂ ಅಱಿಯೆನು. ಎನ್ನ ಪೂರ್ವಾಪರವ ನಿಮ್ಮಿಂದಲಱಿಯಲೆಂದು ಬಂದು, ನಿಮ್ಮ ಮಱೆಹೊಕ್ಕೆನಾಗಿ, ಬಸವಣ್ಣನ ಮಹಿಮೆಯ ನಾನೆತ್ತ ಬಲ್ಲೆನು. ನಮ್ಮ ಗೊಹೇಶ್ವರಲಿಂಗವು ಸಾಕ್ಷಿಯಾಗಿ ಸಂಗನ ಬಸವಣ್ಣ ನಿಮ್ಮ ಅಂತರಂಗದೊಳಗೆ ಬೆಳಗುತ್ತೈದಾನೆ. ಎನಗೊಮ್ಮೆ ಸಂಗನ ಬಸವಣ್ಣನ ಶ್ರೀಪಾದದ ಘನವ ತಿಳುಹಿಕೊಡಾ, ಚೆನ್ನ ಬಸವಣ್ಣ.

## 911

ಅಂದೊಮ್ಮೆ ಧರೆಯುಮೇಲೆ ಉದಕವಿಲ್ಲದಂದು ಕೆಳಯಿಂಕೆ ಪಾದವ ನೀಡಿದೆಯಲ್ಲ ಬಸವಣ್ಣ! ಧರೆಯ ತಾಗಿದ ಪಾದವ ಧಿಗಿಲನೆ ತೆಗೆಯಲು ಭುಗಿಲನೆ ಉದಕವೆದ್ದು ಉರಸ್ಥಳಕ್ಕೆ ಬಾರದೆ?! ಕನಲೆದ್ದು ಅಂಕೆಯಾಗಿ ನಿಂದು ನೋಡಿದಡೆ ಸಪ್ತಸಾಗರಂಗಳು ನಿಮ್ಮ ಕಿಱುಪಾದದಲ್ಲಿ ಅಡಗವೆ? ಅದನೆಂತು ಕೊ(=ಕೂ)ಡಬಹುದು ಎನಲಹುದೆ? ನಮ್ಮ ಗೊಹೇಶ್ವರಲಿಂಗಕ್ಕೆ ನಿಮ್ಮ ಪಾದೋದಕವೆ ಮಜ್ಜನ ಕಾಣಾ, ಸಂಗನ ಬಸವಣ್ಣ.

## 912

ಬಸವಣ್ಣ ಎಂಬಲ್ಲಿ ಎನ್ನ [8]ತನು[8]ಬಯಲಾಯಿತ್ತು. ಚೆನ್ನಬಸವಣ್ಣ

---

1. ದಿಪ್ಪೆಯಾಗಿ (ಶೂ) 2. ಸಂಗದಿಂದಲಾನು (ಶೂ) 3. × (ಶೂ) 4. ಭವ ಹಱಿಯಿತ್ತಯ್ಯ (ಶೂ) 5. ಜ್ಞಾನಿಯಾ (ಶೂ) 6. ವ ಭೇದವನ್ನಱಿದು ಆನು (ಶೂ) 7. ನು ಕಾಣಾ (ಶೂ) 8. ಕಾಯ (ಶೂ)

ಎಂಬಲ್ಲಿ ಎನ್ನ ಪ್ರಾಣ ಬಯಲಾಯಿತ್ತು. [1]ಉಭಯಸ್ಥಲನಿರ್ಣಯ ನಿಃಪತಿ ಗೊಹೇಶ್ವರಲಿಂಗದಲ್ಲಿ ಚೆನ್ನಬಸವಣ್ಣನ ಕರುಣದಿಂದಾನು ಬದುಕಿದೆನು[1] ಕಾಣಾ, ಸಂಗನ ಬಸವಣ್ಣ.

## 913

ವಾರಿಕಲ್ಲ ಪುತ್ಥಳಿಯ[2]ನಪ್ಪ[2] ಕೊಂಡಂತಾಯಿತ್ತು. ಅಗ್ನಿಯ [3]ಪುರುಷನ[3] ಮುಸುಕ ತೆಗೆದ ಕರ್ಪುರದ [3]ಪುತ್ಥಳಿಯ[3]ಂತಾಯಿತ್ತು. ಕತ್ತಲೆಯೊಳಗೆ [3]ರವಿಯ[3] ಬೆಳಗು ಹೊಕ್ಕಂತಾಯಿತ್ತು. ಗೊಹೇಶ್ವರನ ಶರಣ ಮಡಿವಾಳ ಮಾಚಿತಂದೆಯ ಕೃಪೆಯಿಂದ, ಬಸವಣ್ಣ, [3]ನಿನ್ನ ಕಂಡೆನು.[3] ನಿನ್ನನೂ ಮಡಿವಾಳ[3]ಯ್ಯ[3]ನನೂ ನೀನೆಂದೆ ಕಂಡೆನಯ್ಯ.

## 914

ಆದಿಯ ಕಂಡೆ, ಅನಾದಿಯ ಕಂಡೆ: ಘನವ ಕಂಡೆ, ಮನವ [4]ಕಂಡೆ;[4] ಆಯತಸ್ವಾಯತ ನನ್ನ ಹಿತವ ಕಂಡೆ. ಗೊಹೇಶ್ವರಲಿಂಗದಲ್ಲಿ ಬಸವಣ್ಣನ ಕೃಪೆಯಿಂದ ನಿಮ್ಮ ಕಂಡೆ ಕಾಣಾ, ಮಡಿವಾಳ ಮಾಚಯ್ಯ.

## 915

ಎನ್ನ ಕಾಯವ ಬಸವಣ್ಣನಳವಡಿಸಿಕೊಂಡ. ಎನ್ನ ಮನವ ಚೆನ್ನಬಸಣ್ಣನಳವಡಿಸಿಕೊಂಡ. ಎನ್ನ ಭಾವವ ಮಡಿವಾ[5]ಳ[5]ನಳವಡಿಸಿಕೊಂಡ. ಇಂತೀ ಮೂವರು ಒಂದೊಂ[6]ದ[6]ಳವಡಿಸಿಕೊಂಡ ಕಾರಣ, ಗೊಹೇಶ್ವರ, ನಿಮ್ಮ ಶರಣರೆಂಬ [7]ತ್ರೈ[7]ಮೂರ್ತಿಗಳಿಗೆ ನಮೋ ನಮೋ ಎನುತಿರ್ದೆನು.

## 916

ಭಕ್ತಿ ಎಂಬ ಸಮಾಧಾನ ಬಸವಣ್ಣನಿಂದ ಎನಗಾಯಿ[8]ತ್ತು[8]. ಪ್ರಸಾದವೆಂಬ ಪರಿಣಾಮ ಮರುಳು ಶಂಕರದೇವರಿಂದ ಎನಗಾಯಿ[8]ತ್ತು[8]. [9]ಏಕೋಭಾವ ನಿಷ್ಠೆ[9] ಸಿದ್ಧರಾ[A]ಮ[A] ದೇವರಿಂದ ಎನಗಾಯಿತ್ತು. ಸರ್ವ[10]ಜೀವ ಪರಿಪೂರ್ಣ ಕಳೆ[10] ಚೆನ್ನಬಸಣ್ಣನಿಂದ ಎನಗಾಯಿ[8]ತ್ತು[8]. ಆದ ನಿಜದ ನೆಲೆ ಗೊಹೇಶ್ವರ [11]ಲಿಂಗವೆಂಬ[11] ನಾಮವಾಯಿ[8]ತ್ತು.[8]

---

1. ಈ ಉಭಯಸ್ಥಲದ ನಿರ್ಣಯದ ನಿಷ್ಪತಿ ಗೊಹೇಶ್ವರ ಲಿಂಗ ಸಾಕ್ಷಿಯಾಗಿ ಚೆನ್ನಬಸವಣ್ಣನಿಂದ ಸಾಧ್ಯವಾಯಿತ್ತು (ಶೂ). 2. ನಪ್ಪಿ (ಶೂ) 3. × (ಶೂ) 4. ಕಂಡೆ ಅನುವ ಕಂಡೆ (ಶೂ) 5. ಳಯ್ಯ (ಶೂ) 6. ದನ (ಶೂ) 7. ತ್ರಿ (ಶೂ) 8. ತು (ಜ) 9. ಏಕನಿಷ್ಠೆ ಎಂಬ ಭಾವ (ಜಯ) A ಮಯ್ಯ (ಜಯ) 10. ಜೀವ ಕಳೆ ಪರಿಪೂರ್ಣ (ಜಯ) 11. ನೆಂಬ (ಮಿ_ಸ್ತೋ)

917

ಪರಮಾರ್ಥದಲ್ಲಿ ಪರೀಕ್ಷಿಸಿ ತಿಳಿದು ನೋಡುವರೆ, ಗುರುವಾರೂ ಇಲ್ಲ ಚೋಳ ತಪ್ಪಿಸಿ. ಪರಮಾರ್ಥದಲ್ಲಿ ಪರೀಕ್ಷಿಸಿ ತಿಳಿದುನೋಡುವರೆ, ಭಕ್ತರಾರೂ ಇಲ್ಲ ಬಸವಣ್ಣ ತಪ್ಪಿಸಿ. ಪರಮಾರ್ಥದಲ್ಲಿ ಪರೀಕ್ಷಿಸಿ ತಿಳಿದು ನೋಡುವರೆ ನಿರ್ವಾಣಿಗಳಾರೂ ಇಲ್ಲ ಅಕ್ಕಗಳು ತಪ್ಪಿಸಿ. ಪರಮಾರ್ಥದಲ್ಲಿ ಪರೀಕ್ಷಿಸಿ ತಿಳಿದು ನೋಡುವರೆ, ಹಿರಿಯರಾರೂ ಇಲ್ಲ ಚೀಲಾಳ ತಪ್ಪಿಸಿ. ಪರಮಾರ್ಥದಲ್ಲಿ ಪರೀಕ್ಷಿಸಿ ತಿಳಿದು ನೋಡುವರೆ, ಗಂಭೀರಾರೂ ಇಲ್ಲ ಅಜಗಣ್ಣಗಳ ತಪ್ಪಿಸಿ. ಇಂತೀ ಐದು ತೆರದನು ಆರಿಗೂ ಇಲ್ಲವೆಂದೆನ ಬೇಡ; ಅವರ ಕರುಣ ಉಳ್ಳವರಿಗೆ ಆ ಮುಕ್ತಿಯುಂಟು. ಈ ಐವರ ಕಾರುಣ್ಯದ ಪ್ರಸಾದವ ಕೊಂಡು ನಾನು ಬಯಲಾದೆನು ಕಾಣಾ, ಗೊಹೇಶ್ವರ.

918

ಆದಿಲಿಂಗ ನಿಮ್ಮಿಂದೆನಗಾಯಿತ್ತು ಬಸವಣ್ಣ. ಅನಾದಿಯ ಜ್ಞಾನ ಜಂಗಮ ನಿಮ್ಮ ನೆನೆದರೆ ಸಾಧ್ಯವಾಯಿತ್ತು ಬಸವಣ್ಣ. ನಿಮ್ಮ ಕೃಪೆಯಿಂದ ಸರ್ವಾಂಗಲಿಂಗಿಯಾದೆ, ಬಸವಣ್ಣ. ನಿಮ್ಮ ಕಾರುಣ್ಯ ದೃಷ್ಟಿಯಿಂದ ಪ್ರಾಣ ಲಿಂಗ ಸಂಬಂಧಿಯಾದೆ ಬಸವಣ್ಣ. ನಿಮ್ಮ ಸದ್ಬೋಧೆಯಿಂದ ಪರಮಜಂಗಮ ವಾದೆ ಬಸವಣ್ಣ. ಇಂತೀ ಮೊದಲಾದ ಸರ್ವಾಚಾರ ಸಂಪತ್ತು ನೀನನುಗ್ರಹಿಸಿ ಕೊಟ್ಟೆಯೆಂಬುದ ನಿಮ್ಮ ಪ್ರಮಥರೆಲ್ಲರೂ ಬಲ್ಲರು. ನಮ್ಮ ಗೊಹೇಶ್ವರ ಲಿಂಗವು ಸಾಕ್ಷಿಯಾಗಿ, ನಾ ನಿಮ್ಮ ಕರುಣದ ಶಿಶು ಕಣಾ, ಸಂಗನ ಬಸವಣ್ಣ.

919

ಶಿವ ಗುರುವೆಂದು ಬಲ್ಲಾತನೆ ಗುರು. ಶಿವ ಲಿಂಗವೆಂದು ಬಲ್ಲಾತನೆ ಗುರು. ಶಿವ ಜಂಗಮವೆಂದು ಬಲ್ಲಾತನೆ ಗುರು. ಶಿವ ಪ್ರಸಾದವೆಂದು ಬಲ್ಲಾತನೆ ಗುರು. ಶಿವ ಆಚಾರವೆಂದು ಬಲ್ಲಾತನೆ ಗುರು. ಇಂತೀ ಪಂಚವಿಧವೆ ಪಂಚಬ್ರಹ್ಮವೆಂದರಿದ ಮಹಾಮಹಿಮ ಸಂಗನ ಬಸವಣ್ಣ ಎನಗೂ ಗುರು, ಜಗವೆಲ್ಲಕ್ಕೂ ಗುರು ಕಾಣಾ, ಗೊಹೇಶ್ವರ.

920

ಪ್ರಾರಬ್ಧವಂತೆ, ಪೂರ್ವಾಶ್ರಯವೆಂತು ಹೋಯಿತ್ತು ಎನಬಹುದೆ? ನೊಸಲ ಬರಹವಂತೆ, ಹಸ್ತಮಸ್ತಕಸಂಯೋಗವೆಂತಾಯಿತ್ತು? ಪ್ರಳಯವಂತೆ ಪ್ರಾಣಲಿಂಗವೆಂತುಂಟು ಹೇಳಾ, ಗೊಹೇಶ್ವರ?

921

ಪುಣ್ಯಪಾಪವಿಲ್ಲಾಗಿ ಮನದ ಹಂಗಿಲ್ಲ ಬಂದುದನುಂಬನಾಗಿ ಮಾನ

ವರ ಹಂಗಿಲ್ಲ. ಭವಗೆಟ್ಟನಾಗಿ ದೈವದ ಹಂಗಿಲ್ಲ. ಸತ್ಯಜ್ಞಾನಾನಂದವೇ ತಾನಾಗಿ ಇನ್ನಾರ ಹಂಗಿಲ್ಲದಾತ ಗೊಹೇಶ್ವರಲ್ಲಯ್ಯನೊಬ್ಬನೇ.

922

ಪಥ್ಯದಾಶೆಯ ಹಿರಿಯರು ಕೆಲಬರು. ಬುದ್ಧಿಯಾಶೆಯ ಹಿರಿಯರು ಕೆಲಬರು. ಸಮತೆಯಾಶೆಯ ಹಿರಿಯರು ಕೆಲಬರು. ಇವರೆಲ್ಲರೂ ತಮ್ಮ ನಿಜವ ತಾವಱಿಯದೆ ತಪವನಾಚರಿಸಿದರು. ವೇಷ ನಿರ್ವಯಲಾಗಿ, ಆಶೆ ರೋಷವ ಬಿಟ್ಟು ದಾಸೋಹಿಯಾಗಿದ್ದರೆ ಗೊಹೇಶ್ವರಲಿಂಗವು ತಾನೆ.

923

ಪರವನಱಿದ ಸತ್ಪುರುಷರ ಸಂಗದಿಂದ ಶಿವಯೋಗದ ವಚನಾಮೃತ ವನು ಸದ್ಭಕ್ತಿಯುಳ್ಳ ಮಾಹೇಶ್ವರನು ತನ್ನ ಶ್ರೋತ್ರಮುಖದಲ್ಲಿ ಕೇಳಿ, ಮನೋಮುಖದಲ್ಲಿ ಹಾರೈಸಿ, ತೃಪ್ತಿಮುಖದಲ್ಲಿ ಸಂತೋಷವನೆಯ್ದ ಬಲ್ಲಡೆ, ಆ ಸುಖವು ಪರಿಣಾಮವನೊಡಗೂಡುವುದು. ಹೀಂಗಲ್ಲದೆ ಸಂಸಾರವಿಷಯ ರಸವ ತನ್ನ ಹೃದಯ ಕೂಪದಲ್ಲಿ ತುಂಬಿಕೊಂಡಿಪ್ಪ ಜೀವರ ಕಾಯದಲ್ಲಿ ವಚನಾಮೃತವ ತುಂಬಿದರೆ ಭಿನ್ನಘಟದಲ್ಲಿ ಉದಕವ ಹೊಯ್ದಂತೆ ಕಾಣಾ ಗೊಹೇಶ್ವರ.

924

ಹಸಿವುಳ್ಳನ್ನಕ್ಕರ ವ್ಯಾಪಾರ ಬಿಡದು. ಶೀತ ಉಳ್ಳನ್ನಕ್ಕರ ಉಪಾಧಿಕೆ ಬಿಡದು. ಮಾತುಳ್ಳನ್ನಕ್ಕರ ಬೂತಾಟಿಕೆ ಬಿಡದು. ನಿದ್ರೆಯುಳ್ಳನ್ನಕ್ಕರ ಸತಿ–ಸಂಗ ಬಿಡದು. ಇದು ಕಾರಣ, ಕ್ಷುತ್ತಿಂಗೆ ಬಿಕ್ಷ, ಶೀತಕ್ಕೆ ರಗಟೆ, ಮಾತಿಂಗೆ ಮಂತ್ರ, ಶಯನಕ್ಕೆ ಶಿವಧ್ಯಾನವೆಂಬ ಹೇಳಿಕೊಟ್ಟ ಗುರುವಚನವ ಮೀಱಿನಡೆ ವವರಿಗೆ ಪರದಲ್ಲಿ ಪರಿಣಾಮ ದೊರಕೊಳ್ಳದು ನೋಡಾ. ಇದು ಕಾರಣ ಗುರ್ವಾಜ್ಞೆಯ ಮೀಱಿ ಮನಕೆ ಬಂದಂತೆ ನಡೆವವರ ಎನಗೊಮ್ಮೆ ತೋಱ ದಿರು ಗೊಹೇಶ್ವರ.

925

ನಾನೆಂಬ ಅಹಂಕಾರದಲ್ಲಿ ನಾನುಂಡೆನಾದ[1]ಡೆ ಎನಗೆ[1] ಭಂಗ. ಸ್ತುತಿ [2]ನಿಂದೆಗೆ[2] ನೊಂದೆನಾಪಡೆ [3]ಎನಗೆ ಭಂಗ, ಅಂಗೈಯೊಳಗಿರ್ದ ಗೊಹೇಶ್ವರ ಲಿಂಗಕ್ಕೆ ದೂರ ಕಾಣಾ[3], ಸಂಗನ ಬಸವಣ್ಣ.

---

1. ರೆ ನನಗದೇ (ಯ) ರೆ ಎನಗದೆ (ಜಶೂ) 2. ನಿಂದಾದಿಗಳಿಗೆ (ಜಯಶೂ) 3. ಅಂಗೈಯಲ್ಲಿದ್ದ ಗೊಹೇಶ್ವರಲಿಂಗಕ್ಕೆ ದೂರ (ಯಶೂ) ಅಂಗೈಯಲ್ಲಿ ಇದ್ದ ಗೊಹೇಶ್ವರಲಿಂಗ ದೂರ (ಜ).

926

ಸಕಲವನೆ, ಬಲ್ಲ, ಲಿಂಗದೊಳಗೆ ತೋಱಿದನು. ಲಿಂಗನ ಬೆಳಗ ಸಕಲದೊಳಗೆ ತೋಱಿದನು. ಎನ್ನ ಮನಕ್ಕೆ ಅತಿಶಯವ ತೋಱಿ ರಕ್ಷಿಸಿದನು. ಎನ್ನೊಳಗೆ ತನ್ನ ತೋಱಿದನು, ತನ್ನೊಳಗೆ ಎನ್ನ ತೋಱಿದನು. ಮತ್ತೆರಡುವ ನೇಕವ ಮಾಡಿ ಎನ್ನೊಳಗೆ ಗೊಹೇಶ್ವರನಾದನು, ಹೊಱಗೆ ಮಹಾಲಿಂಗವಾಗಿ ನಿಂದನು ಶ್ರೀಗುರುಲಿಂಗ ಬಸವಣ್ಣನು.

927

ಎನ್ನ ಹೃದಯಕಮಲದಲ್ಲಿ ಮೂರ್ತಿಗೊಂಡಿಪ್ಪ ಎನ್ನ ಪ್ರಾಣೇಶ್ವರಂಗೆ ಎನ್ನ ಕ್ಷಮೆಯೇ ಅಭಿಷೇಕ. ಎನ್ನ ಪರಮವೈರಾಗ್ಯವೇ ಪುಷ್ಪದ ಮಾಲೆ. ಎನ್ನ ಸಮಾಧಿಸಂಪತ್ತೇ ಗಂಧ. ಎನ್ನ ನಿರಹಂಕಾರವೇ ಅಕ್ಷತೆ. ಎನ್ನ ಸದ್ವಿವೇಕವೇ ವಸ್ತ್ರ. ಎನ್ನ ಸತ್ಯವೇ ದಿವ್ಯಾಭರಣ. ಎನ್ನ ವಿಶ್ವಾಸವೇ ಧೂಪ. ಎನ್ನ ದಿವ್ಯ ಜ್ಞಾನವೇ ದೀಪ. ಎನ್ನ ನಿಭ್ರಾಂತಿಯೇ ನೈವೇದ್ಯ. ಎನ್ನ ನಿರ್ವಿಷಯವೇ ತಾಂಬೂಲ. ಎನ್ನ ಮೌನವೇ ಘಂಟೆ. ಎನ್ನ ನಿರ್ವಿಕಲ್ಪನೆಯೇ ಪ್ರದಕ್ಷಿಣೆ. ಎನ್ನ ಶುದ್ಧಿಯೇ ನಮಸ್ಕಾರ. ಎನ್ನ ಅಂತಃಕರಣದಿಂದ ಮಾಡುವ ಸೇವೆಯೇ ಉಪಚಾರಂಗಳು. ಈ ಪರಿಯಲ್ಲಿ ಎಮ್ಮ ಗೊಹೇಶ್ವರಲಿಂಗಕ್ಕೆ ಪ್ರಾಣ ಪೂಜೆಯ ಮಾಡಿ ಬ್ರಾಹ್ಯಕ್ರೀಯ ಮಱೆದೆನು ಕಾಣಾ, ಸಂಗನ ಬಸವಣ್ಣ.

928

ಶ್ರುತಿಯ ನಂಬದಿರೋ, ಶ್ರುತಿಯ ನಂಬದಿರೋ. ಶ್ರುತಿತತಿಗಳು ಮುನ್ನವೇ ಶಿವನಡಿಯ ಕಾಣದೆ ಶ್ರುತಿ "ಚಕಿತಮಭಿದತ್ತೇ" ಎನುತ್ತ, ಮುನ್ನವೇ ಅಱಸಿ ತೊಳಲಿ ಬಳಲುತ್ತೈದಾವೆ. ಶ್ರುತಿ ಹೇಳಿದತ್ತ ಹರಿಹರಿದು ಬಳಲದಿರೋ, ಶೂನ್ಯಕ್ಕೆ ತಲೆವಾಱನಿಕ್ಕದಿರೋ. ವಸ್ತು ಹೃದಯದಲುಂಟೆಂದು ನೆನೆಯದಿರೋ. ವಸ್ತು ಭ್ರೂಮಧ್ಯದಲುಂಟೆಂದು ಭ್ರಮಿಸದಿರೋ[1] ವಸ್ತು ಬ್ರಹ್ಮರಂಧ್ರದಲುಂಟೆಂದು ಹೊಲಬುಗೆಡದಿರೋ[1] ವಸ್ತುನಿಶ್ಚಯವ ಕಾಬಡೆ ಎನ್ನ ಸದ್ಗುರು ಅನಿಮಿಷದೇವನಂತೆ ನಿನ್ನ ಕರಸ್ಥಲದಲ್ಲಿ ನಿಶ್ಚೈಸಿ, ವಸ್ತುನಿಶ್ಚಯವ ಕಂಡು, ನಮ್ಮ ಗೊಹೇಶ್ವರ ಲಿಂಗದಲ್ಲಿ ನಿಬ್ಬೆಱಗಾಗೋ [2]ಮರುಳೇ.[2]

929

ಶರಣನ ಒಡಲುಗೊಂಡ ಅಖಂಡಿತಲಿಂಗಕ್ಕೆ ಅರ್ಚನೆಯಿಲ್ಲ. ಶರಣನ ಒಡಲುಗೊಂಡ ಆಚಾರಲಿಂಗಕ್ಕೆ ಅರ್ಪಿತವಿಲ್ಲ. ಶರಣನ ಒಡಲುಗೊಂಡ ಅನು ಪಮಲಿಂಗಕ್ಕೆ ಅವಧಾನವಿಲ್ಲ. ಅದೇನು ಕಾರಣವೆಂದಡೆ ಶರಣನಿಂದಾದ

---

1. ರು (ಆ-ವ) 2. ಮರಳೇ (ಶೂ)

ಅರ್ಚನೆ, ಶರಣನಿಂದಾದ ಅರ್ಪಿತ, ಶರಣನಿಂದಾದ ಅವಧಾನ. ಇದು ಕಾರಣ ಸಂದಳಿದು ಲಿಂಗವಾದ ಮತ್ತೆ ಆನಂದವಲ್ಲದೆ ಅಣುಮಾತ್ರ ಕ್ರೀಯಿಲ್ಲ ಕಾಣಾ, ಗೊಹೇಶ್ವರ.

930

ಶಿವೋ ದಾತಾ ಶಿವೋ ಭೋಕ್ತಾ ಶಿವಸ್ಸರ್ವಮಿದಂ ಜಗತ್ ।
ಶಿವೋ ಯಜತಿ ತತ್ ಸರ್ವಂ ತತ್ ಶಿವಂ ಸೋಽಹಮೇವಚ ॥

ಇಂತೆಂದುದಾಗಿ ದ್ರವ್ಯ ನೀನು, ದ್ರವ್ಯಾರ್ಥ ನೀನು; ಪದ ನೀನು, ಪದಾರ್ಥ ನೀನು : ಸಕಲ ನೀನು, ನಿಷ್ಕಳ ನೀನು, ಸಕಲನಿಷ್ಕಳ ತತ್ತ್ವಂಗಳು, ನಿಮ್ಮೊಳಗೆ ಸಮರಸವನೆಯ್ದುವೆವೆಂದು, ತಮ್ಮ ತಮ್ಮ ಅಂಗದ ಮೇಲೆ ಸರ್ವ ಪದಾರ್ಥಂಗಳ ಹೆಸರಿಟ್ಟು ಹೊತ್ತು ಕೊಂಡೈದಾವೆ ನೋಡು. ಶ್ರುತಿ :

ದ್ರವ್ಯಾರ್ಥಶ್ಚ ಮಹಾದೇವಃ ದ್ರವ್ಯರೂಪೋ ಮಹೇಶ್ವರಃ ।
ಇತಿ ಮೇ ಭೇದನೋ ನಾಸ್ತಿ ಸರ್ವರೂಪಸ್ಸದಾಶಿವಃ ॥

ಇಂತೆಂದುದಾಗಿ ನಾದ ನೀನು, ಬಿಂದು ನೀನು; ಕಳೆ ನೀನು, ಕಳಾತೀತ ನೀನು; ಗೊಹೇಶ್ವರ.

931

ನೀರ ಬೊಂಬೆಯು ಚೋಹವ ತೊಟ್ಟು, ಅಗ್ನಿಯ ಬಣ್ಣದ ಹೊದಕೆಯ ಹೊದ್ದು, ಗಾಳಿಯ ಗತಿಯಲ್ಲಿ ಸುಳಿದಾಡುವ ಪ್ರಾಣಿಗಳು ದೇವರನೆತ್ತ ಬಲ್ಲಬು ಗುಹೇಶ್ವರ.

932

ಪುಣ್ಯವುಳ್ಳ ಕಾಲಕ್ಕೆ ಪಾಷಾಣ ಪರುಷವಪ್ಪುದು ನೋಡಯ್ಯ. ಮಣ್ಣು ಹೊನ್ನಪ್ಪುದು. ಮುನ್ನ ಮುನ್ನವೆ ಅರ್ಚ್ಯೊತ್ತಿದ ಭಾಗ್ಯವೆನ್ನ ಕಣ್ಣ ಮುಂದೆ ಕಾಣಬಂದಿತ್ತು ನೋಡಾ. ಮಣ್ಣ ಮಱಿಯ ದೇಗುಲದೊಳಗೊಂದು ಮಾಣಿಕ್ಯವ ಕಂಡ ಬಳಿಕ, ಇನ್ನು ಮುನ್ನಿನಂತಪ್ಪುದೇ, ಗುಹೇಶ್ವರ?

933

ಕಾಯದಲಾದ ಮೂರ್ತಿಯಲ್ಲ, ಜೀವದಲಾದ ಮೂರ್ತಿಯಲ್ಲ, ಪ್ರಾಣದಲಾದ ಮೂರ್ತಿಯಲ್ಲ, ಪುಣ್ಯದಲಾದ ಮೂರ್ತಿಯಲ್ಲ, ಮುಕ್ತಿಯಲಾದ ಮೂರ್ತಿಯಲ್ಲ, ಯುಗದಲಾದ ಮೂರ್ತಿಯಲ್ಲ, ಜುಗದಲಾದ ಮೂರ್ತಿಯಲ್ಲ, ಶಿವನಲಾದ ಮೂರ್ತಿಯಲ್ಲ, ಶಕ್ತಿಯಲಾದ ಮೂರ್ತಿಯಲ್ಲ, ಇದೆಂತಹ ಮೂರ್ತಿಯೆಂದು ಉಪಮಿಸುವೆ! ಕಾಣಬಾರದ ಕಾಯ, ನೋಡಬಾರದ ತೇಜ, ಉಪಮಿಸಬಾರದ ನಿಲವು. ಕಾರಣವಿಡಿದು ಕಂಗೆ ಗೋಚರವಾದ ಸುಖವನೇನೆಂದು ಹೇಳುವೆ, ಗೊಹೇಶ್ವರ!

934

ನಡೆನುಡಿಯಿಲ್ಲದ ಗುರುವ ಕಂಡು ಉಪದೇಶವ ಪಡೆಯಲೆಂದು ಹೋದರೆ ಒಡನೆ ನುಡಿಯ ; ನುಡಿಸಿದರೆ ಕೇಳ. ಕಡೆಮೊದಲ ಕಾರ್ಯವೆಂತಪ್ಪುದೋ ಅಯ್ಯ ? ಮೂಗರ ಮೂಗರ ಪ್ರಸಂಗದಂತೆ ಇದೆ ಎನ್ನೊಳಗೆ ಅಱಿವಿನ ಪರಿಮಳ. ಹೊಱಗೆ ನೋಡಿದರೆ ಮುಗ್ಧವಾಯಿತ್ತು. ಇದನೆಂತುಪಮಿಸುವೆ ಅನಿಯಮದ ಬೆಡಗ ?! ಇದು ತನ್ನಿಂದ ತಾನಪ್ಪುದಲ್ಲದೆ ಭಿನ್ನದಲುಂಟೇ, ಗೊಹೇಶ್ವರ ?

935

ಒಂದೆಂಬೆನೆ ಎರಡಾಗಿದೆ. ಎರಡೆಂಬೆನೆ ಒಂದಾಗಿದೆ. ಒಂದೆರಡಱಿ ಸಂದೇಹವಿದೇನೋ ? ಅಗಲಲಿಲ್ಲದ ಕೂಟಕ್ಕೆ ಬಿಚ್ಚಿ ಬೇಱಾಗದ ಉಪದೇಶ ! ಗುರುಶಿಷ್ಯರೆಂಬ ಭಾವಕ್ಕೆ ಭೇದವುಂಟೇ, ಗೊಹೇಶ್ವರ ?

936

ಆದಿಯಿಂದತ್ತತ್ತಲೆನಗೆ ನೀನೆ ಗುರುವಯ್ಯ. ಅನಾದಿಯಿಂದತ್ತತ್ತಲೆನಗೆ ನೀನೆ ಗುರುವಯ್ಯ. ಎರಡು ನಾಮ ಹುಟ್ಟದ ಮುನ್ನ, ನಿಮಗೆ ನಾನು ಶಿಷ್ಯನಯ್ಯ. ಎನ್ನ ಭಾವಕಾಯದೊಳಗೆ ಭ್ರಮೆಯ ಕಳೆದು, ಎನ್ನ ಜ್ಞಾನಕಾಯದೊಳಗೆ ಮಱಹ ಕಳೆದು, ಎನ್ನೊಳಗೆ ತಿಳಿವಿನ ಬಗೆಯ ತೋಱುತ್ತ, ಹೊಱಗೆ ನುಡಿಯದಂತಿರ್ದಡೆ ಬಿಡೆನು ನೋಡಾ ನಿಮ್ಮ ಶ್ರೀಚರಣವ! ಮಾಡಿದಡೆ ಅಂತು ಮಹಾಪ್ರಸಾದವೆಂದು ಕೈಗೊಂಬೆ, ಮಾಡದಿರ್ದಡೆ ನೀವೆ ನಾನಾಗಿ ಮಹಾಪ್ರಸಾದವೆಂದು ಕೈಕೊಂಬೆನು, ಇಂತು ಆವ ತೆಱದಿಂದಲಾದರು ಎನ್ನೊಡಲ ನಿಮ್ಮಲ್ಲಿ ಸವೆದು ಪಡೆವೆ ನಿಮ್ಮ ಕರುಣವ, ಗೊಹೇಶ್ವರ, ನಿಮ್ಮ ಇರವಿನ ಪರಿಯಿಂತುಟು ನೋಡಾ.

937

ಆಣವಮಲ ಮಾಯಾಮಲ ಕಾರ್ಮಿಕಮಲವೆಂಬ ಮಲತ್ರಯಂಗಳ ಕಳೆದುಳಿದು ನಿರ್ಮಲನಾದ ಶಿಷ್ಯನು ; ಕಾಯ–ಜೀವದ ಭ್ರಾಂತುಸೂತಕ ಹಿಂಗಿ ನಿಶ್ಶಂಕನಾದ ಗುರು. ಈ ಉಭಯ ಭಾವದೊಳಗೆ ಆವುದು ಮುಂದು, ಆವುದು ಹಿಂದೆಂದಱಿಯ ಬಹುದು ? ಕರಸ್ಥಲಕ್ಕೆ ಕಾರುಣ್ಯವ ಮಾಡಿದರೆ ಮನಸ್ಥಲಕ್ಕೆ ಹಂಗಿಲ್ಲ, ಮನಸ್ಥಲದಲ್ಲಿ ಸೆಱಗೊಡ್ಡಿ ಬೇಡಿದಡೆ ಕರಸ್ಥಲದ ಲಿಂಗ ಕೈಸಾರಿತ್ತು. ಗುರುಸ್ಥಲದ ನಿಲವು ಪರಸ್ಥಲದಲಡಗಿದರೆ ಭಾವ ಬಳಲಿತ್ತಿದೇನೋ, ಗೊಹೇಶ್ವರ.

938

ಆಹಾ ಮನವೇ, ಮುಱಿದೆಯಲ್ಲ ಎನ್ನ ಪ್ರಾಣವ ! ಘನಮನ

ದೊಳಡಗಿ, ಆ ಮನ ಲಿಂಗದೊಳಡಗಿ, ಆ ಲಿಂಗವೆನ್ನ ಕರಸ್ಥಲಕ್ಕೆ ಬಂದ ಬಳಿಕ, ಅಳಿಯಿತ್ತು ಅಗಲಿತ್ತು ಎಂಬ ಭಾವಭ್ರಾಂತಿ ಇದೇನೋ ? ಜನನವಿಲ್ಲದ ಘನಕ್ಕೆ ಮರಣವುಂಟೆ ? ತೆಱಹಿಲ್ಲದ ನಿಜವು ತನ್ನಲ್ಲಿ ತಾನು ವೇದ್ಯವಾಗಿಪ್ಪುದಲ್ಲದೆ ಇದಿರಿಟ್ಟು ತೋಱಿದೆಂಬ ಅಜ್ಞಾನವಿದೇನೋ ? ನೀ ನಾನೆಂಬುದು ಮಾದು ತಾನೆಯಾಗಿ ಸಾಧ್ಯವಾಯಿತ್ತು. ಇದೇನೆಂಬೆ, ಗೊಹೇಶ್ವರ ?

939

ಗುರುವಿನ ಪರಿ ವಿಪರೀತವಾಯಿತ್ತಯ್ಯ ! ಭ್ರಮರಕೀಟನ್ಯಾಯದಂತಾಯಿತ್ತು. ಗುರು ತನ್ನ ನೆನೆವನ್ನಬರ, ಎನ್ನನಾ ಗುರುವ ಮಾಡಿದನು. ಇನ್ನು ಶಿಷ್ಯನಾಗಿ ಶ್ರೀಗುರುವ ಪೂಜಿಸುವರಾರು ಹೇಳಾ, ಗೊಹೇಶ್ವರ !

940

ಬಟ್ಟೆಯ ಬಡಿವ ಕಳ್ಳಂಗೆ ಬೇಹು ಸಂದು ಕಳವು ದೊರಕಿದಂತಾಯಿತ್ತು. ಕುರುಡನೆಡಹುತ್ತ ತಡಹಿ ಹಿಡಿದು ಕಂಡಂತಾಯಿತ್ತು. ನಿರ್ಧನಿಕ ಧನದ ಬಯಕೆಯಲ್ಲಿ ನಡೆವುತ್ತ ಎಡಹಿದ ಕಲ್ಲು ಪರುಷವಾದಂತಾಯಿತ್ತು. ಅಱಿಸುವಂಗೆ ಅಱಿಕೆ ತಾನಾದಂತಾಯಿತ್ತು. ಎಲೆ ಗೊಹೇಶ್ವರ, ನೀನೆನಗೆ ದೊರಕುವುದೆಂಬುದು ನಾ ಮುನ್ನ ಮಾಡಿದ ಸುಕೃತದ ಫಲವದನೇನ ಬಣ್ಣಿಪೆ ಹೇಳಾ.

941

*ಅಂಗೈಯೊಳಗೊಂದು ಅರಳ್ದ ತಲೆಯ ಹಿಡಿದುಕೊಂಡು ಕಂಗಳ ಮುತ್ತ ಪವಣಿಸುವಾಕೆ ನೀನಾರು ಹೇಳಾ? ಸಂದ ಸಂಪಗೆಯರಳ ತುಂಬಿ ಬಂದುಂಬ ಭೇದವನಱಿಯದೆ ಹಂಬಲಿಸುವ ಪರಿತಾಪವೇನು ಹೇಳಾ ? ಒಂದೆಂಬೆನೆ ? ಎರಡಾಗಿದೆ ! ಅಱಿವಿನೊಳಗಣ ಮಱಹಿದೇನು ಹೇಳಾ ? ದುಃಖವಿಲ್ಲದ ಆಕ್ಕೆ, (+ಅಕ್ಕೆ ?) ಇಲ್ಲದ ಅನುತಾಪ ನಮ್ಮ ಗೊಹೇಶ್ವರ ಲಿಂಗದಲ್ಲಿ ತೋಱುತ್ತಿದೆ. ನೀನಾರೆಂದು ಹೇಳಾ, ಎಲೆ ಅವ್ವಾ.

942

ಕಾಣದುದ ಕಂಡೆ ; ಕೇಳದುದ ಕೇಳಿದೆ. ಮುಟ್ಟಬಾರದುದ ಮುಟ್ಟಿದೆ, ಅಸಾಧ್ಯವ ಸಾಧಿಸಿದೆ. ತಲೆಗೆಟ್ಟುದ ತಲೆವಿಡಿದೆ, ನೆಲೆಗೆಟ್ಟುದ ನಿರ್ಧರಿಸಿದೆ. ಗೊಹೇಶ್ವರ, ನಿಮ್ಮ ಶರಣ ಅಜಗಣ್ಣಂಗೆ ಶರಣೆಂದು ಬದುಕಿದೆನು.

943

ಶರಣು ಶರಣಾರ್ಥಿ, ಎಲೆ ತಾಯೆ, ಧರೆಯಾಕಾಶ ಮನೆಗಟ್ಟಿದಂದು,

---

*ಕೈಲಾಸವಾಸಿಯಾದ ಅಜಗಣ್ಣನ ವಿಯೋಗದಿಂದ ಪ್ರಲಪಿಸುತ್ತಿದ್ದ ಮುಕ್ತಾಯಕ್ಕನಿಗೆ ಅಲ್ಲಮಪ್ರಭು ಆಡಿದ ಸಮಾಧಾನದ ವಚನಗಳು 941 ರಿಂದ 956 ರವರೆಗೆ.

ಹರಿವನಿಲ ಅಗ್ನಿ ಜಲ ಮೊಳೆದೋಱದಂದು ಹುಟ್ಟಿದಳೆಮ್ಮವ್ವೆ. ಅದಕ್ಕೆ ಮುನ್ನವೆ ಹುಟ್ಟದೆ ಬೆಳೆದ ನಮ್ಮಯ್ಯ. ಈ ಇಬ್ಬರ ಬಸಿಱಲ್ಲಿ ಬಂದೆ ನಾನು. ಎಮ್ಮ ತಂಗಿಯರೈವರು ಮೋಱೆಗೆಟ್ಟು ಹೆಂಡಿರಾದರೆನಗೆ, ಕಾಮಬಾಣ ತಾಗದೆ ಅವರ ಸಂಗವ ಮಾಡಿದೆನು. ನಾ ನಿಮ್ಮ ಭಾವನಲ್ಲಯ್ಯನು, ನೀನೆನಗೆ ನಗೆವೆಣ್ಣು. ನಮ್ಮ ಗೊಹೇಶ್ವರನ ಕೈವಿಡಿದು ಪರಮಸುಖಿಯಾಗಿ ಕಳವಳ ಕಂದೆಱವಿಯೇನು ಹೇಳಾ !

944

ಅಱೀವಱತು ಮಱಹುಗೆಟ್ಟು ತನ್ನಲ್ಲಿ ತಾನು ಸನ್ನಿಹಿತನಾದಂಗೆ ದುಃಖಿಸುವರೆ ಹೇಳಾ ? ಶೋಕಿಸುವರೆ ಹೇಳಾ ? ಒಡಲಿಲ್ಲದಾತಂಗೆ ಎಡೆಯುಲೊಂದು ಅಳಿವುಂಟೆಂದು ನುಡಿದು ಹೇಳುವ ಮಾತು ಭ್ರಾಂತು ನೋಡಾ ! ಎರಡಿಲ್ಲದ ಐಕ್ಯಂಗೆ ಒಳಹೊಱಗಿಲ್ಲ, ನೋಡಾ, ಗೊಹೇಶ್ವರನ ಶರಣ ಅಜಗಣ್ಣಂಗೆ.

945

ಕಂಡೆನೆಂಬುದು ಕಂಗೆ ಮಱವೆ; ಕಾಣೆನೆಂಬುದು ಮನದ ಮಱವೆ. ಕೂಡಿದೆನೆಂಬುದು ಅಱಿವಿನ ಮಱವೆ; ಅಗಲಿದೆನೆಂಬುದು ಮಱಹಿನ ಮಱವೆ. ಇಂತು, ಕಂಡೆ ಕಾಣೆ, ಕೂಡಿದೆನಗಲಿದೆನೆಂಬ ಭ್ರಾಂತಿಸೂತಕವ ತಿಳಿದು ನೋಡಲು ಗೊಹೇಶ್ವರನೆಂಬ ಲಿಂಗವನಗಲಲೆಡೆಯಿಲ್ಲ ಕೇಳಾ, ಎಲೆ ತಾಯೆ.

946

ಅಳಿದವನಲ್ಲ, ಉಳಿದವನಲ್ಲ; ಘನಕ್ಕೆ ಗಮನನಲ್ಲ, ಮನಕ್ಕೆ ಸಾಧ್ಯನಲ್ಲ; ತನ್ನ ತಪ್ಪಿಸಿ ಇದಿರನೊಪ್ಪಿಸಿಹೆನೆಂಬ ಭಿನ್ನಭಾವಿಯಲ್ಲ, ಗೊಹೇಶ್ವರನ ಶರಣ ಅಜಗಣ್ಣನ ಅಂತಿಂತೆನಬಾರದು, ಕೇಳಾ ತಾಯೆ.

947

ತನು ಉಂಟೆಂದರೆ ಪಾಶಬದ್ಧ; ಮನ ಉಂಟೆಂದರೆ ಭವಕ್ಕೆ ಬೀಜ. ಅಱಿವ ನುಡಿದು ಕೆಟ್ಟೆನೆಂದರೆ ಅಜ್ಞಾನ. ಭಾವದಲ್ಲಿ ಸಿಲುಕಿದೆನೆಂಬ ಮಾತು ಬಯಲ ಭ್ರಮೆ ನೋಡಾ ! ಒಮ್ಮೆ ಕಂಡೆನೊಮ್ಮೆ ಕಾಣೆ, ಒಮ್ಮೆ ಕೂಡಿದೆನೊಮ್ಮೆಯಗಲಿದೆನೆಂದರೆ ಕರ್ಮ ಬೆಂಬತ್ತಿ ಬಿಡದು. ನಿನ್ನೊಳಗೆ ನೀ ತಿಳಿದು ನೋಡಲು ಭಿನ್ನ ಉಂಟೆ ? ಗೊಹೇಶ್ವರಲಿಂಗವನಱಿವಡೆ ನೀನೆಂದೆ ತಿಳಿದು ನೋಡಾ, ಮರುಳೆ.

948

ಇಲ್ಲದ ಶಂಕೆಯನುಂಟೆಂದು ಭಾವಿಸಿದರೆ, ಅದು ಕಣ್ಣ ಮುಂದೆ ರೂಪಾಗಿ ಕಾಡುತ್ತಿರ್ಪುದು. ಇಲ್ಲದ ತನುವನುಂಟೆಂಬನ್ನಕ್ಕರ ಅದೇ ಮಾಯೆಯಾಗಿ ಕಾಡುತ್ತಿರ್ಪುದು. ನಿಃಕ್ರಿಯು ಲಿಂಗಕ್ಕೆ ಕ್ರಿಯಾಂತಲ್ಲದೆ ಆಡಂಬರ ಸಂದು

ಸಂಶಯ ಮುಂದುಗೆಡಿಸುತ್ತಿಪ್ಪುದು ಕೇಳಾ. ಮನವ ಮನೆಯ ಮಾಡಿ ಕೊಂಡಿಪ್ಪ ಲಿಂಗದ ಅನುವನಱಿಯ ಬಲ್ಲರೆ, ಗೊಹೇಶ್ವರನೆಂಬ ಲಿಂಗ ದೂರ ವಿಲ್ಲ ಕೇಳಾ, ಮರಳೆ.

949

ಗುರುವಿಂಗೂ ಶಿಷ್ಯಂಗೂ ಆವುದು ದೂರ, ಆವುದು ಸಾರೆಯೆಂಬುದನಾರು ಬಲ್ಲರು?! ಗುರುವೆ ಶಿಷ್ಯನಾದ ತನ್ನ ವಿನೋದಕ್ಕೆ; ಶಿಷ್ಯನೆ ಗುರುವಾದ ತನ್ನ ವಿನೋದಕ್ಕೆ. ಕರ್ಮವೆಂಬ ಕೌಟಿಲ್ಯ ಎಡೆವೊಕ್ಕ ಕಾರಣ, ಭಿನ್ನವಾಗಿ ಇದ್ದಿ ತೆಂದರೆ ಅದು ನಿಶ್ಚಯವಹುದೇ? ಆದಿಯನಾದಿಯಿಂದತ್ತತ್ತ ಮುನ್ನಲಾದ ಪರತತ್ತ್ವಮಂ ತಿಳಿದು ನೋಡಲು, ನೀನೆ ಸ್ವಯಂಜ್ಯೋತಿಪ್ರಕಾಶನೆಂದಱಿ ಯಲು, ನಿನಗೆ ನೀನೆ ಗುರುವಲ್ಲದೆ ನಿನ್ನಿಂದಧಿಕಮಪ್ಪ ಗುರುವುಂಟೆ? ಇದು ಕಾರಣ, ಗೊಹೇಶ್ವರಲಿಂಗವು ತಾನೆ ಎಂಬುದನು ನಿನ್ನಿಂದ ನೀನೆ ಅಱಿಯ ಬೇಕು ನೋಡಾ!

950

ಅಱಿವನಱಿದಹೆನೆಂಬುದು ಮಱವೆ. ಮಱಹ ಮಱೆದಹೆನೆಂಬುದು ಮಱವೆ. ಸಾಕಾರ ನಷ್ಟ, ನಿರಾಕಾರ ದೃಷ್ಟವೆಂಬುದು ಭಾವದ ಬಳಲಿಕೆ. ಗುರು ವೆಂಬುದು ಶಿಷ್ಯನೆಂದಲ್ಲಿಯೆ ಹೋಯಿತ್ತು. ಶಿಷ್ಯನೆಂಬುದು ಗುರುವೆಂದಲ್ಲಿಯೆ ಹೋಯಿತ್ತು. ನಿರ್ಣಯದಲ್ಲಿ ನಿಜೈಕ್ಯನಾದಹೆನೆಂದರೆ ಎಚ್ಚರಿಕೆಯಲ್ಲಿ ತಪ್ಪಿತ್ತು. ಸಹಜಸಂಬಂಧಕ್ಕೆ ಗುರುವಲ್ಲದೆ, ಅಸಹಜಕ್ಕೆ ಗುರುವುಂಟೆ? ಗೊಹೇಶ್ವರಲಿಂಗ ದಲ್ಲಿ ಪರವೆಂದಲ್ಲಿ ಗುರು ಉಂಟಲ್ಲದೆ, ಸ್ವಯವೆಂದಲ್ಲಿ ನುಡಿಯಲಿಲ್ಲ!

951

ಮಾತೆಂಬುದು ಜ್ಯೋತಿರ್ಲಿಂಗ! ಸ್ವರವೆಂಬುದು ಪರತತ್ತ್ವ! ತಾಳೋಷ್ಠ ಸಂಪುಟವೆಂಬುದೇ ನಾದಬಿಂದುಕಳಾತೀತ! ಗೋಹೇಶ್ವರನ ಶರಣರು ನುಡಿದು ಸೂತಕಿಗಳಲ್ಲ ಕೇಳಾ, ಮರುಳೆ.

952

ತನ್ನ ತಾನಱಿದಡೆ ನುಡಿಯೆಲ್ಲ ತತ್ತ್ವ ನೋಡಾ. ತನ್ನ ತಾ ಮಱೆದಡೆ ನುಡಿಯೆಲ್ಲ ಮಾಯೆ ನೋಡಾ! ಅಱಿದು ಮಱೆದ ಶಿವಯೋಗಿಯ ಶಬುದ ವೆಲ್ಲ ಉಪದೇಶವಲ್ಲದೆ ಭಿನ್ನವುಂಟೆ? ನಿನ್ನ ಮನದ ಕಳವಳವ ತಿಳುಹಲೆಂದು ಮಾತನಾಡಿಸಿ ನೋಡಿದಡೆ, ಎನ್ನ ಮನದೊಳಗೆ ಕಂದು ಕಲೆಯೆಂಬುದಿಲ್ಲ ನೋಡಾ! ನಮ್ಮ ಗೊಹೇಶ್ವರಲಿಂಗಕ್ಕೆ ನೀನು ಕರುಣದ ಶಿಶುವಾದ ಕಾರಣ, ಬಾಯ್ದೆಗೆದೆನಲ್ಲದೆ, ಭಿನ್ನ ಉಂಟೆ ಹೇಳಾ, ಮರುಳೆ!

953

ಅಂಗದ ಕಳೆ ಲಿಂಗದಲ್ಲಿ ಅಱಿತ ಬಳಿಕ, ಅಂಗವೆಂಬ ಶಂಕೆಯಿಲ್ಲ ನೋಡಾ ಶರಣಂಗೆ! ಪ್ರಾಣನ ಕಳೆ ಅಱಿವಿನಲ್ಲಿ ಅಱಿತ ಬಳಿಕ, ಶಬ್ದಸಂದಣಿಗೆ ಹಂಗಿಲ್ಲ ನೋಡಾ! ಶರಣ ನಡೆದರೆ ನಿರ್ಗಮನ, ನುಡಿದರೆ ನಿಶ್ಶಬ್ದ! ಗೊಹೇಶ್ವರನ ಶರಣಂಗೆ ಕುಱುಹಿಲ್ಲ ಕೇಳಾ, ಎಲೆ ಅವ್ವ.

954

ಅಱಿವುಗೆಟ್ಟು, ಮಱಹಳಿದು, ಭಾವಭ್ರಾಂತು ನಿಭ್ರಾಂತವಾದವರ ಕೈಯಲ್ಲಿ ಕುಱುಹನಱಸುವರೆ ಹೇಳಾ! ತಾನಳಿದು, ತಾನುಳಿದು, ತಾನು ತಾನಾದ ನಿಜಶರಣಂಗೆ ಅಂತರಂಗದಲ್ಲಿ ಒಂದು ಅಱಿವುಂಟೆ? ಗೊಹೇಶ್ವರನ ಶರಣನ ನಿಲವು ಕಾಯಗೊಂಡವರ ಕಣ್ಣಿಂಗೆ ಸಂದೇಹವಾಗಿಪ್ಪುದು; ನಿಸ್ಸಂದೇಹಿಗಳಿಗೆ ನಿಜವಾಗಿಪ್ಪುದು ನೋಡಾ, ಮರುಳೆ.

955

ಅಂಗ ಅನಂಗವೆಂಬೆರಡೂ ಅಳಿದು, ನಿಜದಲ್ಲಿ ನಿಂದ ಲಿಂಗೈಕ್ಯನ ಅಂಗದಲುಳ್ಳ ಕ್ರೀಗಳೆಲ್ಲವೂ ಲಿಂಗಕ್ರೀಗಳು ನೋಡಾ. ಮನೋಲಯವಾಗಿಪ್ಪ ನಿಜ-ಲಿಂಗೈಕ್ಯನ ಅನುಭಾವವೆಲ್ಲವೂ ಜ್ಞಾನ ನಷ್ಟಶಬ್ದ ನೋಡಾ. ತನ್ನಲ್ಲಿ ತಾನು ತದ್ಗತವಾಗಿಪ್ಪ ಶಿವಯೋಗಿಗೆ ಭಿನ್ನವಿಲ್ಲ ನೋಡಾ, ಗೊಹೇಶ್ವರ ಸಾಕ್ಷಿಯಾಗಿ.

956

ಮುಕ್ತಿಗೆ ಮುಖವಾಗಿ, ಯುಕ್ತಿಗೆ ಹೊಱಗಾಗಿ, ಅಱಿವಿಂಗೆ ಅಱಿವಾಗಿಪ್ಪ ಭೇದ ಕಾಣಬಂದಿತ್ತು ನೋಡಾ. ಅಱಿವಱಿತು, ಮಱಹು ನಷ್ಟವಾಗಿಪ್ಪುದು; ನಿನ್ನಲ್ಲಿ ಸನ್ನಿಹಿತವಾಗಿಪ್ಪುದು. ಗೊಹೇಶ್ವರನ ಶರಣ ಅಜಗಣ್ಣನ ನಿಲವು ಬಯಲ ಬೆರಸಿದ ಮರೀಚಿಯಂತಾಯಿತ್ತು, ಬೆರಸಿ ನೋಡಾ ಬೇಱಿಲ್ಲದೆ.

957

*ಧರೆಯ ಮೇಲೊಂದು ಪಿರಿದಪ್ಪ ಸಂತೆಯ ನೆರವಿಗೆ ಬಂದವರ ನೇನೆಂಬೆನು! ಪರಿಪರಿಯ ಭಂಡದ ವ್ಯವಹಾರದೊಳಗೆ ಕೊಡಲಿಲ್ಲ ಕೊಳಲಿಲ್ಲ! ವೃಥಾ ವಿಳಾಸವಿದೇನೋ? ಅರೆಮರುಳೆಂಬ ಶಿವನು ನೆಱೆಮರುಳೆಂಬ ಜಗವ ಹುಟ್ಟಿಸಿದ ಪರಿಯ ಕಂಡು ಬೆಱಗಾದೆ, ಗೊಹೇಶ್ವರ.

958

ಸಾಗರದೊಳಗಿಪ್ಪ ಪ್ರಾಣಿಗಳು ಮತ್ತೊಂದೆಡೆಯಲ್ಲಿ ಇರಬಲ್ಲವೆ? ಭವ-

---

*ಅಲ್ಲಮಪ್ರಭು ಸೊನ್ನಲಿಗೆಗೆ ಬಂದು ಸಿದ್ಧರಾಮನನ್ನು ಅನುಗ್ರಹಿಸುವಾಗ ಆಡಿದ ವಚನಗಳು 957 ರಿಂದ 1006 ರವರೆಗೆ.

ಸಾಗರದೊಳಗಿಪ್ಪ ಜೀವಿಗಳಿಗೆ ಅದೇ ಗತಿಯಲ್ಲದೆ, ಬೇಱೆ ಮತ್ತೊಂದೆಡೆ ಯುಂಟೆ? ಗೊಹೇಶ್ವರನ ಲೀಲೆ ಜಗನ್ಮಯವಾದಡೆ ನಾನು ಬೆಱಗಾದೆನು.

959

ಅನ್ನವನಿಕ್ಕಿ ನನ್ನಿಯ ನುಡಿದು, ಅಱವಂಟಿಗೆಯನಿಕ್ಕಿ ಕೆಱೆಯ ಕಟ್ಟಸಿದರೆ, ಮರಣದಿಂದ ಮೇಲೆ ಸ್ವರ್ಗ ಉಂಟಲ್ಲದೆ, ಶಿವನ ನಿಜವು ಸಾಧ್ಯವಾಗದು. ಗೊಹೇಶ್ವರನನಱಿಯದ ಶರಣಂಗೆ ಆವ ಫಲವೂ ಇಲ್ಲ.

960

ಕೆಱೆಯ ಕಟ್ಟಿಸುವ ಒಡ್ಡನ ಪ್ರತಾಪವನೇನೆಂಬೆನಯ್ಯ? ನೆಲನನಗೆದು ಜಲವ ತೆಗೆದಹೆನೆಂಬ ಬಳಲಿಕೆಯ ನೋಡಾ! ಒಂದು ಕಲ್ಲನು ಕಡಿದು ಮತ್ತೊಂದು ಕಲ್ಲಿಗೆ ಭೋಗವ ಕೊಟ್ಟಹೆನೆಂಬ ಅಜ್ಞಾನವಿದೇನೋ! ಗೊಹೇಶ್ವರ, ಈ ಇರವಿನ ಪರಿಗೆ ಬೆಱಗಾದೆನು.

961

ಒಳಗೆ ತೊಳೆದು ಜಲವ ತುಂಬಲಱಿಯದ ಅರೆಮರುಳನೇನಾದ ಹೇಳಿರೆ? ಜಲದ ಸಂಗವ ತೊಳೆಯಲಱಿಯದೆ ಜಲವ ಬಯಸುವನೆಂತಿರ್ದಹ ಹೇಳಿರೆ? ನೆಲನ ಶೋಧಿಸಿ ನೆಲೆಯನಱಿಯದೆ ಕೆಱೆಯ ಕಟ್ಟಿಸುವ ಒಡ್ಡರಾಮಯ್ಯನ ಇರವೆಂತು ಹೇಳಿರೆ? ನಮ್ಮ ಗೊಹೇಶ್ವರನ ನಿಲವನಱಿಯದ ಮರುಳು ಸಿದ್ಧರಾಮನೆಂತಿರ್ದಹ ಹೇಳಿರೆ?

962

ಗುರುವೆಂದಱಿಯರು, ಹಿರಿಯರೆಂದಱಿಯರು. ದೇವರೆಂದಱಿಯರು, ಭಕ್ತರೆಂದುಱಿಯರು. ಲಿಂಗವೆಂದಱಿಯರು, ಜಂಗಮವೆಂದಱಿಯರು. ಬಂದವರನಱಿಯರು, ನಿಂದವರ ನಿಲವನಱಿಯರು. ಶಿವಶರಣರ ನೋಯಿಸುವ ಪಾತಕರನೇನೆಂಬೆ, ಗೊಹೇಶ್ವರ, ನಿಮ್ಮ ಮನ ನೊಂದ ನೋವು ಬಱದೆ ಹೋಗದು.

963

ಸಹಜವ ನುಡಿದರೆ ಸೇರುವರಿಲ್ಲ ಕಾಣಿರಣ್ಣ! ಅಸಹಜಕ್ಕಲ್ಲದೆ ಲೋಕ ಭಜಿಸದು! ಕೆಱೆಕಟ್ಟಿಸುವನ ಕಂಡು ಒಡ್ಡರಾಮಯ್ಯನೆಂದರೆ ಮುಳಿಸಿಂದ ಲಿಂಗತನುವ ನೋಯಿಸುವರೆ? ನಮ್ಮ ಗೊಹೇಶ್ವರಲಿಂಗವು ಜಗದೊಳಗೆ ಪರಿಪೂರ್ಣವಾದ ಕಾರಣ, ಶರಣರ ನೋವು ಮರಳಿ ಪಾತಕರ ತಾಗಿದರೆ ಅಲ್ಲಯ್ಯ ನೋಡಿ ನಗುತಿರ್ದನು.

964

ತಾಯಿಗಾದ ಸುಖದುಃಖಂಗಳು ಬಸಿಱ ಶಿಶುವಿಂಗೆ ನೋಡಯ್ಯ.

ಶಿವಶರಣರಿಗೆ ಮಾಡಿದ ಸುಖದುಃಖಂಗಳು ಶಿವನ ತಾಗುವವು. ಕರಣವುಳ್ಳವರು ಮರಣವಿಲ್ಲದವಂಗೆ ಮುನಿದರೆ ತನುವುಳ್ಳವರ ಮುಟ್ಟುವುದಲ್ಲದೆ, ಒಡಲಿಲ್ಲದಾತನ ಮುಟ್ಟಬಲ್ಲುದೆ? ಗೊಹೇಶ್ವರ, ಕೆಂಡವನೊಱಲೆ ಮುಟ್ಟಬಲ್ಲುದೆ?

965

ಜಗದ ಜನರ ಹಿಡಿದುಕೊಂಡು ಬಂದು ಉಪದೇಶವ ಮಾಡಿದ(+ಡೆ) ಗುರುವಿಂಗೆ ಆ ಉಪದೇಶ. (+ಆ ಉಪದೇಶ) ಕೊಟ್ಟುಕೊಂಡ ಮಾಱಿಂಗೆ ಹೋಹುದಲ್ಲದೆ ಅಲ್ಲಿ ನಿಜವಳವಡುವುದೇ? ತೆಱನನಱಿಯದ ಸಂಸಾರಜೀವಿಗಳು ಮಾಡಿದ ದೋಷ ತಮ್ಮ ನುಂಗಿ, ಆ ಗುರುವಿಂಗೆ ಉಪಹತಿಯ ಮಾಡುವುದು ನೋಡಾ! ಗೊಹೇಶ್ವರ, ತಾನಿಟ್ಟ ಬೇತಾಳ ತನ್ನನೆ ತಿಂದರೆ ಬೇಕು ಬೇಡೆನಲುಂಟೆ?

966

ಕಾಡುಗಿಚ್ಚೆದ್ದರೆ ಅಡವಿಯೆ ಗುರಿ, ನೀರುಗಿಚ್ಚೆದ್ದರೆ ಸಮುದ್ರವೆ ಗುರಿ, ಒಡಲುಗಿಚ್ಚೆದ್ದರೆ ಆ ತನುವೆ ಗುರಿ, ಕಾಲಾಗ್ನಿ ಎದ್ದರೆ ಲೋಕಂಗಳೆ ಗುರಿ, ಶಿವಶರಣರ ಮನೆಯಲ್ಲಿ ಕೋಪಾಗ್ನಿಯೆದ್ದರೆ ನಿಂದಕರೆ ಗುರಿ. ಗೊಹೇಶ್ವರ, ನಿಮ್ಮ ಮಾಯದ ಹೊಡೆಗಿಚ್ಚಿಂಗೆ ನಾನು ಗುರಿಯಲ್ಲ ಕೇಳಾ.

967

ಕಾಯಗುಣವಳಿದು, ಮಾಯದ ಮದ ಮುಱಿದು, ಕಾಮಕ್ರೋಧಂಗಳೆಲ್ಲವು ಹೆಱಹಿಂಗಿ ಹೋದವು. ಅಂಗವೆಲ್ಲವು ಲಿಂಗಲೀಯವಾಗಿ, ಕಂಗಳ ಕಳೆಯ ಬೆಳಗಳಿದು, ಗೊಹೇಶ್ವರನ ವಿರಹದುರಿಯೊಳಗೆ ಬೆಂದವರ ಮರಳಿ ಸುಟ್ಟಹೆನೆಂಬ ಸಿದ್ಧರಾಮಯ್ಯ ಮರುಳು ನೋಡಾ!

968

ತಾಪತ್ರಯದಲ್ಲಿ ಬೆಂದ ಒಡಲ ಹಿಡಿದು ತಂದು ಜ್ಞಾನವೆಂಬ ಉರಿಗೆ ಆಹುತಿಯ ಕೊಟ್ಟವನ, ಜ್ಞಾನವೆಂಬ ಕಾಯವ ಹಿಡಿದು ನಿಶ್ಶೂನ್ಯವೆಂಬ ತೇಜದಲ್ಲಿ ಸುಟ್ಟವನ, ನಿಶ್ಶೂನ್ಯವೆಂಬ ಶಬ್ದವ ಸುಟ್ಟು ಭಸ್ಮವ ಧರಿಸಿದ ಲಿಂಗೈಕ್ಯನ, ಲೋಕದ ಸ್ಥಿತಿಗತಿಯ ಮಱೆದು ನಿರ್ವಾಣದಲ್ಲಿ ನಿಂದವನ, ಗೊಹೇಶ್ವರ ಲಿಂಗದಲ್ಲಿ ತನ್ನ ಮಱೆದ ಅಲ್ಲಯ್ಯನ ಕೋಪದ ಕಿಚ್ಚಿನಲ್ಲಿ ಸುಟ್ಟಹೆನೆಂಬ ಸಿದ್ಧರಾಮಯ್ಯನನೇನೆಂಬೆನು!

969

ನಿಮ್ಮ ಶಕ್ತಿ ಜಗದೊಳಗಿಪ್ಪುದು; ಜಗದ ಶಕ್ತಿ ನಿಮ್ಮೊಳಗಿಪ್ಪುದು. ಜಗಕ್ಕೆ ನಿಮಗೆ ಭೇದವಾದುದಕ್ಕೆ ಬೆಱಗಾದೆನು. ಅಂದೊಮ್ಮೆ ತ್ರಿಪುರವ ಸುಟ್ಟಲ್ಲಿ ನಾಚಿತ್ತೆನ್ನ ಮನವು. ಕಾಮನ... ಕೊಂಡರೆ

ನಿಮ್ಮ ಅಹಂಕಾರವ ನೋಡಿ ಹೇಸಿತ್ತೆನ್ನ ಮನವು. ಕಾಲನ ಸುಟ್ಟು ಬೊಟ್ಟ ಸಿಟ್ಟರೆ, ನಗೆಗೆಡೆಯಾಯಿತ್ತು ನಿಮ್ಮ ಘನವೆನಗೆ. ಗೊಹೇಶ್ವರ, ನೀ ಮುನಿದು ನೊಸಲ ಕಣ್ಣ ತೆಗೆದರೆ ಎನ್ನಂಗಾಲೊಳಡಗಿತ್ತಯ್ಯ ನಿಮ್ಮ [1]ಕೋಪ![1]

970

ಹರನ ಕರುಣವ ಪಡೆದ ಸಾಮರ್ಥ್ಯದ ಬಲುಹಿಂದ ಶಿವಶರಣರೊಡನೆ ಸೆಣಸಿದರೆ ಲೇಸುಂಟೆ? ಅಘಟಿತಘಟಿತರಿಗೆ ಅಘಟಿತರುಂಟು ನೋಡಾ! ನೊಸಲಲೊಬ್ಬ ಕಣ್ಣ ತೆಗೆದರೆ, ಅಂಗಾಲಲೊಬ್ಬರು ಕಣ್ಣ ತೆಗೆವರು! ಗೊಹೇಶ್ವರನ ಶರಣರು ಉಪಮಾ[2]ತೀತರು.[2]

971

ಎರಡು ಕಣ್ಣುಳ್ಳಡೆ ಚತುರ್ಭುಜನೆಂಬೆನು. ಮೂಱು ಕಣ್ಣುಳ್ಳಡೆ ಮಹೇಶ್ವರನೆಂಬೆನು. ಮೈಯೆಲ್ಲ ಕಣ್ಣಾದರೆ ಸದಾಶಿವನೆಂಬೆನು. ಗೊಹೇಶ್ವರ, ನಿಮ್ಮ ಶರಣಂಗೆ ಅಂಗಾಲ ಕಣ್ಣು ಮೂಡಿದರೆ ನಿರುಪಮಮಹಿಮ ಅಲ್ಲಯ್ಯ [3]ನೆಂಬೆನು.[3]

972

ನಿಮ್ಮ ತೇಜವ ನೋಡಲೆಂದು ಹೆಜ್ಜೆಸಾರಿ ನೋಡುತ್ತಿರಲು ಶತಕೋಟಿ ಸೂರ್ಯರು ಮೂಡಿದಂತಿರ್ದುದಯ್ಯ. ಮಿಂಚಿನ ಬಳ್ಳಿಯ ಸಂಚವ ಕಂಡೆ. ಎನಗಿದು ಸೋಜಿಗವಾಯಿತ್ತು! ಗೊಹೇಶ್ವರ, ನೀನು ಜ್ಯೋತಿರ್ಲಿಂಗವಾದರೆ ಉಪಮಿಸಿ ನೋಡಬಲ್ಲವ[4]ರಿಲ್ಲಯ್ಯ.[4]

973

ಕಾಲಾಗ್ನಿಯೆಂಬ ಕಾಡುಗಿಚ್ಚೆದ್ದು ಲೋಕವ ಸುಟ್ಟತೆಂದರೆ ಶಿವಶರಣ ರಂಜರು! ಶಶಿಧರ ಮುನಿದು ಬಿಸುಗಣ್ಣ ತೆಗೆದರೆ ಶಿವಶರಣರದ ಮನಸಿಗೆ ತಾರರು! ಅಸಮಾಕ್ಷಲಿಂಗವ ತಮ್ಮ ವಶಕ್ಕೆ ತಂದ ಶರಣರು ಮುನಿದು ಉರಿ ಗಣ್ಣ ತೆಗೆದರೆ ಚತುರ್ದಶಭುವನದೊಳಗೆ ಆರು ಗುರಿಯಲ್ಲ? ಗೊಹೇಶ್ವರ, ನಿಮ್ಮ ಆಱುವಿನ ಬೆಳಗು ಬಿಸಿಯಾವರೆ ಸಿದ್ಧರಾಮಯ್ಯದೇವರೆಂಬ ಶಿವ ಯೋಗಿಯ ಹೃದಯವೇ ಗುಱಿಯೆಂದು ಬೆಸಸಿದನಲ್ಲಯ್ಯನು.

974

ಕಾಯಗೊಂಡ ಮಾನವರಂತೆ ಕೈಗೆ ನಿಲುಕ. ಪ್ರಾಣವಿಡಿದ ಜೀವಿಗ ಳಂತೆ ಎಡೆಯಾಡದಿಪ್ಪ, ಕಾಂಬಡೆ ಕಂಗಳತೆಯಲ್ಲ. ಕೇಳುವಡೆ ಕಿವಿಗಳತೆ

---

1. ಕೋಪ (ಐ) 2. ಶೀತರು (ಐ) 3. ನೆಂಬೆನು (ಐ) 4. ರಿಲ್ಲಯ್ಯ (ಐ)

ಯಲ್ಲ. ಗೊಹೇಶ್ವರನ ನಿಲವು ಬಱಿಯ ಸ್ತೋತ್ರಕ್ಕೆ ಸಿಕ್ಕದು ಕಾಣಾ, ಸಿದ್ಧ ರಾಮಯ್ಯ.

975

ಕಂಗೆ ಕಾಂಬಡೆ ರೂಪಲ್ಲ; ಕೈಗೆ ನಿಲುಕುವಡೆ ದೇಹಿಯಲ್ಲ. ನಡೆವಡೆ ಗಮನಿಯಲ್ಲ; ನುಡಿದಡೆ ವಾಚಾಳನಲ್ಲ. ನಿಂದಿಸಿದವರಿಗೆ ಹಗೆಯಲ್ಲ; ಹೊಗಳಿ ದವರಿಗೆ ಕೆಳೆಯಲ್ಲ. ಗೊಹೇಶ್ವರನ ನಿಲವು ಮಾತಿನ ಮಾಲೆಗೆ ಸಿಲುಕುವುದೆ? ಸಿದ್ಧರಾಮಯ್ಯ, ನೀನು ಮರುಳಾದೆಯಲ್ಲ!

976

ವಚನರಚನೆಯೆಂಬ ಮಾತಿನ ಬಣ್ಣದ ಪರಿಯಲ್ಲ ನೋಡಾ! ಹೊಗಳಿ ಕಂಡವರೆಲ್ಲರು ಮೂರ್ತಿಗೊಳಗಾದರು. ವೇದಶಾಸ್ತ್ರಮಾರ್ಗವೆಲ್ಲವು ಹೊಗಳಿ ಕಾಣವೆಂಬುದ ಗೊಹೇಶ್ವರ ಸಾಕ್ಷಿಯಾಗಿ ಮೂಱುಲೋಕ ಬಲ್ಲುದು ಕಾಣಾ, ಸಿದ್ಧರಾಮಯ್ಯ.

977

ಭಕ್ತಿಯುಕ್ತಿಯನಾರು ಬಲ್ಲರು? ಬಲ್ಲವರನಾರನೂ ಕಾಣೆ! ತನ್ನ ಮಱೆದು, ಇದಿರ ಹಱಿದು ಇರಬಲ್ಲಡೆ ಆತ ಭಕ್ತ. ಆ ಭಕ್ತಂಗೆ ಶಿವನೊಲಿವ. ನುಡಿಯಲ್ಲಿ ಭಕ್ತಿಯನಾಡಿ ನಡೆಯಿಲ್ಲದಿದ್ದರೆ, ಕಡೆಮುಟ್ಟ ಶಿವನೊಲಿವುದು ಹುಸಿ. ಮಱೆದು ಕೋಪದುರಿಯನುಗುಳಿ, ಅಱಿದು ಬಂದೆಱಗಿದೆನೆಂಬ ನುಡಿಗೆ ಒಲಿವನೆ ನಮ್ಮ ಗೊಹೇಶ್ವರಲಿಂಗವು?

978

ಕೋಪತಾಪವೆಂಬುದು ಅಱಿವಿನೊಳಗೆ. ಭಕ್ತಿಯುಕ್ತಿಯೆಂಬುದು ನಿತ್ಯ ದೊಳಗೆ. ಭಾವದ ಬಗೆಗೆ ಬಣ್ಣವಿಟ್ಟುಕೊಂಡರೆ, ನಿರ್ಭಾವಿಕಂಗೆ ಅದು ಸಹ ಜವೆ? ಬಂದ ಶರಣರ ನಿಲವನಱಿದು, ಸಂದು ಸಂಶಯವಳಿದು ನಂಬದಿದ್ದರೆ ಹಿಂದುಮುಂದಾಗಿ ಹೋಹನು, ಕಾಣಾ, ನಮ್ಮ ಗೊಹೇಶ್ವರಲಿಂಗವು.

979

ಅಂಗದಲಪ್ಪಿದೆನೆಂದರೆ ಸಿಲುಕದು, ಪ್ರಾಣದಲಪ್ಪಿದೆನೆಂದರೆ ಸಿಲುಕದು. ಭಾವದಲಪ್ಪಿದೆನೆಂದರೆ ಸಿಲುಕದು. ಸೂಕ್ಷ್ಮತನುವಿನ ಮನದ ಕೊನೆಯ ಮೇಲೆ ಅಪ್ಪಿದೆನೆಂದರೆ ಸಿಲುಕದು. ಭಾವಾತೀತವಾದ ನಿರಾಕಾರದ ಘನವು ಸುಜ್ಞಾ ನದ ಮುಖಕ್ಕೆ ಅಸಾಧ್ಯ ನೋಡಾ! ಗೊಹೇಶ್ವರನ ಶರಣರ ನೀನಾವ ಪರಿಯಲ್ಲಿ ತಡೆದು ನಿಲಿಸುವೆ ಹೇಳಾ, ಸಿದ್ಧರಾಮಯ್ಯ.

980

ಗತಿಗೆಟ್ಟು, ಧೃತಿಗೆಟ್ಟು, ಮತಿಗೆಟ್ಟ ಸಿದ್ಧರಾಮಯ್ಯ. ನಡೆವಶಕ್ತಿಯಿಲ್ಲ.

ನುಡಿವರೆ ಜಿಹ್ವೆಯಿಲ್ಲ. ಇದಿರಲೊಬ್ಬರ ಉಪಚಾರ ಸೇರದು ನೋಡಾ ಎಮಗೆ. ಬಂದ ಬರವನಱಿದು, ನಿಂದ ನಿಲವನಱಿದು ಕೂಡ ಬಲ್ಲಡೆ ಶರಣಂಗೆ ಬೇಱೊಂದೇಕಾಂತವೆಂಬ ಸಂದೇಹ ಉಂಟೆ? ತೆಱಹಿಲ್ಲದ ಘನವನೊಳಕೊಂಡ ಬಳಿಕ ಬರಲೆಡೆಯುಂಟೇ ನಮ್ಮ ಗೊಹೇಶ್ವರಲಿಂಗಕ್ಕೆ.

981

ಭಕ್ತನಿದ್ದ ಠಾವಿಂಗೆ ಕರ್ತ ಬಂದರೆ, ಅತ್ತಿತ್ತ ಹರಿಯದೆ ನಂಬಬೇಕು ನೋಡಾ! ಕರ್ತನ ಕಂಡು ಭೃತ್ಯನುರಿಯನುಗುಳಿದರೆ ಬಳಿಕಲೀ ಕರ್ತೃತನ ಭೃತ್ಯಭಾವಕ್ಕೆ ಸಂಬಂಧವೇನು? ತಪ್ಪಿ ತಪ್ಪಿ ತಿದ್ದಿಕೊಂಡಹೆನೆಂದರೆ ಹಸನಾಗ ಬಲ್ಲುದೆ? ಗೊಹೇಶ್ವರಲಿಂಗದ ಶರಣನಾರೆಂಬುದ ನೀನೆತ್ತ ಬಲ್ಲೆ? ಹೋಗಾ ಮರಳು ಸಿದ್ಧರಾಮಾ!

982

ಹೊಱಗಾಡಿ ಬಂದನೆಂದು ನುಡಿಸಲೊಲ್ಲದೆ ಸುಮ್ಮನಿದ್ದೆನು. ಎನ್ನ ಮನ ನೊಂದು ತಾಗಿದರೆ ನಿಮ್ಮತ್ತ ಮುಂದಾದೆನು. ಬಿಕ್ಕುತ್ತ ಬೆದಱುತ್ತ ಕಾಲ ಮೇಲೆ ಬಿದ್ದರೆ, ಕಂಗಳ ಉದಕ ಮಜ್ಜನಕ್ಕೆಱೆದಂತಾಯಿತ್ತು. ಅಂತಿರ್ದರೆ ಕಂಡು ನೆಗಹಿದನು ನಮ್ಮ ಗೊಹೇಶ್ವರಲಿಂಗವು.

983

ನಿಮ್ಮಲ್ಲಿ ಸನ್ನಹಿತನಾಗಿ, ನಿಜವನಱಿತು ಬೆಱಸಿದ ಶಿವಯೋಗಿಯ ಕಂಡರೆ ಎನ್ನ ಮನವಗಲಲಾಱದಯ್ಯ. ಎನ್ನ ತನುವಪ್ಪದಿರಲಾಱದಯ್ಯ. ಎನ್ನ ಶಬುದ ಹೊಗಳಿದಲ್ಲದೆ ಸೈರಿಸದಯ್ಯ. ಗೊಹೇಶ್ವರ, ನಿಮ್ಮ ಶರಣ ಶಿವಯೋಗಿ ಸಿದ್ಧರಾಮಯ್ಯನನಪ್ಪಿ ಸೊಪ್ಪಳಿದು ನಮೋ ನಮೋ ಎನುತಿರ್ದೆನು.

984

ಕಾಯದೊಳಗೆ ಕರಣವಿಲ್ಲ, ಪ್ರಾಣದೊಳಗೆ ಭಾವವಿಲ್ಲ, ಭಾವದೊಳಗೆ ಭ್ರಮೆಯಿಲ್ಲ, ನವನಾಳದೊಳಗೆ ಸುಳಿಹು ಮುನ್ನಿಲ್ಲ. ಬ್ರಹ್ಮರಂಧ್ರದಲ್ಲಿ ಅಱಿವಱಿತ ಶಿವಯೋಗಿ ಗೊಹೇಶ್ವರನ ಶರಣ ಸಿದ್ಧರಾಮಯ್ಯ, ನಿನ್ನ ಕಂಡೆನ್ನ ಭವಂ ನಾಸ್ತಿಯಾಯಿತ್ತು ಕೇಳಾ!

985

ಯೋಗ ಶಿವಯೋಗವೆಂದೆಂಬರು, ಯೋಗದ ಹೊಲಬನಾರು ಬಲ್ಲರಯ್ಯ? ಹೃದಯಕಮಲದ ಪತ್ರದಲ್ಲಿ ಭ್ರಮಿಸುವನ ಕಳೆದಲ್ಲದೆ ಯೋಗವೆಂತಪ್ಪುದೋ? ಐವತ್ತೆರಡಕ್ಷರದ ಲಿಪಿಯ ನೋಡಿ ನೋಡಿ, ಆಱು ನೆಲೆಯ ಮೇಲಿಪ್ಪ ಮಣಿಮಾಡದೊಳಗೆ ಇರಬಲ್ಲಡೆ, ಅದು ಯೋಗ. ಸೋಹಂ ಎಂಬಲ್ಲಿ ಸುಳುಹಡಗಿ

ಮನ ನಷ್ಟವಾಗಿರಬಲ್ಲ ಕಾರಣ, ಗೊಹೇಶ್ವರಲಿಂಗದಲ್ಲಿ ನೀನು ಸ್ವತಂತ್ರಧೀರನೆಂಬುದು ಕಾಣ ಬಂದಿತ್ತು ಕಾಣಾ, ಸಿದ್ಧರಾಮಯ್ಯ.

986

ಮನ ಮನ ಬೆರಸಿದವರೆಂತಿರ್ಪರೆಂತಿರ್ಪರವರ ಪರಿಯನಱಿಯಬಾರದು ಕೇಳಾ. ಇದಿರಿಂಗೆ ಇಚ್ಛೆಯನಱಿಯದಿಪ್ಪರು, ಒಳಗೆ ನೋಡಿದರೆ ಬಟ್ಟಬಯಲಲ್ಲಿಪ್ಪರು! ಗೊಹೇಶ್ವರನ ಶರಣರು ತಾನಿಲ್ಲದ ಮಹಿಮರೆಂಬುದ ನಿನ್ನಿಂದಱಿದೆ ನೋಡಾ, ಸಿದ್ಧರಾಮಯ್ಯ.

987

ಸ್ವತಂತ್ರ ಪರತಂತ್ರಕ್ಕೆ ಆವುದು ಚಿಹ್ನ ನೋಡಾ! ತಾನೆಂಬುದಳಿದು, ಇದಿರೆಂಬುದ ಮಱೆದು, ಭಾವದಗ್ಧವಾಗಿರಬಲ್ಲಡೆ ಅದು ಸ್ವತಂತ್ರ! ನೀನೆಂಬುದ ಧಿಃಕರಿಸಿ, ತಾನೆಂಬುದ ನಿಃಕರಿಸಿ ಉಭಯಭಾವದಲ್ಲಿ ಸನ್ನಿಹಿತವಾಗಿರಬಲ್ಲಡೆ ಪರತಂತ್ರ! ಸ್ವತಂತ್ರ ಪರತಂತ್ರವೆಂಬೆರಡನೂ ವಿವರಿಸದೆ ತನ್ನ ಮಱೆದಿಪ್ಪನೆ ಉಪಮಾತೀತನು! ಗೊಹೇಶ್ವರನ ಶರಣರು ದೇಹವಿಲ್ಲದ ನಿರ್ದೇಹಿಗಳೆಂಬುದು ಇಂದೆನಗೆ ಕಾಣಬಂದಿತ್ತು ನೋಡಾ, ಸಿದ್ಧರಾಮಯ್ಯ.

988

ಆಹುದಹುದು ಭಕ್ತಿಭಾವದ ಭಜನೆ ಎಂತೆಂತಹುದೆ? ಅಂತರಂಗದ ಅಱಿವಿಂಗೆ ಆಚಾರವೇ ಕಾಯ. ಆಚಾರಕಾಯವಿಲ್ಲದಡೆ ಅಱಿವಿಂಗೆ ಆಶ್ರಯವಿಲ್ಲ. ಅಱಿವು ಆಚಾರದಲ್ಲಿ ಸಮವೇಧಿಸಿದ ಲಿಂಗೈಕ್ಯನ ಕ್ರಿಯಾಬದ್ಧನೆಂದು ನುಡಿದರೆ ಪಂಚಮಹಾಪಾತಕ. ನಿನ್ನ ಅಱಿವಿಂಗೆ ಆಚಾರವಾಗಿ, ಆಚಾರಕ್ಕೆ ಆಳಾಗಿ ನಮ್ಮ ಗೊಹೇಶ್ವರನು ನಿನ್ನ ಕೈವಶಕ್ಕೆ ಒಳಗಾದನು. ನಿನ್ನ ಸುಖಸಮಾಧಿಯ ತೋರು ಬಾರಾ, ಸಿದ್ಧರಾಮಯ್ಯ.

989

ತನ್ನನಱಿಯೆನೆಂಬುದು ಅಜ್ಞಾನ ನೋಡಾ. ಅಱಿಯದ ಅಜ್ಞಾನವ ನತಿಗಳೆದು, ಜ್ಞಾನವ ಕಾಣೆನೆಂಬುದು ವಿಪರೀತಭಾವ ನೋಡಾ. ಎಲ್ಲವನು ತೋಱುವ ಘನವನೆಲ್ಲಿಯೂ ಕಾಣಬಾರದು. ಕಾಣಬಾರದ ನಿಜವ ತೋಱಬಾರದು. ತೋಱಬಾರದ ಮಹವ ತಿಳಿಯಬಹುದೆ? ಗೊಹೇಶ್ವರಲಿಂಗದಲ್ಲಿ ಬಯಕೆಯುಳ್ಳನ್ನಕ್ಕರ ತವಕವೆಡೆಗೊಂಡಿಪ್ಪ ಕಾರಣ, ತಿಳುಹಲಿಲ್ಲವೆಂಬುದ ನಿನ್ನ ನೀ ತಿಳಿದು ನೋಡಾ, ಸಿದ್ಧರಾಮಯ್ಯ.

990

ಬಯಕೆ ಎಂಬುದು ದೂರದ ಕೂಟ. ಬಯಸೆನೆಂಬುದು ಕೂಟದ ಸಂದು. ಈ ಉಭಯವು ಕಪಟದ ಕನ್ನ(=ಣ್ಣ ?)ಡವಲ್ಲದೆ ಸಹಜವಲ್ಲ. ಕೂಡಿ

ಕಂಡ ಪರಿಯೆಂತು ಹೇಳಾ ಇನ್ನು ಲಿಂಗೈಕ್ಯವನು ? ಕೂಪರ ತಾವಿನಲ್ಲಿ ಪರವಶ ವಾದೆನೆಂಬ ಮಾತ ಮೆಚ್ಚುವನೆ ನಮ್ಮ ಗೊಹೇಶ್ವರಲಿಂಗವು ?

991

ಬಯಸುವ ಬಯಕೆ ನೀನಾದ ಪರಿಯೆಂತು ಹೇಳಾ ? ಅಱಿಸುವ ಅಱಿಕೆ ನೀನಾದ ಪರಿಯೆಂತು ಹೇಳಾ? ಕಾಯವೆ ಲಿಂಗ, ಪ್ರಾಣವೆ ಶರಣನಾದ ಶರಣಂಗೆ ಬೇಱೆ ದೇವಾಲಯವ ಮಾಡಿಸಲೇಕೆ ಹೇಳಾ ? ಗೊಹೇಶ್ವರಲಿಂಗವು ಸಾಧ್ಯವಾಯಿತ್ತೆಂಬುದ ಮಾತಿನಲ್ಲಿ ಕಂಡೆವಲ್ಲದೆ ಕಾರ್ಯದಲ್ಲಿ ಕಾಣೆ ನೋಡಾ ಸಿದ್ಧರಾಮಯ್ಯ.

992

ಕಡೆನಾಡ ಲಿಂಗವ ನಡುನಾಡಿಗೆ ತಂದೆನೆಂಬ ಅಹಂಕಾರವ ಮುಂದು ಗೊಂಡಿದ್ದೆಯಲ್ಲಾ! ಎಂಬತ್ತುನಾಲ್ಕುಲಕ್ಷ ಶಿವಾಲಯಂಗಳೆಂಬ ಬಯಲಭ್ರಮೆ ಯಿದೆಲ್ಲಿಯದು ಹೇಳಾ? ಮಹಾಘನಲಿಂಗಕ್ಕೆ ಜಗದ ಜೀವರಾಶಿಗಳು ಶಿವಾ-ಲಯವಾಗಬಲ್ಲರೆ ? ನಿನ್ನ ಲಕ್ಷದ ಮೇಲೆ ತೊಂಬತ್ತಾಱು ಸಾವಿರ ಲಿಂಗವ ನಿನ್ನ ಎದೆಯಲ್ಲಿ ಇಱಿದುಕೊಳ್ಳಾ ! ಗೊಹೇಶ್ವರಲಿಂಗವು ನಿನ್ನ ತಪ್ಪಿಸಿ ಹೋದುದ ಮಱೆದೆಯಲ್ಲಾ, ಸಿದ್ಧರಾಮಯ್ಯ.

993

ತೋಱಬಾರದ ಘನವ ಹೇಳಲೆಂದೇನಯ್ಯ? ಹೇಳಬಾರದ ಘನವ ತೋಱಲೆಂದೇನಯ್ಯ ? ಶರಸಂಧಾನದ ಪರಿಯಲ್ಲ ನೋಡಾ. ಗೊಹೇಶ್ವರ ಲಿಂಗವು ಕಲ್ಪಿತವಲ್ಲ ನೋಡಯ್ಯ.

994

ಅಭ್ಯಾಸದ ಮಾತಲ್ಲ, ಶ್ರೋತ್ರದ ಸುಖವಲ್ಲ, ಶಾಸ್ತ್ರದ ಅನುಭಾವದ ಮಾತಲ್ಲ, ಒಳಗಣ ಮಾತಲ್ಲ, ಹೊಱಗಣ ಮಾತಲ್ಲ. ಇದಱಂಗವನಱಿಯದೆ ಅನುಭಾವವ ಮಾಡಿ ಫಲವೇನಯ್ಯ ? ಗೊಹೇಶ್ವರಲಿಂಗವು ಉಪಮಾತೀತ ನೋಡಾ, ಸಿದ್ಧರಾಮಯ್ಯ.

995

ಕಾಯದ ಕಳವಳ ಕಾಣೆನೆಂದಲ್ಲಿ ಹೋಯಿತ್ತು. ಜೀವದ ದುಷ್ಕೃತ ದೂರವೆಂದಲ್ಲಿ ತಪ್ಪಿತ್ತು. ಕಾಯ ಜೀವವೆಂಬ ಸೂತಕ ಮನ ನಿರ್ಮಲವಾದ ಲ್ಲಿಯೆ ಅಳಿಯಿತ್ತು. ಗೊಹೇಶ್ವರನೆಂಬ ಲಿಂಗವನಱಿಯಬೇಕಾದರೆ ನಿನ್ನೊಳಗೆ ತಿಳಿದು ನೋಡಾ, ಸಿದ್ಧರಾಮಯ್ಯ.

996

ಮನವ ತೊಳೆದು ನಿರ್ಮಲವ ಮಾಡಿಹೆನೆಂಬ ಯೋಗವೆಂತುಟೋ ?

ಮನವ ಹಿಡಿದು ತಡೆದಿಹೆನೆಂಬವರ ಮರುಳಾಗಿ ಕಾಡಿತ್ತು ನೋಡಾ ಮನವು! ಮನವಿಕಲ್ಪಜ್ಞಾನದಿಂದಱಿದು ಅದ ಶುದ್ಧವ ಮಾಡಿಹೆನೆಂಬುದು ತಾನೆ ಮನ ನೋಡಾ! ನಮ್ಮ ಗೊಹೇಶ್ವರಲಿಂಗದ ಅನುವನಱಿದಿಹೆನೆಂಬವರು ಮನವಿಲ್ಲದಿರಬೇಕು ನೋಡಾ, ಸಿದ್ಧರಾಮಯ್ಯ.

997

ವಿಚಾರವೆಂಬುದು ಸಂದೇಹಕ್ಕೊಳಗು ನೋಡಾ. ವಿಚಾರಿಸುವನ್ನಕ್ಕರ ನೀ ನಾನೆಂಬುದನೆತ್ತ ಬಲ್ಲೆ? ಮರುಳೆ, ವಾಙ್ಮನೋತೀತವಾದ ಘನವು ವಿಚಾರಕ್ಕೆ ನಿಲುಕುವುದೇ? ಗೊಹೇಶ್ವರಲಿಂಗವು ತನ್ನ ತಿಳಿದು ನೋಡಿಹೆನೆಂಬವರ ವಿಚಾರವೆಂಬ ಬಲೆಯಲ್ಲಿ ಕೆಡಹಿದನು.

998

ಯೋಗ ವಿಯೋಗವೆಂಬ ಹೊಲಬ ಬಲ್ಲವರನಾರನು ಕಾಣೆನು. ನವನಾಳದ ಸುಳುಹ ತಿಳಿದಹೆನೆಂಬುದು ಯೋಗವಲ್ಲ. ಐವತ್ತೆರಡಕ್ಷರದ ಶಾಸನವ ತಿಳಿದು ನೋಡಿ ಹೃದಯಕಮಲಕರ್ಣಿಕೆಯಲ್ಲಿ ಸಿಕ್ಕಿದೆನೆಂಬುದು ಯೋಗವಲ್ಲ. ಬಹಿರಂಗವೆಂಬರೆ ಕ್ರಿಯಾರಹಿತ, ಅಂತರಂಗವೆಂಬರೆ ವಾಙ್ಮನೋತೀತ. ಗೊಹೇಶ್ವರನೆಂಬ ಲಿಂಗವು ಷಡುಚಕ್ರದ ಮೇಲಿಲ್ಲ ಕಾಣಾ, ಸಿದ್ಧರಾಮಯ್ಯ.

999

ಸ್ವಸ್ಥಪದ್ಮಾಸನದಲ್ಲಿ ಕುಳ್ಳಿರ್ದು, ನಿಟ್ಟೆಲುವ ಮುಱಿದು, ನಿಷ್ಠೆಯಿಂದ ಹಿಂದಣ ಬಟ್ಟೆಯ ತೆಗೆದು ಅಮೃತವನುಂಡಿಹೆನೆಂಬವರ ಕೇಡಿಂಗೆ ಕಡೆಯಿಲ್ಲ. ಅತ್ಯತಿಷ್ಠದ್ದಶಾಂಗುಲವೆಂಬ ಶ್ರುತಿಯ ನೋಡಲು, ಮುಟ್ಟ ನೆಲೆಗೊಳಿಸುವ ಠಾವುಂಟೆ? ಸ್ಥಾನಮಾನವೆಂಬ ಮಾತಿಂಗೆ ದೂರವಾದ ಘನವ ಬ್ರಹ್ಮರಂಧ್ರದಲ್ಲಿ ಕಂಡೆನೆಂದರೆ ಕಾಣಬಹುದೆ? ನಮ್ಮ ಗೊಹೇಶ್ವರಲಿಂಗವು ಕಲ್ಪಿತಕ್ಕೆ ದೂರ ಕೇಳಾ, ಸಿದ್ಧರಾಮಯ್ಯ.

1000

ಅಱಿವನಱಿದು, ಮಱಹ ಮಱೆದು, ಸಂಶಯವಳಿದು ನಿಲವನಱಿದ ಪರಿಯೆಂತು ಹೇಳಾ? ಅಱಿದೆನೆಂದರೆ ಜ್ಞಾನಕ್ಕೆ ದೂರ. ಮಱೆದೆನೆಂದರೆ ಮನಕ್ಕೆ ದೂರ, ಅಱಿದು ಮಱೆದೆನೆಂದರೆ ಉಪಮೆಗೆ ದೂರ. ನಿರ್ಭಾವದ ಹೊಲಿಗೆಯಲ್ಲಿ ಭಾವಸಂಕಲ್ಪ ಬಿಡದು. ನಮ್ಮ ಗೊಹೇಶ್ವರಲಿಂಗದಲ್ಲಿ ಮನ-ಮಗ್ನಯೋಗ ನಿನಗೆಂತು ಸಾಧ್ಯವಾಯಿತ್ತು ಹೇಳಾ, ಸಿದ್ಧರಾಮಯ್ಯ.

1001

ಮನ ಉಂಟೆ, ಮರುಳೆ, ಶಿವಯೋಗಿಗೆ? ಮತ್ತೊಮ್ಮೆ ಮನಮಗ್ನ ಉಂಟೆ ಶಿವಯೋಗಿಗೆ? ಇಲ್ಲದ ಮನವನುಂಟೆಂದು ನುಡಿದು, ಅಡಗಿಸಿದೆನೆಂಬ

ಮಾತು ಮನವ ನೆಲೆಮಾಡಿ ತೋಱುತ್ತದೆ. ಗೊಹೇಶ್ವರನನಱಿದ ಶರಣಂಗೆ ತೋಱಲಿಲ್ಲ ಅಡಗಲಿಲ್ಲ ಕೇಳಾ.

1002

ಮನಮುಗ್ನವೆಂತಿರ್ಪುದು ಅಂತೆ ಇರಬೇಕಲ್ಲದೆ ಮತ್ತೊಂದು ಮನವೆಂಬು ದುಂಟೆ ಹೇಳಾ? ಅಱಿದು ಮಱೆದುದ ಅಱಿದು ನುಡಿದು, ಮಱೆದೆನೆಂಬ ಜ್ಞಾನ ಉಂಟೆ? ಗೊಹೇಶ್ವರಲಿಂಗವು, ನೆಱೆಯಱಿದೆನೆಂಬಲ್ಲಿ, ಮನವ ಮಱೆಮಾಡಿ ಕಾಡುವನು.

1003

ತೆಱಹಿಲ್ಲದ ಘನವ ಮನ ಒಳಕೊಂಡು, ತಲೆಯಿಲ್ಲದ ಮನವ ಘನ ಒಳಕೊಂಡು, ತನಗೆ ತಾ ತರಹರವಾದ ಬಳಿಕ, ಮರಳಿ ಇನ್ನು ಇಂಬುಗೊಡ ಲುಂಟೆ? ಗೊಹೇಶ್ವರನ ಲೀಲೆ ಮಾಬನ್ನಕ್ಕರ ಉರಿಯೊಳಗಣ ಕರ್ಪುರದಂತಿರ ಬೇಕು ಕಾಣಾ, ಸಿದ್ಧರಾಮಯ್ಯ.

1004

ನಿರ್ವಿಕಲ್ಪಿತದ ಅದ್ವೈತವ ನೋಡಿರೇ! ಬೆಳಗಿನೊಳಗಣ ಬೆಳಗು ಅಡ ಗಿತ್ತು ನೋಡಿರೇ! ಚಂದ್ರಸೂರ್ಯರು ಭೂಲೋಕದೊಳಂದಾರುವ ಕಾಣೆ. ಜ್ಯೋತಿಯಿಲ್ಲದ ಬೆಳಗಿನ ಪ್ರಭೆಯೋ! ಗೊಹೇಶ್ವರಲಿಂಗದಲ್ಲಿ ಸಿದ್ಧರಾಮಯ್ಯ ದೇವರ ಮಹಾಘನವನೇನೆಂಬೇನು.

1005

ಅನಾದಿಗಣನಾಥನ ಶಿಷ್ಯನು ಆದಿಗಣನಾಥನು. ಆದಿಗಣನಾಥನ ಶಿಷ್ಯನು ಅಧ್ಯಾತ್ಮಗಣನಾಥನು. ಅಧ್ಯಾತ್ಮ ಗಣನಾಥನ ಶಿಷ್ಯನು ಆತ್ಮ ಗಣನಾಥನು. ಆತ್ಮಗಣನಾಥನ ಶಿಷ್ಯನು ವ್ಯೋಮಸಿದ್ಧಗಣನಾಥನು. ವ್ಯೋಮ ಸಿದ್ಧಗಣನಾಥನ ಶಿಷ್ಯನು ಬಸವನೆಂಬ ಗಣನಾಥನು, ಬಸವನೆಂಬ ಗಣನಾಥನ ಶಿಷ್ಯನು ಅನಿಮಿಷನೆಂಬ ಗಣನಾಥನು, ಅನಿಮಿಷನೆಂಬ ಗಣನಾಥನ ಶಿಷ್ಯನು ಅಲ್ಲಮಪ್ರಭುವೆಂಬ ಗಣನಾಥನು. ಇಂತು ಅನಾದಿವಿಡಿದು ಬಂದ ಅನುಪಮ ಲಿಂಗವು ಗೊಹೇಶ್ವರನೆಂಬ ಹೆಸರನೊಳಕೊಂಡು ಎನ್ನ ಕರಸ್ಥಲಕ್ಕೆ ಸಾಧ್ಯ ವಾಯಿತ್ತು ಕಾಣಾ, ಸಿದ್ಧರಾಮಯ್ಯ.

1006

ಆಯತಲಿಂಗವಿಡಿದು ಸ್ವಾಯತಲಿಂಗವ ಕಾಣಬೇಕು, ಸಿದ್ಧರಾಮಯ್ಯ. ಸ್ವಾಯತಲಿಂಗವಿಡಿದು ಜಂಗಮಲಿಂಗವ ಕಾಣಬೇಕು, ಸಿದ್ಧರಾಮಯ್ಯ. ಜಂಗಮಲಿಂಗವಿಡಿದು ಗುರುಲಿಂಗವ ಕಾಣಬೇಕು, ಸಿದ್ಧರಾಮಯ್ಯ. ಗುರು–ಲಿಂಗವಿಡಿದು ಶಿವಲಿಂಗವ ಕಾಣಬೇಕು, ಸಿದ್ಧರಾಮಯ್ಯ. ಶಿವಲಿಂಗವಿಡಿದು

ಪ್ರಸಾದಲಿಂಗವನಱಿಯಬೇಕು, ಸಿದ್ಧರಾಮಯ್ಯ. ಇಂತು ಷಡುಸ್ಥಲದಂತುವ ಸಂಧಿಸಿ ಒಂದು ಮಾಡಿಕೊಂಡಿಪ್ಪ ಕರಸ್ಥಲದನುವನು ಗೊಹೇಶ್ವರನ ಶರಣ ಸಂಗನ ಬಸವಣ್ಣ ಬಲ್ಲ, ಬೆಸಗೊಂಬ ಬಾರಾ, ಸಿದ್ಧರಾಮಯ್ಯ.

1007

*ಮರ್ತ್ಯಲೋಕದ ಮಹಾಮನೆ ಹಾಳಾಗಿ ಹೋಗಬಾರದೆಂದು ಕರ್ತ ನಟ್ಟಿದನಯ್ಯ ಒಬ್ಬ ಶಿವಶರಣನ. ಆ ಶರಣ ಬಂದು, ಕಲ್ಯಾಣವೆಂಬ ಶಿವಪುರವ ಕೈಲಾಸವ ಮಾಡಿ, ರುದ್ರಗಣ ಪ್ರಮಥಗಣಂಗಳೆಲ್ಲರ ಹಿಡಿತಂದು ಅಸಂಖ್ಯಾತ ರೆಂದು ಹೆಸರಿಟ್ಟು, ಕರೆದು, ಭಕ್ತಿಯ ಕುಳಸ್ಥಳವ, ಪ್ರತ್ಯಕ್ಷದೃಷ್ಟವಾಡವಂ ಮೆಱೆದು, ತೋಱಿ ಜಗವಱಿಯೆ ಶಿವಾಚಾರದ ಧ್ವಜವನೆತ್ತಿಸಿ ಮರ್ತ್ಯಲೋಕ ಶಿವಲೋಕವೆರಡಕ್ಕೆ ನಿಚ್ಚಣಿಗೆಯಾದನು. ಶಿವಶರಣನ ಮನೆಯೊಳಗಿಪ್ಪ ಶಿವಗಣಂಗಳ ತಿಂಥಿಣಿಯ ಕಂಡು, ಎನ್ನ ಮನ ಉಬ್ಬಿ ಕೊಬ್ಬಿ ಓಲಾಡುತ್ತಿರ್ದೆ ನಯ್ಯ. ನಮ್ಮ ಗೊಹೇಶ್ವರನ ಶರಣ ಸಂಗನ ಬಸವಣ್ಣನ ದಾಸೋಹದ ಘನವನೇನೆಂದೆನಬಹುದು ನೋಡಾ, ಸಿದ್ಧರಾಮಯ್ಯ.

1008

ಆದಿಯ ಲಿಂಗವ ಮೇದಿನಿಗೆ ತಂದು ಮರ್ತ್ಯಲೋಕದಲ್ಲಿ ಮಹಾಮನೆಯ ಕಟ್ಟಿದನಯ್ಯ ಸಂಗನ ಬಸವಣ್ಣನು. ಆ ಮನೆಯ ನೋಡಲೆಂದು ಹೋದರೆ ಆ ಗೃಹ ಹೊಗದ ಮುನ್ನವೆ ಎನ್ನ ನುಂಗಿತ್ತಯ್ಯ! ಅದಕ್ಕೆ ಕಂಭವೊಂದು, ತೊಲೆಯಾಱು, ಜಂತೆವಲಗೆ ಮುವ್ವತ್ತಾಱು, ಧರೆಯಾಕಾಶ ಹೊದ್ದದ ಕೆಸಱುಗಲ್ಲು. ಒಂಬತ್ತು ಬಾಗಿಲ ಬಿಯ್ಯಗವಿಕ್ಕಿಹವು. ಬೇಱೊಂದು ಬಾಗಿಲು ಉರಿಯನುಗುಳುತ್ತಿರ್ಪುದು. ಮುತ್ತಿನ ಕಂಭದ ಮೇಲುಕಟ್ಟಿನ ಮೇಲೆ ಮಾಣಿಕ್ಯದ ಶಿಖರಿ. ಆ ಶಿಖರಿಯ ತುದಿಯಲ್ಲಿ ಬಿಳಿಯ ಹೊಂಗಳಶವಿಪ್ಪುದು. ಅದು ಕಾಬವರಿಗೆ ಕಾಣಬಾರದು, ಕಾಣಬಾರದವರಿಗೆ ಕಾಣಬಪ್ಪುದು. ಅಲ್ಲಿ ಹತ್ತು ಮಂದಿ ಪರಿಚಾರಕರು ಎಡೆಯಾಡುತ್ತಿರ್ಪರು. ಇಬ್ಬರು ದಡಿಕಾಱರು ಬಾಗಿಲ ಕಾಯ್ದಿಪ್ಪರು. ಒಬ್ಬಾಕೆ ಎಡೆಯಾಡುತ್ತಿರ್ಪಳು. ಒಬ್ಬಾಕೆ ಲಿಂಗಾರ್ಚ ನೆಗೆ ನೀಡುತ್ತಿಪ್ಪಳು. ಒಬ್ಬಾಕೆ ಸಯಿಧಾನಂಗಳೆಲ್ಲವನು ಶೋಧಿಸಿ, ತಂದು ಕೊಡುತ್ತಿರ್ಪಳು. ಒಬ್ಬಾಕೆ ಉರಿಯಿಲ್ಲವಗ್ನಿಯಲ್ಲಿ ಪಾಕವ ಮಾಡುತ್ತಿರ್ಪಳು. ಒಬ್ಬಾಕೆ ಲಿಂಗಜಂಗಮಕ್ಕೆ ನೀಡಿ ಮಾಡಿ ಉಣಿಸಿ ತೃಪ್ತಿಯ ಮಾಡುತ್ತಿರ್ಪಳು ಒಂದಡ್ಡಣಿಗೆಯ ಮೇಲೆ ಐದು ಅಗಲೊಳಗೆ ಇಟ್ಟ ಬೋನವನೊಬ್ಬನುಂಡರೆ

---

*ಅಲ್ಲಮಪ್ರಭು ಸಿದ್ಧರಾಮನನ್ನು ಒಡಗೊಂಡು ಕಲ್ಯಾಣಕ್ಕೆ ಬಂದು ಬಸವಣ್ಣ ನವನನ್ನು ಸಂದರ್ಶಿಸಿದ ಸನ್ನಿವೇಶದ ವಚನಗಳು 1007 ರಿಂದ 1027 ರವರಿಗೆ.

ಪ್ರಮಥಗಣಂಗಳೆಲ್ಲರು ಆತನ ಒಕ್ಕುದ ಕೊಳಲೆಂದು ಬಂದು, ಆ ಮನೆಯ ಹೊಕ್ಕು ನಿಶ್ಚಿಂತ ನಿವಾಸಿಗಳಾದರು. ಗೊಹೇಶ್ವರನ ಶರಣ ಸಂಗನ ಬಸವಣ್ಣನ ಮಹಾಮನೆಯ ಕಂಡು ಧನ್ಯನಾದೆನು ಕಾಣಾ, ಸಿದ್ಧರಾಮಯ್ಯ.

1009

ಭಕ್ತಜಂಗಮದ ಸಕೀಲಸಂಬಂಧವನಾರು ಬಲ್ಲರು ಹೇಳಾ ? ಅರ್ಥವ ನೊಪ್ಪಿಸಿದಾತ ಭಕ್ತನಲ್ಲ. ಪ್ರಾಣವನೊಪ್ಪಿಸಿದಾತ ಭಕ್ತನಲ್ಲ. ಅಭಿಮಾನವ ನೊಪ್ಪಿಸಿದಾತ ಭಕ್ತನಲ್ಲ. ಅದೇನು ಕಾರಣವೆಂದರೆ ಸತ್ಯ ಸದಾಚಾರಕ್ಕೆ ಸಲ್ಲನಾಗಿ. ಆ ಭಕ್ತನ ಮನೆಯ ಹೊಕ್ಕು ಪಾದಾರ್ಚನೆಯ ಮಾಡಿಸಿ ಕೊಂಡು ಒಡಲ ಕಕ್ಕುಲತೆಗೆ ಅಶನವನುಂಡು, ವ್ಯಸನದ ಕುಕ್ಕುಲಿತೆಗೆ ಹಣವ ಬೇಡಿ, ಕೊಟ್ಟಡೆ ಕೊಂಡಾಡಿ, ಕೊಡದಿರ್ದರೆ ದೂರಿಕೊಂಡು ಹೋಹಾತ ಜಂಗಮವಲ್ಲ. ಆದಿಯನಾದಿಯಿಂದತ್ತತ್ತ ಮುನ್ನಲಾದ ಮಹಾಘನವ ಭೇದಿಸಿ ಕಂಡಱಿದು ಕಾಯದ ಜೀವದ ಹೊಲಿಗೆಯ ಬಿಚ್ಚಿ ಬೀಸಾಡಿ ತನ್ನನೆ ಅರ್ಪಿಸಿ ಇರಬಲ್ಲಾತ ಭಕ್ತ. ಸುಳುಹಿನ ಸೂತಕ ವೈದೋಱದೆ, ಒಡಲ ಕಳವಳದ ರುಚಿಗೆ ಹಾರೈಸದೆ, ಅಱಿವೆ ಅಂಗವಾಗಿ, ಆಪ್ಯಾಯನವೆ ಭಕ್ತಿಯಾಗಿ, ಕಿಂಕು ರ್ವಾಣವೆಂಬ ಶಿವಮಂತ್ರಕ್ಕೆ ನಮೋ ನಮೋ ಎನಬಲ್ಲರೆ ಆತ ಜಂಗಮ. ಆ ಜಂಗಮದ, ಆ ಭಕ್ತನ ಸಮ್ಮೇಳವೆ ಸಮ್ಮೇಳ. ಮಿಕ್ಕಿನ ಅರೆಭಕ್ತರೊಡತಣ ಸಂಗ ನಮ್ಮ ಗೊಹೇಶ್ವರಲಿಂಗಕ್ಕೆ ಸೊಗಸದು.

1010

ನಿಮ್ಮಲ್ಲಿ ಭಕ್ತಿಯುಂಟು, ತಮ್ಮಲ್ಲಿ ಭಕ್ತಿಯುಂಟು, ಎಮ್ಮಲ್ಲಿ ಭಕ್ತಿ ಯುಂಟೆಂದರೆ ಶಿವಶರಣರು ಮೆಚ್ಚುವರೆ ? ಹೂಸಿ ಹುಂಡನೆ ಮಾಡಿ, ಬಾಯ ಸವಿಯ ನುಡಿವರೆಲ್ಲಾ ಭಕ್ತರಪ್ಪರೆ ? ಮಾತಿನ ಅದ್ವೈತವ ಕಲಿತು ಮರ– ಗೋಲ ಬಿಡುವರೆಲ್ಲಾ ಭಕ್ತರಪ್ಪರೆ ? ಬೆಳ್ಳಿಗೆಯಾಕಳವೆಂದರೆ ಬಳ್ಳನಾಲ ಕಱಿ ವವೇ ಮರುಳೆ ? ಸಂಗನ ಬಸವಣ್ಣನೆಂದರೆ ಮಾತಿನ ಮಾತಿಂಗೆಲ್ಲ ಭಕ್ತಿ ಯುಂಟೆ ? ಬಂದ ಜಂಗಮದ ಇಂಗಿತಾಕಾರವನಱಿತು, ಇದಿರೆದ್ದು ವಂದಿಸಿ ಕೈ ಮುಗಿದು ನಡುನಡುಗಿ ಕಿಂಕಲನಾಗಿ ಭಯಭೀತಿ ಭೃತ್ಯಾಚಾರವಾಗಿರ ಬಲ್ಲರೆ ಅದು ಭಕ್ತಿ, ಅದು ವರ್ಮ. ಬಂದವರಾರೆಂದಱಿಯದೆ ನಿಂದ ನಿಲವನಱಿಯದೆ ಕೆಮ್ಮನೆ ಅಹಂಕಾರವ ಹೊತ್ತುಕೊಂಡು ಇಪ್ಪವರಿಗೆ ನಮ್ಮ ಗೊಹೇಶ್ವರಲಿಂಗ ನೊಲ್ಲ ನೋಡಾ.

1011

ನೋಡಾ ಸಿದ್ಧರಾಮಯ್ಯ, ಆಗಳೆ ಭಕ್ತರಿಗೆ ಅಹಂಕಾರವಾಯಿತ್ತು, ಭೃತ್ಯನಿದ್ದೆಡೆಗೆ ಕರ್ತನೈತಂದರೆ ಅಬ್ಬಾಟಿಕೆಯಲ್ಲಿ ಇಂತು ಕರೆದವರುಂಟೆ ?

ಬಸವಣ್ಣನೊಳಗೆ ಇಂತು ಮಱವೆ ಹುಟ್ಟಿದ ಬಳಿಕ ಉಳಿದ ಶಿವಭಕ್ತರ ಪಾಡೇನು ಹೇಳಾ! ಗೊಹೇಶ್ವರಲಿಂಗವನು ಭಕ್ತಿರತಿಯಿಂದ ಮನಮುಟ್ಟಿ ಕರೆದರೆ ಹೋಹುದಲ್ಲದೆ ವ್ಯರ್ಥಕ್ಕೆ ಹೋಗಲಾರದು ನೋಡಯ್ಯ.

1012

ಲಿಂಗದೊಳಗೆ ಜಂಗಮ, ಜಂಗಮದೊಳಗೆ ಲಿಂಗವೆಂದಱಿದು ಮಱೆದು ಬಱುದೊಱೆವೋದವರು ಜಂಗಮವನಿನ್ನು ಬೆರಸಲೇತಕ್ಕಯ್ಯ? ಆ ಲಿಂಗದೊಳಗೆ ಜಂಗಮವನಱಿಸಿಕೊಂಬುದು. ಲಿಂಗಾರ್ಚನೆಯವಸರಕ್ಕೆ ಜಂಗಮ ಮನೆಗೆ ಬಂದರೆ, ಲಿಂಗಾರ್ಚನೆಯ ಮಾದು, ಜಂಗಮಕ್ಕೆ ಇದಿರೆದ್ದು ವಂದಿಸಿ ಭಕ್ತಿಯ ಮಾಡಬಲ್ಲಾತನೇ ಭಕ್ತ. ಆ ಜಂಗಮ ಹೊಱಗಿರಲು ಲಿಂಗಾರ್ಚನೆಯ ಮಾಡುತ್ತಿರ್ಪಾತನೇತಱ ಭಕ್ತ? ಜಂಗಮದ ಮುಂದೆ ಲಿಂಗವ ಕಯ್ಯಲ್ಲಿ ಹಿಡಿದುಕೊಂಡು ಸಹಪಂಕ್ತಿಯಲ್ಲಿ ಕುಳ್ಳಿರ್ದು ಪೂಜಿಸುವಾತ ಭೃತ್ಯಾಚಾರದ್ರೋಹನು. ಆ ಭಕ್ತನ ಮನೆಯ ಹೊಗುವ ಜಂಗಮವೆ ಅಜ್ಞಾನಿ. ನಮ್ಮ ಗೊಹೇಶ್ವರನ ಶರಣರ ಕೂಡೆ ಅಹಂಕಾರವ ಹೊತ್ತಿರ್ಪವರ ಕಂಡಡೆ ನಾನೊಲ್ಲೆ ಕಾಣಾ, ಸಂಗನ ಬಸವಣ್ಣ.

1013

ಜಂಗಮವೆ ಹೊಱಗಿರಲು ಲಿಂಗಾರ್ಚನೆಯಾವುದಯ್ಯ! ಪ್ರಾಣನ ಹೊಱಗಿರಿಸಿ ಎಡೆಯಾಡುವ ದೇಹವುಂಟೆ? ಶರಣರು ಬಂದು ಬಾಗಿಲಲ್ಲಿ ನಿಂದಿರಲು ತನ್ನ ತಾ ಮಱೆದವರ ಕಂಡಡೆ, ನಮ್ಮ ಗೊಹೇಶ್ವರಲಿಂಗ ಒಡೆಯ ಹಾಯ್ಕದೆ ಮಾಣ್ಬನೆ?

1014

ತನುವಿನಲ್ಲಿ ತನು ಸವೆಯದು, ಮನದಲ್ಲಿ ಮನ ಸವೆಯದು, ಧನದಲ್ಲಿ ಧನ ಸವೆಯದು. ಭಕ್ತಿಯುಕ್ತಿಯ ಮಾತು ನಿನಗೇಕೆ ಹೇಳಾ ಬಸವ? ಮಾಟಕೂಟವೆಂಬ ಕೀರ್ತಿಗೆ ಸಿಲುಕಿ ಜಂಗಮವೆ ಲಿಂಗವೆಂಬುದ ಮಱೆದೆಯಲ್ಲಾ ಬಸವ?! ಗೊಹೇಶ್ವರನ ಶರಣರಿಗೆ ತ್ರಿಕರಣವನೊಪ್ಪಿಸಿದಲ್ಲದೆ ಭಕ್ತನಾಗಬಾರದು ಕಾಣಾ, ಸಂಗನ ಬಸವಣ್ಣ.

1015

ಮೇರುಗಿರಿಗಳೆಲ್ಲವು ಪ್ರಮಥರೊಡವೆ. ರಜತಗಿರಿಗಳೆಲ್ಲವು ಪುರಾತರೊಡವೆ. ಚತುರ್ದಶಭುವನವೆಲ್ಲವು ಲಿಂಗದೊಡವೆ. ಪೃಥ್ವಿಯೆಂಬುದು ಕರ್ತಾರನ ಕಮ್ಮಟ, ಅಚ್ಚಿನ ಮೊಳೆ, ಬಾಣಸದ ಮನೆ. ತನುಮನಧನಂಗಳೆಲ್ಲವು ನಮ್ಮ ಗೊಹೇಶ್ವರಲಿಂಗದ ಸೊಮ್ಮು. ನೀನೇನ ಕೊಟ್ಟು ಭಕ್ತನಾದೆ ಹೇಳಾ ಬಸವಣ್ಣ?

1016

ತನುವರ್ಪಿತವೆಂದರೆ ಗುರುದ್ರೋಹ. ಮನವರ್ಪಿತವೆಂದರೆ ಲಿಂಗದ್ರೋಹ. ಧನವರ್ಪಿತವೆಂದರೆ ಜಂಗಮದ್ರೋಹ. ಇಂತೀ ತನುಮನಧನಂಗಳೆಂಬ ಅನಿತ್ಯವನು ನಿತ್ಯಕ್ಕರ್ಪಿಸಿ ಭಕ್ತನಾದೆನೆಂದರೆ ಅದು ಅಜ್ಞಾನ ನೋಡಾ! ಒಡೆಯರಿಗೆ ಉಂಡೆಯ ಮುಜುದಿಕ್ಕಿ ನಾ ಭಕ್ತನೆಂಬ ಮಾತ ಸಮ್ಯಕ್ಶರಣರು ಮೆಚ್ಚುವರೆ ? ನಮ್ಮ ಗೊಹೇಶ್ವರಲಿಂಗಕ್ಕೆ ನೀನಾವುದಱಲ್ಲಿ ಏನನರ್ಪಿಸಿ ಭಕ್ತನಾದೆ ಹೇಳಾ, ಸಂಗನ ಬಸವಣ್ಣ ?

1017

ಜಂಗಮವೆ ಲಿಂಗವೆಂದು ನಂಬಿದ ಬಳಿಕ, ಸಂದೇಹವಿಲ್ಲದೆ ಇರಬೇಕು ನೋಡಾ. ಸಂದುಸಂಶಯವಳಿದು ಸಯವಾದ ಭಕ್ತಿ ಹಿಮ್ಮೆಟ್ಟಿ ಹೋಯಿತ್ತಲ್ಲಾ! ಒಪ್ಪಚ್ಚಿ ಬಳಿಕ ಕಿಂಕಿಲವಾಗಿ, ಒಪ್ಪಚ್ಚಿ ಬಳಿಕ ಅಹಂಕಾರಿಯಾದರೆ ಹೋಗ ನೂಕುವ ಕಾಣಾ, ನಮ್ಮ ಗೊಹೇಶ್ವರಲಿಂಗವು.

1018

ಕೂರ್ಮನ ಶಿಶುವಿನ ಸ್ನೇಹದಂತಿರಬೇಡಾ, ಸಂಗನ ಬಸವಣ್ಣ ? ಕಾಕಪಿಕ ಸಂಧಾನದಂತಿರಬೇಡಾ, ಸಂಗನಬಸವಣ್ಣ? ಕೊಂಬ ತಪ್ಪದೆ ಹಾಯಿವ ಕಪಿಯಂತಿರಬೇಡಾ, ಸಂಗನ ಬಸವಣ್ಣ ? ನೀರಕ್ಷೀರವ ಭೇದಿಸಿ ತೆಗೆವ ಹಂಸೆಯಂತಿರಬೇಡಾ, ಸಂಗನ ಬಸವಣ್ಣ ? ಗೊಹೇಶ್ವರಲಿಂಗದಲ್ಲಿ ಅವಧಾನ ತಪ್ಪಿ ಮರಳಿ ಅಱಿಸಿದರುಂಟೆ ಹೇಳಾ, ಸಂಗನ ಬಸವಣ್ಣ ?

1019

ತಾ ಬಾಳಲಾಱದೆ ವಿಧಿಯ ಬೈದನೆಂಬ ನಾಣ್ಣುಡಿಯಾಯಿತ್ತಲ್ಲಾ, ಬಸವಣ್ಣ ! ಅವಧಾನತಪ್ಪಿ, ಆಚಾರಗೆಟ್ಟು ನಡೆದು, ಶಿವಾಧೀನವೆಂದರೆ ಹೋಹುದೆ? ಗೊಹೇಶ್ವರಲಿಂಗವಲ್ಲಿ ಈ ಬಣ್ಣಿಗೆಯ ಮಾತು ಸಲ್ಲದು ಕೇಳಾ ಸಂಗನ ಬಸವಣ್ಣ !

1020

ಲಿಂಗಜಂಗಮವ ಪೂಜಿಸಿ ಭಕ್ತನಾದೆನೆಂದರೆ, ಭೃತ್ಯಾಚಾರ ಸದಾಚಾರವೆ ಮೊದಲು ನೋಡಾ! ವಿಶ್ವಾಸವುಳ್ಳ ಭಕ್ತಿಗೆ ಹೊರೆಯಿಲ್ಲ. ಅಹಂಕಾರವೆಂಬ ಅಲಗ ಹಿಡಿದು ಮಾಡುವ ಭಕ್ತಿ ತನ್ನನೆ ಇಱಿವುದು. ಗೊಹೇಶ್ವರನೆಂಬ ಹಗೆಯ ಗೆಲುವರೆ ಅಱಿವೆಂಬ ಅಲಗ ಅವಧಾನ ತಪ್ಪದೆ ಹಿಡಿಯಬೇಕು ನೋಡಾ ಬಸವಣ್ಣ.

1021

ಮನಕ್ಕೆ ಮನವೇಕಾರ್ಥವಾಗಿ, ಕಾಯಕ್ಕೆ ಕಾಯ ಸಮದರ್ಶನವಾಗಿ,

ಪ್ರಾಣಕ್ಕೆ ಪ್ರಾಣ ಸಮದರ್ಶನವಾಗಿದ್ದವರಲ್ಲಿ ಮನವಚನಕಾಯದಲ್ಲಿ ಶಬ್ದ-ಸೂತಕ ಹುಟ್ಟಿದರೆ ಸೈರಿಸಬಾರದು ಕಾಣಾ! ನಮ್ಮ ಗೊಹೇಶ್ವರಲಿಂಗದಲ್ಲಿ ನೀನೆ ಭಕ್ತನಾದ ಕಾರಣ, ಮುಳಿಸು ಮೊಳೆದೋಱಿತ್ತು ಕಾಣಾ, ಸಂಗನ ಬಸವಣ್ಣ.

1022

ಸೂಳೆ ಹಲಬರನುಳಿದಳೆಂದು ನಿಂದಿಸುವರಿಲ್ಲ ಕೇಳಾ! ಪತಿವ್ರತೆ ತನ್ನ ಪುರುಷನಲ್ಲದೆ ಮತ್ತೊಬ್ಬನ ಮುಖವ ನೋಡಿದರೆ, ಅವಳ ಚಂಡಾಲಗಿತ್ತಿ ಎಂಬರು ಲೋಕವೆಲ್ಲ. ಕೀರ್ತಿವಾರ್ತೆಗೆ ಮಾಡುವ ಭಕ್ತಿ, ತಪ್ಪಿದರೆ ಅದ ಮನಕ್ಕೆ ತರಲಿಲ್ಲ. ಸಜ್ಜನ ಸದ್ಭಕ್ತನೆಡಹಿದರೆ ಅದ ಸೈರಿಸಬಾರದು ಕೇಳಾ! ನಮ್ಮ ಗೊಹೇಶ್ವರಲಿಂಗಕ್ಕೆ ಆದಿಯಿಂದತ್ತ ನೀನೆ ಭಕ್ತನಾದ ಕಾರಣ, ಮನ ನೊಂದಿತ್ತು ಕಾಣಾ, ಸಂಗನಬಸವಣ್ಣ.

1023

ಆರಾಧಿಸಿ ವಿರೋಧಿಸುವರೆ? ಪೂಜಿಸಿ ಪೂಜೆಯ ಮಱೆಯುವರೆ? ಜಂಗಮ ಲಿಂಗವೆಂದಱಿದವರು ಸಂಚ ತಪ್ಪುವರೆ? ಗಾಳಿಯೂ ಗಂಧವೂ ಕೂಡಿದಂತೆ ಜಗದೊಳಗೆ ಇದೆ! ಕೀರ್ತಿ ವಾರ್ತೆಯ ಪಡೆದೆಯಲ್ಲಾ ಬಸವಣ್ಣ! ನಿನ್ನ ಶಿಶುವಿನೊಡತಣ ತೆಱಹು ಮಱಹ ವಸುಧೆಯೊಳಗಣ ಪ್ರಮಥರು ಮೆಚ್ಚುವರೆ? ತಿಳಿದು ನೋಡುವಡೆ, ಗೊಹೇಶ್ವರನ ಶರಣ ಅಲ್ಲಯ್ಯಂಗೆ ನೀನು ಪರಮಾರಾಧ್ಯ ಕಾಣಾ ಸಂಗನ ಬಸವಣ್ಣ.

1024

ಆಯತದಲ್ಲಿ ಪೂರ್ವಾಚಾರಿಯ ಕಂಡೆ. ಸ್ವಾಯತದಲ್ಲಿ ಪೂರ್ವಾಚಾರಿಯ ಕಂಡೆ. ಸನ್ನಿಹಿತದಲ್ಲಿ ಪೂರ್ವಾಚಾರಿಯ ಕಂಡೆ. ಗೊಹೇಶ್ವರಲಿಂಗದಲ್ಲಿ ಪೂರ್ವಾಚಾರಿ ಸಂಗನ ಬಸವಣ್ಣನ ಶ್ರೀಪಾದಕ್ಕೆ ನಮೋ ನಮೋ ಎಂಬೆನು.

1025

ಗುರುಸ್ಥಲ ಲಿಂಗಸ್ಥಲ ಜಂಗಮಸ್ಥಲ ಪ್ರಸಾದಿಸ್ಥಲವಡಗಿದ ಕರಸ್ಥಲ ವಿನ್ನಾರಿಗೆ ಸಾರಿತ್ತು? ನಿರ್ವಂಚಕತ್ವದ ನಿತ್ಯನಿಜಸ್ಥಲವಾದ ಭಕ್ತಿಸ್ಥಲ ವಿನ್ನಾರಿಗೆ ಸಾರಿತ್ತು ಬಸವಣ್ಣಂಗಲ್ಲದೆ? ಗೊಹೇಶ್ವರ, ನಿಮ್ಮ ಶರಣ ಸಂಗನ ಬಸವಣ್ಣನ ಮಱೆಯ ಹೊಕ್ಕು ನಾನು ಬದುಕಿದೆನು.

1026

ತನುವ ಗೆಲಲಱಿಯದೆ, ಮನವ ಗೆಲಲಱಿಯದೆ, ಧನವ ಗೆಲಲಱಿಯದೆ ಭ್ರಮೆಗೊಂಡಿತ್ತು ಲೋಕವೆಲ್ಲವು. ತನುವ ದಾಸೋಹಕ್ಕೆ ಸವೆಸಿ, ಮನವ ಲಿಂಗಧ್ಯಾನದಲ್ಲಿ ಸವೆಸಿ, ಧನವ ಜಂಗಮದಲ್ಲಿ ಸವೆಸಿ ಗೆಲಬಲ್ಲಡೆ ಸಂಗನ

ಬಸವಣ್ಣನಲ್ಲದೆ ಮತ್ತಾರನು ಕಾಣೆ. ಗೊಹೇಶ್ವರ, ನಿಮ್ಮ ಶರಣ ಸಂಗನ ಬಸವಣ್ಣಂಗೆ ನಮೋ ನಮೋ ಎನುತಿರ್ದೆನು.

1027

ಬಯಲ ಮೂರ್ತಿಗೊಳಿಸಿದನೊಬ್ಬ ಶರಣ. ಆ ಮೂರ್ತಿಯಲ್ಲಿ ಭಕ್ತಿ-ಸ್ಥಾಪಿಯತವ ಮಾಡಿದನೊಬ್ಬ ಶರಣ. ಆ ಭಕ್ತಿಯನೆ ಸುಜ್ಞಾನಮುಖವ ಮಾಡಿದನೊಬ್ಬ ಶರಣ. ಆ ಸುಜ್ಞಾನವನು ಲಿಂಗಮುಖವಾಗಿ ಧರಿಸಿದನೊಬ್ಬ ಶರಣ. ಆ ಲಿಂಗವನೆ ಸರ್ವಾಂಗದಲ್ಲಿ ವೇಧಿಸಿಕೊಂಡನೊಬ್ಬ ಶರಣ. ಆ ಸರ್ವಾಂಗವನೆ ನಿರ್ವಾಣಸಮಾಧಿಯಲ್ಲಿ ನಿಲಿಸಿದನೊಬ್ಬ ಶರಣ. ನಾನು ನಿರ್ವಾಣದಲ್ಲಿ ನಿಂದು ಅಗಮ್ಯನಾದೆನೆಂದರೆ ಭಕ್ತಿಕಂಪಿತನೆನಿಸಿ ಎನ್ನ ತನ್ನಲ್ಲಿಗೆ ಬರಿಸಿಕೊಂಡನೊಬ್ಬ ಶರಣ. ಗೊಹೇಶ್ವರ, ನಿಮ್ಮ ಶರಣ ಸಂಗನ ಬಸವಣ್ಣನ ಶ್ರೀಪಾದವ ಕಂಡು ಶರಣೆಂದು ಬದುಕಿದೆನು.

1028

*ಮನ ಮನ ಒಂದಾಗಿ ಅಱಿವು ಸಯವಾದ ಬಳಿಕ, ಕೊಂಡಾಡ ಲಿಕ್ಕಿಂಬುಂಟೆ ಹೇಳಾ! ಶಬ್ದಕ್ಕೆ ತೆಱಹಿಲ್ಲ, ಗೊಹೇಶ್ವರಲಿಂಗದಲ್ಲಿ ಬೆಱಸಿ ಬೇಱಿಲ್ಲ ಕಾಣಾ, ಸಂಗನ ಬಸವಣ್ಣ.

1029

ನೀರಕ್ಷೀರದಂತೆ ಕೂಡಿದ ಭೇದವನಾರಿಗು ಹೇಳಲಿಲ್ಲ, ಕೇಳಲಿಲ್ಲ. ಬೆಳುಗಾರವ ಬೆರಸಿ ಬೆಚ್ಚ ಭಂಗಾರಕ್ಕೆ ಸಂದುಂಟೆ ಹೇಳಾ? ಉರಿಯುಂಡ ಕರ್ಪುರದ ಪರಿಯುಂತಿರ್ದುದನಿದಿರಿಂಗೆ ಕೊಂಡಾಡಿ ಹೇಳಲುಂಟೆ? ಅದಂತಿರಲಿ, ನಮ್ಮ ಗೊಹೇಶ್ವರಲಿಂಗದ ಕಣ್ಣ ಮುಂದೆ ನಿಮ್ಮ ಧರ್ಮದಿಂದಲೊಂದಾಶ್ಚರ್ಯವ ಕಂಡು ಬದುಕಿದೆ ಕಾಣಾ, ಸಂಗನ ಬಸವಣ್ಣ.

1030

ಓಹೋ! ನಮಶ್ಶಿವಾಯ! ಮಹದಾಕಾಶದ ಮಱೆಯಲ್ಲಿರ್ದ ಶಾಂತ್ಯ ರ್ಕನ ನಿಲವೋ?! ದಶಮದ್ವಾರನ ಹೊಯಿಲಿಲ್ಲದೆ ತಾನೆ ಲಿಂಗದ ಜ್ಞಾನ-ಜ್ಯೋತಿಯ ನಿಲವೋ?! ತನ್ನಿಂದ ತಾನಾಗಿ ಮುಕ್ತಿಯೆ ಕಱಿಗೊಂಡ ಮುಕ್ತಿಯ ಮುತ್ತಿನ ಧವಳದ ಕಾಂತಿಯ ನಿಲವೋ?! ರುದ್ರಾಕ್ಷಿಯ ಹಂಗು ಬೇಡವೆಂದು ಹೊದ್ದ ಚರ್ಮದ ಹೊದಿಕೆಯಂ ತೆಗೆದ ಗಿಟಗಿಟೆ ಜಂತ್ರದ

---

*ಪ್ರಸಾದದ ಕುಳಿಯೊಳಗೆ ಹನ್ನೆರಡುವರ್ಷಗಳ ಕಾಲ ಗೋಪ್ಯವಾಗಿದ್ದ ಮರುಳು ಶಂಕರ ದೇವರು ದರ್ಶನವಿತ್ತಾಗ ಅವರ ಸಂಬಂಧವಾಗಿ ಅಲ್ಲಮಪ್ರಭು ಆಡಿದ ವಚನಗಳು 1028 ರಿಂದ 1036 ರವರೆಗೆ.

ನಿಲವೋ ?! ಅಲ್ಲ, ತನ್ನ ನಿಲವನರಿಯದೆ ವಾದಿಸುತ್ತಿರಲು ಉರಿಲಿಂಗೋದ್ಭವ ವಾದ ಉರಿಲಿಂಗದ ನಿಲವೋ ?! ಆವ ನಿಲವೆಂದರಿಯಬಾರದು ! ಗೊಹೇಶ್ವರನ ಕಂಗಳಿಗೆ ಒಂದಾಶ್ಚರ್ಯ ತೋರುತ್ತು ಕಾಣಾ, ಸಂಗನ ಬಸವಣ್ಣ !

1031

ಎಲೆ ಬಸವಣ್ಣಾ, ನಾವು ಬಾಹುದಕ್ಕೆ ಮುನ್ನವೆ, ಬಂದಹರೆಂದು ಶುಭ ಸೂಚನೆ ತೋರುತ್ತೆಂದೆ. ಮನೆಯ ಮೀರು ಮಂದದ ದೈವವುಂಟೆ, ಎಂಬುದ ತಿಳಿ ಗೊಹೇಶ್ವರಲಿಂಗದಲ್ಲಿ, ಸಂಗನ ಬಸವಣ್ಣ.

1032

ಬೀದಿಯಲ್ಲಿ ಬಿದ್ದ ಮಾಣಿಕ್ಯವ, ಹೂಳಿರ್ದ ನಿಧಾನವನಾರಿಗೂ ಕಾಣ ಬಾರದು ನೋಡ. ಮರಣವುಳ್ಳವರಿಗೆ ಮರುಜವಣಿ ಸಿಕ್ಕುವುದೇ ? ಪಾಪಿಯ ಕಣ್ಣಿಂಗೆ ಪರುಷ ಕಲ್ಲಾಗಿಪ್ಪಂತೆ ಇಪ್ಪರಯ್ಯ ಶಿವಶರಣರು ! ನಮ್ಮ ಗೊಹೇಶ್ವರನ ಶರಣ ಮರುಳು ಶಂಕರದೇವರ ನಿಲವ ನೋಡಾ, ಸಂಗನ ಬಸವಣ್ಣ.

1033

ಆದಿಯನಂಗಮುಖಕ್ಕರ್ಪಿಸಿ, ಅನಾದಿಯ ಪ್ರಾಣಮುಖಕ್ಕರ್ಪಿಸಿ, ಮನ ವೆಂಬುದ ಅರಿವಿನ ಮುಖಕ್ಕರ್ಪಿಸಿ, ತಾನೆಂಬುದ ನಿರಾಕಾರದಲ್ಲಿ ನಿಲಿಸಿ, ಪರಿಣಾಮಪ್ರಸಾದದಲ್ಲಿ ತದ್ಗತನಾಗಿ, ಪ್ರಸಾದವೆ ಪ್ರಾಣವಾಗಿ, ಪ್ರಸಾದವೆ ಕಾಯವಾಗಿ, ಪ್ರಸಾದವೆ ಜ್ಞಾನ, ಪ್ರಸಾದವೆ ಧ್ಯಾನ, ಪ್ರಸಾದವೆ ಲಿಂಗ ಭೋಗೋಪಭೋಗಿಯಾಗಿಪ್ಪ ನಮ್ಮ ಗೊಹೇಶ್ವರಲಿಂಗದಲ್ಲಿ ನಿಜಪ್ರಸಾದಿ ಮರುಳುಶಂಕರ ದೇವರ ನಿಲವ ನೋಡಾ, ಸಂಗನ ಬಸವಣ್ಣ.

1034

ಹೂಮಿಡಿಯ ಹರಿದು ಒತ್ತಿ, ಹಣ್ಣ ಮಾಡಿಹೆನೆಂದರೆ ಹಣ್ಣಾಗ ಬಲ್ಲುದೆ ? ಪರಿಮಳವಿಲ್ಲದ ನನೆಯನರಳಿಸಿ ಮುಡಿದಹೆನೆಂದರೆ ಸೌರಭ ಉಂಟೆ ? ಶಿವಶರಣರ ನಿಲವ ಕಾಂಬ ಕಾಲಕ್ಕೆ ಕಾಣಬಹುದುದಲ್ಲದೆ, ಎಲ್ಲಾ ಹೊತ್ತು ಕಾಣಬಹುದೆ ? ಅಹ ಕಾಲಕ್ಕೆ ತಾನೆಯಪ್ಪುದು. ಗೊಹೇಶ್ವರನ ಶರಣರ ನಿಲವ ಕಂಡ ಬಳಿಕ, ಮರಹು—ಬೆಳಗ ಕಂಡ ಕತ್ತಲೆಯಂತೆ—ನೋಡ ನೋಡ ಹರೆವುದು ನೋಡಾ, ಸಂಗನ ಬಸವಣ್ಣ.

1035

ಅಂಗವಿಡಿದಂಗಿ ಎಂಬೆನೆ ? ಆರನೊಳಕೊಂಡನುಪಮನ ನೋಡಾ ! ಮೂರರ ಹೊಲಿಗೆಯ ಬಿಚ್ಚಿ ಎಂಟಾತ್ಮಹರಿಗಳ ತನ್ನಿಚ್ಛೆಯಲಿ ನಿಲಿಸಿದ ನಿಜಸುಖಿಯ ನೋಡಾ ! ತತ್ತ್ವ ಮುವ್ವತ್ತಾರ ಮೀರಿ ಅತ್ತತ್ತವೆ ತೋರ್ಪ ಅಗಮ್ಯನ ನೋಡಾ ! ನಮ್ಮ ಗೊಹೇಶ್ವರನ ಶರಣ ಅಲ್ಲಯ್ಯನ ಇರವನೊಳ

ಕೊಂಡ ಪರಮಪ್ರಸಾದಿ ಮರುಳುಶಂಕರ ದೇವರ ನಿಲವ ಬಸವಣ್ಣನಿಂದ ಕಂಡೆ ನೋಡಾ, ಸಿದ್ಧರಾಮಯ್ಯ.

1036

ಕಾಯಗೊಂಡು ಹುಟ್ಟಿದವರು ದೇವರಾದಡಾಗಲಿ, ಈವರಾದಡಾಗಲಿ ಮಾಯೆಯ ಸಾಧಿಸಿ ಗೆಲುವುದರಿದು ನೋಡಾ! ಮನದ ತಮಂಧವ ಗೆಲಿದು ನೆನೆದು ಸುಖಿಯಾದಹೆನೆಂಬವರ ಬೆಂಬತ್ತಿ ಕಾಡಿತ್ತು ಕರ್ಮ! ಗೊಹೇಶ್ವರ ಲಿಂಗವ ಕಿಱುಕಿಱಿದಾಗಿ ನೆನೆದರೆ ಹಿರಿಹಿರಿದಾಗಿ ಕಾಡುವುದು ನೋಡಾ ಮಱಹು! ಸಂಗನ ಬಸವಣ್ಣ, ನೀ ನೆನೆದ ನೆನಹು ಆರಂತಹದಲ್ಲ ನೋಡಾ!

1037

*ನೆನೆವಹೆನೆಂದರೆ ಮನಕ್ಕೆ ಸಿಲುಕದು. ಅಱುದಹೆನೆಂದರೆ ಕುಱುಹಿಗೆ ಬಾರದು. ಕಂಡಹೆನೆಂದರೆ ಮೂರ್ತಿಯಲ್ಲ. ತನುವಿನೊಳಗಿಲ್ಲದ, ಮನದೊಳಗಿಲ್ಲದ ಘನವು ನಿಮ್ಮ ಮನಕ್ಕೆ ವೇದ್ಯವಾದ ಪರಿಯೆಂತಯ್ಯ? ಗೊಹೇಶ್ವರನೆಂಬ ಲಿಂಗವು ಜಗದ ಕಣ್ಣಿಂಗೆ ಕತ್ತಲೆಯ ಕವಿಸಿ, ತನ್ನ ತಪ್ಪಿಸಿಕೊಂಡಿಪ್ಪ ಭೇದ ನಿನ್ನೊಳಡಗಿದ ಪರಿ ಎಂತು ಹೇಳಾ, ಸಂಗನ ಬಸವಣ್ಣ?

1038

ಅಂತರಂಗದಲ್ಲಿ ಅಡಗಿತ್ತೆಂದರೆ ಭಾವಕ್ಕೆ ಪೂಜ್ಯವಲ್ಲ. ಬಹಿರಂಗದಲ್ಲಿ ಅಡಗಿತ್ತೆಂದರೆ ಕ್ರಿಯಾಬದ್ಧವಲ್ಲ. ಅಱುವಿನಲಡಗಿತ್ತೆಂದರೆ ಮತಿಗೆ ಹವಣಲ್ಲ. ಭಾವ–ನಿರ್ಭಾವ–ನಿಶ್ಶೂನ್ಯವನು ಕಾಬ ಪರಿ ಎಂತು ಹೇಳಾ! ಕಂಡು ತನ್ನ ಲಿಂಬಿಟ್ಟು ಕೊಂಬ ಪರಿ ಎಂತು ಹೇಳಾ? ಗೊಹೇಶ್ವರನೆಂಬ ಲಿಂಗವನಱುದು ಕೂಡಿ ಸುಖಿಯಹ ಪರಿ ಎಂತು ಹೇಳಾ, ಸಂಗನ ಬಸವಣ್ಣ?

1039

ಸಂಗದಿಂದಾಯಿತ್ತು ತನು. ಆ ತನುವಿನಿಂದಾಯಿತ್ತು ಮಱವೆ. ಆ ಮಱವೆಯಿಂದಾಯಿತ್ತು ನೋಡಾ ನೀ ನಾನೆಂಬುದು. ನೀನೆಂಬ ಬಹಿರಂಗವಂತಿರಲಿ, ನಾನೆಂಬ ಅಂತರಂಗವಂತಿರಲಿ. ಈ ಉಭಯಭಾವವಲ್ಲದೆ, ನಿನ್ನಿಂದ ನೀನಱುದಹೆನೆಂಬುದು ವಿಪರೀತಭಾವ. ಈ ಅಱುವು ಮಱವೆಯಾಟದ ಭ್ರಾಂತು ಬಿಡದು. ಗೊಹೇಶ್ವರ ಲಿಂಗವು ನಿನ್ನಲ್ಲಿ ನಿಂದ ಪರಿ ಎಂತು ಹೇಳಾ, ಸಂಗನ ಬಸವಣ್ಣ?

---

*ಅಲ್ಲಮಪ್ರಭು ಬಸವಣ್ಣನವರೊಡನೆ ನಡೆಸಿದ ಅನುಭಾವದ ವಚನಗಳು 1037 ರಿಂದ 1049 ರವರೆಗೆ.

1040

ಅಜ್ಞಾನ ಸುಜ್ಞಾನಗಳೆರಡೂ ಶಿವನೆಂದರೆ, ಶಿವಜ್ಞಾನಿಗಳು ಮೆಚ್ಚುವರೆ? ಶಿವಶಕ್ತಿಗಳೆರಡೂ ನೀನೆ ಎಂದರೆ, ಮಹಾನುಭಾವಿಗಳು ಪರಿಣಾಮಿಸುವರೆ? ತನ್ನ ತಾನಾರೆಂಬುವನಱಿಯದೆ ಅನ್ಯವೆಲ್ಲವೂ ಬೊಮ್ಮವೆಂಬ ಈ ಕರ್ಮದ ನುಡಿಯ ಮೆಚ್ಚುವನೆ ನಮ್ಮ ಗೊಹೇಶ್ವರಲಿಂಗವು ?

1041

ಕಾಯವಿಡಿದು ಲಿಂಗವಿದೆ, ಲಿಂಗವಿಡಿದು ಕಾಯವಿದೆ. ಅಱಿವುವಿಡಿದು ವಚನವಿದೆ, ವಚನವಿಡಿದು ತೋಱುವ ಅಱಿವಿದೆ. ಲಿಂಗಾಂಗವೆರಡೂ ನಿಮ್ಮಲ್ಲಿ ಐಕ್ಯವಾದ ಪರಿ ಎಂತು ಹೇಳಾ? ಸ್ವರವಿಡಿದು ಶಬುದ ಸಮರಸವಾದ ಪರಿ ಎಂತು ಹೇಳಾ! ದೇವ ಭಕ್ತನೆಂಬ ನಾಮಸೀಮೆಯುಡಗಿ ಗೊಹೇಶ್ವರ ಲಿಂಗಲ್ಲಿ ತದುಗತವಾಗಿದ್ದ ಪರಿಯೆಂತು ಹೇಳಾ, ಸಂಗನ ಬಸವಣ್ಣ ?

1042

ಆದಿಯ ಲಿಂಗವ ತೋಱಿದ ಅನಿಮಿಷನ ಕಂಡೆನಯ್ಯ ಇಂದು! ಕೃತಯುಗದಲ್ಲಿ ಸ್ಕಂದನೆಂಬ ಗಣೇಶ್ವರನ ಕಂಡೆನಯ್ಯ ಇಂದು! ತ್ರೇತಾಯುಗದಲ್ಲಿ ನೀಲಲೋಹಿತನೆಂಬ ಗಣೇಶ್ವರನ ಕಂಡೆನಯ್ಯ ಇಂದು! ದ್ವಾಪರಯುಗದಲ್ಲಿ ವೃಷಭನೆಂಬ ಗಣೇಶ್ವರನ ಕಂಡೆನಯ್ಯ ಇಂದು! ಕಲಿಯುಗದಲ್ಲಿ ಅನಿಮಿಷ-ಬಸವನೆಂಬ ಗಣೇಶ್ವರನ ಕಂಡೆನಯ್ಯ ಇಂದು! ಎನ್ನ ಕಂಡವರನು ನಿನ್ನ ಕಂಡವರನು ಇಂದು ಕಂಡೆ ಕಾಣಾ, ಗೊಹೇಶ್ವರ.

1043

ಗುರು ಒಂದೆ ಬಸಿಱು. ಲಿಂಗ ಒಂದೆ ಬಸಿಱು. ಜಂಗಮ ಒಂದೆ ಬಸಿಱು. ಪ್ರಸಾದ ಒಂದೆ ಬಸಿಱು. ಇ[1]ವ[1]ನಾರಯ್ಯ, ಅಮಳೋಕ್ಯವ ಮಾಡಿ ತೋಱಿದವರು? ಇ[1]ವ[1]ನಾರಯ್ಯ, ಪ್ರಜ್ವಲಿತವ ಮಾಡಿ, [2]ಬೇಱೆ ಬೇಱೆ ಕರತಳಾಮಳಕವ ಮಾಡಿ ತೋಱಿದವರು ?[2] ಪೂರ್ವಾಚಾ[3]ರಿ[3] ಭಕ್ತಿ-ಭಂಡಾರಿ ಬಸವಣ್ಣ [4]ನೀನೆನಗೆ[4] ಗೊಹೇಶ್ವರಲಿಂಗವ ತೋಱಿದೆಯಾಗಿ ಲೋಕಾದಿಲೋಕ[5]ವೆಲ್ಲವು[5] ಕಿಂಚಿತ್.

1044

ಆದಿಯ ಲಿಂಗ ನಿನ್ನಿಂದೆನಗಾಯಿತ್ತು. ಅನಾದಿಯ ಜ್ಞಾನ ನಿನ್ನ ನೆನೆದಡೆನಗಾಯಿತ್ತು. ನಿನ್ನ ಕೃಪೆಯಿಂದ ಪ್ರಾಣಲಿಂಗವೆಂದಱಿದೆನೆಂಬುದ

---

1. ದ (ಐ) 2. ಬೇಱೆ ತೋಱಿದವರು (ಐ) 3. ರ್ಯ (ಐ) 4. ಎನಗೆ ನೀನು (ಐ) 5. ವೆನಗೆ (ಐ).

ನಿಮ್ಮ ಪ್ರಮಥರೆ ಬಲ್ಲರು. ಗೊಹೇಶ್ವರಸಾಕ್ಷಿಯಾಗಿ ಸಂಗನ ಬಸವಣ್ಣ, ನಿಮ್ಮ ಪ್ರಸಾದದ ಶಿಶು ನಾನು ನೋಡಯ್ಯ.

1045

ತನು ದಾಸೋಹ. ಅವಯವಂಗಳೆಲ್ಲವು ಆಚಾರ. ಮನಪವನ ಪ್ರಾಣವೆಂಬವೆಲ್ಲ ಅಱಿವಿನ ಮೂರ್ತಿ ನೋಡಾ! ಒಳಗು ಹೊಱಗು, ಹೊಱಗೊಳಗೆಂಬುದನಱಿಯದ ಸತ್ಯಸದಾಚಾರಿ ನೀನು. ನಿನ್ನಳವನಱಿಯಲಾನೆನಿತಱವನಯ್ಯ? ಅಂತರಂಗದಲ್ಲಿ ಅಱಿವುಂಟಾದರೇನು? ಎನ್ನ ಕಾಯದಲ್ಲಿ ಭಕ್ತಿ ಸ್ವಾಯತವಿಲ್ಲ. ಆಚಾರವೆಂಬುದು ಅತ್ತತ್ತಲಿಲ್ಲ. ಸರ್ವಾಚಾರಸಂಪನ್ನ, ನಿನ್ನಳವ ನಾನೆತ್ತ ಬಲ್ಲೆನಯ್ಯ! ಗೊಹೇಶ್ವರಸಾಕ್ಷಿಯಾಗಿ ನಿನ್ನ ಮಹಾಮನೆಯ ಕಾವಲ ಬಂಟ ನಾನೆಂಬುದ ನಿಮ್ಮ ಪ್ರಮಥರೆಲ್ಲರು ಬಲ್ಲರು ಕಾಣಾ, ಸಂಗನ ಬಸವಣ್ಣ !

1046

ಆಚಾರವಂಗಲೇಪವಾಗಿ ಕಾಯಮುಕ್ತನು ನೀನು, ನೋಡಯ್ಯ! ಅಱಿವು ಅಂತರಂಗದಲ್ಲಿ ಭರಿತವಾಗಿಪ್ಪುದಾಗಿ ಮನೋಮುಕ್ತನು ನೀನು, ನೋಡಯ್ಯ! ಅರ್ಪಿತ ಪರಿಣಾಮದಲ್ಲಿ ಅವಿರಳವಾಗಿಪ್ಪುದಾಗಿ ಸರ್ವಾಂಗ ಲಿಂಗೈಕ್ಯ ನೋಡಾ! ಮುಕ್ತನಲ್ಲೆಂಬ ಬಳಕೆಯ ಮಾತಂತಿರಲಿ. ಬಯಲ ಭ್ರಮೆಯನೆ ಕಳೆದು, ಭವದ ಬಟ್ಟೆಯ ಹಱಿದಿಪ್ಪುದ ನಮ್ಮ ಗೊಹೇಶ್ವರಲಿಂಗ ಬಲ್ಲನು. ನೀನು ಮಱೆಯಾಗಿ ನುಡಿವರೇ ಸಂಗನ ಬಸವಣ್ಣ ?

1047

ಕೃತಯುಗದಲ್ಲಿ ನೀನು ಸ್ಕಂದನೆಂಬ ಗಣೇಶ್ವರನಾಗಿರ್ದುದ ನಾನು ಬಲ್ಲೆ. ತ್ರೇತಾಯುಗದಲ್ಲಿ ನೀನು ನೀಲಲೋಹಿತನೆಂಬ ಗಣೇಶ್ವರನಾಗಿರ್ದುದ ನಾನು ಬಲ್ಲೆ. ದ್ವಾಪರದಲ್ಲಿ ನೀನು ವೃಷಭನೆಂಬ ಗಣೇಶ್ವರನಾಗಿರ್ದುದ ನಾನು ಬಲ್ಲೆ. ಕಲಿಯುಗದಲ್ಲಿ ನೀನು ಬಸವನೆಂಬ ಗಣೇಶ್ವರನಾಗಿ, ಸರ್ವಾಚಾರಸಂಪನ್ನನಾಗಿ, ಭಕ್ತಿಜ್ಞಾನವ ಕಂದೆಱವೆಯ ಮಾಡಿ, ಶಿವಾಚಾರದ ಘನದ ಬೆಳವಿಗೆಯ ಮಾಡಿ, ಶಿವಭಕ್ತಿಯ ಧ್ವಜವನೆತ್ತಿಸಿ ಮರ್ತ್ಯಲೋಕದೊಳಗೆ ಹರಹಿದ ಭೇದವ ಭೇದಿಸಿ ನೋಡಿ ಆನು ಅಱಿದೆ. ಗೊಹೇಶ್ವರ ಸಾಕ್ಷಿಯಾಗಿ ನಿಮ್ಮ ಮಹಾತ್ಮೆಗೆ ನಮೋ ನಮೋ ಎನುತಿರ್ದೆನು ಕಾಣಾ, ಸಂಗನ ಬಸವಣ್ಣ.

1048

ಆದಿಗುರುಸ್ಥಲ, ಲಿಂಗಸ್ಥಲ, ಜಂಗಮಸ್ಥಲ, ಪ್ರಸಾದಿಸ್ಥಲ, ಪಾದೋದಕಸ್ಥಲಂಗಳನಾರು ಬಲ್ಲರಯ್ಯ? ಆದಿಯ ತೋಱಿದ. ಅನಾದಿಯನಱುಪಿ ನಾದ ಬಿಂದು ಕಳೆಗಳ ಭೇದವನು ಭೇದಿಸಿ ತೋಱಿದ ಹುಟ್ಟುವುದ ಮುಟ್ಟದೆ

ತೋಱಿದ. ಹುಟ್ಟದೆ ಇದ್ದುದ ಮುಟ್ಟಿ ತೋಱಿದ. ಎನ್ನ ಅಂತರಂಗವನನು ಮಾಡಿ ನಿಜಲಿಂಗವ ನೆಲೆಗೊಳಿಸಿದ. ಗೊಹೇಶ್ವರನ ಶರಣ ಸಂಗನ ಬಸವಣ್ಣ-ನಿಂದ ಸಕಲಸನುಮತವನಱಿದೆನಯ್ಯ!

1049

ಭಾವಕರಿಗೆ ಮೂರ್ತಿಯಾರಾಧನೆ ಸಂಸಾರಕ್ಕೆ ಬೀಜ: ಲಿಂಗಾರಾಧನೆ ಭವಕ್ಕೆ ಬೀಜ. ಲಿಂಗಸ್ವಾಯತಜಂಗಮವೆ ಪ್ರಾಣಲಿಂಗ. ಇದು ಕಾರಣ, ಗೊಹೇಶ್ವರ, ಸಂಗನ ಬಸಣ್ಣನ ಮಱೆಯ ಹೊಕ್ಕು ಬದುಕಿದೆನು.

1050

*ಬೆಳಗುವ ಜ್ಯೋತಿಯ ತಿರುಳಿನಂತೆ ಹೊಳೆವ ಕಂಗಳ ಕಾಂತಿಯೊಳ-ಹೊಱಗೆನ್ನದೆ ಅಳವಟ್ಟ ಶಿವಯೋಗಿಯ ಕಂಡೆ ನೋಡಾ! ನಿಜ ಉಂಡ ನಿರ್ಮಳದ ಘನವ ಕಂಡು ಬೆಱಗಾದೆ ನಾನು, ಗುಹೇಶ್ವರ ಲಿಂಗದಲ್ಲಿ ಚೆನ್ನಬಸಣ್ಣನಿಂದಲಾನು ಬದುಕಿದೆನು.

1051

ಅಂಗದಲಳಿವಟ್ಟ ಲಿಂಗೈಕ್ಯನ ಸಂಗವದಾರಿಗೆಯೂ ಕಾಣಬಾರದು ನೋಡಾ! ಪ್ರಾಣದ ಕೊನೆಯ ಮೊನೆಯ ಮೇಲೆ ಭಾವಸೂತಕದ ಹೊದಿಕೆಯ ಕಳೆದು, ನಿರ್ಭಾವ ನಿಸ್ಸೂತಕಿಯಾಗಿಪ್ಪ ನಿಜಲಿಂಗಸಮಾಧಿಯ ಘನವದಾರಿಗೆಯೂ ಕಾಣಬಾರದು ನೋಡಾ! ಗೊಹೇಶ್ವರಲಿಂಗದಲ್ಲಿ ಸಂಗನ ಬಸವಣ್ಣನ ನಿಲವ ಕಂಡು, ನಾನು ಬದುಕಿದೆನು ಕಾಣಾ, ಚೆನ್ನಬಸವಣ್ಣ.

1052

ಆದಿಯನಾದಿಗೆ ಭೇದವುಂಟೆ? ಆದಿ ಲಿಂಗ ಅನಾದಿ ಶರಣನೆಂಬುದು ತನ್ನಿಂದ ತಾ ಮಾಡಲಾಯಿತ್ತು. ಧರೆಯಾಕಾಶ ಭುವನಭವನಂಗಳು ಹುಟ್ಟದ ಮುನ್ನ, ಅನಾದಿ ಪರಶಿವನು ತಾನೆ ತನ್ನ ಲೀಲೆಗೆ ಸಾಕಾರವ ಧರಿಸಿದಡೆ, ಆ ಸಾಕಾರವೆ ಈ ಸಾಕಾರವಾಯಿತ್ತು. ಎನ್ನ ಸಾಕಾರದ ಆದಿಯನೂ, ಎನ್ನ ನಿರಾಕಾರದ ಅನಾದಿಯನೂ ಬಸವಣ್ಣ ಬಲ್ಲನಾಗಿ, ಗೊಹೇಶ್ವರಲಿಂಗದ ಘನವು ಬಸವಣ್ಣನಿಂದೆನಗೆ ಸಾಧ್ಯವಾಯಿತ್ತು ಕಾಣಾ! ಚೆನ್ನಬಸವಣ್ಣ.

1053

ಅದ್ವೈತವೆಂಬ ಶಿಶುವೆನ್ನ ಕರಸ್ಥಲವ ಸೋಂಕಲೊಡನೆ ಎನ್ನ ತನ್ನಂತೆ ಮಾಡಿತ್ತಾಗಿ, ಎನ್ನ ನಾನೆಂಬ ವಿಚಾರವು ಅಱತು ಹೋಯಿತ್ತು ಕೇಳಾ! ಮತ್ತೆ

---

*ಅಲ್ಲಮಪ್ರಭು ಚೆನ್ನಬಸವಣ್ಣನವರೊಡನೆ ನಡೆಸಿದ ಅನುಭಾವದ ವಚನಗಳು 1050 ರಿಂದ 1070 ರವರೆಗೆ.

ಅನ್ಯವಿಚಾರವನೆಂತೂ ಅಱಿಯೆ. ಎನ್ನ ಪೂರ್ವಾಪರವ ನಿಮ್ಮಿಂದಲಱಿಯಲೆಂದು ಬಂದು, ನಿಮ್ಮ ಮಱೆಹೊಕ್ಕೆನಾಗಿ, ಸಂಗನ ಬಸವಣ್ಣನ ಮಹಿಮೆಯ ನಾನೆತ್ತ ಬಲ್ಲೆನು? ಗೊಹೇಶ್ವರನ ಸಾಕ್ಷಿಯಾಗಿ ಸಂಗನ ಬಸವಣ್ಣ ನಿನ್ನಂತರಂಗದೊಳಗೆ ಬೆಳಗುತ್ತೈದಾನೆ. ಎನಗೊಮ್ಮೆ ಬಸವಣ್ಣನ ಘನವ ತಿಳುಹಿಕೊಡಾ ಚೆನ್ನಬಸವಣ್ಣ.

1054

ಆದಿಯ ತೋಱಿದೆ; ಅನಾದಿಯನಱುಹಿದೆ. ಇಹವ ಕೆಡಿಸಿದೆ; ಪರವ ನಿಲಿಸಿದೆ. ಕಾಯಪ್ರಸಾದ, ಭಾವಪ್ರಸಾದ, ಜ್ಞಾನಪ್ರಸಾದವನೇಕವಮಾಡಿ ತೋಱಿದೆ. ಪರವನೊಳಕೊಂಡು ಪರಿಣಾಮದಲ್ಲಿರಿಸಿದೆ. ಗೊಹೇಶ್ವರನ ಶರಣ ಸಂಗನ ಬಸವಣ್ಣನ ಪೂರ್ವಾಪರವ ಹೇಳಿ ಎನ್ನನುಳುಹಿಕೊಳ್ಳಾ, ಚೆನ್ನಬಸವಣ್ಣ.

1055

ಅಂದಂದಿನ ಮಾತ ಅಂದಂದಿಂಗೆ ಅಱಿಯಬಾರದು. ಹಿಂದೆ ಹೋದ ಯುಗಪ್ರಳಯಂಗಳ ಬಲ್ಲವರಾರಯ್ಯ? ಮುಂದೆ ಬಪ್ಪ ಯುಗಪ್ರಳಯಂಗಳ ಬಲ್ಲವರಾರಯ್ಯ? ಬಸವಣ್ಣನು ಆದಿಯಲ್ಲಿ ಲಿಂಗ ಶರಣನೆಂಬುದ ಭೇದಿಸಿ ನೋಡಿ ಅಱಿವರಿನ್ನಾರಯ್ಯ? ಲಿಂಗಜಂಗಮಪ್ರಸಾದದ ಮಹಾತ್ಮೆಗೆ ಬಸವಣ್ಣನೆ ಆದಿಯಾದವನೆಂಬುದನಱಿದ ಸ್ವಯಂಭುಜ್ಞಾನಿ ಗೊಹೇಶ್ವರಲಿಂಗದಲ್ಲಿ ಚೆನ್ನಬಸವಣ್ಣನೊಬ್ಬನೆ.

1056

ಕಾಯವಿಡಿದು ಹುಟ್ಟಿದಾತ ಕಾಲಾಗ್ನಿರುದ್ರನಾಗಲಿ, ಕಾಯವಿಡಿದು ಹುಟ್ಟಿದಾತ ಕಾಮಸಂಹಾರಿಯಾಗಲಿ, ಕಾಯವಿಡಿದು ಹುಟ್ಟಿದಾತ ಅನಾದಿ ಪರಮೇಶ್ವರನಾಗಲಿ, ಅಱಿವು ಸಾಧ್ಯವಾಗದು ಆರಿಗೆಯು! ಗೊಹೇಶ್ವರಲಿಂಗದಲ್ಲಿ ನೀನು ಕಾಯವಿಡಿದು ಕಲ್ಪಿತವ ಹೊದ್ದೆಯೆಂಬುದು ಕಾಣಬಂದಿತ್ತು ನೋಡಾ, ಚೆನ್ನಬಸವಣ್ಣ.

1057

ಅಂಗವಿಡಿದು, ಅಂಗ ಅನಂಗವೆಂಬೆರಡನೂ ಹೊದ್ದದ ಮಹಿಮನ ನೋಡಾ! ಅಂಗವೆ ಆಚಾರವಾಗಿರಬಲ್ಲ; ಆಚಾರವೆ ಅಂಗವಾಗಿರಬಲ್ಲನಾಗಿ ಅಂಗವಿಲ್ಲದಪ್ರತಿಮನ ನೋಡಾ! ಆಚಾರವೆ ಸ್ವಾಯತ, ಆಚಾರವೆ ಪ್ರಾಣ. ಗೊಹೇಶ್ವರಲಿಂಗದಲ್ಲಿ ನಿನ್ನ ಆಚಾರಭಿಕ್ಷವನಿಕ್ಕಾ, ಚೆನ್ನಬಸವಣ್ಣ.

1058

ಆಯತಸ್ವಾಯತಸನ್ನಿಹಿತನಾಗಿ, [illegible]ಲಿಂಗದಲ್ಲಿ ಅನುಭಾವಿಯಾಗಿ

ಪ್ಪನು. ಜಂಗಮಲಿಂಗಪ್ರಾಣಿಯಾಗಿ ಪ್ರಾಣನಿಷ್ಪ್ರಾಣವಾಗಿಪ್ಪನು. ಗೊಹೇಶ್ವರ ಲಿಂಗದಲ್ಲಿ ಸಂಗನ ಬಸವಣ್ಣನ ಆಚಾರದ ಪರಿ ನಿನಗಲ್ಲದೆ ಅಱಿಯ ಬಾರದು. ಎನಗೊಮ್ಮೆ ತಿಳುಹಿ ಕೊಡಾ, ಚೆನ್ನಬಸವಣ್ಣ.

1059

ಲಿಂಗದಲ್ಲಿ ಅಂಗವಾಗಿ, ಅಂಗವಿರಹಿತನಾಗಿ ಫಲವೇನಯ್ಯ? ಜಂಗಮದಲ್ಲಿ ಸನ್ನಹಿತನಾಗಿ ದಾಸೋಹವ ಮಾಡಿ ಫಲವೇನಯ್ಯ? ನೀನಾನೆಂಬ ಭಾವವುಳ್ಳನ್ನಕ್ಕರ, ಜಂಗಮದಲ್ಲಿ ಸಮಯಾಚಾರಿಯಾಗಿಪ್ಪನ್ನಕ್ಕರ, ಮಾಡುವ ಭಕ್ತಿಗೆ ಭಿನ್ನವದೆ. ಗೊಹೇಶ್ವರಲಿಂಗದಲ್ಲಿ ಸಂಗನ ಬಸವಣ್ಣಂಗೆ ಆಚರಣೆ ತಿಳಿಯದು ನೋಡಾ, ಚೆನ್ನಬಸವಣ್ಣ.

1060

ಅಂಗವೆಂಬ ಸಂಸಾರದೊಳಗೆ ಸವೆದವರೆಲ್ಲರೂ ಶಿವನನಱಿವರೆ? ಮನವೆಂಬ ಸಂಕಲ್ಪದ ಕುಳಿಗೆ ಒಳಗಾದವರೆಲ್ಲರೂ ಮಾಯದ ಹೊಡೆಗಿಚ್ಚ ಗೆಲಬಲ್ಲರೆ? ಗೊಹೇಶ್ವರಲಿಂಗದಲ್ಲಿ ಸರ್ವಸಂದೇಹವ ಕಳೆದಿಪ್ಪ ಚೆನ್ನಬಸವಣ್ಣಂಗೆ ನಮೋ ನಮೋ ಎಂಬೆ.

1061

ತಾನೆಂದೆನಲೊಲ್ಲದೆ ಗುರುವೆಂದು ಹಿಡಿದವನ, ಗುರುವೆಂದಲ್ಲಿ ನೀನೆಂದು ನಡೆದವನ, ನೀನೆಂದಲ್ಲಿಯೆ ಲಿಂಗಜಂಗಮದ ಸಕೀಲಸಂಬಂಧವ ನೆಲೆಗೊಳಿಸಿದವನ, ಲಿಂಗಜಂಗಮದಲ್ಲಿ ತನ್ನ ಮಱೆದು ಕಱಿಗೊಂಡ ಲಿಂಗೈಕ್ಯನ ಗೊಹೇಶ್ವರಲಿಂಗದಲ್ಲಿ ಚೆನ್ನಬಸವಣ್ಣನ ಶ್ರೀಪಾದಕ್ಕೆ ನಮೋ ನಮೋ ಎನುತಿರ್ದೆನು.

1062

ನರಲೋಕದ ನರರುಗಳೆಲ್ಲರು ನರಸಂಸಾರಕ್ಕೊಳಗಾದರು. ಸುರಲೋಕದ ಮುನಿಗಳೆಲ್ಲರು ತಪೋಸಂಸಾರಕ್ಕೊಳಗಾದರು. ಜಂಗಮವ ಪೂಜಿಸುವರೆಲ್ಲರು ಸಾಯುಜ್ಯಸಂಸಾರಕ್ಕೊಳಗಾದರು. ರುದ್ರಲೋಕದ ರುದ್ರಗಣಂಗಳೆಲ್ಲರು ರುದ್ರಪದವೆಂಬ ಸಂಸಾರಕ್ಕೊಳಗಾದರು. ಲಿಂಗವಧರಿಸಿದವರೆಲ್ಲರು ಲಿಂಗಸಂಸಾರಕ್ಕೊಳಗಾದರು. ಪ್ರಸಾದಪಾದೋದಕಸಂಬಂಧಿಗಳೆಲ್ಲರು ಪ್ರಸಾದಸಂಸಾರಕ್ಕೊಳಗಾದರು. ಗೊಹೇಶ್ವರಲಿಂಗದಲ್ಲಿ ಸರ್ವಸಂಸಾರವಿರಹಿತ ಚೆನ್ನಬಸವಣ್ಣಂಗೆ ನಮೋ ನಮೋ ಎಂಬೆನು.

1063

ತಿಂಬ ಗಂಡೆಯಮೇಲೆ ಉಗುರು ಬಿದ್ದಂತಾಯಿತ್ತು. ಅಱಸುವ ಬಳ್ಳಿ ಕಾಲ ಸುತ್ತಿದಂತಾಯಿತ್ತು. ನಾನು ಬಯಸುವ ಬಯಕೆ ತಾರ್ಕಣೆ ಬಂದಿತ್ತು.

ಗೊಹೇಶ್ವರಲಿಂಗದಲ್ಲಿ ಎನಗೂ ನಿನಗೂ ಒಂದಾದ ಪರಿ ಎಂತು ಹೇಳಾ, ಚೆನ್ನ ಬಸವಣ್ಣ ?

1064

ಒಂದ ಮಾಡ ಹೋದಲ್ಲಿ ಮತ್ತೊಂದಾಯಿತ್ತೆಂಬ ಮಾತು ದಿಟವಾ-ಯಿತ್ತು ನೋಡಾ ! ನಿಮ್ಮ ಒಡತಣ ಅನುಭಾವದಿಂದ ಗುರುಮುಖ ಸಾಧ್ಯ ವಾದುದಯ್ಯ ! ಗೊಹೇಶ್ವರಲಿಂಗದಲ್ಲಿ ನನಗೂ ನಿನಗೂ ಉಪದೇಶ ಒಂಪಾದ ಭೇದವ ಹೇಳಾ, ಚೆನ್ನಬಸವಣ್ಣ !

1065

ಕಿಱಿಯರಾದಡೇನು ? ಹಿರಿಯರಾದಡೇನು ? ಅಱಿವಿಂಗೆ ಹಿರಿದುಕಿರಿ ದುಂಟೆ ? ಆದಿಯನಾದಿ ಇಲ್ಲದಂದು, ಅಜಾಂಡಬ್ರಹ್ಮಾಂಡಕೋಟಿಗಳುದಯ ವಾಗದಂದು, ಗೊಹೇಶ್ವರಲಿಂಗದಲ್ಲಿ ನೀನೊಬ್ಬನೆ ಮಹಾಜ್ಞಾನಿಯೆಂಬುದು ಕಾಣಬಂದಿತ್ತು ಕಾಣಾ, ಚೆನ್ನಬಸವಣ್ಣ.

1066

ಲಿಂಗವಿಡಿದು ಅಱಿದಱಿವು ಅಱಿವಲ್ಲ. ಗುರುವಿಡಿದು ಅಱಿದಱಿವು ಅಱಿವಲ್ಲ. ಗುರುವಿಡಿದು ಲಿಂಗ ಉಂಟೆಂಬುದು ಕಲ್ಪಿತ. ತನ್ನಿಂದ ತಾನಹು-ದಲ್ಲದೆ, ಗೊಹೇಶ್ವರಲಿಂಗದಲ್ಲಿ ಹಂಗು ಹಱಿಯದನ್ನಕ್ಕರ ತಾನಾಗಬಾರದು ಕಾಣಾ, ಚೆನ್ನಬಸವಣ್ಣ.

1067

ಗುರುವಿನ ಪ್ರಾಣ ಲಿಂಗದಲ್ಲಿ ಲೀಯವಾದ ಬಳಿಕ, ಆ ಲಿಂಗವೆನ್ನ ಕರ ಸ್ಥಲಕ್ಕೆ ಬಂದಿತ್ತು ನೋಡಾ. ಇದ್ದಾನೆ, ನೋಡಾ, ಎನ್ನ ಗುರುವು ಅನಿಮಿಷ ನೆನ್ನ ಕರಸ್ಥಲದಲ್ಲಿ. ಇದ್ದಾನೆ, ನೋಡಾ, ಎನ್ನ ಗುರು ಅನಿಮಿಷನೆನ್ನ ಜ್ಞಾನದೊಳಗೆ. ಇದ್ದಾನೆ, ನೋಡಾ, ಎನ್ನ ಗುರುವಿನ ಗುರು ಬಸವಣ್ಣ ನೆನ್ನ ಕಂಗಳ ಮುಂದೆ. ಗೊಹೇಶ್ವರಸಾಕ್ಷಿಯಾಗಿ ಎನ್ನ ಮೇಲೆ ಗುರುದ್ರೋಹ ವಿಲ್ಲ ಕಾಣಾ, ಚೆನ್ನಬಸವಣ್ಣ.

1068

ಕರಸ್ಥಲದ ಲಿಂಗ ಮನಸ್ಥಲಕ್ಕೆ ವೇದ್ಯವಾಗಿ, ಮನಸ್ಥಲದ ಲಿಂಗ ಮಹಾ ಸ್ಥಲದಲ್ಲಿ ವೇದ್ಯವಾಗಿ, ಮಹಾಸ್ಥಲವೆ ಎನ್ನ ಸರ್ವಾಂಗವೇದ್ಯವಾದ ಬಳಿಕ ಇನ್ನು ಭಿನ್ನಭಾವಕ್ಕೆ ತೆಱಹುಂಟೆ ಹೇಳಾ ? ಗೊಹೇಶ್ವರನೆಂಬ ಪ್ರಾಣಲಿಂಗವು ಬೆರಸಿ ಸಮಧಾತುವಾದ ಬಳಿಕ ಎರಡೆಂಬುದಿಲ್ಲ ನೋಡಾ, ಚೆನ್ನಬಸವಣ್ಣ.

1069

ಲಿಂಗ ಪ್ರಾಣ, ಪ್ರಾಣ ಲಿಂಗವಾಯಿತ್ತು. ಅಂಗ ಲಿಂಗ ಲಿಂಗವಂಗ-

ವಾಯಿತ್ತು. ಗೊಹೇಶ್ವರಲಿಂಗದಲ್ಲಿ ಸರ್ವಾಂಗ ಪ್ರಾಣಲಿಂಗವಾಯಿತ್ತು ಕೇಳಾ ಚೆನ್ನಬಸವಣ್ಣ.

1070

ಮನ ಮನ ಬೆರಸಿದನುಭಾವ. ಘನಕ್ಕೆ ಘನ ಒಂದಾಯಿತ್ತು ನೋಡಾ! ಆದು ತನ್ನಲ್ಲಿ ತಾನು ತೃಪ್ತಿಯಾದ ನಿಜವು ನಿರ್ಣಯದ ಮೇಲೆ ನಿರ್ಧರ ವಾಯಿತ್ತು ನೋಡಾ! ಗೊಹೇಶ್ವರಲಿಂಗದಲ್ಲಿ ಚೆನ್ನಬಸವಣ್ಣನಿಂದ ಸುಖಿ ಯಾದೆನು.

1071

ತನುವ ಗುರುವಿಂಗೆ ಸಮರ್ಪಿಸಿ, ಮನವ ಲಿಂಗಕ್ಕೆ ಸಮರ್ಪಿಸಿ, ಭಾವವ ಜಂಗಮಕ್ಕೆ ಸಮರ್ಪಿಸಿ, ನಿಜವ ತೃಪ್ತಿಯಲರ್ಪಿಸಿ, ಘನವನಱಿವಿಂಗರ್ಪಿಸಿ, ಅರ್ಪಿತವೆ ಅನರ್ಪಿತವಾಗಿ, ಅನರ್ಪಿತವೆ ಅರ್ಪಿತವಾಗಿ, ಅರ್ಪಿತ ಅನರ್ಪಿತಂಗ ಳಳಿದು ನಿತ್ಯಪ್ರಸಾದಿಯಾಗಿ, ಪ್ರಸಾದದ ಹಾದಿಯನೆಲ್ಲರಿಗೆ ತೋಱಿ ಮಹಾ ಪ್ರಸಾದದ ಬೆಳವಿಗೆಯ ಮಾಡಿದನು ಗೊಹೇಶ್ವರನ ಶರಣ ಚೆನ್ನ ಬಸವಣ್ಣನು.

1072

*ಎಂತಯ್ಯ ನೊಸಲಲ್ಲಿ ಕಣ್ಣು, ಮನದಲ್ಲಿ ವಿರಸ, ನುಡಿವುದೆಲ್ಲವು ಭಕ್ತಿ-ರಸ, ಜ್ಞಾನವೆಂತು ಹೇಳಾ? ನಿರಹಂಕಾರವೆಂತು ಹೇಳಾ? ಅಱುಹಿನ ಕುಱು ಹಿನ ಮಱವೆ ಮಾತಿನೊಳಗದೆ. ನಿನ್ನಿಂದ ನಿಜಪದವೆಂತು ಸಾಧ್ಯವಪ್ಪುದು ಹೇಳಾ? ಕುಱುಹಳಿದು ಕುಱುಹನಱಿಯಬಲ್ಲಡೆ, ಗೊಹೇಶ್ವರಲಿಂಗದಲ್ಲಿ ಉಭಯಗೆಟ್ಟಲ್ಲದೆ ಪ್ರಸಾದವಿಲ್ಲ ಕಾಣಾ, ಮಡಿವಾಳ ಮಾಚಯ್ಯ.

1073

ಗುರುವಿದು, ಲಿಂಗವಿದು, ಜಂಗಮವಿದು ಎಂಬ ಭೇದವ ಏಕವ ಮಾಡಿ ನಿನಗೆ ತೋಱಿದವರಾರು? ಹೇಳಾ! ಆದಿಯನಾದಿಯನು ಒಂದು ಮಾಡುವ ಭಾವನಿರ್ಭಾವವನಱುಹಿದವರಾರು ಹೇಳಾ? ದೀಕ್ಷೆ ಶಿಕ್ಷೆ ಸ್ವಾನುಭಾವದ ಪರಿಯ ತೋಱಿ ನಿಜಪದದಲ್ಲಿ ನಿಲಿಸಿದವರಾರು ಹೇಳಾ? ಗೊಹೇಶ್ವರಲಿಂಗ ದಲ್ಲಿ ನಿನ್ನ ಆಯತವ ಹೇಳಾ, ಮಡಿವಾಳ ಮಾಚಯ್ಯ!

1074

ಅಱಿವು ಉದಯವಾದಲ್ಲದೆ ಮಱಹು ನಷ್ಟವಾಗದು. ಮಱಹು ನಷ್ಟ

---

*ಅಲ್ಲಮಪ್ರಭು ಮಡಿವಾಳ ಮಾಚಯ್ಯಗಳೊಡನೆ ನಡೆಸಿದ ಅನುಭಾವದ ವಚನ ಗಳು 1072 ರಿಂದ 1081 ರವರಿಗೆ.

ನಾದಲ್ಲದೆ ಅಱಿವು ಸಯವಾಗದು. ಅಱಿವು ಸಯವಾಗಿ ದೊರೆಕೊಂಡ ಬಳಿಕ ಗುರುವಾರು, ಲಿಂಗವಾರು? ಆವುದು ಘನ, ಆವುದು ಕಿಱಿದು ಹೇಳಾ? ಗೊಹೇಶ್ವರಲಿಂಗದಲ್ಲಿ ಅಱಿದು ಮಱೆದು ಉಪದೇಶವ ಪಡೆದರೆ, ಮುಂದೆ ನಿಜವೆಂತು ಸಾಧ್ಯವಪ್ಪುದು ಹೇಳಾ, ಮಡಿವಾಳ ಮಾಚಯ್ಯ!

1075

ಗುರು ಸ್ವಾಯತವಾಯಿತ್ತು, ಲಿಂಗ ಸ್ವಾಯತವಾಯಿತ್ತು, ಜಂಗಮ ಸ್ವಾಯತವಾಯಿತ್ತು ಬಸವಣ್ಣನಿಂದಲೆಂದರೆ, ತನುವಿಲ್ಲದಿರಬೇಕು; ಮನವಿಲ್ಲದಿರಬೇಕು; ಅಱಿವಱಿತು ಮಱಹು ನಷ್ಟವಾಗಿರಬೇಕು. ಗೊಹೇಶ್ವರಲಿಂಗದಲ್ಲಿ ನಿರ್ಲೇಪಿಯಾದಲ್ಲದಿಲ್ಲ ಕಾಣಾ, ಮಡಿವಾಳ ಮಾಚಯ್ಯ.

1076

ತನುವಿನಲ್ಲಿಪ್ಪ ಲೋಭವ ಮನವ ಕದ್ದು ಮಾತನಾಡಿದರೆ, ಆ ತನುವೇ ಮನೋರೂಪಾಗಿ ಕಾಣಬರುತ್ತಿದೆ. ಆ ಮನದಲ್ಲಿ ಬಯಕೆ ಸಮರತಿಯಾಗದಾಗಿ ಕಾಮದ ಕರುಳು ಲೋಭದ ಬಯಕೆಯೊಳಗದೆ. ಅಱಿದೆನೆಂದು ಬಱಿ ಮಾತನಾಡಿದರೆ ನಮ್ಮ ಗೊಹೇಶ್ವರಲಿಂಗವು ಮೆಚ್ಚ ನೋಡಾ, ಮಡಿವಾಳ ಮಾಚಯ್ಯ.

1077

ತನುಗುಣ ನಾಸ್ತಿ, ಮನಗುಣನಾಸ್ತಿ, ಧನಗುಣ ನಾಸ್ತಿಯಾದಡೇನು? ಭಾವ ನಾಸ್ತಿಯಾಗಬೇಕು. ಭಾವನಾಸ್ತಿಯಾದಲ್ಲದೆ ಅಱಿವು ನೆಲೆಗೊಳ್ಳದು. ಅಱಿವು ನೆಲೆಗೊಂಡಲ್ಲಿ ಕುಱುಹಿಂಗೆ ಹೊಱಗು. ಕುಱುಹಳಿದು ಕೂಡುವ ಪರಮಸುಖವು ಗೊಹೇಶ್ವರಲಿಂಗದಲ್ಲಿ ನಿನಗೆ ಸಾಧ್ಯವಾದ ಪರಿಯ ಹೇಳಾ, ಮಡಿವಾಳ ಮಾಚಯ್ಯ.

1078

ಮನ ಮನ ಬೆರಸಿ ಸಮರತಿಯ ಸಂಗದಲ್ಲಿ ಸುಖಿಗಳಾಗಿಪ್ಪ ಶರಣರ ಸಂಗಸುಖವನಾ ಶರಣರೆ ಬಲ್ಲರಲ್ಲದೆ, ಕೆಲದಲ್ಲಿ ಇದ್ದವರಿಗೆ ಅಱಿಯಬಹುದೆ? ನಿಜಗುಣಭರಿತ ಶಿವಶರಣರ ನಿಲವ ಕಂಡಹೆನೆಂದರೆ ಕಾಣಬಹುದೇ? ಗೊಹೇಶ್ವರಲಿಂಗದಲ್ಲಿ ಮಡಿವಾಳ ಮಾಚಯ್ಯನ ಪರಿಯ ನೀ ಬಲ್ಲೆ. ಎನಗೊಮ್ಮೆ ಹೇಳಾ, ಸಂಗನ ಬಸವಣ್ಣ.

1079

ಯುಕ್ತಿಯು ಕೇಳಿದರೆ ಭಕ್ತಿಯು ತೋಱದ. ಭಕ್ತಿಯ ಕೇಳಿದರೆ ಯುಕ್ತಿಯು ತೋಱದು. ನಿತ್ಯವ ಬೆಸಗೊಂಡಲ್ಲಿ ಉತ್ತರ ತೋಱಸಹಿಧ. ಗೊಹೇ

ಶ್ವರನ ಶರಣ ಬಸವಣ್ಣ ಮಱೆಗೆ ಮಱೆಯುನೊಡ್ಡಿ ಜಾಱಿದನು. ಬಸವಣ್ಣನ ಪರಿಯೆಂತು ಹೇಳಾ, ಮಡಿವಾಳ ಮಾಚಯ್ಯ.

1080

ಅಷ್ಟತನುವಿನ ಘಟ್ಟಿಯ ಕರಗಿಸಿ, ಕಟ್ಟುಗ್ರದ ಕಾಮ ಕ್ರೋಧ ಲೋಭ ಮೋಹ ಮದ ಮತ್ಸರಗಳೆಂಬವ ಸುಟ್ಟುರುಹಿ, ತನುವಿನ ಅವಲೋಹವ ಕೆಡಿಸಿ, ಮನದ ಸಂಚಲವ ನಿಲಿಸಿ, ಸಕಲ ಕರಣಂಗಳ ಅಱಿವಿಂಗಾಹುತಿಯನಿಕ್ಕಿ, ಸುಜ್ಞಾನಪ್ರಭೆಯನುಟ್ಟು, ಸುಜ್ಞಾನಪ್ರಭೆಯ ಹೊದೆದು, ಸುಜ್ಞಾನಪ್ರಭೆಯ ಸುತ್ತಿ, ಸುಜ್ಞಾನಪ್ರಭೆಯ ಹಾಸಿ, ಮಹಾಜ್ಞಾನದಲ್ಲಿ ನಿರ್ಭಾವ ಸಂಪನ್ನನಾದ ಮಡಿವಾಳನ ಮಡಿಯ ಪ್ರಸಾದವ ನಾನು ಹೊದೆದ ಕಾರಣ ನಿರ್ಮಳನಾದೆನು, ನಿಜೈಕ್ಯನಾದೆನು, ನಿಶ್ಚಿಂತನಾದೆನು. ಇದು ಕಾರಣ, ಗೊಹೇಶ್ವರಲಿಂಗದಲ್ಲಿ ತೆಱಹಿಲ್ಲದಿಪ್ಪ ಮಡಿವಾಳನ ಪ್ರಸಾದದಿಂದ ನಿಮ್ಮ ಘನವನಱಿದು ಬದುಕಿದೆನು ಕಾಣಾ, ಸಂಗನಬಸವಣ್ಣ.

1081

ಒಂದ ಮಾಡಹೋದರೆ ಮತ್ತೊಂದಾಯಿತ್ತೆಂಬುದು ಎನಗಾಯಿತ್ತು. ನೋಡಾ! ಮಡಿವಾಳನ ಪರಿಯನೊರೆದು ನೋಡಿದರೆ, ನಿನ್ನ ಪೂರ್ವಾಪರ ವೆನಗಱಿಯ ಬಂದಿತ್ತು! ನಿನ್ನ ಪೂರ್ವಾಪರಸಂಗವ ಮಾಡ ಬಂದರೆ, ಎನ್ನ ಪೂರ್ವಾಪರವೆನಗಱಿಯ ಬಂದಿತ್ತು ನೋಡಾ! ಮಹಾಜ್ಞಾನಿಗಳ ಸಂಗದಿಂದ ಉಭಯಸಂಗಸಿದ್ಧಿ ಎಂಬುದು ದಿಟವಾಯಿತ್ತು ನೋಡಾ ಬಸವಣ್ಣ! ಗೊಹೇಶ್ವರನ ಶರಣ ಮಡಿವಾಳನ ಪಾದಕ್ಕೆ ನಮೋ ನಮೋ ಎನುತಿರ್ದೆನು.

1082

*ಕಾಯವೆ ಸಕಲ, ಪ್ರಾಣವೆ ಸಕಲನಿಃಕಲ, ಭಾವವೆ ನಿಃಕಲಲಿಂಗವಾಗಿರ್ದ ಮತ್ತೆ, ಬೇಱೆ ಆಯತ ಸ್ವಾಯತ ಸನ್ನಹಿತವೆಂಬುದಿಲ್ಲ ನೋಡಾ. ಶಿವಶಕ್ತಿ ಸಂಬಂಧವೆ ದೇಹದೇಹಿಗಳಾಗಿದ್ದ ಬಳಿಕ, ಗೊಹೇಶ್ವರಲಿಂಗದಲ್ಲಿ ಬೇಱೊಂದು ಕುಱುಹುವಿಡಿದು ಅಱಿಯಲೇಕಯ್ಯ ಚೆನ್ನಬಸವಣ್ಣ?

1083

ಬೆಳಗಿನೊಳಗೊಂದು ಬೆಳಗು ದೊರೆಕೊಂಡಡೆ, ಮತ್ತೊಂದು ಬೆಳಗು ಮತ್ತೆಲ್ಲಿಯದೋ? ಘನದೊಳಗೊಂದು ಘನವು ದೊರೆಕೊಂಡಡೆ ಮತ್ತೊಂದು

---

*ಅಲ್ಲಮಪ್ರಭು ಚೆನ್ನಬಸವಣ್ಣನವರಿಂದ ಸಿದ್ಧರಾಮಯ್ಯದೇವರಿಗೆ ದೀಕ್ಷೆಯನ್ನು ಮಾಡಿಸಿದ ಸಂದರ್ಭದ ವಚನಗಳು 1082 ರಿಂದ 1089ರವರೆಗೆ.

ಘನವು ಮತ್ತೆಲ್ಲಿಯದೋ? ಸಮೀಪನ ಮೇಲೆ ಸಮೀಪ ಥಾಳಿವರಿದನು, ಗೊಹೇಶ್ವರನ ಶರಣ ಚೆನ್ನಬಸವಣ್ಣನು.

1084

ಎಳ್ಳಿಂಗೆ ಪರಿಮಳವ ಕಟ್ಟದಲ್ಲದೆ, ಎಣ್ಣೆಗೆ ಪರಿಮಳ ವೇಧಿಸದು. ದೇಹ ದಲ್ಲಿ ಇಷ್ಟಲಿಂಗ ಸ್ಥಾಪಿಸಿದಲ್ಲದೆ ಪ್ರಾಣಲಿಂಗಸಂಬಂಧವಾಗದು. ಇದು ಕಾರಣ ಗೊಹೇಶ್ವರಲಿಂಗದಲ್ಲಿ ಇಷ್ಟಲಿಂಗಸಂಬಂಧಿಯಾದಲ್ಲದೆ ಪ್ರಾಣಲಿಂಗಸಂಬಂಧಿ ಯಾಗಬಾರದು ಕಾಣಾ, ಸಿದ್ಧರಾಮಯ್ಯ.

1085

ಅಂಗ ಲಿಂಗ, ಪ್ರಾಣ ಲಿಂಗ, ಮನ ಲಿಂಗವಾಯಿತ್ತು ನೋಡಾ! ಅಂಗ ಲಿಂಗವಾಗಿ ನಡೆನುಡಿಗತಿಯನಱಿಯದು. ಪ್ರಾಣ ಲಿಂಗವಾಗಿ ನವನಾಳದ ಸುಳುಹನಱಿಯದು. ಮನ ಲಿಂಗವಾಗಿ ನೆನಹುಗೆಟ್ಟಿತ್ತು. ಅನುಭಾವ ಲಿಂಗವಾಗಿ ವಿಚಾರವಱಿತಿತ್ತು. ಭಾವ ಲಿಂಗವಾಗಿ ಭಾವನೆಯಳಿಯಿತ್ತು. ಸರ್ವಕ್ರೀಗಳೆಲ್ಲವು ಲಿಂಗವಾಗಿ ಮಾರ್ಗಕ್ರೀಯ ಹೊಲಬನಱಿಯದು. ಅಱಿವು ಲಿಂಗವಾಗಿ ಅಱಿವುಮಱಹುಗೆಟ್ಟಿತ್ತು. ಅಂತರಂಗ ಲಿಂಗವಾಗಿ ಬಹಿರಂಗ ವೆಂದಱಿಯದು. ಬಹಿರಂಗ ಲಿಂಗವಾಗಿ ಅಂತರಂಗ ಸುದ್ದಿಯನಱಿಯದು, ಸರ್ವಾಂಗ ಲಿಂಗವಾಗಿ ಸರ್ವೇಂದ್ರಿಯ ಗಮನಗೆಟ್ಟಿತ್ತು. ಮಹಾಘನವಿಂಬು ಗೊಂಡಿತ್ತಾಗಿ ನಿಷ್ಪತ್ತಿ ಕಱಿಗೊಂಡಿತ್ತು. ಗೊಹೇಶ್ವರಲಿಂಗದಲ್ಲಿ ಪ್ರಾಣಲಿಂಗ-ಸಂಬಂಧ ಸಯವಾಯಿತ್ತು ನೋಡಾ, ಸಿದ್ಧರಾಮಯ್ಯ.

1086

ರತ್ನದೀಪ್ತಿಯಾದಡೇನು? ಬಂಧಿಸಿದ ಕುಂದಣದಲ್ಲಿಯೆ ಸಂದಿರಬೇಕು. ಸ್ವಾದುರಸದ ರುಚಿಯನೀವ ಫಲವೆಂದಡೇನು, ವೃಕ್ಷವಿಲ್ಲದನ್ನಕ್ಕರ? ಚಿತ್ರ-ಸೌಂದರ್ಯ ನೋಟಕ್ಕೆ ಸುಖವೆಂದಡೇನು, ಭಿತ್ತಿಯ ಪಟಮುಖ್ಯಸ್ಥಾನವಿಲ್ಲ ದನ್ನಕ್ಕರ? ಅಂಜನಸಿದ್ಧಿಯ ನಿಧಾನವ ಕಂಡಡೇನು, ಸಾಧನಕ್ರೀಯಿಂದ ಸಾಧ್ಯವ ಮಾಡಿಕೊಳ್ಳದನ್ನಕ್ಕರ? ಇದು ಕಾರಣ. ಕಾಯದ ಕರಸ್ಥಲಕ್ಕೆ ಇಷ್ಟ-ಲಿಂಗ ಸಾಹಿತ್ಯವಿಲ್ಲದಿದ್ದಡೆ ನಿರವಯವಾದ ಜ್ಞಾನಯೋಗದ ಕೂಟ ಸಾಧ್ಯ ವಾಗದು. ಇದು ಕಾರಣ, ಕ್ರಿಯಾಲಿಂಗಸಂಬಂಧವೆ ಭಕ್ತಂಗೆ ಮತವು. ಇದೇ ದೇಹಶೌಚವು. ನಮ್ಮ ಗೊಹೇಶ್ವರನ ಶರಣರ ಮನ ಒಪ್ಪುವಂತೆ ಸಿದ್ಧರಾಮಯ್ಯಂಗೆ ಲಿಂಗಸಾಹಿತ್ಯವ ಮಾಡಾ, ಚೆನ್ನಬಸವಣ್ಣ.

1087

ಸ್ವಾನುಭಾವದ ಬೆಳಗಿನಲ್ಲಿ ಒಂದು ಬೆಕ್ಕು ಹುಟ್ಟಿತ್ತು. ಆ ಬೆಕ್ಕಿನ ತಲೆಯಮೇಲೆ ಒಂದು ಗಿರಿ ಹುಟ್ಟಿತ್ತು. ಆ ಗಿರಿಯ ಮೇಲೆ ಎರಡು ರತ್ನ

ಹುಟ್ಟಿದವು. ಆ ರತ್ನವನಱಸಿ ಕೊಂಡು ಬರಲು, ಅವು ತನ್ನ ನವಗ್ರಹಿಸಿದವು. ಒಂದು ರತ್ನ ಅಂಗವನವಗ್ರಹಿಸಿತ್ತು. ಮತ್ತೊಂದು ರತ್ನ ಪ್ರಾಣವನವಗ್ರಹಿಸಿತ್ತು. ಆ ರತ್ನಂಗಳ ಪ್ರಭೆ ತಾನಾದ ನಮ್ಮ ಗೊಹೇಶ್ವರನ ಶರಣ ಸಿದ್ಧರಾಮಯ್ಯನ ನಿಲವಿಂಗೆ ನಮೋ ನಮೋ ಎನುತಿರ್ದೆನಯ್ಯ ಚೆನ್ನಬಸವಣ್ಣ.

1088

ಪಂಚಭೂತ ತ್ರಿಗುಣವನು ಸಂಚರಿಸಿ, ರವಿಶಶಿಯ ಅಂತು ಕೂಡದ ರಜಬೀಜ ಬದ್ಧಬಂಧವಾಯಿತ್ತೋ! ಸಂಗತಿ ಇಲ್ಲದವನಲ್ಲ, ಪವನಗತಿಯ ನಡೆವವನಲ್ಲ. ಭೇದಿಸುತ್ತಿದ್ದಿತ್ತು ಲೋಕವೆಲ್ಲ. ಆತನೆ ರಜಬೀಜವಿಲ್ಲದ ಬಯಲು ಬದ್ಧವಾಯಿತ್ತೆ? ಇನ್ನೇನೆಂದುಪಮಿಸುವೆ, ಗೊಹೇಶ್ವರ, ಸಿದ್ಧರಾಮನ ನಾಮವನು?

1089

ಹಲವು ಮಕ್ಕಳ ತಾಯಂತೆ ಹೇಸದವರನಾರೈದ ತನುಸಮರ್ಥವು ನಿಮಗಲ್ಲದೆ ಇನ್ನಾರಿಗೆ ಅಳವಡುವುದು? ಮುನ್ನಾರಿಗೆ ಅಳವಡುವುದು? ಇನ್ನು ಎನ್ನಳವೆ ನಿಮ್ಮವನು ತಿಳಿಯಲು? ಮುನ್ನಿನ ಸುಕೃತ ಉಂಟಾಗಿ, ನಿಮ್ಮ ಪಾದ ದೊರಕೊಂಡಿತ್ತು. ಇನ್ನು ನಮ್ಮನಿಳಿಯಬಿಡದೆ, ಎನ್ನವನು ಇವನೆಂದು ವಿವರಿಸಿ, ಎನ್ನ ನಿನ್ನತ್ತ ತೆಗೆ ಕರುಣಿಸಿ. ಎನ್ನ ಮಾತಾಪಿತ ಗೊಹೇಶ್ವರ, ನಿಮ್ಮ ಶರಣ ಮಡಿವಾಳ ಮಾಚಯ್ಯನಿಂದ ಬಯಲಾದೆನು, ಮುಕ್ತನಾದೆನು ನಿಮ್ಮ ಕರುಣದಿಂದ.

1090

ಚಾದಂತ ಮದಕರಿಯೊಳಡಗಿತ್ತು. ಬೆಳಗಿನ ಬಳಗದ ನವಪಂಜರವೋ! ಭಾವಪರಿಮಳವ ಭೇದಿಸಬಾರದು ಮಕಾಪಾಳಿಯ ಸುಳುಹಿನ ಸೂಕ್ಷ್ಮಂಗಲ್ಲದೆ. ಅಳಿ ರತುನವ ನುಂಗಿದ ಪರಿ ಇನ್ನೆಂತೋ? ಸಾಧ್ಯವಾಯಿತ್ತು ಸುಖಸಂಭಾಷಣೆ ಗೊಹೇಶ್ವರಲಿಂಗದಲ್ಲಿ ಚೆನ್ನಬಸವಣ್ಣಂಗೆ.

1091

ಎನ್ನ ತನುವೆ ಚೆನ್ನಬಸವಣ್ಣನಯ್ಯ. ಎನ್ನ ಮನವೆ ಮಡಿವಾಳನಯ್ಯ ಎನ್ನ ಪ್ರಾಣವೆ ಸಂಗನ ಬಸವಣ್ಣನಯ್ಯ. ಗೊಹೇಶ್ವರ, ನಿಮ್ಮ ಶರಣರ ಘನವನು ಎನ್ನ ಸರ್ವಾಂಗದಲ್ಲಿ ಕಂಡು ಪರಮ ಸುಖಿಯಾಗಿರ್ದೆನು.

1092

*ಪರುಷವಾದರೂ ಒಂದಱಲ್ಲಿ ಇರಿಸಿರಬೇಕು. ರತ್ನವಿಶೇಷವಾದರೂ

---

* ನುಲಿಯಚಂದಯ್ಯಗಳನ್ನು ಅಲ್ಲಮಪ್ರಭು ಪ್ರಬೋಧಿಸಿದ ಪ್ರಸ್ತಾವದ ವಚನಗಳು 1092 ರಿಂದ 1098 ವರೆಗೆ.

ಕುಂದಣದಲ್ಲಿ ಬಂಧಿಸಿ ಸಂದಿರಬೇಕು. ಲಿಂಗವ ಹಿಡಿದಲ್ಲಿ ಪೂಜಿಸುವ ಅಂಗ ವಿರಬೇಕು. ಇದು ಕಾರಣ ಗೊಹೇಶ್ವರಲಿಂಗವನಱಿದು ಮಱೆಯಲಿಲ್ಲ ಕಾಣಾ ಚಂದಯ್ಯ.

1093

ಅಂಗ ಉಳ್ಳನ್ನಬರ ಲಿಂಗಪೂಜೆಯೆ ಬೇಕು. ಲಿಂಗವೆಂಬ ಮೂರ್ತಿ ಯುಳ್ಳನ್ನಬರ ಸಂದಿಲ್ಲದೆ ಅರ್ಪಿಸಬೇಕು. ಅಂಗವಳಿದ ಮತ್ತೆ ಲಿಂಗವೆಂಬ ಭಾವ ಹಿಂಗದಿರಬೇಕು. ಅದು ಗೊಹೇಶ್ವರಲಿಂಗದ ಇರವು ಚಂದಯ್ಯ.

1094

ಅಂಗದಲ್ಲಿ ಅಳವಟ್ಟಿರ್ಪ ಆಚಾರವೆ ಲಿಂಗವೆಂದಱಿದನು. ಮನದಲ್ಲಿ ಬೆಳಗುತ್ತಿರ್ಪ ಅಱಿವೆ ಜಂಗಮವೆಂದಱಿದನು. ಈ ಎರಡಱ ಸಂಗವೆ ತಾನೆಂದ ಱಿದನು. ಮಾಡುವ ದಾಸೋಹವೆ ಲಿಂಗಜಂಗಮವೆಂದಱಿದನು. ನಮ್ಮ ಗೊಹೇಶ್ವರಲಿಂಗದಲ್ಲಿ ಸಂಗನ ಬಸವಣ್ಣನ ನಿಲವನಱಿಯಬೇಕು। ಕೇಳಾ ಚಂದಯ್ಯ.

1095

ಆದಿಯಲ್ಲಿ ನೀನೆ ಗುರುವಾದ ಕಾರಣ, ನಿನ್ನಿಂದ ಹುಟ್ಟಿತ್ತು ಲಿಂಗ. ಆದಿಯಲ್ಲಿ ನೀನೆ ಲಿಂಗವಾದ ಕಾರಣ, ನಿನ್ನಿಂದ ಹುಟ್ಟಿತ್ತು ಜಂಗಮ. ಆದಿ ಯಲ್ಲಿ ನೀನೆ ಜಂಗಮವಾದ ಕಾರಣ, ನಿನ್ನಿಂದ ಹುಟ್ಟಿತ್ತು ಪ್ರಸಾದ. ಆದಿ ಯಲ್ಲಿ ನೀನೆ ಪ್ರಸಾದಿಯಾದ ಕಾರಣ ನಿನ್ನಿಂದ ಹುಟ್ಟಿತ್ತು ಪಾದೋದಕ. ಇಂತೀ ಗುರು ಲಿಂಗ ಜಂಗಮ ಪ್ರಸಾದ ಪಾದೋದಕಸ್ವರೂಪ ನೀನೆಯಾದ ಕಾರಣ ಜಂಗಮಪ್ರಾಣಿಯಾಗಿ ಸದಾಚಾರಿಯಾದೆ. ಅದು ಕಾರಣ ನೀನೆ ಸರ್ವಾ ಚಾರಸಂಪನ್ನನಾಗಿ ಪೂರ್ವಾಚಾರಿ ನೀನೆಯಾದ ಕಾರಣ, ಗೊಹೇಶ್ವರ ಲಿಂಗ ದಲ್ಲಿ ಚಂದಯ್ಯಂಗೆ ಲಿಂಗದ ನಿಜವ ತಿಳುಹಾ, ಸಂಗನ ಬಸವಣ್ಣ.

1096

ಕಣ್ಣು ಕಂಡಲ್ಲದೆ ಮನ ನೆನೆಯದು. ಆ ಮನ ನೆನೆದಲ್ಲಿಗೆ ಕಾಲು ನಡೆ ವುದು. ಕಾಲು ನಡೆದಲ್ಲದೆ ಕಾರ್ಯವಾಗದು. ಕಾಲೆಂದರೆ ನೀ ಚರಿಸುವ ವರ್ತನೆ. ಆ ವರ್ತನಾಚಾರವೆಲ್ಲವೂ ಲಿಂಗವು. ಇದು ಕಾರಣ, ಲಿಂಗವ ಹಿಂಗಿದ ಮಾಟ ಮೀಸಲಿಲ್ಲದ ಮನೆದೇವರ ಹಬ್ಬದಂತೆ. ನಮ್ಮ ಗೊಹೇಶ್ವರ ಲಿಂಗಕ್ಕೆ ಇದೆ ಬೇಹ ಶೌಚ, ಕೇಳಾ ಚಂದಯ್ಯ.

1097

ಅಂಗದ ಲಿಂಗವೆ ಮನದ ಲಿಂಗ, ಮನದ ಲಿಂಗವೆ ಭಾವದ ಲಿಂಗ, ಭಾವದ ಲಿಂಗವೆ ಜಂಗಮದಾಸೋಹ, ದಾಸೋಹವೆಂಬುದು ಸಂದಿಲ್ಲದ ನಿಜ

ನೋಡಾ. ಅದಱಿಂದವನೆ ತಿಳಿದು ನಿಂದ ನಿಲುಕಡೆಯ ಭೇದವನೆ ಕೇಳ ಬೇಕೆಂದು ಬಂದಲ್ಲಿಯೆ ತಿಳುಹಬೇಕಯ್ಯ. ಇಂತೀ ಪ್ರಕಾರದಲ್ಲಿ ಸಂದ ಸೌಖ್ಯದ ಭೇದವನು ಸಂದಿಲ್ಲದ ಲಿಂಗದ ನಿಜವನು ಇಂದು ನಮ್ಮ ಗೊಹೇಶ್ವರ ಲಿಂಗದಲ್ಲಿ ಚಂದಯ್ಯಂಗೆ ತಿಳುಹಿ ಕೊಡಾ, ಚೆನ್ನಬಸವಣ್ಣ.

1098

ಆಚಾರವೆ ಲಿಂಗ, ಆ ಆಚಾರದಱಿವೆ ಜಂಗಮ. ಆ ಅಂಗವೆ ಲಿಂಗ, ಚೈತನ್ಯವೆ ಜಂಗಮ. ಆ ಜಂಗಮದ ಸೇವೆಯೆ ಲಿಂಗ, ಕೊಂಬುದೆ ಜಂಗಮ. ನಮ್ಮ ಗೊಹೇಶ್ವರನ ಶರಣರು ಮಚ್ಚುವಂತೆ, ಮಡಿವಾಳನ ಕಾಯಕದಂತೆ, ನಿರೂಪಿಸಿದ ಚೆನ್ನಬಸವಣ್ಣನ ಕರುಣದಲ್ಲಿ ಬದುಕಾ, ಚಂದಯ್ಯ.

1099

ಅಶನಕ್ಕಂಜಿ ವೇಷವನೆ ಹೊತ್ತು, ದೇಶವ ತೊಳಲುವ ಹಿರಿಯರ ಗಂಡ, ಕಾಲದ ಗಂಡ, ಕರ್ಮದ ಗಂಡ, ಲಿಂಗವಿಡಿದು ಸಾವ ಹಿರಿಯರ ಗಂಡ, ಗೊಹೇಶ್ವರ ನಿಮ್ಮ ಶರಣ–ಘಟ್ಟವಾಳ–ಅಲ್ಲಮನಂತಿಂತೆಂಬವರ ಗಂಡ.

1100

*ಉದಮದದ ಯೌವನವನೊಳಕೊಂಡ ಸತಿ ನೀನು ಇತ್ತಲೇಕೆ ಬಂದೆಯವ್ವ ? ಸತಿಯೆಂದರೆ ಮುನಿವರು ನಮ್ಮ ಶರಣರು. ನಿನ್ನ ಪತಿಯ ಕುಱುಹ ಹೇಳಿದರೆ ಬಂದು ಕುಳ್ಳಿರು. ಅಲ್ಲದಡೆ ತೊಲಗು ತಾಯೆ. ನಮ್ಮ ಗೊಹೇಶ್ವರನ ಶರಣರಲ್ಲಿ ಸಂಗಸುಖಸನ್ನಹಿತವ ಬಯಸುವಡೆ ನಿನ್ನ ಪತಿ ಯಾರೆಂಬುದ ಹೇಳಾ, ಎಲೆ ಅವ್ವ.

1101

ಕಾಯ ಸತಿಯೆಂದು ಹೇಸಿ ಕಳೆದೆ. ವಾಯದ ಮನ ಮಾಯೆಯೆಂದು ಹೇಸಿ ಬಿಟ್ಟೆ. ವಾಯದ ಸತಿಯೆಂಬ ಸಂದೇಹವೆಮಗೇಕೆ ? ಸತಿಯರ ಗೋಷ್ಠಿ ವಿಷ ಕಾಣವ್ವ. ಗೊಹೇಶ್ವರಲಿಂಗದಲ್ಲಿ ನಿನ್ನ ಪತಿಯ ಕುಱುಹ ಹೇಳಾ, ಎಲೆ ಅವ್ವ.

1102

ತನುಗುಣವ ವಿವರಿಸಿಹೆನೆಂದರೆ ಮನಶುದ್ಧವಾಗಬೇಕು. ಮನದ ಗುಣವ ವಿವರಿಸಿಹೆನೆಂದರೆ ಇಂದ್ರಿಯ ಶುದ್ಧವಾಗಬೇಕು. ತನುಮನ ಇಂದ್ರಿಯಗಳು ಶುದ್ಧ ಸುಯಿಧಾನಿಯಾಗಿ ಲಿಂಗಮುಖಕ್ಕೆ ವೇದ್ಯವಾದಲ್ಲದೆ, ಗೊಹೇಶ್ವರನ ಬೆಸಗೊಳಬಾರದು ಕೇಳಾ, ತಾಯೆ.

---

*ಉಡುತಡಿಯ ಮಹಾದೇವಿಯಕ್ಕನೊಡನೆ ಅಲ್ಲಮಪ್ರಭು ಶರಣರ ಸಮ್ಮುಖದಲ್ಲಿ ನಡೆಸಿದ ಅನುಭಾವದ ವಚನಗಳು 1100ರಿಂದ 1108 ರವರಿಗೆ.

1103

ಕಾಯ ಶುದ್ಧವಾಯಿತ್ತೆಂದರೆ ಲಿಂಗ ನೆಲೆಗೊಳ್ಳದು. ಭಾವ ಶುದ್ಧ ವಾಯಿತ್ತೆಂದರೆ ಲಿಂಗ ನೆಲೆಗೊಳ್ಳದು. ಗೊಹೇಶ್ವರಲಿಂಗದಲ್ಲಿ ಶುದ್ಧ ಸುಯಿ ಧಾನಿಯಾದೆನೆಂದರೆ ನಿಜವು ಸಾಧ್ಯವಾಗದು, ಕೇಳಾ ಅವ್ವ.

1104

ಕೂಡಲಿಲ್ಲದ ಘನವ ಕೂಡುವ ಪರಿಯೆಂತವ್ವ? ಹೇಳಿದರೆ ಅದಕ್ಕದೆ ಕೊಱತೆ. ಗೊಹೇಶ್ವರಲಿಂಗವ ಬೇಱು ಮಾಡಿ ಬೆರಸುವ ಪರಿ ಎಂತು ಹೇಳಾ?

1105

ಆದಿಶಕ್ತಿ ಅನಾದಿಶಕ್ತಿಯೆಂಬರು, ಅದನಾರುಬಲ್ಲರಯ್ಯ? ಆದಿ ಎಂದರೆ ಕುಱುಹಿಂಗೆ ಬಂದಿತ್ತು. ಅನಾದಿಯೆಂದರೆ ನಾಮಕ್ಕೆ ಬಂದಿತ್ತು. ಆದಿಯಲ್ಲ ಅನಾದಿಯಲ್ಲ. ನಾಮವಿಲ್ಲದ ಸೀಮೆಯಿಲ್ಲದ ನಿಜಶಕ್ತಿ ಚಿಚ್ಛಕ್ತಿಯಾಯಿತ್ತು ನೋಡಾ! ಅಂತರಂಗದ ಪ್ರಭೆ ಬಹಿರಂಗವೆಲ್ಲಾ ತಾನೆಯಾಗಿ, ಗೊಹೇಶ್ವರ ಲಿಂಗದಲ್ಲಿ ಸಂದಿಲ್ಲದಿಪ್ಪ ಮಹಾದೇವಿಯಕ್ಕನ ಶ್ರೀಪಾದಕ್ಕೆ ನಮೋ ನಮೋ ಎಂಬೆನು.

1106

ಅಂಗೈಯ ಲಿಂಗದಲ್ಲಿ ಕಂಗಳ ನೋಟ ಸ್ವಯವಾದ ಇರವ ನೋಡಾ! ತನ್ನ ಸ್ವಾನುಭಾವದ ಉದಯದಿಂದ ತನ್ನನಱಿದ ನಿಜಶಕ್ತಿಯ ನೋಡಾ! ಭಿನ್ನವಿಲ್ಲದಿರವು ಮನ್ನಣೆಯ ಮಮಕಾರವ ಮೀಱಿದ ಭಾವ! ತನ್ನಿಂದ ತಾನಾದಳು. ನಮ್ಮ ಗೊಹೇಶ್ವರ ಲಿಂಗದಲ್ಲಿ ಮಹಾದೇವಿಯಕ್ಕನ ನಿಲವಿಂಗೆ ನಮೋ ನಮೋ ಎನುತಿರ್ದೆ ಕಣಾ, ಚೆನ್ನಬಸವಣ್ಣ.

1107

ತನುಗುಣ ನಾಸ್ತಿಯಾಗಿ ಲಿಂಗಸಂಗಿಯಾದಳು. ಮನಗುಣ ನಾಸ್ತಿಯಾಗಿ ಅಱಿವು ಸಂಗಿಯಾದಳು. ಭಾವಗುಣ ನಾಸ್ತಿಯಾಗಿ ಮಹಾಪ್ರಭೆ ತಾನಾದಳು. ತಾನಿದಿರೆಂಬೆರಡಳಿದು ನಮ್ಮ ಗೊಹೇಶ್ವರಲಿಂಗದಲ್ಲಿ ಸ್ವಯಲಿಂಗವಾದ ಮಹಾ ದೇವಿಯಕ್ಕಗಳ ನಿಲವಿಂಗೆ ಶರಣೆನುತಿರ್ದೆನು.

1108

ನುಡಿಗೆಡೆಗೊಡದ ಘನವ ಹಿಡಿದು ಒಡಬಂದಿಯಾದಳು. ಎಡೆಯಿಲ್ಲದ ಪರಿಪೂರ್ಣದೊಳಗೆ ನಡೆನುಡಿಗೆಟ್ಟಳು. ತನ್ನ ನಿಲುಕಡೆಯ ನಿಜವ ತಾನ ಱಿಯದಂತೆ ಎನ್ನಿಂದ ಕೇಳಿ ಸ್ವಯವಾದಳು. ಗೊಹೇಶ್ವರಲಿಂಗ ಸಾಕ್ಷಿಯಾಗಿ ಮಹಾದೇವಿಯಕ್ಕನ ನಿಲವ ಕೊಂಡಾಡುವುಥಕ್ಕೆ ತೆಱಹಿಲ್ಲ ಕಾಣಾ, ಮಡಿ ವಾಳಯ್ಯ.

1109

ನಚ್ಚುಮಚ್ಚಿನ ಸುಖಪರಿಣಾಮ ಸನ್ನಿಹಿತವಾದ ಬಳಿಕ ಇನ್ನು ಅನುಭಾವವೆಂಬುದಿಲ್ಲ. ಅಂತಿರಲಿ ನುಡಿಗಡಣ. ಶಶಿಧರನಟ್ಟದ ಬೆಸನ ಮಾಡ ಬಂದ ಬಳಿಕ, ಹೇಳಿದ ಮಣಿಹವ ಮಾಡುತ್ತಿಹುದಲ್ಲದೆ, ಅದು ತನ್ನ ಲೀಲೆ ತಾನು ಬೆರಸುವಂದಿಗೆ ಬೆರಸಲಿ. ಆ ದಿನಕ್ಕೆ ಬಂದು ಹೇಳುವ ನಿರ್ಣಯವ. ಗೊಹೇಶ್ವರಲಿಂಗದ ಆಣತಿ ಬಪ್ಪನ್ನಬರ ಶಿವಶರಣರೆಲ್ಲರೂ ಸಂಗನ ಬಸವಣ್ಣ ಸಹಿತ ನಿತ್ಯರಾಗಿರಯ್ಯ.

1110

ನಡೆದಡೆ ನಿರ್ಗಮನಿ, ಸುಳಿದಡೆ ಗತಿವಿರಹಿತನನೇನೆಂಬೆನೆಂತೆಂಬೆ? ಅಘಟಿತಘಟಿತನನೇನೆಂಬೆನೆಂತೆಂಬೆ? ಅಖಂಡಿತಮಹಿಮನನೇನೆಂಬೆನೆಂತೆಂಬೆ? ಆದಿಯಿಂದತ್ತತ್ತ ಗೊಹೇಶ್ವರನ ಶರಣ ಅಲ್ಲಯ್ಯನ ಸುಳುಹು ಜಗಕ್ಕೆ ಪಾವನ.

1111

ನಡೆವಡೆ ನಡೆಗೆಟ್ಟ ನಡೆಯ ನಡೆವುದಯ್ಯ. ನುಡಿದಡೆ ನುಡಿಗೆಟ್ಟ ನುಡಿಯ ನುಡಿವುದಯ್ಯ. ಒಡಲ ಹಿಡಿದಡೆ ಹಿಡಿಯದೆ ಹಿಡಿವುದಯ್ಯ. ಕೂಡುವಡೆ ಕೇಡಿಲ್ಲದ ಕೂಟವ ಕೂಡುವುದಯ್ಯ, ಗೊಹೇಶ್ವರ, ನಿಮ್ಮಲ್ಲಿ ನಿಲುವುದಯ್ಯ.

1112

ಜಲದೊಳಗೆ ಹುಟ್ಟಿದ ಹಲವು ಬಣ್ಣದ ವೃಕ್ಷ ಕೊಂಬಿಲ್ಲದೆ ಹೂವಾಯಿತ್ತು, ಇಂಬಿನಲ್ಲಿ ಫಲದೋಱು. ಜಂಬೂದ್ವೀಪದ ಮುಗ್ಧೆ ಅಂಗೈಯ ಅರಳುದಲೆ ಇಂದ್ರನ ವಾಹನವ ನುಂಗಿ, ಬ್ರಹ್ಮರಂಧ್ರದೊಳಗೆ ಆಸನ ಪವನವ ಸೂಸಿ ಬೀಸರವೋಗದ ಶಿವಯೋಗ. ಸಾಕ್ಷೀಭೂತಾತ್ಮದ ಮಾತು ಮಥನವ ನುಂಗಿ ಜ್ಯೋತಿಯೊಳಗಣ ಕರ್ಪುರದ ಬೆಳಗಿನಂತಿದ್ದಿತ್ತು. ಗೊಹೇಶ್ವರಲಿಂಗದಲ್ಲಿ ಯೋಗವು.

1113

ಅಯ್ಯ, ಸಾತ್ವಿಕ ಶರಣರ ನುಡಿ ಹುಸಿಯೆ? ಅದು ದಿಟ! ಅದು ದಿಟ! ಒಳಗೆಂಬುದೇ ದೇವಲೋಕ, ಹೊಱಗೆಂಬುದೇ ಮರ್ತ್ಯಲೋಕ. ಈ ಎರಡು ಲೋಕಕ್ಕೆ ಹೊಱಗಾಗಿ ನಾವಿರಲು, ಈ ಎರಡು ಲೋಕದೊಳಗೆಯು ತಾವೆ ಇರಲಿ, ಗೊಹೇಶ್ವರ.

1114

ಅಂಜಬೇಡ, ಅಳುಕಬೇಡ. ಹೋದವರಾರು? ಇದ್ದವರಾರು? ಎಲೆ ಮರುಳೆ, ಒಂದು ಮುಖದಲ್ಲಿಪ್ಪ ದೇವನೊಬ್ಬನೆ, ಹಲವು ಮುಖದಲ್ಲಿಪ್ಪ ದೇವ

ನೊಬ್ಬನೆ. ನಾಮ ಹಲವಲ್ಲದೆ ಕಾರ್ಯ ಒಂದೆ ನೋಡಾ. ಮನದೊಳಗಣ ಘನವು ತನುವನಗಲುವುದೆ? ಗೊಹೇಶ್ವರಲಿಂಗದಲ್ಲಿ ವಿಯೋಗಕ್ಕೆ ತೆಱಹಿಲ್ಲ ಕೇಳಾ, ಸಂಗನ ಬಸವಣ್ಣ.

1115

ಮತಿಯೊಳಗೆ ದುರ್ಮತಿ ಹುಟ್ಟಿ, ಕಲಿ ಗಸಣಿಗೊಳಗಾದ ಪರಿಯ ನೋಡಾ. ಜ್ಞಾನವನು ಅಜ್ಞಾನ ನುಂಗಿದ ಬಳಿಕ, ಭಾನುಗ್ರಹಣಕ್ಕೊಳಗಾದಂತೆ ಇದ್ದಿತು. ಶಿಶು ಕ್ಷೀರವುಳ್ಳ ತಾಯನಗಲಿ ಅಱಿಯದ ಮೋಹದಂತೆ ಇದ್ದಿತ್ತು. ಹೇಳುವಲ್ಲಿ ಯುಕ್ತನು, ಕೇಳುವಲ್ಲಿ ಯುಕ್ತನು ಎಂಬುದು ಅಜ್ಞಾನಭಾವಕ್ಕೆ ಬಂದಿತ್ತು. ನೀರ ಮೇಲಣ ಲಿಪಿಯನೋದಬಲ್ಲವರುಂಟೆ, ಸಾರಾಯವೇದ್ಯರಿಗಲ್ಲದೆ? ಕನ್ನಡಿಯೊಳಗೆ ನೋಡಲು ಭಿನ್ನವುಂಟೆ ಅಯ್ಯ? ತನ್ನ ಕಣ್ಣಿನಲ್ಲಿ ಕಾಣದಂತೆ ಇದ್ದಿತ್ತು ದರ್ಪಣದೊಳಗಣ ಬೆಳಗು. ಬೆಳಗಿನೊಳಗಣ ಬೆಳಗು ಗೊಹೇಶ್ವರನಿಪ್ಪೆಡೆಯ ತಿಳಿದು ನೋಡಯ್ಯ, ಸಂಗನ ಬಸವಣ್ಣ.

1116

ತನಗುಳ್ಳ ನಿಧಾನ ತನಗಿಲ್ಲದಂತೆ ಬಂಧುಗಳೆಲ್ಲರ ನುಂಗಿ ಅಂಬುಧಿ ಬತ್ತಿತ್ತು, ಅದ್ಭುತ ಸತ್ತಿತ್ತು, ರಣರಂಗವತ್ತಿತ್ತು. ಇರುಳು ಮಾಣಿಕವ ನುಂಗಿ ಮರಣವಾದ ಬಳಿಕ, ಅಮೃತದ ಪುತ್ಥಳಿಯ ಹಾಲ ಕುಡಿಯ ಕರೆದಡೆ ಗೊಹೇಶ್ವರಲಿಂಗಕ್ಕೆ ಊಟವೆಂಬುದಿಲ್ಲ ನೋಡಾ, ಸಂಗನ ಬಸವಣ್ಣ.

1117

ಕಾಯದಲ್ಲಿ ಕಾಯ ಸವೆದು, ಪ್ರಾಣದಲ್ಲಿ ಪ್ರಾಣ ಸವೆದು ನಿಶ್ಚಿಂತವಾದ ಬಳಿಕ, ಹಸಿವು ತೃಷೆಗಳೆಂಬವು ಅಳಿದು ಹೋದವು ಕೇಳಾ. ಉಂಡೆನೆಂಬ ಬಯಕೆಯು, ಒಲ್ಲೆನೆಂಬ ವೈರಾಗ್ಯವು ಇಲ್ಲ. ಇದು ಸ್ವಭಾವತೃಪ್ತಿಯೊಳಡಗಿತ್ತು. ಇದು ಕಾರಣ, ನಮ್ಮ ಗೊಹೇಶ್ವರಲಿಂಗಕ್ಕೆ ಆರೋಗಣೆಯಿಲ್ಲ ಕಾಣಾ ಸಂಗನ ಬಸವಣ್ಣ.

1118

ಭಕ್ತನಾಧೀನವಾಗಿ ಭಕ್ತಿಯ ಬೇಡ ಬಂದವನಲ್ಲ. ಮುಕ್ತಿಯಾಧೀನವಾಗಿ ಮುಕ್ತಿಯ ಬೇಡ ಬಂದವನಲ್ಲ. ಅಶನಾತುರನಾಗಿ ವಿಷಯವ ಬಯಸಿ ಬಂದವನಲ್ಲ. ಗೊಹೇಶ್ವರನ ಶರಣ ಸಂಗನ ಬಸವಣ್ಣ—ಮಾಡುವ ಭಕ್ತನಲ್ಲಾಗಿ, ನಾನು ಬೇಡುವ ಜಂಗಮವಲ್ಲ, ಕಾಣಾ ಚೆನ್ನಬಸವಣ್ಣ.

1119

ಕಾಯವೆಂಬ ಕಲ್ಪಿತವ ಕಳೆದು, ಪ್ರಾಣವೆಂಬ ಸೂತಕವ ಹಱಿದು,

ನಿಜಭಕ್ತಿ ಸಾಧ್ಯವಾದಲ್ಲದೆ ಲಿಂಗಪರಿಣಾಮ ವೇಧಿಸಬಾರದು. ಆನು ಮಾಡಿದೆ ನೀವು ಕೈಕೊಳ್ಳಿಯೆಂದರೆ ಅದೇ ಅಜ್ಞಾನ. ನಮ್ಮ ಗೊಹೇಶ್ವರಲಿಂಗಕ್ಕೆ ಕುಱುಹಳಿದು ನಿಜ ಉಳಿದವರಾದಲ್ಲದೆ ಪದಾರ್ಥವ ನೀಡಬಾರದು ಕಾಣಾ, ಸಂಗನ ಬಸವಣ್ಣ.

1120

ತಾನಿಟ್ಟ ಬೇತಾಳ ತನ್ನ ತಿಂದಿತೆಂಬಂತೆ, ನಿನ್ನ ಭವಾಳಿಯನೆತ್ತುವನ್ನಕ್ಕರ ಎನ್ನ ಮಱವೆ ಎನಗೆ ಎಚ್ಚರಿಕೆಯಾಯಿತ್ತು. ಎನ್ನ ಪೂರ್ವನಿರ್ವಾಹವಾಯಿತ್ತು. ನಿಮ್ಮ ವರ್ಮ ತಿಳಿಯದೆನಗೆ. ಅದೆಂತೆಂದಡೆ : ಹಿಂದೆ ನೀನೇನಾಗಿದ್ದೆಯೆಂಬುದನಱಯೆನಾಗಿ, ಇಂದು ನಿಮ್ಮ ಮನೆಯಲಾರೋಗಣೆಯಾಗದು ಕಾಣಾ, ಸಂಗನ ಬಸವಣ್ಣ, ಗೊಹೇಶ್ವರಂಗೆ.

1121

ಪೌರ್ಣಮಿ ಬಪ್ಪನ್ನಕ್ಕ ಬಾಯಿ ಬಂಧನದಲ್ಲಿದ್ದ ಚಕೋರನಂತೆ ಇದ್ದೆನಯ್ಯ. ಉಣಲಾಗದೆಂಬ ಶಾಸ್ತ್ರವಿಡಿದು ಇದ್ದವನಲ್ಲ. ಉಣಲಾಗದೆಂಬ ಶಾಸ್ತ್ರವುಂಟೆ ಲಿಂಗವಂತಂಗೆ? ಅಹೋರಾತ್ರಿ ಅಷ್ಟ ಭೋಗಂಗಳ ಲಿಂಗಕ್ಕೆ ಕೊಟ್ಟು ಕೊಳಬೇಕು. ಮಾಡುವ ನೀಡುವ ನಿಜಭಕ್ತರಿಲ್ಲದ ಕಾರಣ, ಬಾಯ್ದೆಱೆಯದಿರ್ದೆನು. ಮಾಡಿಹೆ ನೀಡಿಹೆನೆಂಬ ಶಬ್ದಕ್ಕೆ ಸಂತೋಷದಾಪ್ಯಾಯನ ಹಿರಿದಾಯಿತ್ತು. ನೀಡಯ್ಯ ಸಂಗನ ಬಸವಣ್ಣ, ಗೊಹೇಶ್ವರಂಗೆ.

1122

ಸಮತೆಯೆಂಬ ಕಂಥೆಯ ತೊಟ್ಟು, ಸುಬುದ್ಧಿಯೆಂಬ ಟೊಪ್ಪರವನಿಕ್ಕಿ, ವಿಷಯವೆಂಬ ಹಾವುಗೆಯ ಮೆಟ್ಟಿ, ತಮಂಧವೆಂಬ ಕುಳಿಯ ಬೀಳದೆ, ವೈರಾಗ್ಯವೆಂಬ ಕೊಱಡನೆಡಹದೆ, ಮದವೆಂಬ ಚೇಳ ಮೆಟ್ಟದೆ ಗೊಹೇಶ್ವರನ ಶರಣ ಬಂದೆನು ಭಕ್ತಿಭಿಕ್ಷೆಯನಿಕ್ಕೈ, ಸಂಗನ ಬಸವಣ್ಣ.

1123

ಕಡೆಯಿಲ್ಲದ ದೇಶವ ತಿರುಗಿದೆನು. ಹವಣಿಲ್ಲದ ಕಂಥೆಯ ತೊಟ್ಟೆನು. ಹಸಿವಿಲ್ಲದ ಕಪ್ಪರವ ಹಿಡಿದು ಭಕ್ತಿಭಿಕ್ಷವ ಬೇಡ ಬಂದೆ. ಗೊಹೇಶ್ವರ ಹಸಿದನು ಉಣಲಿಕ್ಕೇಳಾ, ಸಂಗನ ಬಸವಣ್ಣ.

1124

ಬ(=ಬಿ?)ಂದು ನಿಂದು ಮೊಲೆನೀರ ಮಿಂದವರೆಲ್ಲರೂ ಹೆಂಡತಿಯರಾಗ–

ಬಲ್ಲರೆ? ಬಂದು ನಿಂದು ಸುಳಿದು ಮಾಡುವರೆಲ್ಲರು ಸಂಗನ ಬಸವಣ್ಣನಂತೆ ಗೊಹೇಶ್ವರಲಿಂಗವ [1]ಬಲ್ಲರೆ[1]?

1125

ನಿಮ್ಮ ಲೀಲೆ, ನಿಮ್ಮ ವಿನೋದ, ನಿಮ್ಮ ಹಜಿ, ನಿಮ್ಮ ಕೊಳಲು! ಅದಕ್ಕೆ ಬೇಕೆನ್ನೆ ಬೇಡೆನ್ನೆ. ಮೇಘವಹ್ನಿ ಧರೆಗೆಱಗುತ್ತ ಲೋಕವ ಬೆಸಗೊಂಡಿತ್ತೆ? ಉದರಾಗ್ನಿ ಧರೆಗೆಱಗುತ್ತ ಭೂತಂಗಳ ಬೆಸಗೊಂಡಿತ್ತೆ? ಗೊಹೇಶ್ವರಲ್ಲಮನ ನಿರುಪಮ ಮಹಿಮೆ ಎಂತಿದ್ದಿತ್ತು ಆ ಹಾಂಗೆ ನೀನು ಮಾಡುವುದಲ್ಲದೆ, ನಾನಿದಕೆ ಬೇಕೆನ್ನೆನು ಬೇಡೆನ್ನೆನು.

1126

ಉಳ್ಳವರು ಹಗೆಯವ ತಿಗೆವನ್ನಕ್ಕರ ಇಲ್ಲದವರ ಹರಣ ಹೋಯಿತ್ತೆಂಬಗಾದೆ ಎನಗಾಯಿತಯ್ಯ. ಮಾತು ಬಣ್ಣಿಸಲು ಹೊತ್ತು ಹೋಯಿತಯ್ಯ, ನಿನಗದೆ ಹರಿನುಡಿಗೆ ಕಡೆಯಿಲ್ಲ. ಒಬ್ಬರ ನೋಡುವಾಗ ಅಱುವತ್ತು ಮನುಷ್ಯರ ನೋಡುವ ಹಾಗೆ ಆಗುತ್ತಿದೆ. ಶೂನ್ಯಸಿಂಹಾಸನ ಬವರಿಗೊಡುತ್ತಿದೆ. ಪ್ರಾಣ ಹೆಡತಲೆಯಲ್ಲಿ ಹೋಗುತ್ತಿದೆ. ಗೊಹೇಶ್ವರ ಹಸಿದನು ಪದಾರ್ಥವ ನೀಡೈ ಸಂಗನ ಬಸವಣ್ಣ.

1127

ಅಹುದಹುದು ಕಿಂಕುರ್ವಾಣ! ಮಝು! ಭಾಪು! ಬಲ್ಲವರು ಬಲ್ಲೆವೆಂದೆಂಬರೆ? ಲಿಂಗವಂತರ ಮಹಿಮೆ ಈ ಹಿಂಗಿರಬೇಡಾ? ಗೊಹೇಶ್ವರನ ಆಪ್ಯಾನವನಡಗಿಸುವ ಅನುಮಾನವನು ನೀನಲ್ಲದೆ ಮಹೀತಳದೊಳು ಮತ್ತೆ ಬಲ್ಲವರಾರು ಹೇಳಾ, ಸಂಗನ ಬಸವಣ್ಣ.

1128

ಘನವಪ್ಪ ಪರಿಯಾಣದಲ್ಲಿ ಒಂದನುವಿನ ಬೋನವನಳವಡಿಸಿ, ಪರಿಪರಿಯ ಪದಾರ್ಥಂಗಳು ಬಗೆಬಗೆಯಿಂದ ಬರಲು, ನೋಡದ ಮುನ್ನವೆ ರೂಪರ್ಪಿತವಾಯಿತ್ತು. ಮುಟ್ಟದ ಮುನ್ನವೆ ಸೋಂಕರ್ಪಿತವಾಯಿತ್ತು. ರುಚಿಸದ ಮುನ್ನವೆ ಸುಖವರ್ಪಿತವಾಯಿತ್ತು. ಅವಧಾರು, ಅವಧಾರು, ಲಿಂಗ! ನಿನ್ನ ಮನಕ್ಕೆ ಬಂದ ಪದಾರ್ಥವ ನಿನ್ನ ಘನಕ್ಕೆ ನೀನರ್ಪಿಸಿದರೆ, ಎನ್ನ ಮನಕ್ಕೆ ಬಂದ ಪದಾರ್ಥವ ನಿನಗರ್ಪಿಸುವೆನು. ಗೊಹೇಶ್ವರ, ನಿನಗೆ ಭರಿತಬೋನವಳವಡಿಸಿ ನೀಡಬಲ್ಲವನಾಗಿ ಎನಗೂ ನಿನಗೂ ಸಂಗನ ಬಸವಣ್ಣನ ಪ್ರಸಾದವನಾರೋಗಿಸು ದೇವಾ.

---

1. ಬಲ್ಲರೆ (ಜಯ)

1129

ಕಾಯದಲಾದ ಅರ್ಪಿತ ಅರ್ಪಿತವಲ್ಲ. ಪ್ರಾಣದಲಾದ ಅರ್ಪಿತ ಅರ್ಪಿತವಲ್ಲ. ಭಾವದಲಾದ ಅರ್ಪಿತ ಅರ್ಪಿತವಲ್ಲ. ಅಱಿವಿನಲಾದ ಅರ್ಪಿತ ಅರ್ಪಿತವಲ್ಲ. ನೆನಹಿಲ್ಲದ ಅವಧಾನ, ಮಱಹಿಲ್ಲದಾರೋಗಣೆ, ತಟ್ಟದ ಮುಟ್ಟದ ಅರ್ಪಿತ. ಗೊಹೇಶ್ವರಲಿಂಗದ ಆರೋಗಣೆಯನಿಂದು ಸಂಗನ ಬಸವಣ್ಣನಿಂದ ಕಂಡೆನು.

1130

ಭರಿತಬೋನ ಭರಿತಬೋನವೆಂದು ಭ್ರಮೆಗೊಂಡು ಭ್ರಮಿತರಾದಿರಿ ಲೋಕವೆಲ್ಲ. ಭರಿತಬೋನವೆ ದಿಟವಾದರೆ ಮರ್ತ್ಯದಲ್ಲಿ ಸುಳಿಯಲುಂಟೆ? ಚತುರ್ವಿಧ ಅರ್ಪಿತದೊಳಗೆ ಆವುದು ಭರಿತವೆಂಬುದನಱಿಯಿರಾಗಿ ಗೊಹೇಶ್ವರಲಿಂಗದಲ್ಲಿ ಭರಿತಬೋನದ ಅನು ಚೆನ್ನಬಸವಣ್ಣಂಗಾಯಿತ್ತು.

1131

ಪಂಚವರ್ಣದ ಬಿಂದು ಪ್ರಪಂ[1]ಚನ[1]ಳಿದುಳಿದಿರಲು ಸಂಚಲಿಸುವಡೆ ಆವೆಡೆಯೂ ಇಲ್ಲ. ನಿಂದ ಚಿತ್ತಿನ ಪ್ರಭೆ [2]ಅಂ[2]ಗವನು ನೆಱೆ[3] ನುಂಗಿ, ಹಿಂದು ಮುಂದು, ಎಡಬಲ, [3]ಅಡಿಯಾಕಾಶವೆಂ[3]ಬುದಿಲ್ಲ, ಕೆಳಗೆ ನಿಲಲಾಧಾರ ಮೊದಲಿಂಗಿಲ್ಲ, [4]ಕಡೆಗೆ ಸಾರುವೆ[4]ನೆನಲು ಊರ್ಧ್ವವಿಲ್ಲ; ನಡುವೆ [5]ನಾನಿದ್ದಹೆ[5]ನೆಂದರೆ ತನ್ನೊಡಲೊಳಗೆ ಒಡೆದು ಮೂಡಿತ್ತು. [6]ಅದು[6] ತನ್ನಂತೆ ಬಯಲು. ಈ ಬೆಡಗು ಬಿನ್ನಾಣವ ಬಡವರಱಿವರೆ? ಇದನಱಿದು ನುಡಿದು ತೋಱಿದನು ಗೊಹೇಶ್ವರನ ಶರಣ ಚೆನ್ನಬಸವಣ್ಣನು.

1132

ಗುರುಶಿಷ್ಯರಿಬ್ಬರ ಮಧ್ಯದಲ್ಲಿ ಒಂದು ಮಗು ಹುಟ್ಟಿತ್ತು ನೋಡಾ! ಗುರುವಿಂಗೆ ಗುರುವಾದ ಪರಿಯೆಂತೋ? ಶಿಷ್ಯಂಗೆ ಶಿಷ್ಯನಾದ ಪರಿಯೆಂತೋ? ಆದಿಯ ಲಿಂಗವ ಸಾಧ್ಯವ ಮಾಡಿ ತೋಱಿದ ಗೊಹೇಶ್ವರನ ಶರಣ ಚೆನ್ನಬಸವಣ್ಣಂಗೆ ಶರಣೆಂದು ಬದುಕಿದೆನು ಕಾಣಾ, ಸಂಗನ ಬಸವಣ್ಣ.

1133

ಅದೃಷ್ಟಕರಣದ ಮೇಲಣ ಪೂರ್ವಾಶ್ರಯುವ ಕಳೆದು, ಗುರುವಿನ ಹಸ್ತ ಮುಟ್ಟಿತ್ತೆಂಬ ಸಂದಣಿಯಲ್ಲಿ ಹೋಗದು. ಪಂಚೇಂದ್ರಿಯಲಿಖಿತವ ತೊಡೆದು ಲಿಂಗಲಿಖಿತವ ಬರೆವುದು ಶಿಷ್ಯನ ಕೈಯಲ್ಲಲ್ಲದೆ, ಗುರುವಿನ ಕೈಯಲಾಗದು

---

1. ಚ (ಐ) 2. ಯಂ (ಐ) 3. ನೆಂ (ಐ) 4. ಹೆಸರಿಲ್ಲ ಕಡೆಗೆ ನಿಲುವೆ (ಐ) 5. ನಾನಾಗಿಥೇ (ಐ) 6. × (ಐ)

ಭವಿ ಮಾಡುವ ಬೋನವ ಭಕ್ತ ಕಾಣದ ಹಾಗೆ ಅರ್ಪಿಸುವ ಭೇದವಱಿದು, ಪ್ರಸಾದದ ಪೂರ್ವಾಶ್ರಯವ ಕಳೆದು ರೂಪಿಸಬಲ್ಲರೆ ಹಱಿಯದು. ಗುರುವಿಲ್ಲದ ಶಿಷ್ಯ, ಶಿಷ್ಯನಿಲ್ಲದ ಗುರು ಇಂತೀ ಒಂದಕ್ಕೊಂದು ಇಲ್ಲದೆ, ಗೊಹೇಶ್ವರಲಿಂಗದಲ್ಲಿ ಸಹಜದುದಯವಾದ ನಮ್ಮ ಚೆನ್ನಬಸವಣ್ಣಂಗೆ ನಮೋ ನಮೋ ಎಂಬೆನು.

1134

ಕಾಯದ ಮೇಲೆ ಕಲ್ಲು ಬೀಳಲಿಕ್ಕೆ, ಜೀವ ಆ ಠಾವನಱಿದು, ತಾವು ಮಾಡಿಸಿಕೊಂಬಾಗ ನೋವನಱಿವುದು ಕಾಯವೋ ಜೀವವೋ? ಉಭಯ ಸಮಯವೋ? ಗೊಹೇಶ್ವರಲಿಂಗಕ್ಕೆ ಅನ್ಯವಿಲ್ಲ ಸಂಗನ ಬಸವಣ್ಣ.

1135

ತಮ್ಮ ತಾವಱಿಯರು, ಹೇಳಿದರೂ ಕೇಳರು. ಆಱಱ ಹೊಲಬನೇ-ನೆಂದಱಿಯರು, ಎಂಟಱ ಕಂಟಕವ ಮುನ್ನಱಿಯರು. ಏಱಿದ ಬೆಟ್ಟವನಿಳಿಯ ಲಱಿಯದವರನೇನೆಂಬೆ, ಗೊಹೇಶ್ವರ.

1136

ಅಱಿದ ಶರಣಂಗೆ ಆಚಾರವಿಲ್ಲ. ಆಚಾರವುಳ್ಳವಂಗೆ ಲಿಂಗವಿಲ್ಲ. ಲಿಂಗ ವಿಲ್ಲದ ಶರಣನ ಸುಳುಹು ಜಗಕ್ಕೆ ವಿಪರೀತಚರಿತ್ರವದು ಪ್ರಕಟವಲ್ಲ ನೋಡಾ. ಸಂಸಾರಿ ಬಳಸುವ ಬಯಕೆಯನೆಂದೂ ಹೊದ್ದನು. ಸಟೆಯ ಹಿಡಿದು, ದಿಟವ ಮಱೆದು, ಇಲ್ಲದ ಲಿಂಗವನುಂಟೆಂದು ಪೂಜಿಸುವರಾಗಿ ಆಚಾರವುಂಟು. ಆಚಾರವುಳ್ಳವಂಗೆ ಗುರುವುಂಟು. ಗುರುವುಳ್ಳವಂಗೆ ಲಿಂಗವುಂಟು. ಲಿಂಗ ಪೂಜಕಂಗೆ ಭೋಗವುಂಟು. ಈ ಬಱಿಯ ಬಾಯ ಬಣ್ಣಕರೆಲ್ಲರೂ ಪೂಜಕ ರಾದರು, ಗೊಹೇಶ್ವರ ಲಿಂಗವು ಅಲ್ಲಿ ಇಲ್ಲವೆಂಬುದನು ಈ ವೇಷಲಾಂಛನರೆತ್ತ ಬಲ್ಲರು ಹೇಳಾ, ಸಂಗನ ಬಸವಣ್ಣ,

1137

ಆಕಾರನಿರಾಕಾರವೆಂಬೆರಡೂ ನಾನೆ ದಿಟ! ದಿಟ ತಪ್ಪದು ಕೇಳಾ! ಆಕಾ ರಕ್ಕೆ ಭಾವವೆ ಪ್ರಾಣ, ನಿರಾಕಾರಕ್ಕೆ ಮಹಾಜ್ಞಾನವೆ ಪ್ರಾಣ. ಇಂತೀ ಉಭಯಕುಳಕ್ಕೆ ಇದು ಲಕ್ಷಣ ಕೇಳಾ! ಎರಡಱೊಳಗೆ ಆವ ಮುಖದಲ್ಲಿ ಇಪ್ಪಾತನು ಆ ಮುಖದಲ್ಲಿ ಶುದ್ಧನಾಗದನ್ನಕ್ಕರ, ಗೊಹೇಶ್ವರ ಲಿಂಗಕ್ಕೆ ದೂರ ಕೇಳಾ, ಸಂಗನ ಬಸವಣ್ಣ.

1138

ಅಹುದಹುದು ಬಸವಣ್ಣ, ನೀನೆಂದುದನಲ್ಲೆನಬಹುದೆ? ಎನ್ನ ಮನದ ಕಪ್ಪ ಕಳೆದು, ನಿರ್ಲೇಪನ ಮಾಡಿ, ಎನ್ನ ನಿರವಯಲಲ್ಲಿ ನಿಲಿಸಿ, ಪ್ರತಿಷ್ಠೆಯ

ಮಾಡುವಾತನು ನೀನೆಂಬುದು ಸತ್ಯವಚನ ನೋಡಾ. ಗೊಹೇಶ್ವರನ ಮಹಾ ಗಣಂಗಳಿದ್ದಲ್ಲಿಗೆ ಹೋಗಿ ತಿಳುಹಿಕೊಂಡು ಬಾರಾ, ಸಂಗನ ಬಸವಣ್ಣ.

1139

ಎಡದ ಕಾಲಲೊದ್ದರೆ ಬಲದ ಕಾಲ ಹಿಡಿವುದು. ಬಲದ ಕಾಲಲೊದ್ದರೆ ಎಡದ ಕಾಲ ಹಿಡಿವುದು. ತ್ರಾಹಿ ತ್ರಾಹಿ ತಪ್ಪೆನ್ನದೆಂದು ಗೊಹೇಶ್ವರನ ಶರಣ–ನೊಡಗೊಂಡು ಬಾರೈ, ಸಂಗನ ಬಸವಣ್ಣ.

1140

ಲಿಂಗಜಂಗಮವೆಂಬ ಸಕೀಲವನಱಿದು, ಲಿಂಗಾರ್ಚನೆ ಜಂಗಮಾರ್ಚನೆಯ ಮಾಡಲು, ಆ ಲಿಂಗವೆ ಜಂಗಮದೊಳಗಡಗಿ, ಆ ಜಂಗಮವೆ ಪರಾಪರವೆಂದಱಿದು ತೋಱಿದ. ಆ ಜಂಗಮವೆಂಬ ಘನವು ನಿಮ್ಮೊಳಡಗಿದ ಕಾರಣ, ಗೊಹೇಶ್ವರ, ನಿಮ್ಮ ಅನುವನಱಿದು ಸಂಗನ ಬಸವಣ್ಣನು ತನ್ನ ಪ್ರಸಾದವ ನಿಕ್ಕಿದರೆ ನಿಮ್ಮ ಪ್ರಮಥರೆಲ್ಲರೂ ಜಯ ಜಯ ಎನುತಿದ್ದ ಕಾರಣ ನಾನು ಬಸವಣ್ಣಂಗೆ ನಮೋ ನಮೋ ಎನುತಿದ್ದೆನು.

1141

ಲಿಂಗದ ಪೂರ್ವಾಶ್ರಯವ ಕಳೆಯಲೆಂದು ಜಂಗಮಪ್ರಾಣಿಯಾದ. ಲಾಂಛನದ ಪೂರ್ವಾಶ್ರಯವ ಕಳೆಯಲೆಂದು ಜಂಗಮಪ್ರಾಣಿಯಾದ. ಪ್ರಸಾದದ ಪೂರ್ವಾಶ್ರಯವ ಕಳೆಯಲೆಂದು ಮಹಾಪ್ರಸಾದಿಯಾದ. ಇಂತೀ ತ್ರಿವಿಧದ ಪೂರ್ವಾಶ್ರಯವ ಕಳೆಯಲೆಂದು ಬಸವಣ್ಣನು ಮರ್ತ್ಯಕ್ಕೆ ಬಂದನು ಕಾಣಾ, ಗೊಹೇಶ್ವರ.

1142

ಭೂವಳಯಮಧ್ಯದಲ್ಲಿ ಎಂಟೆಸಳ ಮೇಲೆ ಸುಳಿದಾಡುವನ ಎಚ್ಚಱಲೀಯ. ಕಂಟಕವಿರಹಿತ, ನಂಟರಿಗೆ ವಿರೋಧಿ. ಇಳೆಯ ಗುಣವಿರಹಿತನು, ಗಗನಕಮಲಕುಸುಮಪರಿಣಾಮಧೊಳಗೆ ಪರಿಣಾಮಿ ನೋಡಾ. ತಾನೆಂಬುದ ಹುಸಿ ಮಾಡಿ, ಲಿಂಗ ಜಂಗಮ ದಿಟವೆಂದು ಸಕಲ ಸುಖಭೋಗಂಗಳನರ್ಪಿಸಿದ. ಗೊಹೇಶ್ವರಾ, ನಿಮ್ಮ ಶರಣ ಬಸವಣ್ಣಂಗಲ್ಲದೆ ಇನ್ನಾರಿಗೆಯೂ ಅಳವಡದು.

1143

ಹಾಳುಮನೆಯ ಹೊಸತಿಲಲ್ಲಿ ನಿಂದಿದ್ದು, ಆರೂ ಬಾರದ ಬಟ್ಟೆಯ ನೋಡುತ್ತ, ಆರಿಂಗಾಗದಿರವು ನಮಗಾಯಿತ್ತೆನ್ನುತಲಿ, ಆರಯ್ಯ ಬಂದವರಿಗೆ ಶಂಕೆಯಿಲ್ಲ. ಕಾಲಿಲ್ಲದೆ ಬಂದವರು, ಕೈಯಿಲ್ಲದೆ ಕೊಂಬವರು, ಮೇಲುತಲೆ ಇದ್ದವರು ನುಡಿವಾಗ, ಮಾರಾರಿಯ ಬೆಳಸನಾರಯ್ಯ ಸಂತವಿಡುವರೆಂದರೆ, ಸಾರಾಯಂಗಲ್ಲದೆ ಮತ್ತಿನ್ನಾರಿಗಹುದು ಹೇಳಾ? ಸಂತೆಯ ಗುಡಿಸಲ ಸೂಳೆಗೆ

ಕೊಂತವ ಕೊಂಡರೆ ಎಂತು ಬಚ್ಚಿಡಬಹುದು? ಮರುಳುತನವು! ಶಂಕಿಸಿತು ಎನ್ನ ಮನವು, ಹಿಂದು ಮುಂದು ಕೂಡುವರಿಲ್ಲೆಂದು ಉಮ್ಮಳದಲ್ಲಿ. ಗೊಹೇಶ್ವರ, ನಿಮ್ಮ ಶರಣ ಬಸವಣ್ಣನ ಪ್ರಸಾದವ ಕೊಂಡು ನಿರುಪಮಸುಖಿಯಾದೆನು.

1144

ಎತ್ತಿದ ಮಣಿಮುಕುಟದ ಮೇಲಣ ಸುತ್ತಿದ ನಾಗಭೂಷಣದ ಪೆಡೆಯೊಂದು ಕೋಟಿ, ಶಿವನಿಪ್ಪ ನೆಲೆಯನಾರೂ ಅಱಿಯರಯ್ಯ. ಇಕ್ಕಿದ ಕರೋಟಿ ಮಾಲೆಯೊಳಗಿಪ್ಪ ರುದ್ರರು ಕೋಟಿ, ಶಿವನಿಪ್ಪ ನೆಲೆಯನಾರೂ ಅಱಿಯರಯ್ಯ. ಇಕ್ಕಿದ ರುಂಡಮಾಲೆಯೊಳಗಿಪ್ಪ ಮುಂಡಧಾರಿಗಳು ಕೋಟಿ, ಶಿವನಿಪ್ಪ ನೆಲೆಯನಾರೂ ಅಱಿಯರಯ್ಯ. ಖಂಡಕಪಾಲವ ಧರಿಸಿಪ್ಪ ಮುಂಡಧಾರಿಗಳೊಂದು ಕೋಟಿ, ಶಿವನಿಪ್ಪ ನೆಲೆಯನಾರೂ ಅಱಿಯರಯ್ಯ. ಎಲೆ ಗೊಹೇಶ್ವರ, ನಿಮ್ಮ ಪೂರ್ವಾಚಾರಿ ಸಂಗನ ಬಸವಣ್ಣನೊಬ್ಬನೆ ಬಲ್ಲನು.

1145

ಕಡುಜಲಕ್ಕೆ ಇದಿರಾಗಿ ಹರಿವ ಸ್ವಾಮಿಯ ಬರವ ಕಂಡು ಬಿಡದೆ ಬೆಂಬತ್ತಿಸುವ ಪರಿಯ ನೋಡಾ. ನಡೆ ನುಡಿ ಚೈತನ್ಯ ಒಡಲನೊಂದು ಮಾಡಿ, ಬಿಡದೆ ವೇಧಿಸುವ ಬೆಡಗ ಕಂಡೆನಯ್ಯ. ಕಡೆಗೆ ಸೂಸದ ದೃಷ್ಟಿ ಹಿಡಿದು ತೊಲಗದ ಹಸ್ತ ಬಿಡಬೇಡ ತನಗೆನ್ನದ ಸಜ್ಜನ ಮಡದಿ ತನ್ನ ಗಂಡನ ಅಡಗಿ ಕೊಡುವ ಭೇದ ನಡುವಿರುಳು ಕೂಡಿ ನಿಮಿರಿ ಬೆಳಗಾಯಿತ್ತು. ಮಾಡಿ ನೀಡುವವನ ಕಂಡು, ನಾಡು ಬೀಡೆಲ್ಲ ನೆರೆದು, ಕೊಡ ಕೈಯಲ್ಲಿ ಕೊಟ್ಟರೆ ತೃಪ್ತರಾಗಿ ಮಾಡುವರ ಹರಸುವರು. ನೋಡುವರು ಮನದಣಿಯೆ, ಕೊಡುವರು ಕೋಟಿ, ಸಹಜ ಒಂದೆ ಎಂದು ಜೋಡ ತೊಡದಾತನ ಮೈಯಲ್ಲಿ ಕೂಡೆ ಘಾಯವಿಲ್ಲದುದ ಕಂಡು ನೋಡಿರೆ! ಮಸೆ ಮುಟ್ಟದ ಮಹಂತನ ಬೇಡುವೆನಾತನ ಕರುಣವನು. ಪಾದವನೊಸಲಲ್ಲಿ ಸೂಡುವೆ, ಗೊಹೇಶ್ವರನ ಶರಣ ಬಸವಣ್ಣಂಗೆ ನಮೋ ನಮೋ ಎಂಬೆನು.

1146

ಯುಗದ ಉತ್ಸವವ ನೋಡಿರೆ. ಪಂಚಶಕ್ತಿಗಳಿಗೆ ಪಂಚಪ್ರಧಾನರು. ಅವರಾಗು ಹೋಗನಾ ಶರಣನೆ ಬಲ್ಲ. ಆ ಶರಣನು ತಾನು ತಾನಾಗಿ ಆಱು ದರುಶನಕ್ಕೆ ಯಾಚಕನಲ್ಲ. ಮೂಱು ದರುಶನಕ್ಕೆ ಮುಯ್ಯಾನುವವನಲ್ಲ. ವೇದ ಶಾಸ್ತ್ರಪುರಾಣ ಛಂದಸ್ಸು ನಿಘಂಟುಗಳೆಂಬವಕ್ಕೆ ಭೇದಕನಲ್ಲ. ಅದೆಂತೆಂದಡೆ ಆವಱಿಂಗದ ಮೇಲೆ ಗುರುವಿಲ್ಲ, ಲಿಂಗವಿಲ್ಲ, ಜಂಗಮವಿಲ್ಲ, ಪ್ರಸಾದವಿಲ್ಲ, ಪಾದೋದಕವಿಲ್ಲದ ಭಾಷೆ. ಆ ಗುರು ಲಿಂಗ ಜಂಗಮ ಪ್ರಸಾದ ಪಾದೋದಕ

ಏಕಾರ್ಥವಾದ ಕಾರಣ, ಪ್ರಾಣಿಗಳೆಲ್ಲವೂ ಪ್ರಣಮಂಗೈವುತ್ತಿರ್ದವು. ಜೀವಿಗಳೆಲ್ಲವೂ ಜೀಯ ಜೀಯ ಎನುತ್ತಿರ್ದವು. ಆತ್ಮಂಗಳೆಲ್ಲ ಆಸುವ ಬೇಡುತ್ತಿರ್ದವು. ಗೊಹೇಶ್ವರ, ಸಂಗನ ಬಸವಣ್ಣನ ಪಾದಕ್ಕೆ ಈರೇಳು ಲೋಕವೆಲ್ಲವೂ ಜಯ ಜಯ ಎನುತ್ತಿರ್ದವು.

## 1147

ತಾಯಿಲ್ಲದ ಶಿಶುವಿಂಗೆ ಶಿಶುವಿಲ್ಲದ ತಾಯಿ ಮೊಲೆಯನೂಡಿದಳು. ಮೊಲೆವಾಲನುಂಡ ಶಿಶು ತಾಯ ತಕ್ಕೈಸಿದರೆ, ತಾಯಾ ಶಿಶುವಿಂಗೆ ಸತಿಯಾದಳಲ್ಲಾ! ಸತಿಯ ಸಂಗದ ಸುಖವ ಪತಿಯಿಲ್ಲದಱೆದಲ್ಲಿ ಸತಿಪತಿಯೆಂಬೆರಡೂ ಅಳಿಯಿತ್ತು ನೋಡಾ. ಈ ನಿಜದ ನಿರ್ಣಯವ ತೋಱೆದನೆನಗೆ ಗೊಹೇಶ್ವರನ ಶರಣ ಮಡಿವಾಳತಂದೆಗಳ ಪಾದಕ್ಕೆ ನಮೋ ನಮೋ ಎಂಬೆನು.

## 1148

ಅನುವನಱೆಯದೆ, ಆದಿಯ ವಿಚಾರಿಸದೆ, ಅನಾದಿಯಲ್ಲಿ ತಾನಾರೆಂಬುದ ನೋಡದೆ ಸ್ತೋತ್ರವ ಮಾಡಿ ಫಲವೇನು? ನಿಶ್ಶಬ್ದಂ ಬ್ರಹ್ಮ ಉಚ್ಯತೆ ಎಂಬ ಘನವು ಹೊಗಳತೆಗೆ ಸಿಕ್ಕುವುದೇ ಎಲೆ ಮರುಳುಗಳಿರಾ? ಅನಾದಿಯಲ್ಲಿ ಬಸವಣ್ಣನು ಏಳುನೂಱೆಪ್ಪತ್ತು ಅಮರಗಣಂಗಳು ಸಹಿತ ಮರ್ತ್ಯಕ್ಕೆ ಬಂದನೊಂದು ಕಾರಣದಲ್ಲಿ, ಬಂದ ಮಣಿಹ ಪೂರೈಸಿತ್ತು. ಸಂದ ಪುರಾತರೆಲ್ಲರೂ ಕೇಳಿ. ಇಂದು ನಿಮ್ಮೆಲ್ಲರು ನಿಮ್ಮ ನೀವು ತಿಳಿದು ನೋಡಿ ನಿಜವನೈದುವುದು. ಇನ್ನು ನಮ್ಮ ಗೊಹೇಶ್ವರಲಿಂಗಕ್ಕೆ ಸುರಾಳದ ಸುಳುಹಿಲ್ಲ.

## 1149

ಸಾವನ್ನಕ್ಕರ ಸರವ ಮಾಡಿದರೆ ಇನ್ನು ಕಾದುವ ದಿನವಾವುದು? ಬಾಳುವನ್ನಕ್ಕರ ಭಜಿಸುತ್ತಿದ್ದರೆ ತಾನಹ ದಿನವಾವುದು? ಅರ್ಥವುಳ್ಳನ್ನಕ್ಕರ ಅಱೆವುತ್ತಿದ್ದರೆ ನಿಜವನೈದುವ ದಿನವಾವುದು? ಕಾರ್ಯಕ್ಕೆ ಬಂದು ಕಾರ್ಯ ಕೈಸಾರಿದ ಬಳಿಕ ಇನ್ನು ಮರ್ತ್ಯಲೋಕದ ಹಂಗೇಕೆ? ತನಿರಸ ತುಂಬಿದ ಅಮೃತಫಲ ಒಮ್ಮೆಗೆ ತೊಟ್ಟು ಬಿಡುವುದು, ನೋಡಿರೆ ದೃಷ್ಟಾಂತವ! ಬಸವಣ್ಣ ಚೆನ್ನಬಸವಣ್ಣ ಮೊದಲಾದ ಪ್ರಮಥರು ಗೊಹೇಶ್ವರಲಿಂಗದಲ್ಲಿ ನಿಜವನೈದಿ ನಿಶ್ಚಿಂತರಾಗಿರಯ್ಯ.

## 1150

ಕಾಯದೊಳಗೆ ಕಾಯವಾಗಿ, ಪ್ರಾಣದೊಳಗೆ ಪ್ರಾಣವಾಗಿ, ಮನದೊಳಗೆ ಮನವಾಗಿ, ಭಾವದೊಳಗೆ ಭಾವವಾಗಿ, ಅಱೆವಿನೊಳಗೆ ಅಱುಹಿನ ತಿರುಳಾಗಿ, ಮಱವು ಮಾರಡೆಯಿಲ್ಲದೆ ನಿಜಪದವು ಸಾಧ್ಯವಾದ ಬಳಿಕ, ಆವುದು ವರ್ಮ, ಆವುದು ಕರ್ಮ, ಆವುದು ಬೋಧೆ, ಆವುದು ಸಂಬಂಧ? ನಾ ಹೇಳಲಿಲ್ಲ,

ನೀ ಕೇಳಲಿಲ್ಲ. ಅದೇನು ಕಾರಣವೆಂದರೆ, ಬೆಸಗೊಂಬರೆ ತೆಱಹಿಲ್ಲವಾಗಿ ಗೊಹೇಶ್ವರಲಿಂಗದಲ್ಲಿ ತೆಱೆಮಱೆಯಾವುದು ಹೇಳಯ್ಯ ಬಸವಣ್ಣ ?

1151

ಮಥನದ ಲೀಲೆಯಲ್ಲಿ ಹುಟ್ಟುವುದೆ ಬ್ರಹ್ಮನು ? ಶ್ರುತಿ ಸ್ಮೃತಿಗಳಿಗೆ ಅಳವಡದು ನೋಡಾ. ಪೃಥ್ವಿಯೊಳಗಿಲ್ಲದ ಅಚಳವಪ್ಪ ಲಿಂಗವನು ಸಚರಾಚರದಲ್ಲಿ ಭರಿತವೆಂತೆಂಬೆ ? ಇಲ್ಲದ ಲಿಂಗವನಲ್ಲಲ್ಲಿಗೆ ಉಂಟೆಂಬ ಲಿಂಗದ ವಾರ್ತೆ ! ಗೊಹೇಶ್ವರನೆಂಬ ಲಿಂಗವು ಸಾಧ್ಯವಾಗದು ಕಾಣಾ, ಸಂಗನ ಬಸವಣ್ಣ.

1152

ನೆಲದ ಮುಂದಣ ಬಾಗಿಲು, ಮೂಱು ಮೊನೆಯ ಕಂಭದ ಶೂಲದಲ್ಲಿ ಒಂದು ದೇಗುಲ. ಅಲ್ಲಿ ಒಳಗಣ ಹೂವಿನ ಕಲ್ಲಿನಲ್ಲಿ ಸಿಲುಕಿತ್ತು, ನಾದಮೂರುತಿ ಲಿಂಗವಿಪ್ಪುದು. ಒಂದು ಮಾತನಾಡಿದರಳುಕಿ ನುಡಿವುದು. ಗೊಹೇಶ್ವರ ಮೆಚ್ಚಲು ಬಹುಮಾತಿನ ಮಾಲೆಯ ಅನುಭಾವಕ್ಕೆ ನಾಚುವೆನು ಕಾಣಾ, ಸಂಗನ ಬಸವಣ್ಣ.

1153

ಪ್ರಸಾದಲಿಂಗವುಳ್ಳನ್ನಕ್ಕರ ಪ್ರಾಣಲಿಂಗವೆಂಬ ವಾರ್ತೆ ಭಂಗ ನೋಡಾ, ಸಂಗನ ಬಸವಣ್ಣ. ಬೀದಿಯಲ್ಲಿ ಕೊಡನನೊಡೆದು ಬಯಲನುಡುಗಿದರೆ ಉಂಟೆ ಹೇಳಾ ? ಗೊಹೇಶ್ವರ ಲಿಂಗವ ಬೇಱು ಮಾಡಿ ಅಱಿಸಲುಂಟೆ, ಬಸವಣ್ಣ ?

1154

ಬಸವಣ್ಣನೆ ಪ್ರಾಣಲಿಂಗವೆಂದು ಭಾವಿಸಿ, ದೃಷ್ಟಿ ನಟ್ಟು ಸೈವೆಱಗಾದುದ ಕಂಡೆ. ಕಲ್ಪಿಸಿ ಮನ ನಟ್ಟು ಸಿಬ್ಬೆಱಗಾಯಿತ್ತಯ್ಯ ! ಗೊಹೇಶ್ವರ, ನಿಮ್ಮಲ್ಲಿ ಸರ್ವನಿರ್ವಾಣಿ ಸಂಗನ ಬಸವಣ್ಣನೆ ಎನ್ನ ಪ್ರಾಣಲಿಂಗವೆಂದಱಿದು, ನೀನೆನ್ನ-ನೊಳಕೊಂಡ ಗುರುವೆಂದು ಕಂಡೆನಯ್ಯ, ನಿಮ್ಮ ಧರ್ಮ ನಿಮ್ಮ ಧರ್ಮ.

1155

ಎತ್ತೆತ್ತ ನೋಡಿದರೆ ಬಸವಣ್ಣನೆಂಬ ಬಳ್ಳಿ. ಆ ಬಳ್ಳಿಯ ಹಿಡಿದೆತ್ತಿದರೆ ಲಿಂಗವೆಂಬ ಗೊಂಚಲು. ಆ ಲಿಂಗದ ಗೊಂಚಲ ಹಿಡಿದೆತ್ತಿದರೆ ಭಕ್ತಿರಸಮಯವಾಯಿತ್ತಯ್ಯ ! ಇದಾರಯ್ಯ ಅಮಳೋಕ್ಯವ ಮಾಡಬಲ್ಲವರು ? ಇದಾರಯ್ಯ ಹೊಱಗೆ ಪ್ರಜ್ಜ್ವಲಿಸಿ ತೋಱಬಲ್ಲವರು? ಬಸವಗುರು ಎನ್ನ ಕರಸ್ಥಲದ ಲಿಂಗದ ಆದಿಯನಱುಹಿ ತೋಱಿದ ಕಾರಣ, ಗೊಹೇಶ್ವರಲಿಂಗದ ನಿಲವ ನಿನ್ನಿಂದಲಱಿದೆ ಈ ಉಳಿದ ಲೋಕಾದಿಲೋಕಂಗಳೆಲ್ಲ ಎನ್ನ ಮುಖದಲ್ಲಿ ಕಿಂಚಿತ್ತು.

1156

ಜಗತ್ ಸ್ವಯಂಭುವೆಂಬ ಗಣೇಶ್ವರನ ಕರಸ್ಥಲದಲ್ಲಿ ಹಿಡಿದಾಡುತ್ತಿರ್ದರೆ

ಆದಿಲಿಂಗವೆಂದು ಬಗೆಯದು ಲೋಕವೆಲ್ಲ. ಗೊಹೇಶ್ವರ, ನಿಮ್ಮ ಶರಣ ಬಸವಣ್ಣ ನಚ್ಚಲಿಂಗವ ಹಿಡಿದ ಕಾರಣ, ಬಱಿಯ ಲಿಂಗದ ಮಸ್ತಕವಾಯಿತ್ತು ತ್ರಿಜಗದೊಳಗೆ.

1157

ಎನ್ನ ಕರಸ್ಥಲದೊಳಗೊಂದು ಮಹಾಬೆಳಗ ಕಂಡೆನಯ್ಯ! ಮಹಾ ಮಂಗಳನಿಳಯವಾಗಿ ತೋಱುತ್ತಿದೆ! ಗೊಹೇಶ್ವರಲಿಂಗದ ಕಂಗಳ ಕಾಂತಿಗಳು ಸಂಗನ ಬಸವಣ್ಣನ ನಿವಾಳಿಸುತ್ತಿದ್ದವಯ್ಯ.

1158

ಅವಸ್ಥೆ ಆವಸ್ಥೆಯ ಕೂಡಿ, ಬಿಂದು ನಾದವ ಕೂಡಿ, ಕಳೆಕಳೆಗಳು ಒಂದಾದ ಪರಿಯ ನೋಡಾ! ಅದು ಲಿಂಗದಲನಿಮಿಷ ಆನೆಂಬ ಗುರುಪದವಾದೆನಯ್ಯ. ಹಿಂದು ಮುಂದ ಒಂದು ಮಾಡಿ ಮೂರ್ತಿಯಾಗಿ ಲಿಂಗ ಜಂಗಮವಾದ ಪರಿಯ ನೋಡಾ! ಗೊಹೇಶ್ವರನ ಅಮಳೋಕ್ಯವಾದ ಸಂಗನ ಬಸವಣ್ಣನ ಶ್ರೀಪಾದಕ್ಕೆ ನಮೋ ನಮೋ ಎಂಬೆನು.

1159

ಕೈಲಾಸಕ್ಕೆ ಹೋದವರೆಲ್ಲ ಕೈಸೆಱೆಯಾದರು. ಲಿಂಗದಲ್ಲಿ ಲೀಯವಾದವರೆಲ್ಲ ಬಂಧನಕ್ಕೊಳಗಾದರು. ಸಾಲೋಕ್ಯ ಸಾಮೀಪ್ಯ ಸಾರೂಪ್ಯ ಸಾಯುಜ್ಯದವರೆಲ್ಲ ಎಡೆಯಾಡುತ್ತಿದ್ದರು. ಗೊಹೇಶ್ವರ, ನಿಮ್ಮ ಶರಣ ಸಂಗನ ಬಸವಣ್ಣ ಜಂಗಮಪ್ರಸಾದಿಯಾದನಾಗಿ ಸ್ವಯಲಿಂಗವಾದ.

1160

ಮನದ ಕೊನೆಯ ಮೊನೆಯ ಮೇಲೆ ನೆನೆದ ನೆನಹು ಜನನ ಮರಣವ ನಿಲಿಸಿ, ಜ್ಞಾನಜ್ಯೋತಿಯ ಉದಯ ಭಾನುಕೋಟಿಯ ಮೀಱು, ಸ್ವಾನುಭಾವದ ಉದಯ ಜ್ಞಾನಶೂನ್ಯದಲಡಗಿದ ಘನವನೇನೆಂಬೆನು ಗೊಹೇಶ್ವರ.

1161

ಘನವ ಕಂಡು [1]ಮನವು ಗ್ರಹಿಸಿತ್ತು.[1] ಕಂಡು ಕಂಡು ಮನ ಮಹಾಘನವಾಯಿತ್ತು. ತತ್ತಲ್ಲೀಯವಾಯಿತ್ತು, [2]ತದುಗತವಾಯಿತ್ತು.[2] ಶಬ್ದ ಮುಗ್ಧವಾದುದನೇನೆಂಬೆ, ಗೊಹೇಶ್ವರ.

1162

ಗುರುವಿನಿಂದಾದ ಕಾಯವ ಬೆರಸಿ ಗುರುವನಱಿಯದಾದೆನಯ್ಯ. ಲಿಂಗದಿಂದಾದ ಜೀವವ ಬೆರಸಿ ಲಿಂಗವನಱಿಯದಾದೆನಯ್ಯ. ಜಂಗಮದಿಂದಾದ

---

1. ಮನವವಗವಿಸಿತ್ತು (ಐ) 2. ತದುಗತ (ಐ)

ಮನವ ಬೆರಸಿ ಜಂಗಮವನಱಿಯದಾದೆನಯ್ಯ. ಈ ತ್ರಿವಿಧಭಕ್ತಿಯನಱುಹಿಸಿಕೊಟ್ಟ ಸಂಗನ ಬಸವಣ್ಣನ ಬೆರಸಿ, ನೀನು ನಾನು ಬದುಕಿದೆವು ಕಾಣಾ, ಗೊಹೇಶ್ವರ.

1163

ನಾನೆಂಬುದು ಪ್ರಮಾಣ. ನೀನೆಂಬುದು ಪ್ರಮಾಣ. ಸ್ವಯವೆಂಬುದು ಪ್ರಮಾಣ. ಪರವೆಂಬುದು ಪ್ರಮಾಣ. [1]ಪ್ರಮಾಣವೆಂಬುದು[1] ಪ್ರಮಾಣ. ಗೊಹೇಶ್ವರನೆಂಬುದು ಅಪ್ರಮಾಣ !

1164

ಇಂದುವಿನ ಬೆಳಗಿನ ಸಂಪತ್ತನಿಂಬುಗೊಂಡ ಚಕೋರನ ಧ್ಯಾನವೆಂತಿರ್ಪುದು ಅಂತಾಗಿದ್ದೆ ನಾನು. ಮಾತೆ ವಿಯೋಗವಾದ ಶಿಶುವಿನ ಧ್ಯಾನವೆಂತಿರ್ಪುದು ಅಂತಾಗಿದ್ದೆ ನಾನು. ಬಂಧನದಲ್ಲಿ ಸಿಕ್ಕಿದ ಫಣಿಯ ಧ್ಯಾನವೆಂತಿರ್ಪುದು ಅಂತಾಗಿರ್ದೆ ನಾನು. ರಾತ್ರಿಯೊಳು ಮುಗಿದ ಪದ್ಮದ ಭ್ರಮರನ ಧ್ಯಾನವೆಂತಿರ್ಪುದು ಅಂತಾಗಿದ್ದೆ ನಾನು. ಸ್ವಪ್ನದಲ್ಲಿ ದೃಷ್ಟ ಕೇಸರಿಯ ಧ್ಯಾನದ ಮದಹಸ್ತಿಯೆಂತಿರ್ಪುದು ಅಂತಾಗಿದ್ದೆ ನಾನು. ನೋಟವಗಲಿದ ನೇಹದ ಧ್ಯಾನವೆಂತಿರ್ಪುದು ಅಂತಾಗಿದ್ದೆ ನಾನು. ಬ್ರಹ್ಮಪಾಶ ವಿಷ್ಣುಮಾಯವನತಿಗಳೆದ ಛಲದಲ್ಲಿ ಏನೆಂದಱಿಯದಿದ್ದೆ ನಾನು. ಗೊಹೇಶ್ವರಲಿಂಗ, ಸಂಗನ ಬಸವಣ್ಣನೊಳಗೆ ಲೀಯವಹ ಭರದಲ್ಲಿ ಏನೆಂದಱಿಯದಿರ್ದೆ ನಾನು.

1165

ಅವಧಿಯಳಿಯಿತ್ತು. ವ್ಯವಧಾನ ಉಳಿಯಿತ್ತು. ನಿಜವೆ ನಿಜವನೊಡಗೂಡಿತ್ತು–ಕೇಳಾ ಬಸವಣ್ಣ. ಕಲಿಯುಗದಲ್ಲಿ ಮುಂದೆ ಇರಬಾರದು ನಿಜಶರಣರಿಗೆ. ನಡೆ ನೀನು ಕಪ್ಪಡಿಯ ಸಂಗಯ್ಯನಲ್ಲಿ ಒಡಗೂಡು. ಉಳುಮೆಯಲ್ಲಿ ನಿಜವನೆಯ್ದು ನಡೆ ಚೆನ್ನಬಸವಣ್ಣ. ಮಹವನೊಡಗೂಡು ಮಡಿವಾಳಯ್ಯ. ಸೊಡ್ಡಳಬಾಚರಸರು ಮೊದಲಾದ ಪ್ರಮಥರೆಲ್ಲರು ನಿಜವನೈದುವುದು. ನಿರ್ವಯಲ ಸಮಾಧಿಯಲ್ಲಿ ಬಗಿದು ಹೊಗಿ ಲಿಂಗದೊಳಗೆ ಹೊಗುವರೆಲ್ಲರೂ ; ನಡೆಯಿರಿ ಕಾಯವೆರಸಿ ಕೈಲಾಸಕ್ಕೆ. ಕಾಯಸಹಿತೈದುವುದು ನಿಮಗೆಲ್ಲರಿಗೆಯೂ ಉಪದೇಶಮಂತ್ರ ತಪ್ಪದು. ನಮಗೆ ಕದಳಿಯಲ್ಲಿ ಹೊಕ್ಕು ನಿಜದಲ್ಲಿ ಒಡಗೂಡುವ ಪರಿಣಾಮ. ಇದು ನಮ್ಮ ಗೊಹೇಶ್ವರಲಿಂಗದಾಣತಿ ನಿಮಗೆಲ್ಲರಿಗೆಯೂ.

---

1. ಪ್ರಮಾಣೆಂಬುದು (ಐ)

1166

ಕಾಯವೆಂಬ ಮಹಾಕದಳಿಯ ಗೆಲಬಲ್ಲವರನಾರನೂ ಕಾಣೆ. ಸಂಸಾರವೆಂಬ ಸಪ್ತಸಮುದ್ರ ಬಳಸಿ ಬಂದಿಪ್ಪವು. ಭವವೆಂಬ ಮಹಾರಣ್ಯದೊಳು ಪಂಚೇಂದ್ರಿಯವೆಂಬ ವಿಷದ ಮಳೆ ಸುರಿವುತ್ತಿರ್ಪುದು. ಕೋಪವೆಂಬ ಪೆರ್ಬುಲಿ ಮೊಱೆವುತ್ತಿರ್ಪುದು. ಅಷ್ಟಮದಗಜಂಗಳು ಬೀದಿವರಿಯುತ್ತಿರ್ಪವು. ಕಾಮವೆಂಬ ಮೂಱಂಬಿನ ಸೋನೆ ಸುರಿಯುತ್ತಿರ್ಪ್ಪುದು. ಮತ್ಸರವೆಂಬ ಮಹಾ ಸರ್ಪಂಗಳು ಕಿಡಿಯನುಗುಳುತ್ತಿರ್ಪವು. ಆಶೆಯೆಂಬ ಪಾಪಿಯ ಕೂಸು ಹಿಸಿ ಹಿಸಿದು ತಿನುತ್ತಿರ್ಪುದು. ತಾಪತ್ರಯವೆಂಬ ಕೆಂಡದ ಮಳೆ ಅಡಿ ಇಡಬಾರದು. ಅಹಂಕಾರವೆಂಬ ಗಿರಿಗಳು ಅಡ್ಡಬಿದ್ದಿರ್ಪವು. ಪಂಚಭೂತಂಗಳೆಂಬ ಭೂತಂಗಳ ಭಯ ದಿಟ್ಟಿಸಬಾರದು. ಮಾಯೆಯೆಂಬ ರಕ್ಕಸಿ ಹಸಿಯ ತಿನುತ್ತಿರ್ಪಳು. ವಿಷವೆಂಬ ಕೂಪ ಬಳಸಬಾರದು. ಮೋಹವೆಂಬ ಬಳ್ಳಿ ಕಾಲ ಕುತ್ತಬಾರದು. ಲೋಭವೆಂಬ ಮಸೆದಡಾಯುಧನೊಡೆಯುಚ್ಚಬಾರದು. ಇಂತಪ್ಪ ಕದಳಿಯ ಹೊಗಲಱಿಯದೆ ದೇವದಾನವಮಾನವರೆಲ್ಲರೂ ಮತಿಗೆಟ್ಟು ಮರುಳಾಗಿ ಹೆಱದೆಗೆದೋಡಿದರು. ಅಂಗಾಲಕಣ್ಣವರು ಮೈಯೆಲ್ಲ ಕಣ್ಣವರು ತಲೆಬಾಲಗೆಟ್ಟರು. ನಾನೀ ಕದಳಿಯ ಹೊಕ್ಕು ಹೊಯ್ದಾಡಿ ಮುಳ್ಳುಮಸೆ ಮುಟ್ಟದೆ ಕದಳಿವರಿದು ಗೆಲಿದುತ್ತರಿಸಿ ಗೊಹೇಶ್ವರನೆಂಬ ಲಿಂಗದ ನಿಜಸಮಾಧಿಯಲ್ಲಿ ನಿಂದು ಪರವಶನಾಗಿ ನಿರಾಳಕ್ಕೆ ನಿರಾಳವಾಗಿದ್ದೆನಯ್ಯ!

1167

ಜಲವಿಲ್ಲದ ಕೆಱೆ, ಫಲವಿಲ್ಲದ ಬನ, ಭಕ್ತನಿಲ್ಲದ ಗ್ರಾಮ ಸುಡುಗಾಡಯ್ಯ! ಅಲ್ಲಿ ಶಿವನಿಲ್ಲ! [1]ಪ್ರೇತ[1] ಜನಾರಣ್ಯದಲ್ಲಿ ಹೊಗಬಹುದೆ, ಗುಹೇಶ್ವರ.

1168

ತಾ ಕೇಳಿ, ನೋಡಿ, ಮುಟ್ಟಿ, ಮನವಱಿದ ಸುಖವ ಲಿಂಗಕ್ಕೆ ಕೊಡುವುದೆಂತು ಅಂಗ ಮನವೆಂಬುವನು? ಲಿಂಗದ ಪರಿಪೂರ್ಣವ ಕಾಣದಿಹ ಅಂಗ-ಹೀನರಿಗೇಕೆ ವ್ರತಾಚಾರದ ಹೊಲಬು? ಜೀರ್ಣಪರ್ಣರವಿ [2]ರಶ್ಮಿನ್ಯಾಯದಂತೆ[2] ಜಗದೊಳಗೇತಱಲ್ಲಿಯೂ ಖಂಡಿತವಿಲ್ಲದೆ ಗುಹೇಶ್ವರನಿ[3]ರ್ಪ[3] ಭಕ್ತದೇಹಿಕನಾಗಿ.

1169

ಬಯಲಿಂಗೆ ಕಡೆಯಿಲ್ಲ, ಮರುತಂಗೆ ತಡೆಯಿಲ್ಲ, ರುಚಿಗೆ ಖಂಡಿತವಿಲ್ಲ, ಸುಖಕ್ಕೊಗಡಿಕೆಯಿಲ್ಲ. ಸುಖವೆ ಪರಬ್ರಹ್ಮಾನಂದವಾಗಿ ಶೂನ್ಯತೃಪ್ತಿಗೆ

---

1. ಪ್ರಿತ (ನ) 2. ರಶ್ಮಿ ಜ್ಞಾಯದಂತೆ (ನ) 3. ಪ್ಪ (ಮೂ)

ಸೂತಕವಿಲ್ಲ. ಸಾಕಾರಕ್ಕೆ [1]ಸತ್ಕ್ರಿಯೆ[1] ಬೇಕು : ಅದೆಂತೆಂದಡೆ ಲೋಹಸಂಗ ದಿಂ[2]ದ[2]ಗ್ನಿ ಬಡಿವಡೆದಂತೆ. ರೂಪು[3]ಗೂ[3]ಡಿದ ರುಚಿಯು ಸತ್ಕ್ರಿಯೆಯಿಂದರ್ಪಿಸ ಬೇಕು, ನಮ್ಮ ಗುಹೇಶ್ವರಲಿಂಗದಲ್ಲಿ ಸಂದು ಸಂಶಯವಿಲ್ಲದೆ.

1170

ಉದಕದ ಕೊಡನ ಹೊತ್ತಾಡುವ ಗೊರ[4]ವಿ[4]ತಿಯ ಕೈಯಲ್ಲಿ ಕಂಕಣ, [5]ಉಲಿವ[5] ಗೆಜ್ಜೆ ಚರಣದಲ್ಲಿ ; ಉರಿಯ ಗೊರವನ ನೆರೆವ [6]ಭರವಸದಿಂದ[6] ಬರಲು, ಬಹಳ ಮುಳ್ಳಡ್ಡಲಾದವಲ್ಲಾ ! ಕಂಕಣದುಲುಹು ನಂದಿ, ಕಣ್ಣದೆ[?]ದಾ ಮುಳ್ಳಳಿಯಲು, [A]ಕಾಡುಗಿಚ್ಚೆದ್ದು[A] ಕರಡವ ಸುಟ್ಟಂತೆ [7]ಪ್ರಾಕ್‌ಪ್ರಧ್ವಂಸಾ ನ್ಯೋನ್ಯ[7] ಭಾವತ್ರಯವುಂಟೆ ? ಶರಣಲಿಂಗಕ್ಕೆ ಸಂದಿಲ್ಲ, ಗುಹೇಶ್ವರ.

1171

ಅಜ್ಞಾನಿನ [8]ನಿಜಾ[?]ಗೆ[8]ಗಾಣದೆ, ಗಿರಿಯ ಕೋ[9]ಡುಗ[9]ಲ್ಲ ಮೇಲೆ ತಲೆ ಯೂಜ್ಞ ತಪ[10]ಸ್ಸ[10] ಮಾಡಿದಡಿಲ್ಲ, ಇಲ್ಲದ ಕಾಲಕ್ಕಿಲ್ಲ, ಗಾತ್ರವ ದಂಡಿಸಿ ದಡಿಲ್ಲ, ಪೃಥ್ವಿಯ ತಿರುಗಿದಡಿಲ್ಲ, ತೀರ್ಥಂಗಳ ಮಿಂದು ನಿತ್ಯ [11]ನಿಯ[11]ಮಂಗಳ [12]ಮಾಡಿ[12] ಜಪಸಮಾಧಿ[13]ಯಲ್ಲಿ ನಿಂದಡಿಲ್ಲ[13] :

ಪೂಜಾಕೋಟಿಸಮಂ ಸ್ತೋತ್ರಂ ಸ್ತೋತ್ರಕೋಟಿಸಮಂ ಜಪಂ ।
[14]ಜಪಕೋಟಿಸಮಂ[14] ಧ್ಯಾನಂ ಧ್ಯಾನಕೋಟಿರ್ಮನೋ[15]ಲ[15]ಯಂ ॥

ಎಂದುದಾಗಿ ಸುತ್ತಿ ಸುಳಿವ ಮನವ ಚಿತ್ತದಲ್ಲಿರಿಸಿ, ಚಿ[16]ತ್ತ[16] ಬಯಲಾದಡೆ ನಿತ್ಯಪ್ರಕಾಶ ! ಗುಹೇಶ್ವರಲಿಂಗವ ಮತ್ತಱಿಸಲುಂಟೆ ?

1172

ಸರ್ವಾತ್ಮ ಚೈತನ್ಯನಪ್ಪ ಜಂಗಮದ ಪರಿಯ ನೋಡಾ ! ಅಖಂಡ ಬ್ರಹ್ಮದ ಬಯಲೆಲ್ಲಾ ತಾನಾಗಿ, ಸುಳಿಯಲೆಡೆಯಿಲ್ಲದೆ ನಿಂದು ನಿರ್ಗ(+ಮ ?)ನಿ ಯಾದಲ್ಲಿ, ಒಂದಾಸೆಯೊಳಗಿಲ್ಲದ ಅವಿರಳಜ್ಞಾನಿ. ಕುಱುಹೊಂದಕ್ಕೆ ಸುಳಿವ ವನಲ್ಲ ! ಭಕ್ತಿಗಮ್ಯನು, ಉಳಿದ ಗಮನದ ತುರಿಯವಿಲ್ಲದ [17]ತನ್ನ ನಿರ್ಗಮನ ವಿರವು[17], ಚತುರಾಕಾರಭೂಮಿಯೇ ಸುಖತಳ್ಪಮಂಚ, ಆಕಾಶವೇ ಮೇಲು

---

1. ಸತ್ಕ್ರೀ (ಮೂ) 2. ದ ಅ (ಮೂ) 3. ಕೂ (ಮೂ) 4. ವ (ಮೂ) 5. ಉರಿ (ನ) 6. ಭವರಶದಿಂದ (ನ) A ಕಾಡ್ಗಿಚ್ಚೆದ್ದು (ನ) 7. ಪ್ರಾಣಗುಣ ಪ್ರಧ್ವಂಸಕಂಗೆ ಅನ್ಯೋನ್ಯ (ಮೂ). 8. ನಿರಗೆ (ಮೂ) 9. ಡ್ಗ (ನ) 10. ಸ್ಸ (ಮೂ) 11. ನೇ (ಮೂ) 12. ಮಾಡಿದಡಿಲ್ಲ (ಮೂ) 13. ಯಲ್ಲ (ಮೂ) 14. ಜಪಕೋಟಿಸಮಂ (ಮೂ) 15. ಲನ್ (ಮೂ) 16. ತ್ತು (ಮೂ) 17. ಮನ ನಿರ್ಗವೆ ತೆರದೊಡೆ (ನ).

ಕಟ್ಟು, ಚಂದ್ರಸೂರ್ಯರೇ ಉಭಯಭಾಗದಲ್ಲಿ ಬೆಳಗುವ ಜ್ಯೋತಿ, ಪರಿಣಾಮವೇ ತೃಪ್ತಿ, ದಿಕ್ಕುಗಳೇ ವಸನ, ಸದ್ಗುಣವಾಸನೆಯೇ ಪರಿಮಳ, ನಕ್ಷತ್ರಂಗಳೇ ಪುಷ್ಪ, ಶಿವತತ್ವಕಾಂತಿಯೇ ಆಭರಣ, ತ್ರಿಗುಣಕೂಟವೇ ತಾಂಬೂಲ, ಜ್ಞಾನಶಕ್ತಿಯೇ ಸಂಗ, ಪ್ರಣವನಾದ ಗೀತ, ಕೇಳಿರೇ! ಇಂತೀ ಅಷ್ಟಭೋಗದೈಶ್ವರ್ಯದಲ್ಲಿಪ್ಪ ರಾಜಯೋಗಿ ಚರಲಿಂಗ, ನಿಶ್ಚಿಂತ, ನಿರ್ವಾಣಿ, ನಿರಂಜನ, ನಿರ್ಮಾಯ ನಿರ್ವ್ಯಸನಿ, ಪರಮ ಜಂಗಮ. ಇಂತಲ್ಲದೆ ಕಾಯದಿಚ್ಛೆಗೆ ಸುಳಿದು ಕಳವಳಿಸಿ ತ್ರಿವಿಧಕ್ಕೆ ಬದ್ಧಕರಪ್ಪವರೆಲ್ಲಾ ಜಗತ್ಪಾವನರಪ್ಪರೆ ಹೇಳಾ, [1]ಗುಹೇಶ್ವರ?[1]

## 1173

ಮಾಡುವ ಭಕ್ತನಲ್ಲಿ ಕೂಡಿರ್ಪ ಜಂಗಮವು. ಕೋಡಿಗಳೆವುತ್ತಿಪ್ಪರೊಬ್ಬರನೊಬ್ಬರು. ತಮ್ಮ ತಮ್ಮವರ ತಾವಱಿಯದ ಖಂಡಿತರು. ಒಡ[2]ಲ[2] ಗುಣಧರ್ಮದಿಂದ ಅನ್ನಾಸನಪಂಕ್ತಿಗೆ ಹೋರುವರಿಗೇಕೆ [3]ಶಿವನ[3] ವೇಷ? ಜಂಗಮವೆನಿಸಿಕೊಳ್ಳವೆ [4]ಚರಾದಿ[4]ಗಳು? ಅರಸಿನ ಹೆಸರಿನಲ್ಲಿ ಕರೆಯಿಸಿಕೊಂ[5]ಡ[5]ನಾಮಿಕನಂತೆ, ನಾಮರೂಪಿರ್ದಡೇನಾಯಿತ್ತು? ಅಲ್ಲಿ ಶಿವನಿಲ್ಲ. ಎಲ್ಲಾ ಅವನಿಯಲ್ಲಿ ಹೇಮವಿರ್ಪುದೆ? ಇಪ್ಪುದೊಂದು ಠಾವಿನಲ್ಲಿ! ಪರಮನ ವೇಷಕ್ಕೆ ತಕ್ಕ ಚರಿತ್ರವುಳ್ಳಲ್ಲಿ ಶಿವನಿರ್ಪನು. ಅದೆಂತೆಂದಡೆ:

ಧಾರಯೇತ್ ಸಮತಾಕಂಥಾಂ ಕ್ಷಮಾಖ್ಯಾಂ ಭಸ್ಮಘುಂಟಿಕಾಂ ॥
ದಯಾ ಕಮಂಡಲುಶ್ಚೋಕ್ತಃ ಜ್ಞಾನದಂಡೋ ಮನೋಹರಃ ।
ವೈರಾಗ್ಯಂ ಭಿಕ್ಷಾಪಾತ್ರಂ ಚ ಭಕ್ತಿಭಿಕ್ಷಾಂ ಚ ಯಾಚಯೇತ್ ॥

ಎಂದೀ ಅಱಿವಿನ ವೇಷವ ಜ್ಞಾನದಲ್ಲಿ ಧರಿಸಿ ಕುಱುಹಿನ ವೇಷವನಂಗದಲ್ಲಿ ಧರಿಸಿ, ಭಕ್ತಿಭಿಕ್ಷಾಂದೇಹಿಯಾದಱಿವುಮೂರ್ತಿಗೆ ವೇಷವು ತಾ [6]ಬೇಡ[6], ಗುಹೇಶ್ವರಲಿಂಗದಾಣತಿಯುಂ[7]ಟಾಗಿ[7].

## 1174

ಬತ್ತೀಸಾಯುಧವಸನಂತದಿನ ಸಾಧಿಸಿ ಪಿಡಿದರೂ ಕಾದುವುದೊಂದೇ ಕೈದು, ಒಂದೇ ದಿನ. ಆ ಹಾಂಗೆ ಸ್ಥಲ ಹಲವಾದರೂ ಅಱಿವುದೊಂದೇ ಮನ, [8]ಒಂದೇ ಲಿಂಗವು[8]; ಮನವಾ ಲಿಂಗವ ನೆಲೆಯಲ್ಲಿ ನಿಂದು ಸ್ಥಲ[9]ಲೇ(=ಲೋ?)ಪ[9]ವಾದ ಮತ್ತೆ ಸ್ಥಲವಿಲ್ಲ ನಿಸ್ಥಲವಿಲ್ಲ ನಿಜ [10]ನೀನೆ[10], ಗುಹೇಶ್ವರ.

---

1. ಗುಹೇಶ್ವರ (ಮೂ). 2. ಲು (ಮೂ) 3. ಶಿವ (ಮೂ) 4. ಚರಾಚರಾದಿ (ನ) 5. ಡಅ (ಮೂ) 6. ಬೆಡಗು (ನ) 7. ಟೋ (ಮೂ) 8. ಲಿಂಗವೊಂದೆ ಆ (ಮೂ) 9. ಲೇಪ (ಮೂ) 10. ಸನೆ (ನ)

1175

[1]ಅಲ್ಲಿ[1] ಕಲ್ಲ ನಡುವೆ ಅದಾರಯ್ಯ ಅಗ್ನಿಯನಿರಿಸಿದವರು? ಅದು ನಂದದೆ ಉರಿಯದೆ ನಿಂದ ಪರಿಯ ನೋಡಾ! ಮನ ಪವನ[2]ನ[2]ಡುಗಬ್ಬನಿಕ್ಕಿ, ಆಗ್ನಿಯ ಪಟುಮಾಡಬಲ್ಲವರನೊಬ್ಬರನೂ ಕಾಣೆ. ಹಸಿಯ ಡಗನೆ ಹಿಡಿದು, ಹಸಿದೆ ಸತ್ತರು; ಗುಹೇಶ್ವರಲಿಂಗವಲ್ಲಿ ಪ್ರಾಣಲಿಂಗಿಗಳಪೂರ್ವ.

1176

ತಿಳಿದಿ[3]ರ್ದ[3] ಮಡುವಿನೊಳಗೆ ಸುಳಿಸುಳಿದಾಡುತ್ತದೆ ಒಂದು ಸುವರ್ಣದ ಬಿಂದು! ಅದು ಹಿಂದುಮುಂದಾಗಿ ನೋಡಿದವರಿಗಲ್ಲದೆ ಕಾಣಬಾರದು. ಮಡುವ ತುಳುಕದೆ, ದಡವ ಸೋಂಕದೆ, ಹಿಡಿಯಬಲ್ಲಡೆ ಗುಹೇಶ್ವರನೆಂಬ ಲಿಂಗವು ಈಗಳೆ ಸಾಧ್ಯ.

1177

ಅಂಗನೆ[4]ಯ[4] ಮೊಲೆ ಲಿಂಗವೆ? ಬಳ್ಳ ಲಿಂಗವೆ? ಕಿತ್ತು ಬಹ ಸಾ[5]ಣೆ[5] ಲಿಂಗವೆ? ಆಡಿನ ಹಿಕ್ಕೆ ಲಿಂಗವೆ? ಮೆಚ್ಚುವರೆ ಪ್ರಮಥರು? ಮೆಚ್ಚುವರೆ ಪುರಾ[6]ತ[6]ರು? ನಿಮ್ಮ ಭಕ್ತರು ಭಾವಭ್ರಮೆಯಳಿದು, ಗುಹೇಶ್ವರ, ನಿಮ್ಮಲ್ಲಿ ಅನಾದಿಸಂಸಿದ್ಧವಾದ ಜಂಗಮನಱಿದಾತ ಬಸವಣ್ಣನೊಬ್ಬನೆ.

1178

ನಿಮ್ಮ ನೋಡುವ ಸುಖ ಉಳ್ಳನ್ನ[7]ಕ್ಕ[7] ಬೆರಸಲೆಲ್ಲಿಯದಯ್ಯ? ನಿಮ್ಮ ಬೆರಸುವ [8]ತವಕ[8] ಉಳ್ಳನ್ನ[9]ಕ್ಕ[9] ನೋ[10]ಟ[10] ಹಿಂಗದು. [11]ನೋಡಿ[11] ಕೂಡಿ ಸೈ[12]ವೆ[12]ಱಿಗಾದ ಸುಖವನೇಂದುಪಮಿಸು[12]ವೆ[12], ಗುಹೇಶ್ವರ.

1179

ಇಲ್ಲ[13]ವೆ[13]ಂದು ಸಂದೇಹಿಸಿದವಂಗೆ ಉಂಟೆಂದು ತೋಱಿದನಲ್ಲದೆ ಶ್ರೀಗುರು ಖೇಚರತ್ವವ ಬಿಟ್ಟು ಭೂಚರನಾಗಬಹುದೆ? ಮಹಾಘನ ಲಿಂಗವ ನಱಿದು ನಂಬಿದ ಬಳಿಕ ಮುಚ್ಚುಮಱೆಯುಂಟೆ, ಗುಹೇಶ್ವರ?

1180

ಸುತ್ತಲಿಲ್ಲದ ವ್ಯಾಧ, ಸುಳಿಯಲಿಲ್ಲದ ಮೃಗವು. ಒತ್ತಿದನಾ ಮೃಗವನಿಱುಬಿನಲ್ಲಿಗೆಯಯ್ಯ! ಸೋವೋ[14]ವ ಸೋವೋವ[14] ಎಂದೆನುತ್ತ ಎತ್ತಿದ

---

1. ಅಲ್ಲಿ (ಮೂ) 2. ನ ಅ (ಮೂ) 3. ದ್ದ (ಮೂ) 4. ಯರ (ಮೂ) 5. ಣ (ಮೂ) 6. ತನ (ಮೂ) 7. ಕ್ಕರ (ಶೂ) 8. ತಕ (ಮೂ) 9. ಟ [=ಉ?] (ಮೂ) 10. ಕೂಡಿ (ನ) 11. ಬೆ (ನ) 12. ವೆನಯ್ಯ (ಶೂ) 13. ಎಂ (ಮೂ). 14. ವಾ ಸೋ ತೋ ವಾ (ಮೂ)

ಮೃಗವು ಇಱುಬುಗೊಂಡಿತ್ತು ; ಇಱುಬಿನ ಕುಳಿಯೊಳಗೆ ಕೊಲ್ಲದೆ ಕೊಂದನಲ್ಲಾ ಮೃಗವನು! ಅಳಿಯದೆ ಅಳಿದುದಲ್ಲಾ! ಮಾಡಲಿಲ್ಲದ ಸಯಿದಾನ, ನೀಡಲಿಲ್ಲದ ಬೋನ, ಅರ್ಪಿತವಿಲ್ಲದ ತೃಪ್ತಿ ಗುಹೇಶ್ವರಲಿಂಗಕ್ಕೆ !

1181

ಮಠವೇಕೋ, ಪರ್ವತವೇಕೋ, ಜನವೇಕೋ, ನಿರ್ಜನವೇಕೋ, ಚಿತ್ತ ಸಮಾಧಾನವುಳ್ಳ ಶರಣಂಗೆ? ಮತ್ತೆ ಹೊಱಗಣ ಚಿಂತೆ ಧ್ಯಾನ ಮೌನ ಜಪ ತಪವೇಕೋ ತನ್ನ ತಾನಱಿದ ಶರಣಂಗೆ, ಗುಹೇ[1]ಶ್ವರ[1] ?

1182

ಶರೀರವುಳ್ಳನ್ನಕ್ಕ ನೆಳಲಿಲ್ಲ[2]ದಿ[2]ರಬಾರದು, ಭೂಮಿಯುಳ್ಳನ್ನಕ್ಕ ಆಕಾಶವಿಲ್ಲ[2]ದಿ[2]ರಬಾರದು, ನಾನುಳ್ಳನ್ನಕ್ಕ ನೀನಿಲ್ಲ[2]ದಿ[2]ರಬಾರದು ; ಗುಹೇಶ್ವರ ಲಿಂಗವು ಶಕ್ತಿಗೊಳಗಾಯಿತ್ತಾಗಿ ಬಚ್ಚಬಱಿಯ ಬಯಲೆಂಬುದಕ್ಕೆ ಉಪಮಾನವಿಲ್ಲ.

1183

ತ್ರಿಭುವನವೆಂಬ ಪಂಜರದೊಳಗೆ, ಸಂಸಾರಚಕ್ರದಲ್ಲಿ ಹೊನ್ನು ಪ್ರಾಣವೆ ಪ್ರಾಣವಾಗಿ, ಹೆಣ್ಣು ಪ್ರಾಣವೆ ಪ್ರಾಣವಾಗಿ, ಮಣ್ಣು ಪ್ರಾಣವೆ ಪ್ರಾಣವಾಗಿ, ಈ ಸುಖದ ಸೊಕ್ಕಿನಲ್ಲಿ ಈಸಿಯಾಡುತ್ತಿ[3]ರ್ದರೆಲ್ಲಾ[3] ಬಹುವಿಧದ ವ್ಯವಹಾರ ವೇಧಿಸಿದವರು, ಗುಹೇಶ್ವರ !

1184

ವರ್ಣವಿಲ್ಲದ ಲಿಂಗಕ್ಕೆ ರೂಪಪ್ರತಿಷ್ಠೆಯ ಮಾಡುವರು. ಪ್ರಳಯವಿಲ್ಲದ ಲಿಂಗಕ್ಕೆ ಪ್ರಾಣಪ್ರತಿಷ್ಠೆಯ ಮಾಡುವರು. ನುಡಿಯಬಾರದ ಲಿಂಗಕ್ಕೆ ಜಪ ಸ್ತೋತ್ರ ಪೂಜೆಯ ಮಾಡುವರು. ಮುಟ್ಟಬಾರದ ಲಿಂಗವ ಕೊಟ್ಟು ಕೊಂಡಾಡಿ[4]ದೆ[4]ವೆಂಬರು. ಬೊಟ್ಟಡಲೆಡೆಯಿಲ್ಲದ ಲಿಂಗವ ಮುಟ್ಟಿ ಪೂಜಿಸಿಹೆನೆಂಬ ಭ್ರಷ್ಟರ ನೋಡಾ, ಗುಹೇಶ್ವರ.

1185

ಮಿಂದು, ದೇವರ ಪೂಜಿಸಿಹೆನೆಂಬ ಸಂದೇಹಿಮಾನವ ನೀ ಕೇಳಾ! ಮೀಯದೆ ಮೀನು? ಮೀಯದೆ ಮೊಸಳೆ? ತಾ ಮಿಂದು ತನ್ನ ಮನ ಮೀಯದನ್ನಕ್ಕರ ಈ ಬೆಡಗಿನ ಮಾತ ಮೆಚ್ಚುವನೆ ನಮ್ಮ ಗುಹೇಶ್ವರ[5]ಲಿಂಗವು[5] ?

---

1. ಶ್ವರ (ಮೂ) 2. ದ ಇ (ಮೂ) 3. ದ್ದರಲ್ಲಾ (ಮೂ) 4. ಹೆ (ಮೂ) 5. ಲಿಂಗವು (ಮೂ)

1186

ನಿದ್ರೆಯಿದ್ದೆಡೆಯಲ್ಲಿ ಬುದ್ಧಿಯೆಂಬುದಿಲ್ಲ ನೋಡಾ! ಕಾಯವೊಂದೆಸೆ, ಜೀವವೊಂದೆಸೆ! ಗುಹೇಶ್ವರಲಿಂಗ [1]ತಾನೊಂದೆಸೆ[1].

1187

ತನುವೆಂಬ ದೇವಸ್ಥಾನದೊಳಗೆ, ಮಸ್ತಕಾಗ್ರವೆಂಬ ಸೆಜ್ಜಾಗೃಹದಲ್ಲಿ ಪ್ರಾಣಲಿಂಗಸ್ವಯಂಭು ಪ್ರತಿಷ್ಠೆಯಾಗಿರಲು, ಗುರುವೆಂ[2]ಬ[2]ರ್ಚಕನು ಮಂತ್ರವೆಂ[3]ಬಾ[3]ಗಮಿಕನು ಸಹ, ಇಷ್ಟಲಿಂಗವೆಂ[4]ಬುತ್ಸವ[4]ವಿಗ್ರಹವ[5]ನು[5] ಕರಸ್ಥಲವೆಂಬ ರಥದಲ್ಲಿ ಮೂರ್ತಿಗೊಳಿಸಿ, ಆ ಕರಸ್ಥಲವೆಂಬ ರಥಕ್ಕೆ ಜ್ಞಾನ[6]ಕ್ರಿಯೆ[6]ಯೆರಡು ಪಾದ[7]ವ್ವಯವೆರಡು[7] ಕೂಡಿ ನಾಲ್ಕು ಗಾಲಿಗಳಂ ಹೂಡಿ, ಪಂಚೇಂದ್ರಿಯಂಗಳೆಂಬ ಪತಾಕೆ[8]ಗಳ[8] ಧರಿಸಿ, ಏಕೋಭಾವವೆಂಬ ಕಳಶವನಿಟ್ಟು, ದಶವಾಯುಗಳೆಂಬ ಪಾಶಮಂ ಬಂಧಿಸಿ, ಷಡಂಗಂಗಳೆಂಬ [9]ಮೊಳೆ[9]ಗಳಂ ಬಲಿದು, ಸಪ್ತಧಾತುವೆಂಬ ಜಲ್ಲಿ[10]ಪಟ್ಟೆ[10]ಯನಲಂಕರಿಸಿ, ಅಷ್ಟಮದ ಸಪ್ತವ್ಯಸನಂಗಳೆಂಬಾನೆ ಕುದುರೆಗಳು ಸಹ ಮಹಾನಾದವೆಂಬ ಭೇರೀವಾದ್ಯಂಗಳಿಂ, ಷೋಡಶ ವಿಕಾರಂಗಳೆಂಬ ನರ್ತಕೀಮೇಳದಾರತಿಯಿಂ, [11]ಅಂತಃಕರಣ[11]ಚತುಷ್ಟಯಂಗಳೆಂಬ ಚಾಮರಧಾರಕರಿಂ, ಮನವೆಂಬ ಹೊ[12]ರ[12]ಜಿಯಂ ಕರಣಂಗಳೆಂಬ ಕಾಲಾಳ್ಗಳಿಂ ಪಿಡಿಸಿ, ಸುಬುದ್ಧಿಯೆಂಬ ಭೂಮಿಯಲ್ಲಿ ಆನಂದವೆಂಬರಸು ರಥವಂ ನಡೆಸಿ, ನೆನಹು [13]ನಿಷ್ಪತ್ತಿ[13]ಯೆಂಬ ಸ್ಥಾನದಲ್ಲಿ ನಿಲಿಸಿ, ಇಷ್ಟಲಿಂಗವೆಂ[14]ಬುತ್ಸವ[14]ವಿಗ್ರಹವನು ಹೃದಯಕಮಲವೆಂಬಂತಶಾಳದಲ್ಲಿ ಮೂರ್ತಿಗೊಳಿಸಿ, ಆನಂದವೆಂಬರಸು ನಿರಾಳವೆಂಬಪರಮಿ[15]ತಪಟ್ಟಣವ[15] ಪ್ರವೇಶವಾದನು ಕಣಾ, ಗುಹೇಶ್ವರ.

1188

ಕನಕಾಚಲದಲ್ಲಿ ದಿನನಾಯಕನೆಂಬ ರತ್ನ ಹುಟ್ಟಿ, ಅಹುದಲ್ಲ ಎಂಬ ಕೊಳಗದ ಕೊರಳಿನಲ್ಲಿ ಅಳೆವುತ್ತೈದಾರೆ. ಕೊಳಗದ ಕೊರಳು ತುಂಬಿ, ಅಳೆವಾತನ ಹೃದಯ ತುಂಬಿ, ಗೊಹೇಶ್ವರಲಿಂಗದ ಕಂಗಳು ತುಂಬಿ ಮಂಗಲಮಯ [16]ವಾಯಿತ್ತು[16].

---

1. ಒಂದೆಸೆ (ಮೂ) 2. ಬ ಅ (ಮೂ) 3. ಬ ಆ (ಮೂ) 4. ಬುಶ್ಶಾಹ (ಮೂ) 5. ನ್ನು (ಮೂ) 6. ಕ್ರೀ (ಮೂ) 7. ಎರಡೂ (ಮೂ) 8. ಳಂ (ಮೂ) 9. ಮೊಳೆ (ನ) 10. ಪಟ (ಮೂ) 11. ಅಂತರಂಗ (ಮೂ) 12. ಜ (ಮೂ) 13. ನಿಃಪತಿ (ಮೂ) 14. ಬುಶ್ಶಾಹ[ = ಬುತ್ಸವ] (ಮೂ) 15. ತಟ್ಟಣವ (ಮೂ) 16. ವಾಯಿತ್ತು (ಜ)

1189

ಅಟ್ಟದ ಮೇಲೆ ಹರಿದಾಡುವಕ್ಷಇಲಿ, ಕಾದಿದ್ದ ಬೆಕ್ಕ [1]ತಪ್ಪಿಸಿ[1], ಬೆಕ್ಕಿನ ಕಣ್ಣೊಳಡಗಿತ್ತು. [2]ಕಣ್ಣು[2] ಇಲಿಯೂ ಕೂಡೆ ಗೊಹೇಶ್ವರಲಿಂಗವ ಕಂಡುದಿಲ್ಲ.

1190

ಕಾಯದ ಒಲವರದಲ್ಲಿ ನಿಲುವ ಚಿತ್ತ ಕಂಗಳ ಗೊತ್ತಿನಲ್ಲಿ ಕಟ್ಟುವಡೆದು, ದೃಷ್ಟದ ಇಷ್ಟದಲ್ಲಿ ಕಂಗಳ ಸೂತಕ ಹಿಂಗಿ, ಮನದ ಸೂತಕ ಹರಿಧು, ಗೊಹೇಶ್ವರಲಿಂಗವೆಂಬ ಭಾವದ ಭ್ರಮೆಯಡಗ[3]ಬೇಕು.[3]

1191

ಕಾಯವೆಂಬ ದೇಗುಲದಲ್ಲಿ ಜೀವವೆಂಬ ದೇವರು, ಕರಣೇಂದ್ರಿಯಂಗಳೆಂಬ ಸ್ಥಾನಿಕರ ಕೈಯಲ್ಲಿ ಪೂಜಿಸಿಕೊಂಬುದು ಗೊಹೇಶ್ವರಲಿಂಗಕ್ಕೆ [4]ದೂರ.[4]

1192

ಧ್ಯಾನ ಆಧ್ಯಾತ್ಮಿಕದಲ್ಲಿ ಕಂ[5]ಡಹೆ[5]ನೆಂಬುದು ಜೀವನಲ್ಲ[6]ದೆ[6] ಪರಮನಲ್ಲ. ಜಪತಪನೇಮನಿತ್ಯಂಗಳಿಂದ ಕಂಡಹೆನೆಂಬುದು ಪ್ರಕೃತಿಯಲ್ಲದೆ ಸುಚಿತ್ತವಲ್ಲ. ಭಾವದಿಂದ ಪ್ರಮಾಣಿಸುವುದೇ ಏಕರೂಪು; ಗೊಹೇಶ್ವರಲಿಂಗವು ತಾನೆ.

1193

ಕಾಲು ಕರ ಕಾಯ ಜೀವದೊಳಗಾಡುವ ಭಾವವೇ ದೈವವೆ? ನಾನೆಂಬುದ ತಾನಳಿದಲ್ಲಿ ಗೊಹೇಶ್ವರಲಿಂಗವು [7]ತಾನೆ.[7]

1194

ಲೋಹ ಕರಗಿ ಗುಂಡಾದಲ್ಲಿ ಕಾಯವನಿಱಿಯಬಲ್ಲುದೆ? ಮಾತಿನ ಅದ್ವೈತದಲ್ಲಿ ನುಡಿವರೆಲ್ಲರೂ ಗೊಹೇಶ್ವರಲಿಂಗವನೆತ್ತ ಬಲ್ಲರು, ಸಂಗನ [8]ಬಸವಣ್ಣ[8]?

1195

ಜಲದ ಸತ್ತ್ವ ಜಲಚರಾದಿಗಳಿಗಲ್ಲದೆ ಬಲುಹಿಲ್ಲ. ವಾಗದ್ವೈತಿಗಳ ಅದ್ವೈತ ಸ್ವಯವ ಮುಟ್ಟಬಲ್ಲುದೆ? ಗೊಹೇಶ್ವರ ಲಿಂಗಕ್ಕೆ ದೂರ, ಸಂಗನ [9]ಬಸವಣ್ಣ.[9]

1196

ರೂಪಿಗೆ ಬಂದು ನಿಂದುದು ಮಾತಿಂಗೊಡಲಾಯಿತ್ತು. ಮಾತಿಗೆ

---

1. ತಪ್ಪಿ (ಯ) 2. ಕಣ್ಣೊ (ಜ) 3. ಬೇಕು (ಜ) 4. ದೂರ (ಜ) 5. ಡೆ (ಜ) 6. × (ಜ) 7. ತಾನೆ (ಜ) 8. ಬಸವಣ್ಣ (ಜ) 9. ಬಸವಣ್ಣ (ಜ)

ವೇ[1]ದಿ[1]ಸಿದ ಮನ ರಾಟಾಳದ ಕಂಭದಂತೆ! ಅದ[2]ನತಿ[2]ಗಳೆದು ನಿಂದಲ್ಲಿ ಗುಹೇಶ್ವರಲಿಂಗ ತಾನೆ, ಸಂಗನ ಬಸವಣ್ಣ.

1197

ನಿಜಬಲ್ಲವಂಗೆ ಜಲವು ಸರಿ, ನೆಲನೂ ಸರಿ. ಅಱಿದು ನುಡಿ[3]ವಂ[3]ಗೆ ಜಗವು ಸರಿ, ಸಮಯ[4]ವೂ[4] ಸರಿ. ಎಮಗಾ ಮಿಥ್ಯವಿಲ್ಲ, ಗೊಹೇಶ್ವರಲಿಂಗ[5]ವು[5] ಪರಿಪೂರ್ಣವಾದ ಕಾರಣ, ಸಂಗನ [6]ಬಸವಣ್ಣ[6].

1198

ಶಬ್ದ ಸೂತಕವೆಂಬರು; ಶಬ್ದಕ್ಕೆ ಸೂತಕವುಂಟೆ, ತನ್ನಯ ಸಂದೇಹವಲ್ಲದೆ? ಗಾಳಿಗೆ ಧೂ[7]ಳು[7] ಲೇಪವಪ್ಪುದೇ? ಗೊಹೇಶ್ವರ ಲಿಂಗಕ್ಕೆ [8]ಆ ಭಾವ[8] ವಿಲ್ಲ, ಸಂಗನ ಬಸವಣ್ಣ.

1199

ನೀರನೀ[9]ಸು[9]ವನ ದೇಹ ಬಳಲುವುದಲ್ಲದೆ ನೀರು ಬಳಲುವುದೆ? ಸಮಯವ ನುಡಿದಡೆ ಸಮಯಕ್ಕೆ ನೋವಲ್ಲದೆ ಗೊಹೇಶ್ವರ ಲಿಂಗಕ್ಕೆ ಭ್ರಮೆಯಿಲ್ಲ ಸಂಗನ [10]ಬಸವಣ್ಣ[10].

1200

ಕಾಯವ ಹೊತ್ತು ತಿರುಗಾಡುವನ್ನಬರ ನಾನಱಿದೆನೆಂಬುದು ಹುಸಿಯಾಯಿತ್ತು. ಅಱಿದಡೆ ತಾವರೆಯೆಲೆಯ ಬಿಂದುವಿನಂತೆ ಅಂಗಲೇಪವಿಲ್ಲದೆ ಗೊಹೇಶ್ವರಲಿಂಗವನಱಿಯಬೇಕು, ಸಂಗನ [11]ಬಸವಣ್ಣ.[11]

1201

ಕಾಯದ ಮೇಲೆ ಕಲ್ಲು ಬೀಳಲಿಕ್ಕೆ [12]ಜೀವ[12] ಆ ಠಾವನಱಿದು, ತಾವು ಮಾಡಿಸಿಕೊಂಬಾಗ ನೋವ[13]ನಱಿವುದು[13] ಕಾಯವೋ, ಜೀವವೋ, ಉಭಯ ಸಮಯವೋ? ಗೊಹೇಶ್ವರಲಿಂಗಕ್ಕೆ ಅನ್ಯವಿಲ್ಲ, ಸಂಗನ ಬಸವಣ್ಣ.

1202

ಸುರಿವ ಜಲಕ್ಕೆ [14]ನೆಲೆ[14] ಹೊಲೆಯೆಂದು ಪ್ರಮಾಣಿಸಬಹುದೆ? ಉರಿವ ಅನಲಂಗೆ [15]ಶತಡೊಂಕು[15]ಸಸಿನವೆಂಬುದುಂಟೆ? ಗೊಹೇಶ್ವರಲಿಂಗಕ್ಕೆ ಲೇಸು ಕಷ್ಟವೆಂಬುದಿಲ್ಲ, ಸಂಗನ [16]ಬಸವಣ್ಣ.[16]

---

1. ಧಿ (ಜ) 2. ನೀತಿ (ಜ) 3. ದವಂ (ಯ) 4. ವು (ಯ) 5. ವೂ (ಜ) 6. ಬಸವಣ್ಣ (ಜಶೂ) 7. ಳಿ (ಜ) 8. ಅಭಾವ (ಜ) 9. ಜು (ಶೂ) 10. ಬಸವಣ್ಣ! (ಜ) 11. ಬಸವಣ್ಣ (ಜ) 12. ಜೀವ (ಜಶೂ) 13. ನಱಿದು (ಯ) 14. ನೆಲ (ಯ) 15. ಶತಕೊಂಡು (ಯ) 16. ಬಸವಣ್ಣ (ಜಶೂ).

1203

ಭಕ್ತಿಯೇ ಓಗರವಾಗಿ, ಸತ್ಯವೇ ಮೇಲೋಗರವಾಗಿ, ನಿಜತತ್ತ್ವವೇ ಸವಿಯಾಗಿ ಗೊಹೇಶ್ವರ ಲಿಂಗಕಿಕ್ಕಬಲ್ಲವ ಸಂಗನ ಬಸವಣ್ಣನಲ್ಲ[1]ದಿಲ್ಲ[1].

1204

ನೋಡುವ ಸೂರ್ಯ, ಸುರಿವಜಲ, ಹೊಲೆನೆಲೆ ಶುದ್ಧವೆಲ್ಲಕ್ಕೂ ಸರಿ. ಅಱಿದು ನುಡಿ[2]ವಂ[2]ಗೆ, ಮಱೆದು ನುಡಿದು ತಲ್ಲಣಿಸುವಂಗೆ ಅವನ ಹೃದಯವೇ ಸಾಕ್ಷಿ. ಗೊಹೇಶ್ವರಲಿಂಗಕ್ಕೆ ತಥ್ಯಮಿಥ್ಯವಿಲ್ಲ ಸಂಗನ [3]ಬಸವಣ್ಣ[3].

1205

[A]ಕಾಯವೆಂಬ ಕದಳಿಯ ಹೊಕ್ಕು, ಪ್ರಾಣವೆಂಬ [4]ಗಹ್ವರದಲ್ಲಿ,[4] ಸಕಲೇಂದ್ರಿಯ ವೆಂಬ ಕೋಣೆ ಕೋಣೆಗಳಲ್ಲಿ ತಿರುಗಾಡುತ್ತ ಬರಲಾಗಿ [5]ಮೇರು[5] ಮಂದಿರದ ತ್ರಿಕೋಣೆಯಲ್ಲಿ ಬೆಳಗಾಯಿತ್ತು ; ಗೊಹೇಶ್ವರಲಿಂಗ ವೆಂಬುದು ರೂಪಾಯಿತ್ತು, [6]ಸಂಗನ ಬಸವಣ್ಣ[6A]

1206

ಭೂಮಿಯಿಂದ ಹುಟ್ಟಿ ಅಂತರದಲ್ಲಿ ಬೆಳೆವ ಫಲವೃಕ್ಷದಂತೆ, ಸರ್ವರಿಗೆ ಭೂತಹಿತವಾಗಿ ಫಲರಸವನೀವಂತೆ, ನೀ ಭೂಮಿಯಾಗಿ ನಾ ಸಸಿಯಾಗಿ ಬೆಳೆದ ಬೆಂಬಳಿಯಲ್ಲಿ ಗೊಹೇಶ್ವರಲಿಂಗವೆಂಬುದು ಫಲವಾಯಿತ್ತು. ಅಱಿದ ಅಱಿಕೆ ರಸವಾಯಿತ್ತು, ಸಂಗನ ಬಸವಣ್ಣನಿಂದ ಎನ್ನಂಗ ಬಯಲಾ[7]ಯಿತು.[7]

1207

ಅಂದು ನೀ [8]ಬಂದೆ[8] ಬೆಂಬಳಿಯಲ್ಲಿ ನಾಬಂದೆ. ಅಂದಂದಿನ ಸಂದೇಹ ಹರಿಯಿ[9]ತ್ತು[9], ನೀ ಭಕ್ತನಾಗಿ, ನಾ ಜಂಗಮವಾಗಿ, ಗೊಹೇಶ್ವರಲಿಂಗವೆಂಬು ದಕ್ಕೆ ಅಂಗವಾಯಿ[9]ತ್ತು[9].

1208

ಕಾಯ ಉಭಯಭೇದವಾಗಿ, ಆತ್ಮನೇಕವಾಗಿ ; ಕಾಯ ಭಕ್ತನಾಗಿ, ಪ್ರಾಣ ಜಂಗಮವಾಗಿ ; ನಾ ಹಿಡಿದ ರೂಪು ಬಸವಣ್ಣನಾಗಿ, ಅಱಿದಱಿವು ಗೊಹೇಶ್ವರಲಿಂಗವಾಗಿ ನೆನೆವುತ್ತಿ[10]ದ್ದೆನು.[10]

---

1. ದಿಲ್ಲ (ಜಶೂ) 2. ವವ (ಜ) 3. ಬಸವಣ್ಣ (ಶೂ) A (ಈ ವಚನವು ಶೂನ್ಯ ಸಂಪಾದನೆಯಲ್ಲಿ ಪ್ರಭುದೇವರು ಗೋರಕ್ಷನನ್ನು ಬೀಳ್ಕೊಟ್ಟಮೇಲೆ ಹೇಳಿದ ಮಾತೆಂಬಂತೆ ಪವಣಿಸಲ್ಪಟ್ಟಿದೆ. K 648 ಮತ್ತು K. A 294ರಲ್ಲಿ ಪ್ರಭುದೇವರು ಬಸವಣ್ಣನವರಿಗೆ ಹೇಳಿದ ಮಾತೆಂಬಂತೆ ಪವಣಿಸಲ್ಪಟ್ಟಿದೆ.) 4. ಗಂಹ್ವರದಲ್ಲಿ (ಜ) 5. ಮೇಲು (ಯು) 6. × (ಶೂ) 7. ಯಿತ್ತು (ಜಶೂ) 8. ಬಂದ (ಜಶೂ) 9. ತು (ಜ) 10. ದ್ದೆನು (ಜಶೂ).

1209

ಅನ್ನಬರ ಹಾಗೆನ್ನದಿರು ಸಂಗನ ಬಸವಣ್ಣ. ನಿನಗೆ ಬೇಱೆ ಅಡಗುವ ಕುಱುಹೆಂಬುದೊಂದೊಡಲುಂ[1]ಟು[1]. ಎನಗೆ ಅಂಗೈಯ ನಾವು ಕಾಯುವೆಂಬ ಕದಳಿ, ಗೊಹೇಶ್ವರನೆಂಬ ಭ್ರಮೆ ಬಿಡದು.

1210

ಕಾಯವಿಡಿದು ಸುಳಿದಾಡುವನ್ನಕ್ಕ ಕರಣಂಗಳ ಮೀಱುವರಾರೈ ಚೆನ್ನ ಬಸವಣ್ಣ? ಕರಣಂಗಳಿಂದ ಕರ್ಮಂಗಳ ಮಾಡುತ್ತಿದ್ದಿಹಿತ್ತು. ಕರ್ಮವ ಕರ್ಮದಿಂದ ಅಳಿದು, ಮಲವ ಜಲ ತೊಳೆದಂತೆ ನಾನು ಕಾರ್ಯ (=ಯ ?)ದ ಕರ್ಮವ ಮಾಡುವಲ್ಲಿ ಜೀವವಿಕಾರವ ಬಿಡಿಸಿದೆಯಲ್ಲಾ! ಗೊಹೇಶ್ವರಲಿಂಗಕ್ಕೆ ಒಡಲಿಲ್ಲ ಎಂಬುದನಱಿಪಿದೆಯಲ್ಲಾ, ಚೆನ್ನ[3]ಬಸವಣ್ಣ[3].

1211

ಹಸಿದ ಕಾಳೋರಗನ ಹೆಡೆಯ ನೆಳಲಲ್ಲಿ [4]ಕಾಳಾಂಧನೆಂಬ[4] ಕಪ್ಪೆ ಅಂತಹ ಕಾಳೋಗರನ ಏಳ ನುಂಗಿತ್ತು. ಅದರ ಬೇಳುವೆಯಲ್ಲಿ ಮೇಲಾಗಿ ಬದುಕಿದೆ. ಚೆನ್ನಬಸವಣ್ಣನಿಂದ ಗೊಹೇಶ್ವರಲಿಂಗವೆಂಬುದು ಪ್ರಮಾಣಾಯಿತ್ತು.

1212

ಕರಚರಣಾದಿಗಳು ಬೇಱಾದವಲ್ಲದೆ ಅಱಿದು ಮುಟ್ಟುವು[5]ದೊಂದೆ ಆತ್ಮ;[5] ಬಿಂದುವಿನೊಂದು ಸಾರದಲ್ಲಿ ಸಸಿ ಹಲವು ನಾಮ ಬೆಳೆವಂತೆ, ಗೊಹೇಶ್ವರ [6]ಲಿಂಗದಲ್ಲಿ[6] ನಾ ನೀನೆಂಬ ಭಾವವಿಲ್ಲ, ಸಿದ್ಧರಾಮಯ್ಯ.

1213

ಕೆಱೆದೇಗುಲಂಗಳೆಲ್ಲವೂ ಹಿಂದಣ ಅಡಿವಜ್ಜೆಗೆ ರೂಪು, ಕರ್ಮಕಾಂಡ ಯೋಗಂಗಳೆಲ್ಲವೂ ಭವದ ತೆಕ್ಕೆಗೆ ಒಳಗು. ಹಿಂದಣ ಮುಂದಣ ಸಂದನಳಿದು ಗೊಹೇಶ್ವರಲಿಂಗದಲ್ಲಿ ಸಲೆಸಂದಿರಬೇಕು ಸಿದ್ಧ[7]ರಾಮಯ್ಯ[7]

1214

ಕರ್ಮವೆ ಪ್ರಾಣವೆಂದು ಮಾಡುವಾಗ ಜ್ಞಾನವನಱಿವ ನೆಲೆ ಶುದ್ಧವಿನ್ನಾವುದು? ಸಾವನ್ನಕ್ಕ ಸಾಧನೆಯ ಮಾಡಿ ಕಾದುವ ಠಾವಿನ್ನಾವುದು? ಅಱಿದುದ[8]ನತಿ[8]ಗಳೆದು ಮೇಲಱಿದುದ ಕಱಿಗೊ[9]ಳ್ಳುತ[9] [10]ತುಷ[10]ವ ನೀಗಿದ

---

1. ಟಿ (ಶೂ) 2. ಟು (ಜ) 3. ಬಸವಣ್ಣ (ಜ) 4. ಕಾಳಾಂಧಕಾರವೆಂಬ (ಜ) 5. ದೊಂದೆಯಾತ್ಮ (ಜ) ದು ಒಂದೇ ಆತ್ಮ (ಶೂ) 6. ಲಿಂಗದಂಗದಲ್ಲಿ (ಜ) 7. ರಾಮಯ್ಯ (ಜಶೂ) 8. ನೇತಿ (ಜಶೂ) 9. ಳುತ್ತ (ಜಶೂ) 10. ತುಂಷ (ಜ)

ತಂಡುಲ[1]ದಂತೆ[1] ಕಾಯದ ಡೆಸೆ ಶುದ್ಧವಾಗಿರಬೇಕು ಗೊಹೇಶ್ವರ ಲಿಂಗವನಱಿವುದಕ್ಕೆ, ಸಿದ್ಧರಾಮಯ್ಯ,

1215

ಚಿನ್ನವನೊರೆಯಬಹುದಲ್ಲದೆ, ಬಣ್ಣವನೊರೆಯಬಹುದೆ? ಹೂವ ಮುಡಿಯ ಬಹುದಲ್ಲದೆ, ಗಂಧವ ಮುಡಿಯ ಬಹುದೆ? ಕರ್ಮವ ಮಾಡಬಹುದಲ್ಲದೆ, ವಸ್ತುವನಱಿಯ ಬಹುದೆ? ಗೊಹೇಶ್ವರನೆನಬಹುದಲ್ಲದೆ ಲಿಂಗವು ತಾನಾಗಬಾರದು, ಸಿದ್ಧ[2]ರಾಮಯ್ಯ.[2]

1216

ರಾಗವಡಗಿ, ತಾಮಸ ನಿಂದು, ಅಹಂಕಾರದ ಗಿರಿ [3]ಉ[3]ಡುಗಿ, ಮಾತಿನ ಬಣಬೆಯ ಮೆದೆಯ ಸುಟ್ಟು (+ರುಹದೆ ?), ಕಾಯ ಕರ್ಮದಲ್ಲಿ ಸವೆ[3]ವು[3]ತ್ತ, ಜೀವ ಸಕಲಸಂಸಾರದಲ್ಲಿ ನೋ[3]ವು[3]ತ್ತ, ಮತ್ತೆ ಭಾವಶುದ್ಧ ಉಂಟೆ ಗೊಹೇಶ್ವರಲಿಂಗಕ್ಕೆ ?

1217

ಕ್ಷೀರಕ್ಕೆ ತವರಾಜ[4]ವ[4] ಹೊಯ್ದಡಲ್ಲಿ ಬೇಱೆ ಲೇಸು ಕಷ್ಟವನಱಿಸುವರೆ? ಅಂಗಕ್ಕೆ ತಿಮಿರವಾದಲ್ಲಿ, ಅಂಗುಲ ಮುಟ್ಟಿ, ತಿಮಿರದ ಅಂಗವ ಕೆಡಿಸಿದಡೆ, ಅಂಗಕ್ಕೆ ಮಿಥ್ಯವುಂಟೇ? ಎನ್ನಂಗವು ತಾನಾದ ಕಾರಣ, ನೀನೆಂಬ ನಾಮ ಬೇಱಿಲ್ಲ, ಗೊಹೇಶ್ವರಲಿಂಗವು ನೀನಾದ ಕಾರಣ.

1218

ಕಂಗಳಲ್ಲಿ ಜ್ಯೋತಿರ್ಲಿಂಗ, ಕೈಯಲ್ಲಿ ಉಭಯಪ್ರತಿ[5]ಷ್ಠಾ[5]ಲಿಂಗ, ಬ್ರಹ್ಮರಂಧ್ರದಲ್ಲಿ ಅಮೃತಲಿಂಗ ಉಂಟೆಂಬ ತ್ರಿವಿಧದ ಸಂದನಳಿಯಬೇಕು, ಸಿದ್ಧರಾಮಯ್ಯ, ಗೊಹೇಶ್ವರಲಿಂಗವನಱಿಯ [6]ಬೇಕು.[6]

1219

ಇಕ್ಷುದಂಡಕ್ಕೆ ಕೀಳುಮೇಲೆಲ್ಲದೆ, ಸಕ್ಕರೆಯ ದಂಡಕ್ಕೆ ಕೀಳುಮೇಲುಂಟೆ? ಪರುಷಪಾಷಾಣಕ್ಕೆ ಕೀಳುಮೇಲಲ್ಲದೆ, ಕಡೆಯಾಣಿಗುಂಟೆ ಒರೆಗಲ್ಲು? ಉಂಟು ಇಲ್ಲ ಎಂಬ ಸಂದೇಹ ನಿಂದಲ್ಲಿ ಗೋಹೇಶ್ವರಲಿಂಗವು ತಾನೆ, ಸಿದ್ಧ[7]ರಾಮಯ್ಯ[7].

1220

ಎಲೆ ಬಸವಣ್ಣ, ನಾವು ಬಹುದಕ್ಕೆ ಮುನ್ನವೆ ಬಂದಹರೆಂದು ಶುಭ

---

1. ದಲ್ಲಿ (ಜ) 2. ರಾಮಯ್ಯ (ಜಶೂ) 3. ಯು (ಶೂ) ಉ (ಜ) 4. ನ (ಯ) ವ (ಜಶೂ) 5. ಷ್ಠೆ(ಶೂ) 6. ಬೇಕು (ಜ) 7. ರಾಮಯ್ಯ (ಜಶೂ).

ಸೂಚನೆ [A]ತೋರಿ[1]ತ್ತೆಂ[1]ದೆ[A]. ಮನೆಯು ಮೀಱಿ ಮುಂದದ ದೈವ ಉಂಟೇ ಎಂಬುದ ತಿಳಿ ಗೊಹೇಶ್ವರಲಿಂಗದಲ್ಲಿ, ಸಂಗನ [2]ಬಸವಣ್ಣ[2].

1221

ಅಂಗಳದ ಬಾಗಿಲ ನೆಲೆಯಲ್ಲಿ ನಿಂದಿದ್ದ ಲಿಂಗವನಱಿದುದಿಲ್ಲವೆ? ಸುಸಂಗಿ ನಿರಂ[3]ಗಿ[3] [4]ನಿಃಕಳ[4]ಬ್ರಹ್ಮ ಮರುಳು ಶಂಕರ[5]ಲಿಂಗ[5]. ಪ್ರಸಾದದ ಕುಳಿಯಲ್ಲಿ ನಿಜನಿವಾಸದಂಗವ ನೋಡು ಗೊಹೇಶ್ವರಲಿಂಗದಲ್ಲಿ, ಸಂಗನ [6]ಬಸವಣ್ಣ[6].

1222

ಕಂಡೆಯಾ ಬಸವಣ್ಣ, ಕಣ್ಣಿನೊಳಗಣ ಬೊಂಬೆಯ ಸೂತ್ರದ ಇರವಿನಂತೆ, ಕುಂದಣದೊ[7]ಳ[7]ಡಗಿ ತೋರುವ ಮೃದುಚ್ಛಾಯದಂತೆ, ನವನೀತದೊ[7]ಳ[7]ಡಗಿದ ಸಾರದ ಸವಿಯಂತೆ, ಅಂಗವಿಲ್ಲದ ಕುಱುಹು, ಭಾವವಿಲ್ಲದ ಬಯಲು, ಬೆಳಗನಱಿಯದ ಜ್ಯೋತಿಯ ಕಂಡೆಯಾ ಗೊಹೇಶ್ವರಲಿಂಗದಲ್ಲಿ ಮರುಳುಶಂಕರ [8]ದೇವರ[8], ಸಂಗನ ಬಸವಣ್ಣ.

1223

ಕಂಡೆನಲ್ಲಾ ಕರುಳಿಲ್ಲದ ಕಲಿಯ! ಕಂಡೆನಲ್ಲಾ ಯೌವನವಿಲ್ಲದ ನೇಹವ! ಕಂಡೆನಲ್ಲಾ ಕೈದಿಲ್ಲದ ಕಲಿತನವ! ಕಂಡೆನಲ್ಲಾ ಕುಸುಮವಿಲ್ಲದ ಗಂಧವ! ಕಂಡೆನಲ್ಲಾ ಗೋಹೇಶ್ವರಲಿಂಗದಲ್ಲಿ ಮರುಳುಶಂಕರ[9]ನೆಂಬ[9] [10]ನಾಮವ[10].

1224

ಕಂಗಳ ಸೂತಕ ಕಾಮಿಸಲಾಗಿ ಹರಿಯಿ[11]ತ್ತು[11]. ಮನದ ಸೂತಕ ಮುಟ್ಟಲಾಗಿ ಬಿಟ್ಟಿ[11]ತ್ತು[11]. ನಾನೆಂಬ ಭಾವ ಗೊಹೇಶ್ವರಲಿಂಗದಲ್ಲಿ ಐಕ್ಯವಾಯಿ[11]ತ್ತು[11].

1225

ತಪ್ಪ ಹೊಱಿಸಿ ಹೊರಟೆನೆಂಬುದು ಸತ್ಯವೇ? ತನು ಸೀರೆಯನಳಿದು ನಿರ್ವಾಣವಾದಲ್ಲಿ ಮನದ ಭ್ರಾಂತು ನಿಶ್ಚಯವಾಗದು. ಕೇಶವೆಂಬ ಸೀರೆ

A ತೋಱಿತ್ತಲ್ಲದೆ (ಶೂ) 1. ತ್ತಂ (ಯ) 2. ಬಸವಣ್ಣ (ಜ) 3. ಗ (ಯಶೂ) 4. ನಿಃಕಳಂಕ (ಯ) ನಿಃಕಲ (ಶೂ) 5. ಲಿಂಗದ (ಶೂ) 6. ಬಸವಣ್ಣ (ಜ) 7. ಳಗ (ಜ) 8. ದೇವರ (ಶೂ) 9. ದೇವರೆಂಬ (ಜ) 10. ನಾಮವ (ಶೂ) 11. ತು (ಜ)

ಅಂಗಕ್ಕೆ ಮಱೆಯಾಯಿ[1]ತ್ತು[1]. [2]ಅಪಮಾನ[2]ವೆಂತು ಹರಿಯಿ[1]ತ್ತು[1] ? ಅದು ಗೋಹೇಶ್ವರಲಿಂಗಕ್ಕೆ ಸಲ್ಲದ [3]ವೇಷ[3].

1226

ದೇವನೊಲಿ[4]ದ[4] ನೀನೊಲಿ[5]ದೆ[5]ನೆಂಬುದು [6]ಆ[6]ವುದಕ್ಕ ? ಭಾವಶುದ್ಧವಾದಲ್ಲಿ ಸೀರೆಯನಳಿದು ಕೂದಿಲ ಮಱಿಸಲೇ[7]ತಕ್ಕೆ[7] ? ಅದು ಅಂತರಂಗದ ನಾಚಿಕೆ ಬಾಹ್ಯದಲ್ಲಿ ತೋಱಿ[8]ತ್ತು[8]; ಅದು ಗೋಹೇಶ್ವರಲಿಂಗಕ್ಕೆ ಒಲವರವಲ್ಲ.

1227

ನೀ ದೇವರೊಳಗೋ, ದೇವರು ನಿನ್ನೊಳಗೋ ಎಂಬ ತಾವನಱಿಯೆ. ಸಿಪ್ಪೆ ಒಪ್ಪಗೆಟ್ಟಾಗ ಹಣ್ಣಿನ ರಸಕೊಳಕಾಯಿ[9]ತ್ತು[9]. ಅದು ಗೊಹೇಶ್ವರನೊಪ್ಪದ [10]ಮಾತು[10].

1228

ಕಾಮದಿಂದ ಕಂಡ, ಕ್ರೋಧದಿಂದ ಅಸ್ಥಿ, ಲೋಭದಿಂದ ಸಕಲ ವಿಷಯಗಳು. ಮೋಹದಿಂದ ನೋಡಿಹೆನೆಂಬುದೆಲ್ಲವೂ ಕಾಮನ ಬಲೆಯೊಳಗು. ಕಾಮ[11]ನ[11] ಗೆದ್ದ ತಾವಾವುದು ಹೇಳಾ ಗೋಹೇಶ್ವರ[12]ಲಿಂಗಕ್ಕೆ[12].

1229

ನಾ ಸತ್ತೆನೆಂದು ಹೆಣ ಕೂಗಿದುದುಂಟೆ ? ಬೈಚಿಟ್ಟ [13]ಬಯಕೆ[13] ಕರೆದುದುಂಟೆ ? ಹೆಪ್ಪಿಟ್ಟ ಹಾಲು ಸಿಹಿ[14]ಯಹುದೇ[14] ? ಈ ಮಾತು ಒಪ್ಪವಲ್ಲ ಗೋಹೇಶ್ವರಲಿಂಗಕ್ಕೆ.

1230

ಇದು ಎನಗೆ ಆಶ್ಚರ್ಯ ಹೇಳವ್ವ! ಕಾಯವಿಲ್ಲದ ಸುಖವ, ಜೀವವಿಲ್ಲದ ಭವವ, ಆ ತಾವ ಹೇಳಾ ಗೋಹೇಶ್ವರ [15]ಲಿಂಗಕ್ಕೆ[15].

1231

[16]ಇದು[16]ಲೇಸಾಯಿತ್ತು. ತುಂಬಿದ ಲೆಕ್ಕಕ್ಕೆ ಮತ್ತೊಂದೆಂದು ಕಡೆ[17]ಗಾಣಿಸು[17]ವಂತೆ, ಸ್ಥಾಣುವಿನ [18]ಮಱೆಯಂತೆ[18], ಅಂಬುಧಿಯ ಕೊಂಬಿನಲ್ಲಿದ್ದ ವಿಹಂಗನಂತೆ ಎಲ್ಲಿ ಬಂದರೂ ಗೋಹೇಶ್ವರನೆಂಬ ಭಾವ ಒಂದಾಯಿ[19]ತ್ತು[19].

---

1. ತು (ಜ) 2. ಆಸಮಾನ (ಜ) 3. ವೇಷ (ಶೂ) 4. ದು (ಜ) 5. ದ (ಯ) 6. ಅದಾ (ಶೂ) 7. ಕಯ್ಯ (ಜ) 8. ತು (ಜ) 9. ತು (ಜ) 10. ಮಾತು (ಶೂ) 11. ನು (ಜಯ) 12. ಲಿಂಗಕ್ಕೆ (ಶೂ) 13. ಬೈಕೆ (ಜ) 14. ಯಪ್ಪುದೇ (ಜಶೂ) 15. ಲಿಂಗಕ್ಕೆ (ಜಶೂ) 16. ಯೀಯ (ಜ) 17. ಗಾಣಿ (ಜ) 18. ಮಱೆಯ ಚೋರನಂತೆ (ಶೂ) 19. ತು (ಜ)

## 1232

[1]ಅಂಗ[1] ಅಂಗನೆಯ ರೂಪಲ್ಲದೆ, ಮನ ವಸ್ತುಭಾವದಲ್ಲಿ ಬೆಚ್ಚಂತಿಪ್ಪುದು. ಬಂದ [2]ಕದನ[2]ದಲ್ಲಿ ಬಂದು ಹಿಂಗಿದೆಯಲ್ಲ, [3]ಅಲ್ಲ[3] ; ಗೊಹೇಶ್ವರಲಿಂಗದಲ್ಲಿ ಉಭಯನಾಮವಳಿದೆಯೆನ್ನಕ್ಕ.

## 1233

ಕಾಯ ಉಳ್ಳನ್ನಕ್ಕ ಶರಣರ ಸಂ[4]ಗ[4]ದಿಂದ ಅಱಿಯಬೇಕು. ಜೀವವುಳ್ಳನ್ನಕ್ಕ ಅಱಿವಿನ ಮುಖದಿಂದ ಹರಿಯಬೇಕು. ಅಱಿವನ್ನ[5]ಬರ[5] ಗೊಹೇಶ್ವರನೆಂಬ ಕುಱುಹಾ[6]ಯಿತ್ತು[6].

## 1234

ಮಾಡುವ ಮಾಟದಿಂದವೆ ಬೇಱೊಂದ [7]ಅ[7]ಱಿಯಬೇಕು. [8]ಅಱಿವಲ್ಲಿಯೆ[8] ನೆಮ್ಮುಗೆ ಒಡಗೂಡಬೇಕು, [9]ಗೊಹೇಶ್ವರಲಿಂಗವನಱಿವುದಕ್ಕೆ ಮಾರಯ್ಯ[9].

## 1235

ಓಟೆಯಿದ್ದಂತೆ ಕಾಯ ಮೆದ್ದವರುಂಟೆ ? ಕಾಯದ ಗುಣವಿದ್ದಂತೆ ಲಿಂಗವನಱಿದವರುಂಟೆ ? ಜೋಡು ಹಱಿದಲ್ಲದೆ ಕಾಯುವ[11]ನಿಱಿಯದು[11] ಕೈದು. ಆ ಭಾವವ ತಿಳಿದಲ್ಲದೆ ಗೊಹೇಶ್ವರಲಿಂಗವನಱಿಯಬಾರದು ಅಂಬಿಗ ಚೌಡಯ್ಯ.

## 1236

ಅಱಿವ ಆತ್ಮ ಕಂಗಳ ಮಱೆಯಲ್ಲಿ ಕಾಬಂತೆ, [12]ಕಿವಿಯ[12] ಮಱೆಯಲ್ಲಿ ಕೇಳುವಂತೆ ; ಕಂಗಳು ನಷ್ಟವಾದಲ್ಲಿ [13]ಕರ್ಣ[13] ಬಧಿರ[14]ವಾದಲ್ಲಿ[14], [15]ಕಾ[15]ಬುದು ಕೇಳುವುದು ಅಲ್ಲಿಯೆ ನಿಂದಿ[16]ತ್ತು[16]. ಆತ್ಮನ ಅಱಿವಾವುದು, ಗೊಹೇಶ್ವರನೆಂಬ ಕುಱುಹಾವುದು, ಅಂಬಿಗ ಚೌಡಯ್ಯ ?

## 1237

ರತಿ ಪಾಷಾಣ ಕೂಡೆ ರತ್ನವೆನಿಸಿಕೊಂಬಂತೆ, ಅಱಿವಜ್ಞಾನ ಮಾಡುವ ಸತ್ಕ್ರಿಯಿಂದಲ್ಲದೆ ಸಾಕಾರದ ಪಟಲ ಹಱಿಯದು. ರತಿಯಿಲ್ಲದಿರೆ ಪಾಷಾಣ

---

1. × (ಜಯ) 2. ಕಥನ (ಜಶೂ) 3. ಅಕ್ಕ (ಜಿಶೂ) 4. ಘ (ಜ) 5. ವರ (ಯ) 6. ಯಿತ್ತು (ಶೂ) 7. ನ (ಜಶೂ) 8. ಅಱಿವಿಂಗೆ (ಶೂ) 9. ಅಱಿವಿಂಗೆ ನೆಮ್ಮುಗೆ ಒಡಗೂಡಿದ ಬಳಿಕ ಬಯಲಭ್ರಮೆಯ ಕಳೆದು ನಮ್ಮ ಗುಹೇಶ್ವರ ಲಿಂಗದಲ್ಲಿ. ನಿಜಪದವನೈದುವುದು ಮಾರಯ್ಯ (ಶೂ) 10. ದ (ಜ) 11. ನರಿಯದು (ಯ) 12. ಕವಿಯ (ಯ) 13. ಕನ್ನ (ಜ) 14. ವಾದಂತೆ (ಯ) 15. ಕಾಂ (ಜ) 16. ತು (ಜಿ)

ರತ್ನಕುಲವೆಂಬುದಿಲ್ಲ. ರತಿ ಅಡಗುವುದಕ್ಕೆ ಪಾಷಾಣ, ಅಱಿವಡಗುವುದಕ್ಕೆ ಕುಱುಹೆಂಬ ನಾಮ; ಉಭಯುವಡಗಿ ಕುಱುಹಿಲ್ಲದ ಮತ್ತೆ, ಗೊಹೇಶ್ವರನೆಂಬ ಮಾತು ಕುಱುಹಿಲ್ಲದಿರಬೇಕು, ಅಂಬಿಗ ಚೌಡಯ್ಯ.

1238

ಮನ ಸಂದಲ್ಲಿ ಬೋಱೊಂದು ನೆನಹುಂಟೆ? ನೆನಹು ನಿಷ್ಪತಿಯಾದಲ್ಲಿ ಉಭಯುವೆಂಬುದಕ್ಕೆ ಒಡಲಿಲ್ಲ, ಅದು ಸಲ್ಲದ ನೇಮ; ಗೊಹೇಶ್ವರಲಿಂಗ ಅಲ್ಲಿ ಇಲ್ಲ ಎಂಬುದಕ್ಕೆ ಅದೇ ಕುಱುಹು.

1239

ಉಭಯುದೃಷ್ಟಿ [1]ಏಕ[1]ದೃಷ್ಟಿಯಲ್ಲಿ ಕಾಬಂತೆ, ದಂಪತಿ ಏಕಭಾವವಾಗಿ ನಿಂದಲ್ಲಿ ಗುಹೇಶ್ವರಲಿಂಗಕ್ಕೆ ಅರ್ಪಿತವಾಯಿತ್ತು, ಸಂಗನ ಬಸವಣ್ಣ.

1240

ಆಕಾಶವ ಮೀಱುವ ತರುಗಿರಿಗಳುಂಟೆ? ನಿರಾಕಾರವ ಮೀಱುವ ಸಾಕಾರವುಂಟೆ? ಗೊಹೇಶ್ವರಲಿಂಗವ ಮೀಱುವ ಒಡೆತನ ಉಂಟೆ, ಸಂಗನ ಬಸವಣ್ಣ?

1241

ಆರಾರ ನೇಮಕ್ಕೆ ಸಂದಿತ್ತು. ಇಚ್ಛಾಭೋಜನಕ್ಕೆ ಕೃತ್ಯವಾಯಿತ್ತು. ಮನಘನ[2]ದೊ[2]ದಗ ಕಂಡೆಯಾ ಸಂಗನ ಬಸವಣ್ಣ, ಗೊಹೇಶ್ವರಲಿಂಗಕ್ಕೆ ಆಶ್ಚರ್ಯ[3]ವಾಯಿತ್ತು.[3]

1242

ಮಾಡಿಹೆ ಮಾಡಿಹೆಯೆಂಬನ್ನಬರ ತನ್ನ ಅವಧಿಗೆ ಬಂದುದನಱಿವ ಪರಿಯಿನ್ನೆಂತೋ? ಅಸಗ ನೀರಡಸಿ [4]ಸತ್ತಂತಾಗಬೇಡ[4] ಗೊಹೇಶ್ವರಲಿಂಗವ ನಱಿವುದಕ್ಕೆ ಮಾರಯ್ಯ!

1243

ಕಂಗಳ ಮುಂದಣ ಗೊತ್ತ ಹಱಿದು, ಕಾವ್ಯದ ಮುಂದಣ ಚಿತ್ತವ ಹಱಿದು, ಮಾಡಿಹೆನೆಂಬ ಮಾಟಕೂಟದ ಚಿತ್ತ ನಿಂದಲ್ಲದೆ ಸ್ವಸ್ಥವಿಲ್ಲ. ಹಾಗಲ್ಲದೆ ಗೊಹೇಶ್ವರಲಿಂಗವ ಕಾಣಬಾರದು, ಆಯ್ದಕ್ಕಿ [5]ಮಾರಯ್ಯ.[5]

1244

ಆರಾರ ಭಾವ ತೋಱಿದಂತೆ [6]ಕೂಟಕ್ಕೆ[6] ಸುಖವಾಗಿಪ್ಪನು ಹಿಡಿದ

---

1. ಇನ (ಶೂ) 2. ವೊ (ಯ) 3. ವಾಯಿತ್ತು (ಶೂ) 4. ನಿಂದಂತೆ ಆಗಬೇಡಾ (ಶೂ) 5. ಮಾರಯ್ಯ (ಶೂ) 6. ಆ ಕುಳಕ್ಕೆ (ಶೂ)

ವ್ರತ [1]ನೇಮ[1]ಂಗಳಲ್ಲಿ ಬಿಡುಗಡೆಯಿಲ್ಲದಿರಬೇಕು. ತಾ ಮಾಡುವ [2]ನೇಮ ನಿತ್ಯಂ[2]ಗಳಲ್ಲಿ ಭಾವ ಶುದ್ಧ[3]ವಾ[3]ಗಿಪ್ಪುದೇ ಗೋಹೇಶ್ವರಲಿಂಗಕ್ಕೆ ಅನ್ಯಭಿನ್ನ ವಿಲ್ಲ, [4]ಮಡಿವಾಳ ಮಾಚಯ್ಯ.[4]

1245

ಐದಿಂದ್ರಿಯವನಱಿತಲ್ಲದೆ ಒಂದಿಂದ್ರಿಯಕ್ಕೆ ಸಂದ ಗುಣವನಱಿಯ ಬಾರದು. ಆ ಗುಣ ಏಕಮೂರ್ತಿ ತ್ರಿವಿಧ ರೂಪಾದ ಕಾರಣ, ಪೂಜೆಯೆಂಬು[5]ದ[5] ಪುಣ್ಯವೆಂಬ ಭಾವವಿಲ್ಲದೆ, ಮಾಡಿದಡೇನು ? ಗೊಹೇಶ್ವರ ಲಿಂಗಕ್ಕೆ ಅನ್ಯ[6]ವ[6]ಲ್ಲ ಚಂದಯ್ಯ !

1246

ಸಮಯವ ಬಿಡಬಹುದೇ ಅಯ್ಯ ? ಅಟ್ಟ ಅಶನವಾದಡೂ ಕಲಸುವ ಕೈ ಉಂಬುದಕ್ಕೆ ಬಾಯಿ ಬೇಕು. ಉಂಬುದಿಲ್ಲ ಎಂದು ಸಂದೇಹವ ಹಱಿದಲ್ಲಿ, ಸಮಯವೊಂದೂ ಇಲ್ಲ ಎನಬೇಕು. ಗೊಹೇಶ್ವರನೆಂಬನ್ನಕ್ಕ ಬಂಧ ಮೋಕ್ಷ ವನಱಿಯ [7]ಬೇಕು.[7]

1247

ಫಳವ ಸಲಿಸುವನ್ನಬರ ಬಿತ್ತು ಸಿಪ್ಪೆ ಉಭಯವು ಇರಬೇಕು. ಸಾರವ ಸವಿದಲ್ಲಿ ಸಮಯ ಉಳಿಯಿತ್ತು. ಹಾಗಱಿಯ ಬೇಕು, ಘಟ್ಟ[8]ವಾಳಣ್ಣ[8].

1248

ಕುಱುಹುಳ್ಳನ್ನಕ್ಕ ಸಮಯದ ಹಂಗು, ಅಱಿವಹೆನೆಂಬನ್ನಕ್ಕ ಆತ್ಮನ ಹಂಗು, [9]ಅಲ್ಲ ಅಹು[9]ದೆಂಬನ್ನಕ್ಕ ಎಲ್ಲರ ಹಂಗು, ಗೊಹೇಶ್ವರನೆಂಬನ್ನಕ್ಕ ಲಿಂಗದ ಹಂಗು ಬೇಕು, ಘಟ್ಟವಾಳಣ್ಣ.

1249

ಅಱಿವ ಬಲ್ಲೆನೆಂದು ಬಿಱುನುಡಿಯ ನುಡಿವರೆ? ಸತ್ಯವನಱಿದವಂಗೆ ಮಿಥ್ಯಭಾವವುಂಟೆ ? ತಥ್ಯ ಮಿಥ್ಯ ಉಭಯಭಾವವಳಿದಿರಬೇಕು. ಸಮಯ ವೆಂಬುದು ಸಂಪದ. ಅದು ನಿನಗನ್ಯವೆ ? ಸರ್ವಮಯ ಸಂಪದನಾದಲ್ಲಿ ಗೊಹೇಶ್ವರ ಲಿಂಗಕ್ಕೆ ತಥ್ಯ ಮಿಥ್ಯವಿಲ್ಲ, ಘಟ್ಟ[1]ವಾಳಯ್ಯ[1] !

---

1. ನಿಯಮ (ಶೂ) 2. ಎಂದಿನ ನಿತ್ಯನೇಮಂ (ಶೂ) 3. ತೆಯಾ (ಯ) 4. ಮಡಿವಾಳಯ್ಯ ಚಂದ್ರಯ್ಯ (ಯ) 5. ದು (ಶೂ) 6. ವಿ (ಶೂ) 7. ಬೇಕು ಘಟ್ಟವಾಳಯ್ಯ (ಶೂ) 8. ವಾಳಣ್ಣ (ಶೂ) 9. ಅಲ್ಲಹು (ಶೂ) 10. ವಾಳಯ್ಯ (ಶೂ).

## 1250

ಬ್ರಹ್ಮವಿಷ್ಣುಗಳ ಮಾಯೆ ತೊತ್ತುಳದುಳಿ[A]ವಂ[A]ದು, ದೇವದಾನವ[B]ರ[B] ಮಾಯೆ ಅಗಿದಗಿದು ತಿಂಬಂದು, ರುದ್ರಗಣ ಪ್ರಮಥಗಣರೆಂಬರ ಮಾಯೆ ಮರುಳ್ಮಾಡಿ ಕಾಡುವಂದು, ನೊಸಲ ಕಣ್ಣು ಪಂಚಮುಖ ದಶಭುಜದವರಿಗೆ ಮಾಯೆ ಅರ್ಧಾಂಗಿಯಾದಂದು, [C]ಅಷ್ಟಾಶೀತಿಸಹಸ್ರ[C] ಋಷಿಗಳ ಮಾಯೆ ತಪೋಮದದಲ್ಲಿ ಕೆಡಹುವಂದು, ನಾನು ಮಾಯಾಕೋಳಾಹಳನಾಗಿರ್ದೆ ಕಾಣಾ, ಗುಹೇಶ್ವರ.

## 1251

ಕೃತಯುಗ[1]ದಲ್ಲಿ[1] ಭಕ್ತಿಕಾರಣ ಸ್ಥೂಲಕಾಯನೆಂಬ ಗಣೇಶ್ವರನಾ[2]ಗಿರ್ದೆ[2]. ತ್ರೇತಾಯುಗ[1]ದಲ್ಲಿ[1] ಭಕ್ತಿಕಾರಣ ಶೂನ್ಯಕಾಯನೆಂಬ ಗಣೇಶ್ವರನಾ[2]ಗಿರ್ದೆ[2]. ದ್ವಾಪರಯುಗ[1]ದಲ್ಲಿ[1] ಭಕ್ತಿಕಾರಣ ಅನಿಮಿಷನೆಂಬ ಗಣೇಶ್ವರನಾ[2]ಗಿರ್ದೆ[2], ಕಲಿಯುಗ[1]ದಲ್ಲಿ[1] ಭಕ್ತಿಕಾರಣ ಪ್ರಭುವೆಂಬ [3]ಜಂಗಮ[3]ನಾ[2]ಗಿರ್ದೆ[2] ಕಾಣಾ, ಗುಹೇಶ್ವರ.

## 1252

ಆದಿಯ ಸಂಗದಿಂದಾವನಲ್ಲ! ಸಂಗಸುಖದೊಳಗಿದ್ದವನಲ್ಲ! ಇಬ್ಬರ ಸಂಗದಿಂದಾದವನಲ್ಲ! ರವಿಶಶಿಯ ಬೆಳಗಿನಿಂದ ಬೆಳೆದವನಲ್ಲ! ನಾದಬಿಂದು ಕಳೆ ಹುಟ್ಟದ ಮುನ್ನ ಅಲ್ಲಿಂದತ್ತತ್ತ ಗುಹೇಶ್ವರ.

## 1153

ಕರೆಯದೇ ಬಂದುದ, ಹೇಳದೇ ಹೋದುದನಾರು ಬಲ್ಲರು? ಅಂದಂದಿಗೆ ಬಂದ ಪ್ರಾಣಿಗಳಾರೂ ಅಱಿಯರಲ್ಲ! [4]ಬಂದ ಬಂದವರೆಲ್ಲ ಮಿಂದುಂಡು ಹೋದರು.[4] ಗುಹೇಶ್ವರಲ್ಲಯ್ಯನುಣ್ಣದೆ ಹೋದುದನಾರೂ ಅಱಿಯರಲ್ಲಾ.

## 1254

ಭಾವಗೆಟ್ಟನು, ಭವಗೆಟ್ಟನು; ಒಡಹುಟ್ಟಿದರೈವರ ಕೈಬಿಟ್ಟನು! ಭಂಡನು ಲಜ್ಜೆಭಂಡನು ಕಂಡರೆ ನುಡಿಸದಿರಾ ಮಾಯಾದೇವಿ! ಅಱುವೆಯ ನುಟ್ಟನು, ನೆಱೆಮರುಳಾದನು, ಹುಟ್ಟ ಮುಱಿದನು, ಮಡಕೆಯನೊಡೆದನು! ಆದಿಪುರಾತನು ಅಚಲ ಲಿಂಗೈಕ್ಯನು ಗುಹೇಶ್ವರಲ್ಲಯ್ಯಂಗೆ ಮೂಗಿಲ್ಲ ಮಗಳೇ.

---

A ದ (ಶೂ) B ಮಾನವರ (ಶೂ) C ಅಷ್ಟಶತ ಸಹಸ್ರ (ಶೂ) 1. ದಲ್ಲಿ ನಾನು (ಶೂ) 2. ನಯ್ಯ (ಶೂ) 3. ಗಣೇಶ್ವರ (ಶೂ) 4. × (ವ).

1255

ಆಣವಮಲ, ಮಾಯಾಮಲ, ಕಾರ್ಮಿಕಮಲವೆಂಬ ಮಲತ್ರಯಂಗಳ ಕಳೆದುಳಿದು ನಿರ್ಮಲ[1]ವಾ[1]ದ ಶಿಷ್ಯನು, ಕಾಯಜೀವದ ಭ್ರಾಂ[2]ತಿಸೂತಕವ ವಿವರಿಸಿ[2] [3]ಕಳೆದು[3] ನಿಶ್ಶಂಕನಾದ ಗುರುವು; ಈ ಉಭಯಭಾವದೊಳಗೆ ಆವುದು ಮುಂದು ಆವುದು ಹಿಂದೆಂದಱಿಯಲಹು[4]ದೇ[4] ? ಕರಸ್ಥಲಕ್ಕೆ ಕಾರುಣ್ಯವ ಮಾಡಿದರೆ ಮನಸ್ಥಲಕ್ಕೆ ಹಂಗಿಲ್ಲ, ಮನಸ್ಥಲದಲ್ಲಿ ಸೆಱಗೊಡ್ಡಿ ಬೇಡಿದರೆ ಕರಸ್ಥಲದ ಲಿಂಗ ಕೈಸಾರಿತ್ತು! ಗುರುಸ್ಥಲದ ನಿಲವು ಪರಸ್ಥಲದಲಡಗಿದರೆ ಭಾವ [5]ಬೆಱಗಾಯಿತ್ತು[5], ಗುಹೇಶ್ವರ.

1256

ಮುಕ್ತಿಗೆ ಮುಖವಾಗಿ, ಯುಕ್ತಿಗೆ ಹೊಱಗಾಗಿ ಅಱಿವಿಂಗೆ ಅಱಿವಾಗಿಪ್ಪ ಭೇದವು ಎನಗೆ ಕಾಣಬಂದಿತ್ತು ನೋಡಾ! ನಿನ್ನೊಳಗಾನೊರೆದು ನೋಡಿದಡೆ ಒರೆಯಿಲ್ಲದ ಚಿನ್ನದ ಪರಿಮುಳ ಎನ್ನ ಮನವನಾವರಿಸಿ, ಪರಮಸುಖದ ಪರಿಣಾಮವನೊಳಕೊಂಡಿತ್ತು ನೋಡಾ! ಈ ಕುಱುಹಿನ ಮೊಳೆಯ ಬಱಿಯ ಬಯಲಲಿ ನಿಲಿಸಿ ನೋಡಿ ಕೂಡಾ ನಮ್ಮ ಗುಹೇಶ್ವರನ ಶರಣ ಅಜಗಣ್ಣನೊಳಗೆ, ನೀನು ನಿರಾಳಸಂಗಿಯಾಗಿ.

1257

ದೇಹಭಾವವಳಿದಲ್ಲದೆ ಜೀವಭಾವವಳಿಯದು ! ಜೀವಭಾವವಳಿದಲ್ಲದೆ ಭಕ್ತಿ ಭಾವವಳವಡದು ! ಭಕ್ತಿಭಾವವಳವಟ್ಟಲ್ಲದೆ ಅಱಿವು ತಲೆದೋಱದು ! ಆಱಿವು ತಲೆದೋಱದಲ್ಲದೆ ಕುಱುಹು ನಷ್ಟವಾಗದು! ಕುಱುಹು ನಷ್ಟವಾದಲ್ಲದೆ ಮಾಯೆ ಹಿಂಗದು! [6]ಅದು[6] ಕಾರಣ [7]ಕಾಯ[7]ಜೀವದ ಹೊಲಿಗೆಯ ಆಳಿದ ಭೇದವ ತಿಳಿಯಬಲ್ಲಡೆ, ನಮ್ಮ ಗುಹೇಶ್ವರಲಿಂಗದ ಅಱಿವು ಸಾಧ್ಯವಪ್ಪುದು ಕಾಣಾ, ಸಿದ್ಧರಾಮಯ್ಯ.

1258

ಕಲ್ಯಾಣವೆಂಬ ಪ್ರಣತೆಯಲ್ಲಿ ಭಕ್ತಿರಸವೆಂಬ ತೈಲವನೆಱೆದು, ಆಚಾರವೆಂಬ ಬತ್ತಿಯಲ್ಲಿ ಬಸವಣ್ಣನೆಂಬ ಜ್ಯೋತಿಯ ಮುಟ್ಟಿಸಲು ತೊಳಗಿ ಬೆಳಗುತ್ತಿರ್ದುದಯ್ಯ ಶಿವನ ಪ್ರಕಾಶ! ಆ ಬೆಳಗಿನೊಳಗೊಪ್ಪುತಿರ್ದರಯ್ಯ ಅಸಂಖ್ಯಾತ ಭಕ್ತಮಹಾಗಣಂಗಳು! ಶಿವಭಕ್ತರಿರ್ದ ಕ್ಷೇತ್ರ ಅವಿಮುಕ್ತಕ್ಷೇತ್ರವೆಂಬುದು ಹುಸಿಯೇ ? ಶಿವಭಕ್ತರಿರ್ದ ದೇಶವು ಪಾವನವೆಂಬುದು ಹುಸಿಯೆ ? ಗುಹೇಶ್ವರ

1. ನಾ (ಶೂ) 2. ತುಸೂತಕ ಹಿಂಗಿ (ಶೂ) 3. × (ಶೂ) 4. ಡು (ಶೂ) 5. ಬಳಲ್ದಿತ್ತಿ ದೇನೋ (ಶೂ) 6. ಇದು (ಶೂ.) 7. ಕಾಯದ (ಶೂ.)

ಲಿಂಗದಲ್ಲಿ ಎನ್ನ ಪರಮಾರಾಧ್ಯ ಸಂಗನ ಬಸವಣ್ಣನ ಕಂಡು ಬದುಕಿದೆ ಕಾಣಾ, ಸಿದ್ಧರಾಮಯ್ಯ.

1259

ಆದಿಯಾಧಾರವಿಲ್ಲದ, ಆಗಮನಾಸ್ತಿಯಾಗಿಪ್ಪ [1]ಸಂಸಾರ[1]ವಿರಹಿತನನಾರು ಅರಿಯರಲ್ಲ! ದಶಮುಖಮಾಣಿಕದ ಎಸಳುಗಂಗ[2]ಳು[2] ಪರ್ಬಿ ಪಸರಿಸಿದುದನಾರು ಅರಿಯರಲ್ಲ! ಹಿರಿದೊಂದು ವೃಕ್ಷವು ಅತಿಶಯದ ರೂಪಾಗಿ ಪೃಥ್ವಿಗಿಂಬಾಗಿರ್ದುದನಾರು ಅರಿಯರಲ್ಲ! ಅಂತರಂಗದ ಭುವನವನು ಮೆಟ್ಟಿ ನೋಡುತ್ತ, ಬೆಡಗಿನ ತಾವರೆಯ ಮಧ್ಯದ ತಾರಕಿಯನಾರು ಅರಿಯರಲ್ಲ! ಇನಶಶಿಗಳಿಬ್ಬರು ನಯನನೋಟದ ಪುಷ್ಪಪರಿಮಳವಾಗಿರ್ದುದನಾರು ಅರಿಯರಲ್ಲ! ಇಂಬುನಯನದಲ್ಲಿ ಸಂಭ್ರಮವಿಲ್ಲದ ರೂಪು ಮಹತ್ತಾಗಿರ್ದುದನಾರು ಅರಿಯರಲ್ಲ! ಸಾಗರದೊಳಗಣ ಜ್ಯೋತಿಯಂತೆ ಗುಹೇಶ್ವರಲಿಂಗದೊಳಗೆ ಎನ್ನ ಪರಮಾರಾಧ್ಯ ಸಂಗನ ಬಸವಣ್ಣನಿಂದ ನಿಲವ ಉಪಮಿಸಬಾರದು ಕಾಣಾ, ಸಿದ್ಧರಾಮಯ್ಯ.

1260

ಕರ್ಮವಿಲ್ಲದ ಕಾಯ, [1]ಕರಣ[1]ವಿಲ್ಲದ ಪ್ರಾಣ, ಮಥನವಿಲ್ಲದ ಶಬ್ದ, ಗಮನವಿಲ್ಲದ [2]ಮನ[2]. [3]ಗುಹೇಶ್ವರ, ನಿಮ್ಮ ಬರವು ಸಂಗನ ಬಸವಣ್ಣನ ಮೆಚ್ಚು ನೋಡಾ[3].

1261

ಉಪಪಾತಕಮಹಾಪಾತ[4]ಕಂಗಳ[4] ಮಾಡಿದ ಕರ್ಮಂಗಳು ಕೋಟ್ಯನುಕೋಟಿ ಒಬ್ಬ ಶಿವ[5]ಶರಣ[5]ನ ಅಂಗಳವ ಕಂಡಲ್ಲಿ [6]ಹರಿದು[6] ಹೋಹವು ನೋಡಾ! ಅದೇನು ಕಾರಣವೆಂದರೆ—[7]ಶಿವ[7]ಶರಣನಂತರಂಗದಲ್ಲಿ ಶಿವನಿಪ್ಪನಯ್ಯಾ! ಶಿವನಿದ್ದಲ್ಲಿ ಕೈಲಾಸವಿಪ್ಪುದು! [8]ಕೈಲಾಸ[8]ವಿದ್ದಲ್ಲಿ [9]ಸರ್ವ[9]ರುದ್ರಗಣಂಗಳಿರ್ಪರು! [10]ಅ[10]ಷ್ಟಾಷಷ್ಟಿ ತೀರ್ಥಂಗ[11]ಳಿಪ್ಪವು[11]! ಶಿವನು ಒಲಿದಲ್ಲಿ ಇನಿತು ನೆಲಸಿಪ್ಪವಯ್ಯ! ಇಂತಪ್ಪ ಶರಣ ಬಸವಣ್ಣನಂಗಳವ ಕಂಡೆನಾಗಿ ಗುಹೇಶ್ವರ[12]ಲಿಂಗನ ಕಂಗಳಿಗೆ[12] ತೃಪ್ತಿಯಾಯಿತ್ತು ಕಾಣಾ, ಸಿದ್ಧರಾಮು!

---

1. ಕರುಣ (ಶೂ.) 2. ಗಮನ (ಶೂ.) 3. ಗುಹೇಶ್ವರನ ಬರವು ಸಂಗನ ಬಸವಣ್ಣನ ಅಂಗಳವ ಕಂಡಲ್ಲಿ ತರಹರವಾಯಿತ್ತು ಕಾಣಾ ಸಿದ್ಧರಾಮಯ್ಯ(ಶೂ) 4. ಕವ (ಪ್ರ). 5. ಭಕ್ತ (ಶೂ) 6. ಅಳಿದು (ಶೂ) 7. ಆ (ಶೂ) 8. ಆ ಕೈಲಾಸ (ಶೂ) 9. ಸಮಸ್ತ (ಶೂ) 10. ಅಲ್ಲಿ ಅ (ಶೂ) 11. ಳು ನೆಲಸಿಪ್ಪವು (ಶೂ) 12. ಲಿಂಗಕ್ಕೆ ಕಂಗಳ (ಶೂ).

1262

ಜಂಗಮದಿಂಗಿತಾಕಾರವ ನೋಡಿ ಲಿಂಗವೆಂದಱಿದ ಸದ್ಭಕ್ತರು ಮನಮನ ಬೆರಸಿದ ಕೂರ್ಮನ [1]ಶಿಶು[1]ವಿನ ಸ್ನೇಹದಂತೆ, ಕಾಣದ ಮುನ್ನವೇ ತೆಱಹಿಲ್ಲದಿರ ಬೇಕು ನೋಡಾ! ಬಂದ ಬರವ[2]ನಱಿಯದೆ[2] ನಿಂದ ನಿಲವ [3]ನೋಡದೆ,[3] ಕೆಮ್ಮನೆ ಅಹಂಕಾರವ ಹೊತ್ತಿಪ್ಪವರ ನಮ್ಮ ಗುಹೇಶ್ವರ ಲಿಂಗನೊಲ್ಲ [4]ಕಾಣಾ![4]

1263

ಕೈಯಲ್ಲಿ [5]ದೊಣ್ಣೆ[5], ಮನದಲ್ಲಿ ಕ್ರೋಧ, ವಚನದಲ್ಲಿ ಕಿಂಕಿಲ, ಲಿಂಗದ ವಾರ್ತೆ ನಿನಗೇಕೆ, ಹೇಳಾ ಬಸವ? ಜಂಗಮವೆ ಲಿಂಗವೆಂಬ [6]ಶಬ್ದ ಸಂದೇಹ-ಸೂತಕಿ ನೀನು, ಸಜ್ಜನ ಸದ್ಭಕ್ತಿಯ[6] ಮಾತು ನಿನಗೇಕೆ, ಹೇಳಾ ಬಸವ? ಕಬ್ಬುನದ ರೂಪು ಪರುಷವ ಮುಟ್ಟಿ ಹೊನ್ನಾಯಿತಲ್ಲದೆ, ಪರುಷವಪ್ಪುದೆ ಹೇಳಾ ಬಸವ? ಗುಹೇಶ್ವರನೆಂಬ ಪರುಷದ ಪುತ್ಥಳಿಯನಱಿಯಬಲ್ಲಡೆ ತಿಳಿದು ನೋಡಾ, ಸಂಗನ ಬಸವಣ್ಣಾ!

1264

ಕಾಮನ ಕಣ್ಣ ಮುಳ್ಳ ಕಳೆದು, ಭೂಮಿಯ ತೈಲದ ಸೀಮೆಯ ಕೆಡಿಸಿ, ಹೋಮವನುರುಹಿ ದಕ್ಷನ ತಲೆಯನರಿದ [7]ನಿಸ್ಸೀಮನಾದ ಮಹಿಮನ[7] ನಿಲವ ನಱಿಯಬಹುದೆ? ಅಱಿವಿಂಗಸಾಧ್ಯ, ಉಪಮೆಗೆ ಕಡೆಮುಟ್ಟ[8]ದು.[8] ಗುಹೇಶ್ವರನ [9]ಕರುಣಪ್ರಸಾದಿ ಮರುಳು ಶಂಕರದೇವನೆಂತಪ್ಪನೆಂಬುದ[9] [10]ತಿಳಿದು ನೋಡಾ, ಸಂಗನ[10] ಬಸವಣ್ಣ.

1265

ಸಜ್ಜನಸನ್ನಿಹಿತವಾದ ಭಕ್ತಿ ಹೊತ್ತಿಗೊಂದು ಪರಿಯುಂಟೆ [11]ಅಯ್ಯ?[11] ಒಮ್ಮೆ ಅಹಂಕಾರ, ಒಮ್ಮೆ ಕಿಂ[12]ಕಿ[12]ಲವೆ? ಮನಕ್ಕೆ ಮನ ಸಾಕ್ಷಿಯಾಗಿ ಮಾಡುವ ಭಕ್ತ[13]ರ[13]ಲ್ಲಿ ಗುಹೇಶ್ವರನಿಪ್ಪನಲ್ಲದೆ, ಪ್ರಪಂಚಿನೊಳಗಿಲ್ಲ ಕಾಣಾ, ಸಂಗನ ಬಸವಣ್ಣ.

---

1. ಸಿಸು (ಪ್ರ) 2. ನೋಡದೆ (ಶೂ) 3. ನಱಿಯದೆ (ಶೂ) 4. ಕಾಣಾ ಕಿನ್ನರ.ಬೊಮ್ಮಣ್ಣ (ಶೂ) 5. ಡಾಣೆ (ಶೂ) 6. ಶಬ್ದಸೂತಕ ಉಂಟಲ್ಲದೆ ಸಜ್ಜನ ಭಕ್ತಿಯ (ಶೂ) 7. ನಿಸ್ಸೀಮ ಶರಣರ (ಶೂ) 8. ರು (ಶೂ) 9. ಶರಣರೆಂತಹ ರೆಂಬುದ (ಶೂ) 10. ಕಂಡಾ (ಶೂ) 11. ಹೇಳಾ (ಶೂ) 12. ಕ (ಪ್ರ) 13. ನ (ಶೂ).

1266

ರೂಪಿಂಗೆ ಕೇಡುಂಟು, ನಿರೂಪಿಂಗೆ ಕೇಡಿಲ್ಲ. ರೂಪು ನಿರೂ[1]ಪಿನೊಳೊಡ[1]ಗೂಡುವ ಪರಿಯೆಂತು ಹೇಳಾ? [2]ಸಂಬಂಧ ಅಸಂಬಂಧವಾಗಿದೆ[2]! [3]ಪಂಚೇಂ[3]ದ್ರಿಯವೆಂಬ ಜಾತಿಸೂತಕವಿರಲು ಗುಹೇಶ್ವರಲಿಂಗವ ಮುಟ್ಟಬಾರದು ಕೇಳವ್ವಾ.

1267

[4]ನೀನು[4] ನಾನೆಂಬಭಯ ಸಂಗವಳಿದು, ತಾನು ತಾನಾದ ತ್ರಿಕೂಟವೆಂಬ ಮಹಾಗಿರಿಯ [5]ಮೆಟ್ಟಿ[5], [6]ತುಟ್ಟ ತುದಿಯಲಿ[6] ನೋಡಲು, ಬಟ್ಟಬಯಲು ಕಾಣಬಹುದು ನೋಡಾ! ಆ [6]ಬಟ್ಟ[6]ಬಯಲ ಬೆರಸುವಡೆ [7]ಶ್ರೀ[7]ಗಿರಿಯೊಳೊಂದು ಕಾಣಬಾರದ ಕದಳಿಯುಂಟು ನೋಡಾ! ಆ ಕದಳಿಯ [8]ತಿಳಿ[8]ದಲ್ಲಿ ಒಳಹೊಕ್ಕು ನೋಡಲು, ತೊಳಗಿ ಬೆಳಗುವ ಜ್ಯೋತಿಯುಂಟು [9]ನೋಡಾ![9] ನಡೆಯಲ್ಲಿಗೆ ತಾಯೇ, ಗುಹೇಶ್ವರ ಲಿಂಗದಲ್ಲಿ ಪಠಮಪದ[10]ವು[10] ನಿನಗೆ ಸಯುವ[11]ಪ್ಪು[11]ದ ನೋಡಾ!

1268

ಕಾಲನ ಕೊಂದಾತನಲ್ಲದೆ ಶುದ್ಧಪ್ರಸಾದಿಯಲ್ಲ! ಕಾಮನ ತಿಂದಾತುನಲ್ಲದೆ ಸಿದ್ಧಪ್ರಸಾದಿಯಲ್ಲ! ತ್ರಿಪುರವ ಸುಟ್ಟಾತನಲ್ಲದೆ ಪ್ರಸಿದ್ಧಪ್ರಸಾದಿಯಲ್ಲ! ಕೆಸಱಲ್ಲಿ ಕಿಚ್ಚನಿಕ್ಕಿ, ಬಸಿಱ ಬಡಿದುಕೊಂಡಾತಗಲ್ಲದೆ ಈ ತ್ರಿವಿಧ ಪ್ರಸಾದವಿಲ್ಲ ಕಾಣಾ, ಗುಹೇಶ್ವರ.

1269

ಒಂದಾದುದು ಎರಡಪ್ಪುದೇ? ಎರಡಾದುದು ಒಂದಪ್ಪುದೇ? ಪರಿಣಾಮದ ವೇಳೆಯಲ್ಲಿ ಸಂದೇಹ ಹುಟ್ಟಲುಂಟೇ? ಬಂದ ಜಂಗಮದ ನಿಲವನಱಿಯದೆ ಹಿಂದನೆಣಿಸಿ ಹಲವ [12]ಹಂಬಲಿ[12]ಸುವರೇ? ಈ ಒಂದು ನಿಲವಿಂಗೆ ಪರಿಣಾಮವ ಮಾಡಬಲ್ಲಡೆ, ನಿನ್ನ [13]ಲಕ್ಷದ[13] ಮೇಲೆ ತೊಂಬತ್ತಾಱುಸಾವಿರ ಜಂಗಮಕ್ಕೆ ಪರಿಣಾಮವಹುದು ನೋಡಾ. ಗುಹೇಶ್ವರನೆಂಬ ಲಿಂಗದ ನಿಲವನಱಿಯದೆ ಮರುಳಾದೆಯಲ್ಲ, ಸಂಗನ ಬಸವಣ್ಣ!

1270

ಮನ[14]ಯುಕ್ತಿ[14] ವಿವೇಕವೆಂಬಕ್ಕಿಯನು [15]ಗುಪ್ತ[15]ವೆಂಬೊರಳೊಳಗಿಕ್ಕಿ,

1. ಪನೊಡ (ಶೂ) 2. ಅಸಂಬಂಧ ಸಂಬಂಧವಾಗಿ ಇದೆ (ಶೂ) 3. ದೇಹಇಂ (ಶೂ) 4. ನೀ (ಶೂ) 5. ತುಟ್ಟತುದಿಯ (ಶೂ) 6. × (ಶೂ) 7. ತ್ರಿಕೂಟ (ಶೂ) 8. ಕಳ (ಶೂ) 9. ಕೇಳಾ (ಶೂ) 10. ವಿ (ಶೂ) 11. ಹು (ಶೂ). 12. ನೆಣೆ (ಶೂ) 13. ಲಕ್ಷದ (ಪ್ರ) 14. ಮುಕ್ತಿ (ಶೂ) 15. ಗುಪಿತ (ಶೂ)

ಅಭಿನ್ನಮಥನವೆಂಬ ಒನಕೆಯಲ್ಲಿ [1]ತಳಿಸಿ[1] ಕಲ್ಮಷವೆಂಬ [2]ತೌಡ[2] ಹಾಱಿಸಿ, ಸಮತೆಯೆಂಬ ಸಲಿಲದಲ್ಲಿ ಜಾಳಿಸಿ, ಅಳುಪೆಂಬ [3]ಹರಳ[3] ಕಳೆದು, ದಯಾಮೃತ ವೆಂಬ [4]ಹಾಲಿನಲ್ಲಿ[4] ಬೋನಮಂ ಮಾಡಿ, [5]ಸಮರಸ ರುಚಿಕರವೆಂಬ[5] ಶಾಖಪಾ ಕಂಗಳಂ ಮಾಡಿ, [6]ನೆನಹಿನ[6] ಅವಲಂಬ[6]ವೇ[6] ಅಭಿಘಾರವಾಗಿ, ನಿರ್ಮಲವೆಂಬ ಶಿವದಾನವ[7]ನಳವಡಿಸಿ[7], ಕಾದಿದ್ದರಯ್ಯ ಪಂಚೇಂದ್ರಿಯವೆಂಬ [8]ಶುನಕ[8] ಮುಟ್ಟದಂತೆ. ಕಾದಿದ್ದರಯ್ಯ ಷಡುವರ್ಗವೆಂಬ ತೊತ್ತಿರು ಮುಟ್ಟದಂತೆ. ಕಾದಿದ್ದರಯ್ಯ ಅಷ್ಟವರ್ಗವೆಂಬ ಮಕ್ಕಳು ಮುಟ್ಟದಂತೆ. ಇನಿತು ಹೀನಂಗಳ ವಾವು ಮುಟ್ಟದಂತೆ ಕಾದಿದ್ದರಾಗಿ, ಈ ಬೋನ ಗುಹೇಶ್ವರಲಿಂಗಕ್ಕೆ ಅರ್ಪಿತ ವಾಯಿತು, ಕಾಣಾ ಚೆನ್ನ ಬಸವಣ್ಣ.

1271

ಭಾವವಳಿಯದು, ಬಯಕೆ ಸವೆಯದು, ಐಕ್ಯನಾದಹೆನೆಂದರೆ ಏನ ಹದೋ? ಸಬುದ ಸಂಭ್ರಮವಳಿಯದೆ, ತನ್ನ ಇದಿರಿನಲಿ ಪ್ರತಿಗಂಡಡಹುದೇ? ಗುಹೇಶ್ವರನೆಂಬ ಸಂಬಂಧವಳಿಯದೆ ಬೇಸತ್ತು ಬಯಸುವಂಗಾಯತವಹುದೇ?

1272

ಆದಿಯನು ಅಱಿಯದೆ, ಅನಾದಿಯಿಂದತ್ತತ್ತ ತಾನಾರೆಂಬುದ ತಿಳಿದು ವಿಚಾರಿಸದೆ, ಮಾಡಿದ ಫಲವೇನಯ್ಯ? ಸಾವನ್ನಕ್ಕರ ಸಾಧನೆಯಂ ಮಾಡಿದಡೆ ಕಾದುವ ದಿನವಾವುದಯ್ಯ ಬಸವಣ್ಣ? ಬಾಳುವನ್ನಕ್ಕರ ಭಜನೆಯಂ ಮಾಡಿದಡೆ ತಾನಹ ದಿನವಾವುದಯ್ಯ ಬಸವಣ್ಣ? ಇದು ಕಾರಣ, ಮಿಥ್ಯವನೇ ಹಿಡಿದು, ಮಿಥ್ಯವನೇ ಪೂಜಿಸಿ, ಮರ್ತ್ಯಲೋಕದ ಭಕ್ತರೆಲ್ಲ ವ್ಯರ್ಥವಾದರಲ್ಲ! ತಮ್ಮ ತಾವು ಕೆಟ್ಟ ಕೇಡಿಂಗೆ ಬೆಱಗಾದೆ. ಕಣ್ಣ ಕಳೆದುಕೊಂಡು, ಹೊಟ್ಟೆ ಸೀಳಿ, ಮಗನ ಬಾಣಸವ ಮಾಡಿ, ಕೈಲಾಸಪುರಕ್ಕೆ ಹೋದವರೆಲ್ಲರು ಭಕ್ತರೇ? ಅವರಿಗೆ ಶಿವಪಥ ಸಾಧ್ಯವಾಯಿತ್ತೆ? ಭವ ಹಿಂಗಿತ್ತೆ? ಅಸುರಕರ್ಮಿಗಳ ಮಾತಂತಿರಲಿ: ನರಲೋಕದ ನರಗುಱಿಗಳೆಲ್ಲ ನರಸಂಸಾರಕ್ಕೊಳಗಾದರು. ಸುರಲೋಕದ ಸುರರುಗಳೆಲ್ಲ ಸುರಸಂಸಾರಕ್ಕೊಳಗಾದರು. ರುದ್ರಲೋಕದ ರುದ್ರರುಗಳೆಲ್ಲ ರುದ್ರ ಸಂಸಾರಕ್ಕೊಳಗಾದರು, ಮುನಿಜನಂಗಳೆಲ್ಲ ತಪೋಸಂಸಾರಕ್ಕೊಳಗಾದರು. ಜಂಗಮವ ಅರ್ಚಿಸಿದವರೆಲ್ಲ ಸಾಯುಜ್ಯವೆಂಬ ಸಂಸಾರಕ್ಕೊಳಗಾದರು. ಇಂತೀ ಸಂಸಾರಕ್ಕೊಳಗಾದವರೆಲ್ಲ ಮಾಯೆಯ ಹೊಡೆಗಿಚ್ಚ ಗೆಲಬಲ್ಲರೇ? ಅದೆಂತೆಂದಡೆ

---

1. ಥಳಿಸಿ (ಶೂ) 2. ತೌಡು (ಪ್ರ) 3. ಹರಳಂ (ಶೂ) 4. ಹಾಲು (ಶೂ) 5. ಸಮರಸವೆಂಬ ರುಚಿಕರದಿಂದ (ಶೂ) 6. ನೆನಹದ ಲವಲವಿಕೆಯೇ (ಶೂ) 7. ಗಡಣಿಸಿ (ಶೂ) 8. ಸೊಣಗ (ಶೂ) 9. ಮದ (ಶೂ).

ನಿತ್ಯ ನಿಜಾತ್ಮ ತಾನೆಂದಱಿಯದೆ, ತತ್ತ್ವಮಸಿಯೆಂಬ ವಾಕ್ಯ ತಾನೆಂದಱಿಯದೆ ಹೋಱಿ ಹೋಱಿಗೆ ಬಳಸಿ ಕೆಟ್ಟರಲ್ಲ! ಹಿರಿಯರು ಸತ್ತರಲ್ಲ ನಾಯ ಸಾವ! ಸತ್ತವರ ಹೆಸರ ಪತ್ರವನೋದಿ ಎತ್ತಳ ಮುಕ್ತಿ, ಕಾಣಾ, ಗುಹೇಶ್ವರ?

1273

ಅಱಿವಿಂಗಸಾಧ್ಯ, ಉಪಮೆಗೆ ಕಡೆಮುಟ್ಟದು! ಗುಹೇಶ್ವರನ ಕರುಣ-ಪ್ರಸಾದಿ ಮರುಳು ಶಂಕರದೇವನೆಂತಪ್ಪನೆಂಬುದ ತಿಳಿದು ನೋಡಾ, ಸಂಗನ ಬಸವಣ್ಣ.

1274

[1]ಅಯ್ಯ, ಎತ್ತಿದ ಮಾಣಿಕ್ಯದ ಮಣಿಮುಕುಟದ ಮೇಲಣ ಪಡೆ ಕೋಟಿ ಶಿವನಿರ್ಪ ನೆಲೆಯನಱಿಯರು. ಅಯ್ಯ ಇಕ್ಕಿದ ಕರೋಟಿಯ ಮಾಲೆಯೊಳಗಿರ್ಪ ರುದ್ರಕೋಟಿಗಳು ಶಿವನಿರ್ಪ ನೆಲೆಯನಱಿಯರು. ಅಯ್ಯ, ಇಕ್ಕಿದ ರುಂಡಮಾಲೆಯೊಳಗಿರ್ಪ ರುಂಡಧಾರಿಗಳು ಕೋಟಿ ಶಿವನಿರ್ಪ ನೆಲೆಯನಱಿಯರು. ಅಯ್ಯ, ಗಂಗೆ, ಗೌರಿ, ಭೃಂಗಿ ಮೊದಲಾಗಿ ಶಿವನಿರ್ಪನೆಲೆಯನಱಿಯರು. ಅಯ್ಯ, ಖಟ್ವಾಂಗದೊಳಗಿರ್ಪ ಮನುಮುನಿಗಳು ಶಿವನಿರ್ಪ ನೆಲೆಯನಱಿಯರು. ಗುಹೇಶ್ವರ, ನಿಮ್ಮ ಶರಣ ಸಂಗನ ಬಸವಣ್ಣನೇ ಬಲ್ಲ.

1275

ಆದಿಯಾಧಾರವಂ ಮಾಡಿ, ಅಜ ಕೋಟಿ ಬ್ರಹ್ಮಾಂಡಂಗಳಂ ಮಾಡಿ, [1]ಯುಗಜುಗಾದಿಗಳಂ[1] ಮಾಡಿ, ಹರ ಲೀಲೆಯಾಡುವಲ್ಲಿ, ಹರಿವಿರಿಂಚಿಗಳ ಸುರಾಸುರರ [2]ಶಿರೋ[2]ಮಾಲೆ[3]ಗಳನಿಕ್ಕಿ ಕುಣಿದಾ[3]ಡುವಲ್ಲಿ, ಪಾದ ರಸಾತಳಕ್ಕಿಳಿದು ಭುವನ ಜಲಮಯವಾದಲ್ಲಿ, ಹಸ್ತಮುಕುಟ ತಾಗಿ ಸಕಲಲೋಕಂಗ[4]ಳು[4] ನಿರವಯವಾದಲ್ಲಿ, [5]ನಿಜ[5]ಬೆಳಗಿನೊಳಗೆ [6]ಒಮ್ಮೆ[6] "ಸೋಹಂ" ಎನಲು ವಿಚಾರದಿಂದ ಘನಮನವಾದಂದು, [6]ವೃಷಭಾವತಾರದಂದು[6], ಗುಹೇಶ್ವರ, ನೀನೆ [7]ಲಿಂಗ[7], [6]ಸಂಗನ ಬಸವಣ್ಣನೇ ಭಕ್ತನು.

1276

ಒಲ್ಲೆನೊಲ್ಲೆ ಮರ್ತ್ಯದ ಹಂಗ! ಹಿಂದಣ ಮಱಿವೆಯಿಂದ ಬಂದು ನೊಂದೆ ಸಾಕು—ಇನ್ನಱಿದೆ. ತ್ರಿವಿಧ ಪಾಶವ ಪಱಿದೆ. ಗುಹೇಶ್ವರ, ಇನ್ನು ಮರ್ತ್ಯದ ಸುಖವ ಮನದಲ್ಲಿ ನೆನೆದೆನಾದಡೆ ನಿಮ್ಮಾಣೆ, ನಿಮ್ಮ ರಾಣಿವಾಸದಾಣೆಯಯ್ಯ.

---

1. ಈರೇಳು ಭುವನಂಗಳಂ (ಶೂ) 2. ಶಿರ (ಗ) 3. ಇಕ್ಕಿ ಕೊಂಡಾ (ಶೂ) 4. ಕಿಲ್ಲವೂ (ಶೂ) 5. ನಿಜದ ಬೆಳಗಿನ (ಶೂ) 7. ಲಿಂಗ ನಾನೆ ಜಂಗಮ (ಶೂ).

1277

ಶ್ರೀ ಗುರುಸ್ವಾಮಿ ಪೂರ್ವಾಶ್ರಯಮಂ ಕಳೆದು, ಪುನರ್ಜಾತನಂ ಮಾಡಿದ ಬಳಿಕ, ಪಂಚಭೂತಕಾಯವ ಕಳೆದು, ಪ್ರಸಾದಕಾಯವ ಮಾಡಿದ ಬಳಿಕ, ವಾಯುಪ್ರಾಣಿಯ ಕಳೆದು ಲಿಂಗಪ್ರಾಣಿಯ ಮಾಡಿದ ಬಳಿಕ, ಎಲ್ಲಿಯ ಸೂತಕ, ಎಲ್ಲಿಯ ಛಲಸೂತಕ, ಎಲ್ಲಿಯ ತನುಸೂತಕ, ಎಲ್ಲಿಯ ಮನಸೂತಕ, ಎಲ್ಲಿಯ ನೆನಹು ಸೂತಕ, ಎಲ್ಲಿಯ ಭಾವಸೂತಕ? ಇವನೆಂತು ಹಿಡಿಯಲಾಗದು. ಸದ್ಭಕ್ತನು ಕುಲಸೂತಕ ಉಳ್ಳನ್ನಕ್ಕರ ಭಕ್ತನಲ್ಲ. ಛಲ ಸೂತಕ ಉಳ್ಳನ್ನಕರ ಮಾಹೇಶ್ವರನಲ್ಲ. ತನುಸೂತಕ ಉಳ್ಳನ್ನಕ್ಕರ ಪ್ರಸಾದಿ ಯಲ್ಲ. ಮನಸೂತಕ ಉಳ್ಳನ್ನಕ್ಕರ ಪ್ರಾಣಲಿಂಗಿಯಲ್ಲ. ನೆನಹು ಸೂತಕ ಉಳ್ಳನ್ನಕ್ಕರ ಶರಣನಲ್ಲ. ಭಾವಸೂತಕ ಉಳ್ಳನ್ನಕ್ಕರ ಐಕ್ಯನಲ್ಲ. ಇಂತೀ ಸೂತಕವ ಮುಂದುಗೊಂಡಿಪ್ಪವರ ಮುಖವ ನೋಡಲಾಗದು, ಗುಹೇಶ್ವರ.

1278

ಕೋಪತಾಪಮಂ ಬಿಟ್ಟು, ಭ್ರಾಂತಿ ಭ್ರಮೆಯಂ ಬಿಟ್ಟು, ಜಂಗಮವಾಗ ಬೇಕು ಕಾಣಿರೇ, ಮರುಳುಗಳಿರಾ! ಇಂತೀ ಷಡುಲೋಭದ ರುಚಿ ಹಿಂಗಿ ಜಂಗಮವಾದಲ್ಲದೆ ಭವ ಹಿಂಗದು ಕಾಣಾ, ಗುಹೇಶ್ವರ.

1279

ರಾತ್ರಿಯೆಂಬ ಹುತ್ತಿನೊಳಗೆ ನಿದ್ರೆಯೆಂಬ ರಾಹು ಹೆಡೆಯನೆತ್ತಿ ಕಚ್ಚ ಲೊಡನೆ ಅಂಜನಾಸಿದ್ಧರ ಅಂಜನವು ಹಾಱಿತ್ತು. ಘುಟಿಕಾಸಿದ್ಧರ ಘುಟಿಕೆ ಯುರುಳಿತ್ತು. ಯಂತ್ರಿಗಳ ಯಂತ್ರ ಎದ್ದು ಹೋಯಿತ್ತು. ಮಂತ್ರಿಗಳ ಮಂತ್ರ ಮಱೆತು ಹೋಯಿತ್ತು. ಓಷಧಿಗಳ ಔಷಧವನಾರಡಿಗೊಂಡಿತ್ತು. ಸರ್ವವಿದ್ಯಾಮುಖದ ಜ್ಯೋತಿ ನಂದಿತ್ತು. ಈ ವಿಷದ ಲಹರಿಯಲ್ಲಿ ಮೂಱು ಲೋಕದವರೆಲ್ಲರೂ ಮೂರ್ಛಿತರಾದರು ಕಾಣಾ, ಗುಹೇಶ್ವರ.

1280

ಗಿರಿಗಳ ಗುಹೆಗಳ ಕಂದರದಲ್ಲಿ ನೆಲಹೊಲನ ಮುಟ್ಟದೆ ಇಪ್ಪೆ ದೇವ. ಮನಕ್ಕಗಮ್ಯ ಅಗೋಚರನಾಗಿ ಅಲ್ಲಲ್ಲಿ ಎಲ್ಲೆಲ್ಲಿಯೂ ನೀನೆ ಇಪ್ಪೆಯಯ್ಯ! ಗುಹೇಶ್ವರ, ನಿಮ್ಮನಗಲಕ್ಕೆ ಹರಿವರಿದು ಕಂಡೆ ನಾನು.

1281

ಒಂದು ಬೆಟ್ಟದ ನಡುವೆ ಕರಡಿಯ ಮಿಳಿಯ ಮಾಡಿ, ಹುಲಿಯನೆತ್ತುವ ಮಾಡಿ, ಹೊಡೆದವರಾರೋ? ಎರಡಱ ಎಂಟೆರಡಱ ಆಱಱ ನಾಲ್ಕೆರಡಱ ಶರಧಿ ಶರಧಿಯ ಕೂಡಿ ಮೊರೆವುದದೇನೋ! ಕುರುಡ ಹೆಳವನ ಕೈವಿಡಿದು ನಡಹುವಂತೆ ಗೊಹೇಶ್ವರನೆಂಬುದು ನಿರಾಳದ ನಿಲವು.

1282

ನರರು ಸುರರು ಕಿನ್ನರರು ಮೊದಲಾದವರೆಲ್ಲರೂ ಪಿಂಡವೆಂಬ ಭಾಂಡದಲ್ಲಿ ಅಡಗಿಹರಾಗಿ, ನಾನವರ ರೂಪಿಸಿ ಬಲ್ಲೆನಯ್ಯ. ದೇವಗಣ ರುದ್ರಗಣ ಪ್ರಮಥಗಣ ಮೊದಲಾದವರೆಲ್ಲರೂ ಬ್ರಹ್ಮಾಂಡವೆಂಬ ಭಾಂಡದಲ್ಲಿ ಅಡಗಿಹರಾಗಿ, ನಾನವರ ಭಾವಿಸಿ ಬಲ್ಲೆನಯ್ಯ. ಸತ್ಯರು ನಿತ್ಯರು ಮುಕ್ತರು ಎಂಬ ಮಹಾಮಹಿಮರೆಲ್ಲರು ಚಿದ್ಬ್ರಹ್ಮಾಂಡವೆಂಬ ಭಾಂಡದಲ್ಲಿಯೇ ಅಡಗಿಹರಾಗಿ ನಾನವರನಱಿದು ಬಲ್ಲೆನಯ್ಯ. ಇಂತೀ ತ್ರಿಭಾಂಡವನೊಳಕೊಂಡ ಅಖಂಡಿತ ಪರಿಪೂರ್ಣವಪ್ಪ ಭಾಂಡವೆ ತನ್ನಿರವೆಂಡಱಿದ ನಿಜಲಿಂಗೈಕ್ಯನ ಉಪಮಿಸಲಿಲ್ಲ, ಉಪಮಿಸಲಿಲ್ಲಾಗಿ ರೂಹಿಸಲಿಲ್ಲ, ರೂಹಿಸಲಿಲ್ಲಾಗಿ ಭಾವಿಸಲಿಲ್ಲ, ಭಾವಿಸಲಿಲ್ಲಾಗಿ ಅಱಿಯಲಿಲ್ಲ, ಅಱಿಯಲಿಲ್ಲದ ಅಱಿವೆ ತಾನಾಗಿ ಗೊಹೇಶ್ವರನೆಂಬುದು ಬೇಱಿಲ್ಲ.

1283

ಸಹಭೋಜನ ಸಹಭೋಜನವೆಂದೆಂಬರು! ಭಾಜನವಾವುದು ಭೋಜನವಾವುದೆಂದಱಿಯರು! ಭಾಜನವೆ ಅಂಗ, ಭೋಜನವೆ ಲಿಂಗ! ಭಾಜನಸಹಿತ ಭೋಜನವ ಮಾಡುವ ಹಿರಿಯರು ಭಾಜನವನಿರಿಸಿ ಹೋದರೆ ಅದೆ ಭಂಗ, ಗುಹೇಶ್ವರ.

1284

ಬಯಲ ಬೆಳಗಿನ ಸುಖದ ಸವಿಯಲ್ಲಿ ಬೆಱಗಲ್ಲದೆ ಕಾಣೆ, ಕಾಣೆನೆಂಬ ನುಡಿಗೆಡೆಯ ಕಾಣೆ. ಕುಱುಹಳಿದು ಅಱಿವ ನೆಱೆಯಱಿದು ಬೆರಸಿದೆನೆಂಬ ಬಱಿಯ ನುಡಿಗೆ ನಾಚಿದೆನಯ್ಯ, ಗೊಹೇಶ್ವರ.

1285

ಸಾವ ಜೀವಕ್ಕೆ ಗುರು ಬೇಡ. ಸಾಯದ ಜೀವಕ್ಕೆ ಗುರು ಬೇಡ. ಗುರುವಿಲ್ಲದೆ ಕೂಡಲಿಕ್ಕೆ ಬಾರದು. ಇನ್ನಾವ ಠಾವಿಂಗೆ ಗುರು ಬೇಕು. ಸಾವು-ಜೀವಸಂಬಂಧದ ಠಾವ ತೋರಬಲ್ಲಾತನೇ ಗುರುಗುಹೇಶ್ವರನು.

1286

ನೋಟವೇ ಕೂಟ, ಕೂಟವೇ ಪ್ರಾಣ, ಪ್ರಾಣವೇ ಏಕ, ಏಕವೇ ಸಮರಸ, ಸಮರಸವೇ ಲಿಂಗ, ಲಿಂಗವೆ ಪರಿಪೂರ್ಣ, ಪರಿಪೂರ್ಣವೆ ಪರಬ್ರಹ್ಮ, ಪರಬ್ರಹ್ಮ[1]ವೆ ತಾನು. ಇಂತೀ ನಿಜವ ಗುಹೇಶ್ವರ ಬಲ್ಲನಲ್ಲದೆ ಕಣ್ಣುಗೆಟ್ಟಣ್ಣಗಳೆತ್ತ ಬಲ್ಲರು ನೋಡೈ[1].

1. ತಾನೆ ಗುಂಹೇಶ್ವರ (K. B. 602)

1287

ಕಣ್ಣಿಂಗೆ ಕಣ್ಣು, ಕಣ್ಣೊಳು ಕಣ್ಣು, ಕಣ್ಣೇ ನೇತ್ರ, ನೇತ್ರವೆ ಸೂತ್ರ, ಸೂತ್ರವೆ ಲಿಂಗ, ಲಿಂಗವೆ ಗುಹ್ಯ, ಗುಹ್ಯಕ್ಕೆ ಗುಹ್ಯ, ಗೋಪ್ಯಕ್ಕೆ ಗೋಪ್ಯ, ರಹಸ್ಯಕ್ಕೆ ರಹಸ್ಯ. ಈ ನೇತ್ರಮಹಿಮೆಯಂ ಗುಹೇಶ್ವರ ಬಲ್ಲನಲ್ಲದೆ ಕಣ್ಣುಗೆಟ್ಟಣ್ಣಂಗಳೆತ್ತ ಬಲ್ಲರು ನೋಡೈ.

1288

ನೋಳ್ಪುದೇ ನೋಟದೊಳ್, ನೋಟವೇ ನೋಟಕನೊಳ್, ನೋಟಕನೇ ಸಾಕ್ಷಿ, ಸಾಕ್ಷಿಯೇ ಲಿಂಗ, ಲಿಂಗದಿಂದೆಲ್ಲವಾ ಲಿಂಗಕ್ಕೆ ಕುಱುಪಿಲ್ಲ. ಲಿಂಗಕ್ಕೆ ಲಿಂಗವೇ. ಲಿಂಗವಿದು ಬಹುಗುಹ್ಯ. ಗುರುಲಿಂಗದೆಱಕದಿಂ ಸಚ್ಛಿಷ್ಯನೇ ಬಲ್ಲ. ಭವಿಗಳಿದನೆತ್ತ ಬಲ್ಲರು ಕಣ್ಣುಗೆಟ್ಟವರ್ ನೋಡಯ್ಯ ಗುಹೇಶ್ವರ.

1289

ಲಿಂಗವೇ ಕರಲಿಂಗವ ನುತಿವೆತ್ತ ಗುರುವಿತ್ತ-
ನಂಗವೇ ತನುಕರಣ ಕಣು ಮನವು ಕರವೆನಿಸೆ
ಮಂಗಳವು ಯೋಗದೊಳು ಸಮರಸದಿ ಷಟ್‌ಚಕ್ರ
ಲಿಂಗೈಕ್ಯವಿರ್ಪಗೆಯು ಕುಂಭಕ ಸಮಾಧಿಯೊಳು ಕುಂಡಲಿಯ
ಕುಣಿಕೆ ಗುಹ್ಯ
ಲಿಂಗ ಬಿಂದುವೆ ನಾದ ಲಿಂಗವೆ ಸುಷುಮ್ನಾಗ್ರ
ಲಿಂಗತನುವೀಡಾಡಿ ಸಂಗದೆಱಕದೊಳಾಳೆ ಗುಹ್ಯತಮ ಗುಹ್ಯೇಶ್ವರ.

1290

ಎರಡೊಂದು ಮುಕ್ಕೂಟದೊಳು ಲಿಂಗದೆಡೆಯಾಟ
ವಿರಲು ಬೀಜಕ್ಷೇತ್ರದೆಱಕ ಹರಿ ಹರಯೋಗ
ವಿರತರತಿನಿಕ್ಷೇಪವಿದುವೆ ಗರ್ಭಾಧಾನ
ಪರಮ ಜೀಜಾವಾಪವಿದರ ಫಲ ನಿರ್ವಾಣ
ಸರಸಲಿಂಗದ ನಿಷೇಕವನಱುವುದೇ ಸಾಜ
ಗುರುವೆ ಕರುಣಿಸಿದ ಶಿವಲಿಂಗಕಮಲಾರ್ಚನೆಯನಿದು ಗುಹೇಶ್ವರ.

1291

ಮೂಱು ಬಟ್ಟೆಯನಳಿದ । ಬಟ್ಟಬಯಲೇ ದಿಟ್ಟ
ದಿಟ್ಟಯಿಟ್ಟಿಷ್ಟ ನಿಜಲಿಂಗದೊಳಗೆಱಕಗೊಳೆ
ಸುಟ್ಟಱುವೆಯಂತಿರ್ಪುದೇ । ತುಟ್ಟತುದಿ ಬಟ್ಟೆ
ಕಟ್ಟದಿರಲಿದನಕ್ಕು । ಕೆಟ್ಟ ಗಾಳಿಯ ಸೋಂಕು

ದಿಟ್ಟನಱಿಾತಿರ್ಪನ್ನೈ । ಗುಹ್ಯಕ್ಕೆ ಗುಹ್ಯಮಂ
ಗುಹ್ಯತಮ ಗುಹೇಶ್ವರ.

1292

ಹಂದಿ ಕುಂಜರನಂಜಿ । ಮಂದಿ ಮೂವರುಮೊರ್ವ
ಸಂದ ಸಂಗದಿ ತೊಡಕು ಸಂಗವೀಡಾಡಲಾ-
ನಂದ ಬಿಂದುವಿನದಹುದದುವೆ ಬೆಟ್ಟದ ಪಾಂಗು
ಬಂದುದೈ ಗುಹ್ಯೇಶ್ವರ.

1293

ಕೋಟಿಯೊಂದಕೆ ಸಲ್ಲದೊಂದು ಕೋಟಗೆ ಮಿಗಿಲು
ನೋಟಕರ ಸಾಫಲ್ಯಮಕ್ಕುದಲೆ ನಿಜಸಂಗ
ಬೂಟಕದ ಸಂಗ ಬಿಡು ನಿನ್ನೊಳಿರುತಿರೆ ಮಣಿಯು ಖೇಟಗತಿ
ಗುಹ್ಯೇಶ್ವರ

1294

ಶಾಂಭವವಿಶಿಷ್ಟದದ್ವೈತದೊಳಗಿಹುದೆಲ್ಲ
ಶಾಂಭವಿಯ ಚಿದಚಿದ್ವಿಕಾರ ವೈಶಿಷ್ಟ್ಯಹರ
ವೇಂ ಭವಿಗಳದ ಬಲ್ಲರೇ ಗುಹ್ಯ ಗುಹ್ಯತರ ಗುಹ್ಯತಮ ಗುಹ್ಯೇಶ್ವರ.

1295

ರಾಗ : ರಾಮಕ್ರೀ

ನುಡಿಯಲಾಗದಿನ್ನು ನುಡಿಯಲಾಗದಿನ್ನು
ನುಡಿಯಲಾಗದಿನ್ನು ಜಡಮರ್ತ್ಯರೊಡನೆ ॥ ಪಲ್ಲವಿ ॥

ಗಗನಾಕಾ[1]ರದ[1] ಮಂಟಪದೊಳಗೆ
ಹೊಗಲುಪಾಯವಿಲ್ಲೆಂದುದು ಘನ ।
ಕಂಗಳ ಲಿಂಗ ಕರಸ್ಥಲ ಜಂಗಮ
ಬಂದ ಸಂಬಂಧವನಱಿಾಯರಾಗಿ ॥ ೧ ॥

ಆದಿಲಿಂಗವೆಂಬುದು ಬೇಱಿಾಲ್ಲ ಕಾಣೆ[2]ರೊ[2]
ವಂಗಡದೆಗೆದು ನೀವು ನುಡಿವಿರಿ ಭೋ
ವಂಗಡದೆಗೆದು ನುಡಿವರಿಗೊಂದೇ ಲೋಕವಿತ್ತು
ಮುಂದಿರ್ದ ಘನವ [3]ನೀವಱಿಾಯಿರಿ ಭೋ[3] ॥ ೨ ॥

---

1. ರ (ಐ) 2. ಭೋ (ಐ) 3. ನಱಿಾಯಿರೆಲವೋ (ಐ)

ತಲೆಯೊಳಗೆ ನಾಲಗೆಯ ಹಡೆದಿವೆಂದು
ಹಲವು ಪರಿಯಲಿ [1]ನೀವು ಗಳಹದಿರಿ[1] ಭೋ ।
ಅನ್ನಪಾನದ ಹಂಗು ಬೆನ್ನಿಂದ ಬಿಡದು
ಇನ್ನು ಸಂಸಾರಿ ನಿನಗನುಭಾವ[2]ವೇ[2] ॥ ೩ ॥

ವಿದ್ಯಾಬುದ್ಧಿ ಪರಸಂಬಂಧದ ಮೇಲೆ
ಹೊದ್ದುವುದಹಂಕಾರ ಘನವಾಗಿ ।
ವಿದ್ಯದಿ ತಾವು ಬಲ್ಲಿದರೆಂ[3]ದೆಂ[3]ಬರು
ಸತ್ತರು [4]ಹಿರಿಯರು ಹಿರಿಯರು[4] ಹಲಬರು ॥ ೪ ॥

[5]ಕಂಗಳ[5] ಲಿಂಗ ಕರಸ್ಥಲ ಜಂಗಮ
ಇಂತೆಂದುದು ಲಿಂಗಸಂಬಂಧವು ।
ಇದನೊಲ್ಲೆನೆಂಬವರಾವ ಲೋಕಕ್ಕೆ
ಹೋದರೇನು [6]ವಾಯ ವಾಯ[6] ಗುಹೇಶ್ವರ ॥ ೫ ॥

1296

ರಾಗ : ಮಾಳವ[7]ಗೌಳ[7]

ಕರ್ಮಕಾಯನುಮಲ್ಲ ಬ್ರಹ್ಮ ಮೂರುತಿಯಲ್ಲ
ಪರಬ್ರಹ್ಮವ ನುಡಿವಲ್ಲಿ [8]ತಾನಿಲ್ಲ[8] ನಿರ್ಮೋಹಿ ॥ ಪಲ್ಲವಿ ॥

ಮಾತೆಪಿತರುಗಳು[9]ದರಜಾತಜನಿತನುಮಲ್ಲ[9]
ಶ್ವೇತ ಪೀತ ಕಪೋತ ಷಡುವರ್ಣರಹಿತ।
ನವಮಾಸ ತುಂಬಿದ ಮೂರುತಿ ತಾನಲ್ಲ
ಅವಿರಳಲಿಂಗದ ಕಳೆಯ ಬೆಳಗು ತಾ ಶರಣ ॥ ೧ ॥

ನಡೆ ಕಲಿವಲ್ಲಿ ನೋಡಿಳೆಯ ಹಂಗಿಗನಲ್ಲ ನುಡಿಯ
ಸಡಗರದ[10]ಲಾದ[10] ಬಿಂದು ತಾನಲ್ಲ।
ಪದುಮ ಪರಿಮಳಕೆಱಗುವ ಭ್ರಮರ ತಾನಲ್ಲ
ಭವದ ಕುಳವನು ಗೆಲಿದ ನಿಭ್ರಾಂತ ಶರಣ ॥ ೨ ॥

---

1. ಗಳಹದಿರಿ (ಐ) 2. ವೈ (ಐ) 3. × (ಎ) 4. ಹಿರಿಯರು (ಐ) 5. ಕಂಗಳು (ಐ) 6. ವಾಯು ವಾಯು (ಎ). 7. ಬಹುಳಿ (ಶೂ) 8. ತಾ ನಿಲ್ಲದ (ಐ ಐ) 9. ದರದ ಜಾತಾ ಜನಿತನುವಲ್ಲ (ಐ) 10. ನಾಧ (ಐ)

ಜಾಗ್ರತ್ ಸ್ವಪ್ನ ಸುಷುಪ್ತಿಯಾ[1]ಗುವ[1] ನಿಮಿಷನಲ್ಲ
ಆಗಮುಕುಳದ [2]ವಾದ[2]ಭೋಗಿ ತಾನಲ್ಲ |
ತೇಜ[3]ಸ್[3]ರಂಜನೆಯ ಗುಣಿ[4]ತಾ[4]ಗುಣಿತನುಮಲ್ಲ
ಸಾಜ ನಿತ್ಯನು ತಾನಭೇದ್ಯ ಶರಣ || ೩ ||

ಬಿಂದು ಕಳೆಯ ಸುಖದ ಶಯನಸಂಪರ್ಕನಲ್ಲ
ಒಂದು [5]ಭಂ[5]ದದಲಿ ಕಂದಮೂಲ[6]ವನು[6] ಗೆಲಿದ |
ಸಂದಳಿ[7]ದು ಸ[7]ಯಸುಖವನೊಂದು ಮಾಡಿ ತ್ರಿ-
ಬಂಧಭೇದವ ಗೆಲಿದ [8]ನಿಷ್ಕಾಮಿ[8] ಶರಣ || ೪ ||

[9]ಚಂದ್ರಧಾರನುಮಲ್ಲ ಚಂದ್ರ[9]ಪೂರಿತನುಮಲ್ಲ
ಇಂದ್ರಚಾಪದ ಪರಿಯ ಪ್ರಭಾವ ತಾನಲ್ಲ |
ಭೃಂಗ ನುಂಗಿದ ರುಚಿಯನೊಂದು ಮಾಡಿ ಗುಹೇಶ್ವರ
ಲಿಂಗದ ಹಂಗನಳಿದ ಶರಣ || ೫ ||

## 1297

### ರಾಗ : ಮಧುಮಾಧವಿ

ನುಡಿಯ ಗಡಣದ ಬೆಳಗು ಮರುತ ಪರಿಮಳದಂತೆ
ಭಾವವಿಲ್ಲದ ಬಯಲು ಪರವು ತಾನೆ |
[10]ಅಱುಹು[10] ಕುಱುಹಿನ ಮಱಹು ತೆಱಹಿಲ್ಲದಾ ಘನವು
ನಿಂದ ನಿಜಪದದಿಂದ ಪ್ರಭೆಯಾ[11]ಯಿತು[11] || ಪಲ್ಲವಿ ||

ಎಳೆಯ ಮಾಣಿಕದಂತೆ ಹೊಳೆವ ಜ್ಞಾನದ ಜ್ಯೋತಿ
ನವನಾಳದಲಿ ಪ್ರಾಣಲಿಂಗಭರಿತ |
ಪಿಂಡ ಬ್ರಹ್ಮಾಂಡವನು ಮೀಱಿ ತೋಱುವ ವಚನ
ಗಗನದುದಯದ ಮೇಲೆ ಘನಕೆ ಗಮನ || ೧ ||

---

1. ಗು (ಶೂ) 2. ಲಾದ (ಐಶೂ) 3. ಸಾ (ಐ) ನಿ (ಐ) 4. ತ (ಐಶೂ) 5. ಚಂ (ಐಶೂ) 6. ವ (ಐಶೂ) 7. ದಸ್ವ (ಶೂ) ದು ಸ್ವ (ಐ) 8. ನಿಃಕಾಮಿ (ಐ) 9. ಚಂದ್ರಾಧಾರನುವಲ್ಲ ಚಂದ್ರಾ (ಐ) ಚಂದ್ರಧರನೂ ಅಲ್ಲ ಚಂದ್ರ (ಶೂ) 10. ಅಱಿವು (ಐಶೂ), 11. ದುದು (ಶೂ)

ಆಕಾಶದಿಂದತ್ತಲಾರು ಬಲ್ಲವರಿಲ್ಲ
ಪಾತಾಳದ [1]ಪ್ರಮಾಣ ಕಾಂಬರಾರು[1] ।
ಆತುಮನವಿಡಿದು ಪರಮಾತುಮನ ಪರಿಭಾವ
ನೋಡ ನೋಡಾ ನೋಡ ಘನಕೆ ಗಮನ ॥ ೨ ॥

ಇರುಳು ಮನವನೆ ನುಂಗಿ ಹಗಲು ಘನವನೆ ನುಂಗಿ
ಮಾತು ಮಥನವ ನುಂಗಿದಾತ ಭರಿತ ।
ನೀತಿ ನಿಜ ನಿಂದಲ್ಲಿ ನಿಜದ ನಿರ್ಮಲಜ್ಯೋತಿ
ಪ್ರಾಣಲಿಂಗದ ಘನಕೆ ಪ್ರಮಾಣಿಲ್ಲವೋ ॥ ೩ ॥

ಆಱು ದರುಶನದೊಡಯನಂತರಂಗದೊಳಿಪ್ಪ
ಆರಿಗಾದಡೆ ಗಗನಭುವನ ಒಂದೆ ।
ಹೃದಯಕಮಲದ ಬೆಳಗು ಪರಬ್ರಹ್ಮದಲಿ ತುಂಬಿ
ಪರಿಣಾಮ [2]ಪರಮ[2] ಪದವಿಯ ತೋಱಿತು ॥ ೪ ॥

ಧರೆಗೆ ನಿದ್ರೆಯು ಇಲ್ಲ ಉದಕಕ್ಕೆ ಕನಸಿಲ್ಲ
ಅಗ್ನಿ ಕಳವಳ[3]ಕೆ ಒ[3]ಳಗಾಗದೆಂತೊ ।
ಸುಳಿವ ಪವನನು ತಾನು ತಾಮಸಕ್ಕೊಳಗಾಗ
ಬಯಲಿಂಗೆ ಭ್ರಮೆಯುಂಟೆ ಗುಹೇಶ್ವರ ॥ ೫ ॥

1298

[4]ರಾಗ[4]

ಸಾಧ್ಯಾಸಾಧ್ಯಗಳಿಗತೀತ
ವಾದಜ್ಯೋತಿ ನಿರವಯ ॥ ಪಲ್ಲವಿ ॥

ಏನನೊಂದು ಹವಣಿಸುವಡೆ । ತಾನೆ ಸಹಜ ಘನತರ
ಭಾನುಕೋಟಿಕಳೆಗಳೆಂಬ । ವೇನು ನಿಲುಕದನುಪಮ ॥ ೧ ॥

ಸಚರವಚರ [5]ಶೂನ್ಯಾಶೂನ್ಯ[5] । ನಿಚಯವಿಲ್ಲದಂದಿನ
ಅಚಲವಪ್ಪ ಮಹಾಘನದ । ರುಚಿರದೂರ್ಧ್ವನಿರಾಳ ॥ ೨ ॥

ಜಪಸಮಾಧಿ ಹೋಮನೇಮ । ದುಪಮೆಗಳಿಗತೀತನು
ನಿಷ್ಪತಿನಿರಂಜನ ಸೂಕ್ಷ್ಮ । ದಪರಿಮಿತನಕಲ್ಪಿತ ॥ ೩ ॥

---

1. ಪ್ರಮಾಣ ಕಾಬರಾರೋ (ಐ) ಪ್ರಮಾಣ ಕಾಂಬರಾರೋ (ಶೂ) 2. ಪರ (ಐ) 3. ಕೊ (ಐ) 4. ("ಐ" ಪ್ರತಿಯು ಈ ಸ್ಥಳದಲ್ಲಿ ಹರಿದಿದೆ) 5. ಶೂನ್ಯ (ಐ)

ಅಲ್ಲಿಗಲ್ಲಿಗೆ ಕಾಯಜೀವ | ವೆಲ್ಲರಳಿವಿನುಳಿವಿನ
ಸೊಲ್ಲಿನೊಳಗು ಹೊಱಗಣಾತ್ಮ | ದಂಗಸಂಗರಹಿತನು ‖ ೪ ‖

ಅಣಿಮಾದಿ [1]ಗುಣರಹಿತ[1] | ನನುಪಮಿತನಗೋಚರ
ಘನಕೆ ಘನಾನಂದಪ್ರಭೆಯ | ಚಿನುಮಯಾದಿನಿರಾಳ ‖ ೫ ‖

ಹಲವು ಶಬ್ದಕಿಂಬುಗೊಡದ | ಸುಳುಹು ಸೂಕ್ಷ್ಮದೊಳಗಣ
ಬೆಳಗಿ ನಿಂದ ನಿಜದ ನಿಲವ | ಸ್ಥಲವ ತೋಱಿ ಬಪ್ಪುದೆ ‖ ೬ ‖

ಬೆಳಗಿನೊಳಗೆ ತೊಳಗಿ ಬೆಳಗಿ | ಹೊಳೆವ ಜ್ಯೋತಿ ಕಾಂತಿಯ
ಬೆಳಗು ಗುಹೇಶ್ವರನ ಘನದ | ತಿಳಿವು ಲಿಂಗನಿಜಪದ ‖ ೭ ‖

## 1299

### ರಾಗ : ದೇಶಾಕ್ಷಿ

ಪರಮಾನಂದಲೀಲೆಯಲಿ ಪರಮಗುರುಪದವನಱಿದನು
ಪರಮಸುಖದೊಳಗೋಲಾಡುವ ಪರಂಜ್ಯೋತಿ ಪರಾಪರನು ‖ ಪಲ್ಲವಿ ‖

ನಿತ್ಯನಿರಂಜನ ತಾನೆಂದಱಿದನು
ಉತ್ತಮ ಸುಜ್ಞಾನದ ಜ್ಯೋತಿಯ ಬೆಳಗಿನ
ಚಿತ್ತದ ಪ್ರಾಣಲಿಂಗದ ಘನದಲಿ ಸತ್ಯಸ್ವರೂಪನಾದ |
ಸುತ್ತಿದ ಅಷ್ಟಮದಂಗಳನೆಲ್ಲವ
ತತ್ತಱದಱಿದನು ತನುಗಣಂಗಳ
ತತ್ತ [2]ಸ್ಥಾನಂಗಳಲ್ಲಿ ಸು[2]ಸ್ಥಿರನಾದನು ಆತುಮಧ್ಯಾನದಿಂದ ಶರಣ ‖ ೧ ‖

ಒಳಗೆ ಮಾಣಿಕ್ಯದ ಮಣಿಮಂಟಪವ ನೋಡಿ
ಬೆಳಗಿನ ಕದಳಿಯ ಬನದೊಳಗಾಡುವ
ದಳಗಳನೆಲ್ಲವ ನಿಲಿಸಿ ಸ್ಥೂಲಕ್ಕೆ ಸ್ಥೂಲ ಪ್ರಳಯವಿರಹಿತನಾದ |
ಮೇಳವಿಸಿದ ತನ್ನ [3]ಸಕಲ ಸದ್ಗುಣ ಗಣಂ[3]–
ಗಳ ಎಣಿಕೆಯ [4]ಗುಣಿತಕ್ಕೆ ಅಗಣಿತ[4]
[5]ಸುಳುಹಿನ ಕಮಳದ ಪರಿಮಳನಿಳಯನು ಸುಯ್ಧಾನಿಯಾದ [5]ಶರಣ ‖ ೨ ‖

1. ಗುಣಾದಿರಹಿತ (ಐ) 2. ಸ್ಥಾನದಲಿ ಸ್ವ (ಐ) 3. ಸಕಳಗುಣಂ–(ಐ) 4. ಗುಣಕ್ಕಗಣಿತ (ಐ) 5. ನಾದನು ಗುಣಕಮಳಕುಸುಮ ಪರಿಮಳನಿಳಯನು ಸುಳುಹು ಸುಯ್ಧಾನಿ ಮಹಿಮ (ಐ)

ಒಪ್ಪುವ ಸಮಸ್ತಲೋಕವಿಖ್ಯಾತನು
ಅಪ್ರತಿ[1]ಮ[1] ಮಹಿಮನು ಪ್ರಣವ[2]ಸ್ವ[2]ರೂಪನು
ಒಪ್ಪುವ [3]ಪಾಪವ[3] ವಿವರಿಸಿ ಕಳೆದನು ಬೀಜ[4]ದೊಳಡಗಿದ ವೃಕ್ಷದಂತೆ[4] |
ಅಪಾರವ್ಯಾಪಾರ ಪರಮನಿರಾಕಾರ
ಉಪಮಾತೀತನು ವಿಪರೀತಚರಿತನು
ಗುಪಿತಪ್ರಕಾಶನು ರೂ[5]ಪ[5]ನಿರೂಪನು ಕಾರಣಕರ್ತ[6]ನೈ[6] ಶರಣ ‖ ೩ ‖

ತನು[7]ಮನ[7] ಗಮನಾಗಮನದಿಂದನುಭಾವಭರಿತನು
ಅನಾಥನಾಥನು ಅಕಳಂಕಚರಿತನು
[8]ನಿ[8]ರ್ನಾಮ ನಿಸ್ಸೀಮ ಜ್ಞಾ[9]ನಿ[9] ಸುಜ್ಞಾನ ಭುವನಾದಿವಂದಿತನು |
ಉನ್ನತ ಪರಶಿವಯೋಗ ಭೋಗದಿಂದ
ತನ್ನ ತಾನೆ ಕಂಡು ಅಸಮಾಕ್ಷನಾದನು
ಅನುಪಮ ಬೆಳಗಿನ [10]ಆದಿಯಾನಂದನು ಮನಕೆ ಮನೋಹರನು[10] ಶರಣ ‖೪‖

ಅಮೃತಗಿರಿಯ ಮೇಲೆ ಅಮರಸಮೂಹ[11]ವು[11]
[12]ಸುಮ[12]ನಾಗಮನದ ಸಕಲ ಸನ್ನಿಹಿತನು
ಸಮ್ಯಜ್ಞಾನದಲ್ಲಿ ಸ್ವತಂತ್ರ ಮಹಿಮನು ಸಮಸ್ತ ವಿಸ್ತಾರದ[13]ಲ್ಲಿ[13] |
ನಿರ್ಮಳನಿರುಪಮ ಪ್ರಮಥಗಣತಿಂಥಿಣಿಯ
ವಿಮಳಹೃದಯ ಕಮಳ ವಿಳಾಸಪುರನಿಳಯ
[14]ಬ್ರಹ್ಮಾಂಡ[14] ಕೋಟಿಯ ಮೀಱಿ ನಿಂದನುಭಾವ ಗುಹೇಶ್ವರನಂತೆ
ತಾನಾದ ಶರಣ ‖ ೫ ‖

## 1300

### ರಾಗ : [15]ಗೌಳ[15]

[16]ಘನದ ಘನತೆ[16] ಇನ್ನಾರಿಗೆ ವೇದ್ಯವಾಗದು
ಬ್ರಹ್ಮವ ಹೇಳುವಡೆ ನಿರ್ಮಾಲ್ಯವಾದುದು ‖ ಪಲ್ಲವಿ ‖

---

1. × (ಐ) 2. ಕ್ಕೆ(ಐ) 3. ಪಾಪಕರ್ಮಂಗಳ (ಐ) 4. ದೊಳಗಡಗಿದ ವೃಕ್ಷಂಬೋಲ್ (ಐ) 5. ಪಂ (ಐ) 6. ನಯ್ಯ (ಐ) 7. ×(ಐ) 8. ಅನಿ (ಐ) 9. ನ (ಐ) 10. ಆದಿಯನಾದನು ಮನಕ್ಕೆ ಮನೋಹರನಾದ (ಐ) 11. × (ಐ) 12. ಸೋಮ (ಐ) 13. ಲಿ. (ಐ) 14. ಬೊಮ್ಮಾಂಡ (ಐ) 15. ಕನ್ನಡ ಗೌಳ (ಐ) 16. ಘನಾಘನತೆಯಿಂ (ಐ)

ಚತುರ್ಮುಖ ನಾಲ್ಕು ವೇದ ಲಿಂಗ
ತಮ್ಮ[1]ತ್ತ[1]ಲಿಲ್ಲೆಂದಱಿಯರು ।
ತಮ್ಮದೊಂದುದ್ರೇಕದಿಂದ
ತಮ್ಮ ತಾವು ಲಯವಾದರು ॥ ೧ ॥

ಅಱಿದೆನೆಂಬವನಱಿವೆಯ ಹೊದ್ದನು
ಕುಱುಹಿನ ಸಂಸಾರಿಯಾಗಿ ।
ಪಂಚೇಂದ್ರಿಯಂಗಳ ಸಂಚವನಱಿಯದೆ
ಕಾಲಕರ್ಮ [2]ಪ್ರಳಯಕ್ಕೊಳಗಾದರು[2] ॥ ೨ ॥

ಅಂಡಜ ಉದ್ಭಿಜ ತಾರಾಮಂಡಲ-
ದೊಳಗೊಂದು ನಾದವ ಕಂಡೆನು ।
ಅಖಂಡಿತ ನಿರ್ಣಯವಱಿಯದ [3]ಲೋಕದ[3]
[3]ಮರುಳು[3] ಮಾನವರೆತ್ತ ಬಲ್ಲರು ? ॥ ೩ ॥

ಉದಯಾಸ್ತಮಾನದ ನಡುವೆ ಒಂದು
ತ್ರಿಜಗವೆಂಬ [4]ಹುಳು[4] ಹುಟ್ಟಿತ್ತಲ್ಲಾ ।
ಅದ ಕಡಿದು ಸುಡುವದೊಂದು ಕಾರಣವ
[5]ಜಡಜೀವಿಗಳೆತ್ತ[5] ಬಲ್ಲರು ॥ ೪ ॥

ಸರ್ವಜೀವದಯಾಪರನೊಬ್ಬ ಗಣೇಶ್ವರನು
ಸರ್ವ[6]ಜೀವ[6]ಪ್ರಳಯ[7]ಕ[7]ನವನೊಬ್ಬನು ।
ಇವರಿಬ್ಬರ ತಪ್ಪಿಸಿ ಪೂಜಿಸಬಲ್ಲಡೆ
ಪೂಜೆಯ ಕೈಕೊಂಬ ಗುಹೇಶ್ವರ ॥ ೫ ॥

## 1301

ರಾಗ : ದೇ[8]ಶಿ[8]

ಮಂಗಳ ಮಂಗಳ ಶ್ರೀ ಗುಹೇಶ್ವರನ
ಶರಣಲಿಂಗೈಕ್ಯಂಗೆ ಮಂಗಳಂ ॥ ಪಲ್ಲವಿ ॥

---

1. ತ್ರತ್ತ (ಐ) 2. ಲಯಕ್ಕಾದರೂ (ಏ) 3. × (ಏ) 4. ಹುಳುವು (ಏ) 5. ಜಡಜೀವಿಗಳವರೆತ್ತ (ಐ) 6. ಜನ (ಏ) 7. ಕರ (ಏ) 8. ಸಿ (ಐ).

ಜಗ[1]ವೆಲ್ಲವ[1]ನೂರ ಮಾಡಿ [2]ಊರೆಲ್ಲವ[2] ಮನೆಯ ಮಾಡಿ
[3]ಹೊಗ[3] ದೆಸೆಯಿಲ್ಲದ ಸುಳುಹು ನೋಡಾ ।
ಸುಳುಹಿನ ಭೇದವನಱಿಯದ ಕಾರಣ ದೇವಲೋಕ ಮರ್ತ್ಯ
ಲೋಕವೆಲ್ಲ ಭ್ರಮೆಗೊಂಡಿತ್ತಲ್ಲಾ ॥ ೧ ॥

ಎಂಬತ್ತುನಾಲ್ಕು ಲಕ್ಷ ಯೋನಿಮುಖಜೀವಿಗಳಿಗೆ
ಎಂಬತ್ತುನಾಲ್ಕು [4]ಲಕ್ಷಾರಾಧನೆ[4] ।
[5]ಒಂದೊಂದಱಾರಾಧನೆಯ[5]ನೊಂದೊಂದಱಿಯದೆ ಗೊಂದಣಗೊಂಡು
[6]ನಿಂದಲ್ಲಿ ನಿಲಲೀಯದೆ ಬಱಿದೆ[6] ಲಯ[7]ವಾದುದೆಲ್ಲ[7] ॥ ೨ ॥

ಭಕುತಿಯುಕುತಿಯನಱಿ[A]ಯ[A] ಷೋಡಶೋಪಚಾರ[8]ವ[8]ಱಿ[A]ಯ[A]
ಭಾವಸಂಕಲ್ಪವಿಕಲ್ಪವನಱಿ[A]ಯ[A] ।
ನಾಮಸೀಮೆ[9]ಗಳನೆಲ್ಲ[9] ನೇಮಿಸಿ ಕಳೆದಂಗೆ
ಆವ ಲೋಕ ಕಂಪಿತ[10]ವಾತಂಗೆ[10] ॥ ೩ ॥

ಕುಲವಳಿದು ಛಲವಳಿದು ಬಲುಹಳಿದು ನಿಲಲು ಸೂತ್ರದ
ಜಂತ್ರ[11]ದವಳಿಯೊಲು[11] ಫಲಸಿದ್ಧಿ
ಎನಿಸಿ ನಿಷ್ಫಲಸಿದ್ಧಿ[12]ಯನೆ[12] ಬಿಟ್ಟು
ಭಕ್ತ್ಯಂಗನೆಯ ಮರ್ತ್ಯಕ್ಕೆ [13]ತಂದಿತ್ತವಂಗೆ[13] ॥ ೪ ॥

ಮಧ್ಯಸ್ಥಾನದ ಲೋಕಕೆ ಹೋಗಿ
ಮಱುವಾಳನಱಿಯದ ಪರಿಯ ನೋಡಿರೇ ।
ತನುರುಚಿಯನೆ ಮಱೆದು ಘನರುಚಿಯನಱಿ[14]ದೆನ್ನ[14]
ತನ್ನಂತೆ ಮಾಡಿದ ಗುಹೇಶ್ವರಲಿಂಗ ॥ ೫ ॥

## 1302

### ರಾಗ : ಮಾಳವಗೌಳ

ದೇಹ[15]ದೊಳು[15] ಚರಿಸುವಂತರ್ದೇಹಿಯಂತರಿಯಾಮಿ ಸ್ವಪ್ನದ
ಗ್ರಾಹಕತೆಯಂತಂಬುಜದ ಪರಿ ಮುಟ್ಟಿ ಮುಟ್ಟದಿಹ ॥ ಪಲ್ಲವಿ ॥

---

1. ವನೆಲ್ಲ (ಐ) 2. ಊರನೆಲ್ಲವ (ಐ) 3. ಹೋಗ (ಐ) 4. ಲಕ್ಷ ಆರಾಧನೆ (ಐ) ಲಕ್ಷಾರಾಧನೆಯನೊಂ (ಐ) 5. × (ಐ) 6. × (ಐ) 7. ವಾದವೆಲ್ಲಾ (ಐ) A ಯೆ (ಶೂ) 8. ವನ (ಐ) 9. ಗಳೆಲ್ಲವ (ಐ) 10. ವಾದುದಾತಂಗೆ (ಐ) 11. ವಳಿಯಲು (ಐ) 12. ಯೆನೆ (ಐ) 13. ತಂದಂಗೆ (ಐ) 14. ದನ (ಶೂ) 15. ದಳದೊಳು (ಐ).

ಹಂಸ [1]ಪವನದಳದಳಂಗಳೊ। ಳಂಸಿಕಗಳೊಡಗೂಡಿ[1] ಆತ್ಮನೊ
ಳಂ ಸಮಾಹಿತವಾಗಿ ತೊಳಗುವ ಜ್ಯೋತಿರೂಪಕವು |
ಸಂಶಯದ ಸಂಸಾರ ಕಾಯ[2]ದೊ | ಳಂ[2]ಸಿಲುಕಿ ಮಹಾಭೂತಗೂಡಿರ್ದು
ಸಹಜ ಬೇಱಾಗಿ ಸಚರಾಚರವ ಚರಿಸು[3]ತ್ತಿ[3]ಹ || ೧ ||

ನೇತ್ರ ಸೂತ್ರಗಳಂತೆ ದೃಶ್ಯದ | ಭ್ರಾಂತು ತನ್ನೊಳಡಗಿ
[4]ಶ್ರೋತ್ರ[4] ಸೂತ್ರದಂತಿರೆ ಶಬ್ದಗ್ರಾಹಿಸಿ ಘ್ರಾಣವಾಸನೆಯ |
ಸೂತ್ರದಂತಿರೆ ಜಿಹ್ವೆ ರುಚಿಗಳ | ಸೂತ್ರವಿಡಿದ[5]ದಂತರಂಗ[5] ಸೋಂಕಿನ
[6]ಸೂತ್ರವೆಂತಂತರಾತ್ಮನು[6] ಬೆರಸಿ ಬೆರಸದಿಹ || ೨ ||

ಪಶು ಪಶುವಿನಂತಿಹುದು ತಾನಾ | ಪಶುವಿನೊಳಗಣ ಅಮೃತದಂತಿಹ
ವಿಷಯ ವಿಷಯ[7]ಗಳಾಗಿಹವು[7] ತಾನಾ ವಿಷಯದೊಳಗೆಲ್ಲ |
[8]ವಸಿಸಿ[8]ಕೊಂಡಿಹ ಜ್ಞಾನದಂತಿಹ | ವಸುಧಾಜಾತದ [9]ಫಲಫಲಾಂತರ[9]
ದೆಸಕ ರುಚಿಯಂತಂತರಾತ್ಮನು ಬೆರಸಿ ಬೇಱಹನು || ೩ ||

ಸ್ವಪ್ನಸೂತ್ರವದೆ [10]ಹಾಂಗೆ[10] ಗಗನದೊ | ಳಿಪ್ಪ ರವಿಶಶಿಕಿರಣ ಸೂತ್ರಗ
ಳಪ್ಪುಗೆಗ[11]ಳಿಂ[11]ತಂತೆ ವಾರಿಧಿಜಠರಕುಹರದೊ[12]ಳು |
ಇಪ್ಪ[12]ಶಿಖಿಯಂತಖಿಳವನು ಗ್ರಹಿ | ಸಿಪ್ಪ ದೃಷ್ಟಿಯ ಸೂತ್ರವೆಂತಂ
ತಿಪ್ಪ ಜಗದಂತರಿಯಾತ್ಮಕವಪ್ಪ ರೂಪು ರೂಪಾಗಿ || ೪ ||

[A]ತಾನೆ ಜಗ ತಾನೆ ಮಹಾಗಮ | ತಾನೆ ವಿಧಿ ತಾನೆ ಮಹಾಕ್ರೀ
ತಾನೆಯಾಗಿಯು ತಾನೆಯಲ್ಲ[13]ದೆ[13] [14]ತಾನವಱ ದೆಸೆಯ |
ನೂನ[14] ಜನನಸ್ಥಿತಿ[B]ಮರಣ[B] ಸಂ | ಧಾನಗಳನನುಕರಿಸ ಮನನ
ಜ್ಞಾನದಂತರ್ಜ್ಯೋತಿರಾತ್ಮ ಗುಹೇಶ್ವರನ ಶರಣ[A] || ೫ ||

---

1. ಪವನರು ದಳಾದಳಂಗಳೊಳಂಸಿಕದೊಳೊಡಗೂಡಿ (ಐ) 2. ದೊಳು (ಐ) 3. ತಿ (ಐ) 4. ಶ್ರೋತದ (ಐ) 5. ದಂತಂಗ (ಐ) 6. ಸೂತ್ರವೆಂತಂತರಾತ್ಮನು (ಐ) 7. ಗಳೊಗಳಗಿಹವು (ಐ) 8. ವಚಿಸಿ (ಐ) 9. ಫಲಾಫಲಂತರ (ಐ) 10. ಹೇಗೆ (ಐ) 11. ಳಂ (ಐ) 12. ಳಿಪ್ಪ (ಐ) A (ಈ ಮುಂದಿನ ವಚನದೊಡನೆ ಹೋಲಿಸಿ ನೋಡಿ) "ಜಗ ಒಂದೆಸೆ, ತಾನೊಂದೆಸೆ; ಮತ್ತಾ ಜಗದೊಳಗೆ ತಾ, ತನ್ನೊಳಗೆ ಜಗ. ಆಗಮ ಒಂದೆಸೆ, ತಾನೊಂದೆಸೆ; ಮತ್ತಾ ಆಗಮದೊಳಗೆ ತಾ, ತನ್ನೊಳಗೆ ಆಗಮ. ವಿಧಿಯೊಂದೆಸೆ, ತಾನೊಂದೆಸೆ; ಮತ್ತಾ ವಿಧಿಯೊಳಗೆ ತಾ, ತನ್ನೊಳಗೆ ವಿಧಿ. ಕ್ರೀಯೊಂದೆಸೆ, ತಾನೊಂದೆಸೆ; ಮತ್ತಾ ಕ್ರೀಯೊಳಗೆ ತಾ, ತನ್ನೊಳಗೆ ಕ್ರೀ. ಇಂತೀ ತ್ರಿಜಗ, ಆಗಮ, ವಿಧಿ, ಕ್ರೀ ನಿಷೇಧವಾಗಿ, ಹೊದ್ದಿಯೂ ಹೊದ್ದನು ನೀರು ತಾವರೆಯಂತೆ ಉರಿಲಿಂಗಪೆದ್ದಿಪ್ರಿಯ ವಿಶ್ವೇಶ್ವರ." 13. ದ (ಐ) 14. ತಾನೆ ವರದೆಶೆಯ (ಐ) Bಮರಣದನು (ಐ)

## 1303

### ರಾಗ : [1]ಭೌಳಿ[1]

ದೇಹಗುಣಗಳಳಿದು [2]ಲಿಂಗ । ದೇಹಿ[2]ಯಾದ ಶರಣನು
ಬಾಹಿರಂಗದ ಬಳಕೆ ಮಾಯಾ । ಮೋಹವನ್ನು [3]ಜಱಿದನು[3] ॥ಪಲ್ಲವಿ॥

ಭಾವ ಬ್ರಹ್ಮವಾದ ಯತಿಗೆ ಇ । ನ್ನಾವ ವೇಷವೇತಕೋ ?
ದೇಹ ಲಿಂಗವಾದ ಬಳಿಕಿ । ನ್ನಾವ ಪದಗಳೇತಕೋ ॥ ೧ ॥

ಮಲವ ತೊಳೆಯಲಱಿಯದಮಳ । ಜಲಧಿ ತೊಳೆವೆನೆಂಬೆಯೋ ?
ಒಳಗೆ ಹೊಱಗೆ ಲಿಂಗವಿರಲು । ತೊಳಲಿ ಬಳಲಲೇತಕೋ ? ॥ ೨ ॥

ಮುತ್ತು ರತ್ನ [4]ಸಿತಕೆ[4] ಘೃತಕೆ । ಮತ್ತೆ ಪೂರ್ವಕ್ರೀಗಳುಂಟೆ ?
ನಿತ್ಯ [5]ಮೂರ್ತಿ[5] ಶರಣಗುಂಟೆ । ಮತ್ತೆ ಪೂರ್ವಚರಿತವು ? ॥ ೩ ॥

ಬ್ರಹ್ಮ ವಿಷ್ಣು ರುದ್ರ ಪದದ । [6]ಪೆರ್ಮೆಗಳಿಗೆ ಎಣಿಸದ[6]
ನಿರ್ಮಳದ ಲಿಂಗದಲ್ಲಿ । ಸಂಬಂಧಿಸಿದ ಶರಣನು ॥ ೪ ॥

ಅಪ್ರತಿಮನಗಮ್ಯದಲ್ಲಿ । [7]ನಿಃಪತಿ[7]ಯನೆಯ್ದಿದ
ಅಪ್ರಮಾಣ [8]ಗು[8]ಹೇಶ್ವರನೊ । ಳಿಪ್ಪಗಮ್ಯ [9]ಶ[9]ರಣನು ॥ ೫ ॥

## 1304

### ರಾಗ : [10]ಧನ್ಯಾಸಿ[10]

ನಯನಂ [11]ಶಯನಂ[11] ಪರವಿಲ್ಲೆಂದುದಾಗಿ
ಜ್ಞಾನಂ ನಾನಾಭವ[12]ನೋಟಂ[12] ತಾನಲ್ಲ ॥ ಪಲ್ಲವಿ ॥

ಅಱಿವಿನ ಭಾವ ಪರತಂತ್ರವಿಲ್ಲದ [13]ನಿಷ್ಪತಿ[13]
ಮಱಹಿನ ಭಾವ ಪರತಂತ್ರವಿಲ್ಲದ [13]ನಿಷ್ಪತಿ[13] ॥ ೧ ॥

[14]ಅಕ್ಷಯದಿಂನಾ ದೈವಚರಿತಂಗೆ ಅಱಿವು ನೆಲಸಿದಗ್ರಾಹಿ
ಸಾಕ್ಷಯದಿಂನಾ ದೈವಚರಿತಂಗೆ ಮಱೆಉಱಿಸದ ನಿರ್ಣಯವು[14] ॥ ೨॥

---

1. ಬಹುಳಿ (ಐ) 2. ನಿರ್ದೇಹಿ (ಐ) 3. ಮಱಿದನು (ಐ) ಜಱಿದನು ನೋಡಾ (ಐ) 4. ಸಿರತ (ಐ) 5. ಮುಕ್ತ (ಶೂಐ) 6. ಪೇರ್ವೆಗಳನುವಾಗಿ (ಐ) 7. ನಿಷ್ಪತಿ (ಶೂಐ) 8. ಶ್ರೀ ಗು (ಐ) 9. ಶ್ರೀಶ (ಐ) 10. ಸಿಂಧುರಾಮಾಕ್ರೀ (ಐ) 11. ಸನಯನಂ (ಐ) 12. ನೋಟ (ಐ) 13. ನಿಷ್ಪತ್ತಿ (ಐ) 14. ಅಕ್ಷಯದಿಂದಱಿವು ನೆಲಸಿದ ಸುಚರಿತಂಗೆ । ಸಾಕ್ಷಯದಿಂದುರಿಸದ ನಿರ್ಣಯಚರಿತಂಗೆ (ಐ)

[1]ಅಗ್ನಿ ಸಖನ ಭ್ರಮರ ಬ್ರಹ್ಮರಂಧ್ರ ನಿಹಾರಪ್ರಾಣ
ಶ್ರೀ ಗುಹೇಶ್ವರಲಿಂಗ ಎನಲೆನ್ನ ಮನ ನಾಚಿತ್ತು[1] ॥ ೩ ॥

## 1305

### ರಾಗ : [2]ಭೌಳಿ[2]

ಸುಖಿಯಾದೆನೆಂಬ ಸುಖದ | [3]ಸುಕುತಿ[3]ಯಡಗಿ ನಿಂದ ನಿಲವು
[4]ಮುಕುತಿ[4]ಗತೀತವಾದದು ॥ ಪಲ್ಲವಿ ॥

ಗುರುಪ್ರಸಾದವ ಕೊಂಡು ಗುರುಶೇಷವೆಂದಱಿಯದೆ
ಉಳಿದ ಶೇಷದ ನಿಲವು ಪರ[5]ತತ್ವಮಂ ಮೀಱಿ[5] ನಿಂದುದು ॥ ೧ ॥

ಲಿಂಗಸುಖದಲ್ಲಿ ಮನವು ಸಂಗವನೈದಿ ನಿಂದುದು
ನಿಂದ ನಿಜದ ನಿಲವು ತನ್ನ ಸಂಬಂಧ[6]ವನ[6]ಱಿಯದು ॥ ೨ ॥

ಅನುಭಾವದಲ್ಲಿ ಪ್ರಾಣ ಲೀಯವಾಗಿ ಘನಸುಖವನಾಲಿಂಗಿಸಿ
ನೆನಹಳಿದುಳಿದ ಶೇಷದನುವನುಪಮಿಸಲರಿದು [7]ಕಂಡಯ್ಯ[7] ॥ ೩ ॥

ಅಱಿವು ವಿಡಿ[8]ದಾ[8] ಅಱಿವು [9]ಸುಖದ[9] ಸವಿಯೊಳು ಮೈ
ಮಱೆ[3]ದು ಭವಿಯಾಗಿ ನಿಂದ ಭವ [10]ವಿರಹಿತನ[10]ನೇನೆಂಬೆನು ॥ ೪ ॥

ಹಳಿವು [A]ಹೋರದ ತಿಳಿವಿನಲ್ಲಿ ಕಳೆ ಕಣ್ದೆಱೆ[3]ದು
ಉಳಿದ [11]ನಿಜದ[11] ಶೇಷ ಶ್ರೀ[A] ಗುಹೇಶ್ವರ ನಿಮ್ಮ ಬಸವಣ್ಣ ॥ ೫ ॥

## 1306

### [12]ರಾಗ : ಮಾಳವಗೌಳ[12]

ಗಗನದ ಗ[13]ವ್ಯದ[13] ನಿಲವನು ಒಂದು
ಮದಾಳಿ ನುಂಗಿತ್ತ ಕಂಡೆನು
ಕಾಲನೆಂಬ [14]ಜಾಲಗಾಱನ[14] ಘನ
[15]ಶರಧಿ[15] ನುಂಗಿ[16]ತ್ತ[16] ಕಂಡೆನು ॥ ಪಲ್ಲವಿ ॥

---

1. ಪವನದ ಭ್ರಮರ ಬ್ರಹ್ಮರಂಧ್ರ ನಿಹಾರಪ್ರಾಣ | ಗೊಹೇಶ್ವರ ಲಿಂಗವೆನೆ ನಾಚಿತ್ತು (ಐ) 2. ಗೌಳ (ಐ) 3. ಸಕತಿ (ಐ) 4. ಯುಕುತಿ (ಐ) 5. ತತ್ವಜಾರಿ (ಐ) 6. ವ (ಐ) 7. ಕಂಡ್ಯಾ (ಐ) 8. ದ (ಐ) 9. ಸುಖ (ಐ) 10. ಭವವಿರಹಿತನಾ (ಐ) A ಹೊಱಿದ ತಿಳಿನಲ್ಲಿ ಕಳೆದು ಕಣ್ಣ ಱಿದುಳಿದ ನಿಜದ ಶೇಷ (ಐ) 11. ನಿಜ (ಐ) 12. ಪದ : ರಾಗ (ಐ) 13. ವ್ಯ (ಐ) 14. ಜಾಲೆಗಾಱನ (ಐ) ಜಾಲಜಾಗರನ (ಐ) 15. ಸಾಗರ (ಐ) 16. ತ (ಐ)

ಜಂಬೂದ್ವೀಪದ ಹೃದಯದಲೊಂದು
ಸದಮದಗಜ ಹಯನಾಯಿತ್ತು
ಕುಂಭಿನಿಯುದರದ ಕಂದನ ನೊಸಲಲಿ
ಚಂದ್ರಲಿಖಿತವ ಕಂಡೆನು ॥ ೧ ॥

ಹದಿನಾಲ್ಕು ಭುವನ ದಿಗುವಳಯ ಒಂದು
ಹರಿಣಿಯ ನಖದೊಳಗಡಗಿತ್ತು
ಅರ್ಕನ ಕೃತಕದ [1]ಭಿತ್ತಿಯ[1] ಮೇಲಣ
ಚಿತ್ತಾರವಡಗಿತ್ತ ಕಂಡೆನು ॥ ೨ ॥

ತುಂಬಿಯನ್ಮೃತವ ಕಡೆವಲ್ಲಿ
ಅಂಗಜನತ್ತು[2]ದ[2] ಕಂಡೆನು
ಮೇರುಮಂದಿರದಂಗನೆಯ ಬಸಿಱಲ್ಲಿ
ನವಖಂಡ ಪಿಂಡವ ಕಂಡೆನು ॥ ೩ ॥

ಜಲದೊಳಗಣ ಕಿಚ್ಚು ಜಲವ [3]ಸುಟ್ಟುದ[3] ಕಂಡೆ
ಜಲ ಬೆಂದು ನೆಲನಿಧಿ ಉಳಿಯಿತ್ತು
ಅಜಕಪಾಲವ ಪಿಡಿದಿಹ ರುದ್ರನ
ಕರ ಬೆಂದು ಕಪಾಲ ಉಳಿಯಿತ್ತು ॥ ೪ ॥

ಅಳಿಯ ಬಣ್ಣದ ಮೇಲೊಂದು ಪವ[4]ನನ[4]
ರತ್ನವ ನುಂಗಿಯಡಗಿತ್ತು
[5]ಗುಹೇಶ್ವರ[5]ನೆಂಬ ಲಿಂಗ
ಸಂಗ ನಿರ್ಲೇಪವಾಯಿತ್ತು ॥ ೫ ॥

1307

ರಾಗ : ನಾಟಿ

ತಾನಿದಿರೆಂಬೆರಡಱಿಯದೆ ಧ್ಯಾನ ನಷ್ಟವಾಗಿ ಜ್ಞಾತೃ
ಜ್ಞಾನ ಜ್ಞೇಯವೆಂಬ ತ್ರಿವಿಧವಱಿತ ಮಹಿಮ ॥ ಪಲ್ಲವಿ ॥

---

1. ಭಕ್ತಿಯ (ಐ) 2. ದು ಬಿತ್ತಿದನು(ಐ) 3. ಸುಟ್ಟು (ಐ) 4. ನಾನಾ (ಐ) 5. ಗುಹೇಶ್ವರ ಗುಹೇಶ್ವರ (ಐ)

ಹೊಱಗೊಳಗೆಂಬೆರಡಱ [1]ಬಗೆಯನಱಿಯದೆ[1]
ಎರಡಱ ತೆಱನೆಂಬ ನುಡಿಯು ಮುನ್ನವೆ ತಾನಱಿಯದೆ
ಅಱಿವಿನ ಮೂಲವ ಹಱಿದು ಮಱವೆ ನಷ್ಟವಾದ
ಅಱಿತ ಅಱಿವಿನ ಮಱವೆಯ ಕುಱುಹಳಿದ ನಿಶ್ಚಿಂತ ॥ ೧ ॥

ಉಲುಹಡಗಿದ ಸಮುದ್ರದ ನಿಲವಿನ ಘಾತದಂತೆ
ತಿಳಿವಿನ ಮಹಾಘನವಿವೇಕ ಹಱಿಹಂಚಾಗಿ
ಉಳಿದೆನೆಂಬ ಉಳುಮೆಯ ಮೂಲವ ಮಱೆದು
ಕಳೆಯ ಬೆಳಗಳಿದು ನಿಜದೊಳು ನಿಂದ ಮಹಿಮ ॥ ೨ ॥

ಉರಿ ಕರ್ಪುರ ಒಡಗೂಡಿ ಎರಡುವಳಿದ ಬಳಿಕ
ಮರಳಿ ನೋಡಿಹೆನೆಂದಡೆ ಭಸ್ಮವಿಲ್ಲ ನೋಡ
ಅಱಿವನಱಿದಿಹೆನೆಂಬ ಅಱಿವಿನ ಮೂಲವ ದಹಿಸಿ
ಧರಿಸಿದ ಜ್ಞಾನಭಸ್ಮವೆಂಬುದಿಲ್ಲದ ಮಹಿಮ ॥ ೩ ॥

[2]ನಿಜದಲಿ[2] ನಿರ್ಣಯವಡಗಿ ಗತಿಮತಿ ನಷ್ಟವಾಗಿ
ಕಳೆಯೊಳಗಣ ಬೆಳಗು ತಾನೆಂದು ತೋರು[3]ತಲಿರ್ಪ[3]
ತೊಳಗಿ ಬೆಳಗುವ ಚೈತನ್ಯ [4]ತನ್ನಲ್ಲಿ[4] ತಾನೆ
ನಿಷ್ಕಳೆಯಾಗಿ ನಿಜ[5]ದೊಳಗೆ[5] ನಿಶ್ಶೂನ್ಯವಾದ ಮಹಿಮ ॥ ೪ ॥

ತನ್ನೊಳು ತಾನೆಯಾಗಿ ಎನ್ನಲ್ಲಿ ನಾನಱಿದು
ಎನ್ನಲ್ಲಿ ನಾನಱಿದೆನೆಂಬ ಅಱಿ[6]ವಿಂಗೆ[6] ತೆಱಹುಗೊಡದೆ
ಬಿಮ್ಮು ಬೀಸರವಾಗಿ [7]ಹಮ್ಮು[7] ಶೂನ್ಯವಾಗಿ
ನಿರ್ಮಲ ನಿಜಪದವಾದ ಉಪಮಾತೀತ ಮಹಿಮ ॥ ೫ ॥

ಜ್ಞಾನಜ್ಯೋತಿಯ ಪ್ರಭೆ [8]ತಾನಾಗಿರ್ದೆ[8] ನಿಂದಿರ್ದು
ತಾನಾಗಿರ್ದೆನೆಂಬ ಜ್ಞಾನ ಶೂನ್ಯವಾಗಿ
ತಾನೆ [9]ತನ್ನೊಳು[9] ಮೈಮಱೆದೊಱಗಿದ ನಿರಾಳ
ಜ್ಞಾನಾತೀತ ನಿರುಪಮ ನಿಶ್ಚಲ ನಿರ್ಭೇದ್ಯ ॥ ೬ ॥

---

1. ಬಗೆಯನ್ನಱಸದೆ (ಶೂ) 2. ನಿಜದಲ್ಲಿ (ಐಶೂ) 3. ತ್ತಿರ್ಪ (ಐಶೂ) 4. ತನ್ನೊಳು (ಐ) 5. ದೊಳು (ಐಶೂ) 6. ವಿಗೆ (ಐಶೂ) 7. ತಾ ಹಮ್ಮು (ಏಐ) 8. ತಾನಾಗಿ (ಐಶೂ) 9. ತನ್ನಲ್ಲಿ (ಏ)

ಶಬ್ದ ನಿಶ್ಯಬ್ದವಾಗಿ ನಿಶ್ಯಬ್ದವನಾಹತವಾಗಿ
ಶಬ್ದ ನಿಶ್ಯಬ್ದವೆಂಬ [1]ಬುದ್ಧಿಯು[1] ನಿರ್ವಯಲಾಗಿ
ಇದ್ದುದು ಹೋದು[2]ದೆಂಬುದ[2]ನಱಿಯದೆ ಮೇರೆಗೆಟ್ಟು
ನಿಶ್ಯಬ್ದ ಗಂಭೀರ ಗುಹೇಶ್ವರ ನಿಮ್ಮ [3]ಬಸವಣ್ಣ[3] ॥ ೭ ॥

1308

ಪದ

ದೇವರೆ ಎನ್ನ ದೇವರೆ ಕಾಯ್ವೈ
ದೇವರೆ ಎನ್ನ ದೇವರೆ ॥ ಪಲ್ಲವಿ ॥

ಅತ್ತೆಯ ಕಣ್ಣಿಱಿಯಲಿ । ಮಿತ್ತು ಭಾವನ ಕಾಲು ಮುಱಿಯಲಿ
ಹಿತ್ತಲ ಗೋಡೆ ಬೀಳಲಿ ಕಾ । ಳ್ಗತ್ತಲೆ ಬಂದು ಕವಿಯಲಿ ॥ ೧ ॥

ಮನೆಯಾತನು ಮಾಯವಾಗಲಿ । ಬಿನುಗುಭಾವ ಮರುಳಾಗಲಿ
ಸನಿಯನ್ನ ನಾದಿನಿ ಸಾಯಲಿ । ದಿನಕರನತ್ತ ಹೋಗಲಿ ॥ ೨ ॥

ಕಂದನ ಕಣ್ಣು ಮುಚ್ಚಲಿ । ಚಂದ್ರನ ಹಾವು ಕಚ್ಚಲಿ
ಇಂದು ನಮ್ಮ ಗುಹೇಶ್ವರ ಲಿಂಗವು । ಬಂದೆನ್ನನೊಡಗೂಡಲಿ ॥ ೩ ॥

1309

ಪದ

ನಿಬ್ಬಣವೇನಾ ತ್ರಿಜಗದೊಳಗೆ
ಮದುಮಕ್ಕಳ ಸುದ್ದಿಯ ಹೇಳಿರಮ್ಮ ॥ ಪಲ್ಲವಿ ॥

ಹೆಂಡತಿ ಗಂಡನ ಹಡೆದು ತೊಟ್ಟಿಲಗಟ್ಟಿ
ಹಾಡಿ ಹರಸಿ ಮೈಮಱೆದಾಳು ॥ ೧ ॥

ಪರುಷರತ್ನವೆಂಬ ಪುತ್ರ ಜನಿಸಲಾಗಿ
ಕಂಡವರೈವರು ಕಡು ಬೆಱಗಾದರು ॥ ೨ ॥

ಪಟ್ಟಣದೊಳಗಣ ಪೌಢರೈವರು
ಇಟ್ಟ ಕಳಶವ ಹೊತ್ತ ಮುತ್ತೈದೆರೈವರು ॥ ೩ ॥

---

1. ಬುದ್ಧಿ (ಐಶೂ) 2. ದ (ಶೂ) 3. ಬಸವ (ಐ).

ಹೊಳೆವ ಬಾಸಿಗಕೆ ಹದಿನಾಱು ದಂಡೆ
ಮದವಣಿಗನಿರೆ ಮದವಳಗಿತ್ತಿ ರಂಡೆ ॥ ೪ ॥

ಮದುಮಕ್ಕಳ ನಿಲೆ ಮದುವೆಯ ಮಾತಲ್ಲ
ಗುಹೇಶ್ವರಲ್ಲಯ್ಯ ಬಲ್ಲ ॥ ೫ ॥

## 1310

### ಪದ

ಕಂಡಿರೆಯಕ್ಕ ವಿಪರೀತವ ನಿಜ—
ಮುಂಡೆ ಮುತ್ತೈದೆಯಾದಳು ನೋಡಿರೇ ॥ ಪಲ್ಲವಿ ॥

ನೀರು ನೀರನುಂಬುದ ಕಂಡೆ
ಉರಿವ ಬೆಂಕಿ ಬಿಸಿಲನೆ ಕಾಯ್ದು
ಹಾಱುವ ಹಂಸನ ಹದ್ದು ಹೊಯ್ದು ಮಹಾ
ಮೇರುವೆಯೊಳಡಗಿತು ನೋಡಿರೇ ॥ ೧ ॥

ತುಂಬ ಬಿಟ್ಟು ಕೆಱೆಯೊಡೆದುದ ಕಂಡೆ
ಕಂಬ ಮುಱಿದು ಮಾಳಿಗೆ ಉಳಿದು
ಬೆಂಬಳಿ ವಿಡಿದೈವರು ಮುಂದಿ
ತುಂಬುತ ಕೈಮುಱಿದರು ನೋಡಿರೇ ॥ ೨ ॥

ಹುಟ್ಟದ ಶಿಶು ತಂದೆಯು ಪಡೆದು ನಿಜ—
ದೊಟ್ಟಲ ತನುವಿನೊಳು ಕಟ್ಟಿ
ನೆಟ್ಟನೆ ನಮ್ಮ ಗುಹೇಶ್ವರಲಿಂಗವ
ಮುಟ್ಟ ಜೋಗುಳವಾಡಿತು ನೋಡಿರೇ ॥ ೩ ॥

## 1311

### ಪದ

ಬಯಲ ನೀರಿಗೆ ಬಂದಳು ನಾರಿ ತಾ ಬಿದ್ದಳು
ಜಾಱಿ ಕೊಡನುಳಿಯಿತು ನೋಡಮ್ಮ ॥ಪಲ್ಲವಿ॥

ಕುರುಡ ಕಂಡನು ಹಾವ ಬರುತ ನಡುವಿರುಳೆ
ಮೂಗ ಹೇಳಿದ ಮಾತ ಕಿವುಡನ ಕಿವಿಗಳಿಗೆ
ಇಱುವೆ ಹಾಱಿತು ಗಗನಕ್ಕೆ ಮರ ಮುಱಿಯಿತು ಕೆಳಗೆ
ಬೆಟ್ಟಕ್ಕೆ ಹತ್ತಿತು ಬೇಗೆ ಆರಿಗೆ ದೂಱುವೆನು ॥ ೧ ॥

ನೀರಿಲ್ಲದ ನೆಳಲಿಲ್ಲದ ಬೇರಿಲ್ಲದ ಗಿಡು ಹುಟ್ಟಿ
ಹೂವಿಲ್ಲದೆ ಫಲಕೆ ಬಂದಿತು ನೋಡಮ್ಮ
ಕಣ್ಣಿಲ್ಲದೆ ಕಾಲಿಲ್ಲದೆ ಕಾಯ್ದಿರ್ದರು ನಾಲ್ವರು
ಹಣ್ಣಿಗೆ ಮರುಳಾಯಿತ್ತು ಹದಿನಾಲ್ಕು ಲೋಕ ॥ ೨ ॥

ಕಂಚಿನ ಕರಡಗೆಯೊಳಗೆ ಕಂಬಿಯ ತೆರಣಿಗಟ್ಟಿ
ನಿಂತಾಳು ನಾಲ್ವರ ಮುಟ್ಟ ನಿರಾಕಾರ
ಹೇಳುವಡಾರಳವಲ್ಲ ಕೇಳುವ ಪುರುಷನೆ ಬಲ್ಲ
ಇದರ ಭೇದವ ನಮ್ಮ ಗುಹೇಶ್ವರ ಬಲ್ಲ ॥ ೩ ॥

1312

ಪದ

ಆದಿಯಲಾದ ಮಹಾಘನಲಿಂಗವು ಇನ್ನೇನಿನ್ನೇನೋ
ಸಾಧಿಸಿಹೆ ನೆಂದಡೆ ಸಾಧಿಸಲಳವಲ್ಲ, ಇನ್ನೇನಿನ್ನೇನೋ ॥ ಪಲ್ಲವಿ ॥

ಕಂದಲು ಬೆಣ್ಣೆಯ ಒಲೆಯ ಮೇಲಿಕ್ಕಲು ಇನ್ನೇನಿನ್ನೇನೋ
ಕಂದಲು ಕರಗಿತು ಬೆಣ್ಣೆ ತಾ ಉಳಿಯಿತು ಇನ್ನೇನಿನ್ನೇನೋ ॥ ೧ ॥

ಅಗಲಾಗದ ಮುನ್ನ ಆರೋಗಣೆಯಾಯಿತು ಇನ್ನೇನಿನ್ನೇನೋ
ಕೈತೊಳೆಯದ ಮುನ್ನ ಎಂಜಲು ಹೋಯಿತು ಇನ್ನೇನಿನ್ನೇನೋ ॥ ೨ ॥

ನಾನಾಗದ ಮುನ್ನ ತಾನೆಯಾಯಿತು ಇನ್ನೇನಿನ್ನೇನೋ
ನಮ್ಮ ಜ್ಞಾನಿ ಗುಹೇಶ್ವರಲಿಂಗವು ಎನ್ನೊಳಗಾಯಿತು ಇನ್ನೇನಿನ್ನೇನೋ ॥ ೩ ॥

1313

ಪದ

ಅಲ್ಲೆ ಬಿದ್ದಿದೆ ಮೂಕುತಿ ಅದ
ಬಲ್ಲಡಱಿಸಿ ತಾರೆನಲ್ಲ ರಚ್ಚ್ಯಾಗೆ ॥ ಪಲ್ಲವಿ ॥

ಕಂಭದೊಳಗೊಂದು ಮಾಣಿಕ
ಅದು ಬಲೆಯ ಬೀಸಿದಡೆ ಸಿಕ್ಕದು।
ಕಂಭ ಒಡೆಯಿತ್ತು ಬಲೆ ಬಱಿದಾಯಿತ್ತು
ಮಾಣಿಕ ಗುಹೇಶ್ವರಂಗಾಯಿತ್ತಮ್ಮ ॥ ೧ ॥

ಭೂತದ ಕೈಯಲೊಂದಱುವೆ ಅದು
ವೇತಾಳನುದ್ದಕ್ಕೆ ನಿಂದಿತು |
ಭೂತ ಸತ್ತಿತು ವೇತಾಳ ಸತ್ತಿತು
ಅಱುವೆ ಗುಹೇಶ್ವರನೊಳಗಾಯಿತ್ತಮ್ಮ ॥ ೨ ॥

ಕೆಱೆಯ ತಡಿಯಲೊಂದು ಹುಲ್ಲೆ ಅದ ಕೆಂ—
ಗಱಗೋಲಿನಲೆಚ್ಚವ ಜಾಣ |
ನಾರಿ ಹಱಿಯಿತು ಬಿಲ್ಲು ಮುಱಿಯಿತು
ಹುಲ್ಲೆ ಗುಹೇಶ್ವರನೊಳಗಾಯಿತಮ್ಮ ॥ ೩ ॥

## 1314
### ಪದ

ಕಂಡೆ ಕಂಡೆ ನಾನೊಂದು ಕನಸನೀಗಳು ಬಣಗು
ಮುಂಡೆಯೊರ್ವನೊಡನೆ ಕೂಡಿ ಹೆಂಡಿರಾದುದ ॥ ಪಲ್ಲವಿ ॥

ಹಾಳೂರ ಗೌಡರೆನಿಪ | ಏಳು ಮಂದಿಯು ಸತ್ತು
ತೋಳನೊಂದು ಮಱಿಯ ತಿಂದು ಏಳಿಗಾದುದ |
ಕಾಳುಬೇಡನೊಂದು ಕಪಿಯ | ಕಾಯ್ದುಕಾಯ್ದು ಕಣ್ಣುಗೆಟ್ಟು
ಸೂಳೆಯಾದಳವನ ತಂಗಿ ಸೂನೆಗಾಱಗೆ ॥ ೧ ॥

ಮೂಗಿಲ್ಲ ಮುನ್ನೊಂದು | ಕಾಗೆಯೆನ್ನ ತಿನ್ನಲಾಗಿ
ಜಾಗರಂಗಳಾದವಖಿಳ ಜಗದ ಜೀವರ |
ಜಾಗರಂಗಳೊಳಗೆ ಚಿತಿ | ಸಾಗರಂಗಳುದಿಸಿ ಸತ್ತ
ಕೋಗಿಲೆದ್ದು ಕೊನೆಯನೇಱ ಕರೆಯ ಕಂಡೆನು ॥ ೨ ॥

* * * * *

ಹೆತ್ತ ತಾಯಿ ಮಗನ ಮಚ್ಚಿ | ಅತ್ತೆ ಅಳಿಯನಾಗಿ ನಡೆದು
ಹೊತ್ತುಗಳೆವ ವೇಳೆಯಲ್ಲಿ ಸತ್ತನೊಬ್ಬನು ॥ ೩ ॥

ಅಕ್ಕ ತಮ್ಮನೊಡನೆ ಮಚ್ಚಿ | ಮಕ್ಕಳೈದ ಹೆತ್ತುಕೊಂಡು
ದಿಕ್ಕುಗೆಟ್ಟ ದೇಶದಲ್ಲಿ ತಿರಿದುಂಬುತ |
ಹೊಕ್ಕು ಸೋಮಸೂರ್ಯವೀಧಿ | ಇಕ್ಕೆಲದ ನಡುವೆ ನಿಂದು
ನಕ್ಕಳವಳು ಆಳ ಕಂಡು ತನ್ನ ತೋಱುತ ॥ ೪ ॥

ಏಡಿ ಒಂದು ಆಜನ ತಲೆಯ | ಏಡಿಸಾಡಿ ತಿಂದು ತೇಗಿ
ಓಡಿನಲ್ಲಿ ನೀರ ಕುಡಿದು ಒಲೆಯ ಸೇರಲು |
ಹಾಡಿ ಹೊಗಳಿ ಹರಸಿಕೊಂಡು | ಮಾಡಲೊಬ್ಬ ಮಡಕೆಗಳನು
ನೋಡ ನೋಡನೊಬ್ಬ ಗಾಡಿಕಾಱನು ॥ ೫ ॥

ಕಾಡುವೊಂದು ಮೇಡುವೈದು | ಓಡುವೊಂದು ಒಲೆಯು ಮೂಱು
ನಾಡ ನಾಯ ಕೂಡಿಕೊಂಡು ಬೇಡನೊಬ್ಬನು |
ನೋಡಿ ಹೆಳಕ ಹೂಡಿ ಒಂದು | ಜೋಡುಮುಖದ ಕಪಿಯನೆಚ್ಚು
ಓಡಿನಲ್ಲಿ ತಿಂದು ತನ್ನ ನೀಗಲಾಡಿದ ॥ ೬ ॥

ಎತ್ತು ಒಂದು ಏರಿಯಲ್ಲಿ | ಸತ್ತು ಹುಲ್ಲ ನೀರ ಕುಡಿದು
ಹೊತ್ತು ಹೋಗಿ ಹೊಲಬುದಪ್ಪಿ ಕಾಡ ಸೇರಲು |
ಎತ್ತನಱಸ ಹೋಗಿ ಒಬ್ಬ | ಸತ್ತ ಹೆಣದ ಕೈಯಲೊಂದು
ಮುತ್ತ ಕಂಡು ಹೆತ್ತ ತಾಯ ಕೂಡಿಕೊಂಡನು ॥ ೭ ॥

ನೀರು ಏರಿಯನುಂಡು | ವಾರಿಧಿಯ ಕೂಡಲಾಗಿ
ಆಱು ಮೂಱು ಒಂಬತ್ತು ತೋಟ ಕೆಟ್ಟವು |
ನಾರಿವಾಳದ ಸಸಿಯ | ಬೇರಿನಲ್ಲಿ ಗೊನೆಯು ಮೂಡಿ
ಮೂಱು ಕಣ್ಣಿನಲ್ಲಿ ರಸವು ತೊಟ್ಟಿಡುತ್ತಿದೆ ॥ ೮ ॥

ನಂಜು ಸಿಹಿಯಾದ ಕಾಲ | ಬಂಜೆ ಮಗನ ಹಡೆದ ಕಾಲ
ರಂಜನಂಗಳೆಲ್ಲ ಸುಟ್ಟು ಉರಿದ ಕಾಲವು |
ಮುಂಜೂರ ಹಿಡಿದುಕೊಂಡು | ಹಿಂದೆ ಮನೆಯ ಸುಟ್ಟು ನಿ—
ರಂಜನ ಪರಮಸಿದ್ಧ ಗುಹೇಶ್ವರಲ್ಲಯ್ಯನು ॥ ೯ ॥

## 1315

### ರಾಗ : ಆಹರಿ

ಸಿಕ್ಕಿದೆ ಬಱಿದೆ ಭಾವಕಿ ಆರು
ಅಕ್ಕಟ ಕಾಣದಱವಿನುಯ್ಯಲೆ ತೂಗಿ ॥ ಪಲ್ಲವಿ ॥

ಎಸಳಾಱು ಕಮಲಗಳೆಸಳುಗಳೊಳಗೆ
ಮೊಸಳೆ ಮುತ್ತಿ ಮುಜ್ಜ್ಯೋತಿ ಉರಿವುತಿದೆ |
ಅಸಿಯಳೆ ಕಂಡಪ್ಪಿ ಜ್ಯೋತಿ ಪ್ರಜ್ವಲಿಸಲು
ಮುಸುಳಿಸದೆ ಜ್ಯೋತಿ ಹೊಂಬೆಳಗಾಯಿತಮ್ಮ ॥ ೧ ॥

ಒಬ್ಬ ಸೂಳೆಗೆ ಏಳು ಬೈತಲೆಯದರೊಳು
ಗುಬ್ಬಿ ಮನೆಯ ಮಾಡಿತಱುವತ್ತು ಲಕ್ಷ।
ಗುಬ್ಬಿ ನುಂಗಿತು ಬ್ರಹ್ಮವಿಷ್ಣ್ವಾದಿಗಳನೆಲ್ಲ
ಸಭ್ಯರ ಸವೆಯ ನುಂಗಿತು ಕಂಗಳಿಂದ ॥ ೨ ॥

ಬೊಮ್ಮದ ಮನೆಯ ಕೋಣೆಯುಳೊಬ್ಬ ಗೊರವತಿ
ಇಮ್ಮೈಯ ಸಿರಿಯ ಮಾಳಿಗೆಯೊಳಗೆ।
ಹಮ್ಮೈಸಿಹಳು ಚಂದ್ರ ಮೂಡಲು ಶತಪತ್ರ
ಗುಮ್ಮನಾಗುತ ಭದ್ರವಮರಗಣಂಗಳು ॥ ೩ ॥

ಬಯಲ ಕಂಭದ ಮೇಲೆ ಬಟ್ಟಮಾಳಿಗೆದಲೆ
ಹವಳ ಬಳ್ಳಿ ಹಬ್ಬಿತು ನಾಲ್ಕು ದೆಸೆಯ।
ಒಳಹೊಕ್ಕು ತುಡುಕುತ ವನಿತೆಗಂಬವ ನೂಕೆ
ಬಳಿಯಲ್ಲಿ ಬಿತ್ತು ಮಾಳಿಗೆದಲೆ ಮುಱಿದು ॥ ೪ ॥

ಬಯಲ ತೊಟ್ಟಿಲ ಕಟ್ಟಿ ಬೀಗಿ
ಜೋಗುಳವಾಡಿ ಅವಿರಳದತ್ತ।
ಕಂದ ಸೋಕಿಸಿ ತೂಗುತ
ಗುಹೇಶ್ವರಯ್ಯನ ಕಂದನನಪ್ಪಿ ಒಪ್ಪಿ ಬಳದಿರ್ದೆನಮ್ಮ ॥ ೫ ॥

1316

ರಾಗ : ನಾರಾಯಣಿಗೌಳ

ಎಲ್ಲಿ ನೋಡಿದಡಿಲ್ಲದ ಬಯಲೊಳಗೆ
ನಿಲ್ಲಲಾಡಿದನುಯ್ಯಲ ॥ ಪಲ್ಲವಿ ॥

ನಿರವಯಲ ಕಂಭವ ಮಾಡಿ
ಪರತತ್ತ್ವದಿರವ ಸರಪಳಿಯ ಮಾಡಿ
ಸುರುಚಿರದ ಮಣೆಯ ಮಾಡಿ
ರೂಹಿಲ್ಲದ ಪರಿಯಲಾಡಿದನುಯ್ಯಲ ॥ ೧ ॥

ತನುವಿಲ್ಲದ ಘನರೂಪನ
ವನಿತೆಯರು ವಿನಯದಿ ಪಾಡುತಿರೆ।
ಅನುವಱಿದು ಜ್ಞಾನ ತೂಗೆ
ಚಿನುಮಯನು ಕೊನೆಯಲಾಡಿದನುಯ್ಯಲ ॥ ೨ ॥

ಅಷ್ಟದಳ ಕಮಲದೊಳಗೆ ಈರೇಳು
ಸೃಷ್ಟಿಯಡಗಿದ ತೆರದೊಳು
ಮುಟ್ಟಿ ಮುಟ್ಟದ ಬಯಲೊಳು
ಗುಹೇಶ್ವರನು ಮೆಟ್ಟಿಯಾಡಿದನುಯ್ಯಲ || ೩ ||

## 1317

### ರಾಗ : ಪಾಡಿ

ಕೇಡಿನ ಮೇಲೆ ಕೇಡಾಯಿತ್ತಲ್ಲೋ ಇಂದು |
ಜಾಡಿಸಿ ಕಂಬಳಿಯ ಹೊದ್ದುಕೊಳ್ಳೋ ಜಾಯಿಗ || ಪಲ್ಲವಿ ||

ಹೆಂಡತಿ ಸತ್ತಳು ಮುಂಡೆ ಬೋಳಾಯಿತಿನ್ನು
ಹಿಂಡಿನಾ ಮುಂದೆಕ್ಕುಗಿದಾಡೊ ನೀ ಜಾಯಿಗ |
ತೊಂಡಾಡುಗಳ ನೀ ಕಾಯ ಬೇಡವೊ ದೊಡ್ಡ
ಹಿಂಡುಕುಱಿಗಳ ನೀ ಕೂಡಬೇಡ ಜಾಯಿಗ || ೧ ||

ಊರ ಕಂಡೆಯ ಊರ ದೇಗುಲವ ಕಂಡೆಯ
ದೇಗುಲದೊಳಗೊಂದು ದೇವರ ಕಂಡೆಯ |
ದೇವರ ಮುಂದೊಬ್ಬ ಮಾನವನ ಕಂಡೆಯ
ಸಾವುಂಟೆ ನಿನಗಿನ್ನು ಜಾಯಿಗೊಂಡ || ೨ ||

ನಾಲ್ಕು ದೇಶಕ್ಕೆ ಹೋಗಿ ನಾನೆರಡು ಮಱಿಯ ತರಲು
ತಾನೊಂದನೊಯ್ಯುತಿರೆ ತೋಳಮಯ್ಯನು |
ಹಿಂದಿರ್ದ ಬಿಱುಗೊಂಡ ಡುಬ್ಬನೆ ಬಡಿಯಲು
ಮುಂದಿದ್ದ ಬೊಮ್ಮಗೊಂಡ ಬಿಡಿಸಿಕೊಂಡ || ೩ ||

ಹಿಕ್ಕೆಯ ಹೆಡಿಗೆಯ ಬಿಟ್ಟು ಕಂದಲ ಹೊತ್ತು
ಚಕ್ಕನೆ ಮುಂದಕೆ ನಡೆತರಲು |
ಸೊಕ್ಕಿದ ತಳವಾರ ನಿಲ್ಲೆಂದು ನುಡಿಯಲು
ಲೆಕ್ಕಿಸದವನ ಮುಂದಕ್ಕೆ ನಡೆದೆ || ೪ ||

ಕುಱಿಗಳೆಲ್ಲವ ಕೊಂದು ಮಱಿಯ ಬೊಬ್ಬೆಯಹೊಯ್ದು
ಆಱು ಮೂಱು ದೇಶಕ್ಕೆ ನೀನೊಬ್ಬನೆ ಗೌಡ |
ಅಱುಹಿನವರು ಬಂದು ಕುಱಿಯ ಕೊಂಡೊಯ್ದರೆ
ಬಱುದೊಱೀತಕೋ ಗುಹೇಶ್ವರ ? || ೫ ||

## 1318

### ಪದ

ಭಾಗ ಕರಿದು ಭಾಗ ಬಿಳಿದು
ಏ ಏ ಗರುಡ ! ॥ ಪಲ್ಲವಿ ॥

ಒಂದು ಕೊಂಬಿನ ಮೇಲೆ ಎರಡು ಪಕ್ಷಿ ಗೂಡನಿಕ್ಕಿ
ಒಂದಿಳಿದಡೆ ಮತ್ತೊಂದಿಳಿಯದು ನೋಡಾ ! ॥ ೧ ॥

ತಲೆಗಳು ನಾಲ್ಕು ಕಾಲುಗಳು ಹನ್ನೆರಡು
ಪಕ್ಕವಾಱು ಗಱಿ ಮುನ್ನೂಱಱುವತ್ತು ॥ ೨ ॥

ಇದರ ಭೇದವ ನಮ್ಮ ಗುಹೇಶ್ವರನೆ ಬಲ್ಲ
ಜಡಜೀವಿಗಳಿಗಿದು ತಿಳಿಯದು ನೋಡ ॥ ೩ ॥

## 1319

### ರಾಗ : ದೇಸಿ

ಮೃಗವಲ್ಲ ಪಕ್ಷಿಯಲ್ಲ ರೂಪಿಲ್ಲ ಮುಪ್ಪಿಲ್ಲ
ಜಗವ ಭಕ್ಷಿಸುತಿಹುದನಂತ ಉಳ್ಳನಕ ॥ ಪಲ್ಲವಿ ॥

ಅಂಗವೊಂದೆ ಶಿರವಱುವತ್ತು ನಾಮವು
ಕಂಗಳು ಮುನ್ನೂಱು ಘನ ಪಕ್ಷಿಯು ।
ಜಂಗಿಟ್ಟು ನಡೆವ ಕಾಲುಗಳು ಹನ್ನೆರಡು
ಅಂಗುಲಿ ಮುವ್ವತ್ತು ಒಂದೊಂದಕ್ಕೆ ॥ ೧ ॥

ಕಾಲ್ದಿವಿಗಳೆರಡು ಬಧಿ ಗಗನಭುವನವೆ ಗೃಹವು
ಏಳೆಂಟಱಿಪ್ಪತ್ತೇಳು ಪಕ್ಕ
ಆಳಲಿಕೆ ಮೂರ್ಬೀದಿ ಆಱು ಪ್ರಾಣದೊಳಿಹುದು
ಏಳು ಮುಖದಿ ಸಂಬಾಳುತಿಹುದು ॥ ೨ ॥

ಕೊಂದಹೆನೆಂಬವನು ಸಂದುಹೋದನು ತಾನು
ನಿಂದಹೆನೆಂಬವನ ನಿಲಿಸದು ।
ಇಂದು ಗುಹೇಶ್ವರನ ಸಮವರ್ತಿ ಬಸವಣ್ಣ
ನಿಂದಿರಿಸಿ ಸಸಿನೆ ಮಾತನಾಡಿಸಿದನು ॥ ೩ ॥

## 1320

### ರಾಗ : ಆಹರಿ

ಅಱಿದೆನೆಂದಡೆ ತೋಱದನುಭಾವ
ತೆರನ ತಿಳಿಯಲು ಬಾರದಾರಿಗೆ।
ಹಿರಿಯ ಮೊಸಳೆಯ ಮತ್ಸ್ಯ ನುಂಗಿಯು
ಬಾಯಿದೋಱದಲ್ಲಾ ॥ಪಲ್ಲವಿ॥

ಇಲಿಯು ನುಂಗಲು ಆನೆಯೆಂಟನು
ಹಲವು ಸಿಂಹವ ಬಳ್ಳು ನುಂಗಲು
ಎಲೆಯು ನುಂಗಲು ಮರದ ಫಲಗಳ ಕುಱುಹುದೋಱದಲಾ।
ಬಲುಹಿನಿಂದಲಿ ಮಾರಿಮಸಣಿಯ ಕೈ
ಯಿಲ್ಲದ ವೋಟ ಪಿಡಿಯಲು ಉರಿವ
ಕಮಲದೊಳು ಉದಕವ ತುಂಬಲು ಚಲನೆ ಉಲುಹಡಗಿತಲ್ಲಾ ॥ ೧ ॥

ಹುತ್ತದೊಳಗಣ ಹಲವು ಸರ್ಪವ
ನೊತ್ತಿ ನುಂಗಿದ ಕಪ್ಪೆ ಸಾಯದು
ಸತ್ತು ಕೂಗಲು ಶಬ್ದವಡಗದಿದೇನು ಸೋಜಿಗವೋ।
ಅತ್ತೆಯಳಿಯನು ಮಗಳು ಮೂವರು
ಬತ್ತಲಿರುತಿರೆ ಲಜ್ಜೆದೋಱದೆ
ಹೊತ್ತು ಹೋಗದ ಮಸಣಿಗುಂಟಣಿ ಮನೆಗೆ ಬಾರಳಲಾ ॥ ೨ ॥

ಕಂಡೆ ಧರೆಯೊಳಗೊಂದು ಸೋಜಿಗ
ಹುಲಿಯ ಗಂಟಲ ಎರಳೆ ಮುಱಿಯಲು
ಕಂಡೆ ಸಾಗರದುದಕವನು ಹಸುಗೂಸು ಕುಡಿವುತಿರೆ।
ಕಂಡೆ ನರಸುರ ದನುಜರೆಲ್ಲರು
ಕುಱುಹುಗಾಣದೆ ಕೂಗುತಿಱಲದು
ಕಂಡೆ ತನ್ನೊಳು ತನ್ನ ನಿಜವಳವಡಲು ಗುಹೇಶ್ವರನ ॥ ೩ ॥

## 1321

### ರಾಗ : ತೆಲುಗಕಾಂಬೋದಿ

ನೋಡ ನೋಡ ಒಂದು ವಿಪರೀತದ ಜಸದಿಂ
ಕೂಡಿ ಪರಬ್ರಹ್ಮವನು ಉಪಮಿಸಲು ಬಹುದೆ? ॥ ಪಲ್ಲವಿ ॥

ಪ್ರಣವ ಮಂತ್ರವನು ಶಿವಯೋಗಿ ಉಚ್ಚರಿಸುತಿರೆ
ಫಣಿಯೆದ್ದು ಹೆಡೆಯೆತ್ತಿಯಾಡಿತಲ್ಲಾ ।
ಅಣಿಮಾದಿಯಷ್ಟ ಸಿದ್ಧಿಯ ಸಿದ್ಧರೆಲ್ಲರನೂ
ಮಣಿಮಂತ್ರಮಾಲೆ ನುಂಗಿದ ಭಾವವ ॥ ೧ ॥

ನಿದ್ರೆಗೆಯ್ದಾ ಸರ್ಪನೆದ್ದಾಡುವನ್ನಬರ
ಹದ್ದು ಹೊಯ್ದಾಕಾಶಕಾಚರಿಸಲು ।
ಹದ್ದಿಂಗೆ ಹೆಡೆಯಾಗೆ ಹದ್ದು ಸಿದ್ಧರ ನುಂಗಿ
ಸಿದ್ಧರೆಲ್ಲರೂ ಬುದ್ಧಿ ಮಱೆದರಲ್ಲಾ ॥ ೨ ॥

ಸರ್ಪನುಸುರನೆ ತೆಗೆದು ಸಪುರವ ಮಾಡಿ
ಜಪದ ಮಣಿಮಾಲೆಯನು ಪವಣಿಸುತಲಿ ।
ತಪ್ಪದಂಥಕನು ತನ್ನೊಪ್ಪನು ನೋಡುತಿರೆ
ದರ್ಪಣದಿ ಪ್ರತಿಬಿಂಬ ತೋಱುತಿಹುದು ॥ ೩ ॥

ಫಣಿಯ ಹೆಡೆಯಾ ಮಣಿಯ ಮೇಲೊಂದು
ಮಣಿಯು ಎಣಿಸುವಡೆ ದಿನಮಣಿಯ ಕೋಟಿತೇಜ ।
ಮಣಿಯ ವಿರಳದ ನಡುವೆ ತ್ರಿಣಯನವಯುವ ಕಂಡು
ಪ್ರಣವಗೈದಂಥಕನ ಬೆಱಗು ನಿಬ್ಬೆಱಗು ॥ ೪ ॥

ಮಣ್ಣಿಲ್ಲದ ಹಾಳ ಮೇಲೊಂದು ಮಣಿಯ
ಕಣ್ಣಿಲ್ಲದಂಥಕನು ನೋಡಿ ಕಂಡು ।
ಬಣ್ಣವಿಲ್ಲದ ನೂಲ ಬಲಮುರಿಯನೆ ಹೊಸೆದು
ಸಣ್ಣನವಿರಳ ಮಣಿಯ ಪವಣಿಸಿದನು ॥ ೫ ॥

ಹೃದಯಕಮಲದ ಬೆಳಗಿನ ಸೂತ್ರವಿಡಿದಿಪ್ಪ
ರುದ್ರಾಕ್ಷಿ ಭದ್ರಾಕ್ಷಿ ಸ್ಫಟಿಕ ಶಂಖ ।
ಉದಯಾಸ್ತಮಾನವೆಂಬೆರಡಳಿದು ನಿಂದಲ್ಲಿ
ಸದ್ಭಾವವಿಡಿದು ಜಪಿಸುವ ಮಾಲೆಯು ॥ ೬ ॥

ನಖದ ಕೊನೆಯ ವಿಶಕ್ತಿ ಶಿಖಿಯ ಕೊನೆಯ ವಿಮುಕ್ತಿ
ಸುಖವಾಗಿ ಗುರು ಹೇಳಿದುದೆ ಸತ್ಯವು ।
ಸಕಲನಿಃಕಲದ ಸಮರಸದ ಪರಿಣಾಮದಲ್ಲಿ
ಸುಖಿ ಗುಹೇಶ್ವರ ಲಿಂಗ ನಿಮ್ಮ ಶರಣ ॥ ೭ ॥

* ಸಂಪೂರ್ಣ *

# ವಚನಗಳ ಅಕಾರಾದಿ

# ಪಾರಿಭಾಷಿಕ ಪದಸೂಚಿ

ತ



ದ



ನ

## ಪ

## ವ

## ಹ

# ಕೆಲವು ಪಾರಿಭಾಷಿಕಗಳ ವಿವರಣೆ

ವಿ. ಸೂ : ಕೆಲವು ಪಾರಿಭಾಷಿಕಗಳ ವಿವರಣೆಗೆ ಪ್ರಭುದೇವರ ವಚನಗಳನ್ನೂ ಅವಕ್ಕೆ ಮಹಲಿಂಗದೇವರು ಮತ್ತು ಕಲ್ಲು ಮಠದ ಪ್ರಭುದೇವರು ಬರೆದಿರುವ ವ್ಯಾಖ್ಯಾನ ಗಳನ್ನೂ ಆಧಾರವಾಗಿ ಬಳಸಿಕೊಳ್ಳಲಾಗಿದೆ. ಈ ವಿವರಣೆಯಲ್ಲಿ ಗ್ರಂಥಸಂಪಾದಕನ ಸ್ವಂತ ಕಲ್ಪನೆಯಿಲ್ಲ. " ಬ. ಸ್ತೋ." ಎಂದರೆ ಚೆನ್ನಂಜೇ ದೇವರು ಸಂಕಲಿಸಿರುವ ಬಸವ ಸ್ತೋತ್ರದ ವಚನಗಳಿಂದ ಮಾಡಿದ ಉಲ್ಲೇಖ ಎಂದೂ, ಆ ಸಂಕೇತದ ಮುಂದೆ ಬರುವ ಅಂಕಿಯನ್ನು ಆತನ ಸಂಕಲನದ ವಚನಗಳ ಕ್ರಮಸಂಖ್ಯೆಯೆಂದೂ ತಿಳಿಯಬೇಕು. ವಿವರಣೆಯ ಕೊನೆಗೆ ಬರುವ ಅಂಕಿಯು ಅಲ್ಲಮನ ವಚನ ಚಂದ್ರಿಕೆಯಲ್ಲಿರುವ ವಚನ ಗಳ ಕ್ರಮಸಂಖ್ಯೆಯನ್ನು ಸೂಚಿಸುವುದು.

### ಅ

ಅಂಗ : ಲಿಂಗವು ಭೋಜನಸದೃಶವಾದರೆ ಅಂಗವು ಭಾಜನ ಸದೃಶ 1283

ಅಂಗ-ಲಿಂಗ : ಆತ್ಮ ಮೊದಲಾಗಿ ಪೃಥ್ವಿ ಕಡೆಯಾದ ತತ್ವಗಳೆಲ್ಲವೂ ಕೂಡಿ ಅಂಗಸ್ವರೂಪವು. ಆ ಅಂಗದ ಚೈತನ್ಯವೇ ಲಿಂಗಸ್ವರೂಪು. ಆ ಲಿಂಗವಿರಹಿತವಾಗಿ ಅಂಗತತ್ವಗಳ ತೋರಿಕೆ ಸಾಧ್ಯವಿಲ್ಲ 763.

ಅಚ್ಚಪ್ರಸಾದಿ : ಅಚ್ಚಪ್ರಸಾದ, ಜಂಗಮ ಪ್ರಸಾದ, ಸಮಯ ಪ್ರಸಾದ ಈ ಮೂರೂ. ಪ್ರಸಾದಸಂಬಂಧ ಉಳ್ಳಾತ ಅಚ್ಚಪ್ರಸಾದಿ 167

ಅಂತಃಕರಣ ಚತುಷ್ಟಯ : (=ಕರಣ ಚತುಷ್ಟಯ) ಮನ, ಬುದ್ಧಿ, ಚಿತ್ತ, ಅಹಂಕಾರ, 199, 1187

ಅಂತರಾತ್ಮ : ಪರಮಾತ್ಮನಿಂದ ಉತ್ಪತ್ತಿ ಯಾಗಿ ಜೀವಾತ್ಮನ ಉತ್ಪತ್ತಿಗೆ ಕಾರಣ ಕರ್ತೃವಾದುದು. ಇದು ಪಾಶಬದ್ಧ. 745

ಅನಾದಿ : ನಾದಬಿಂದುಕಳಾಬೆಳಗೆಲ್ಲ ಘಟ್ಟಿ ಗೊಂಡು ಗೋಳಕಾಕಾರವಾದ ಲಿಂಗ. ಇದನ್ನು ಚಿಲ್ಲಿಂಗವೆಂದೂ ಹೇಳುವರು 742, ಸುಚೈತನ್ಯಲಿಂಗವೆಂದರೂ ಇದೇ 743,

ಅನಾಹತ: ಅನಾಹತದಲ್ಲಿ ನಿರೂಪ ಸ್ವಾಯತ 237. ಇದು ಕಂಠಸ್ಥಾನದಲ್ಲಿರುವ ಚಕ್ರ, ಇಲ್ಲಿ ಜಂಗಮಲಿಂಗ ಮೂರ್ತಿ ಗೊಂಡಿರುವುದು (ಬ.ಸ್ತೋ, 72 ಮಡಿವಾಳ.)

ಅನಿತ್ಯತ್ರಯ : ಅನಿತ್ಯತ್ರಯವಾದ ತನು ಮನಧನಗಳನ್ನು ನಿತ್ಯತ್ರಯವಾದ ಗುರುಲಿಂಗಜಂಗಮಕ್ಕೆ ಅರ್ಪಿಸಬೇಕು 1016, ತನುವನ್ನು ದಾಸೋಹಕ್ಕೂ, ಮನವನ್ನು ಲಿಂಗಧ್ಯಾನಕ್ಕೂ, ಧನ ವನ್ನು ಜಂಗಮಕ್ಕೂ ಸವೆಸಬೇಕು 138, 1016. 1026,

ಅನುಭಾವ : ಆಧ್ಯಾತ್ಮವಿಚಾರಮಂಥನ. ಗಗನ (=ಆತ್ಮ)ದಿಂದ ಮೇಲೆ ಅನು ಭಾವ ತಾನಿಲ್ಲ 58. ಅನುಭಾವದಿಂದ ಲಿಂಗಜಂಗಮಪ್ರಸಾದಗಳು ಹುಟ್ಟು ವವು 170.

ಅಮೃತಲಿಂಗ : ಬ್ರಹ್ಮರಂಧ್ರದಲ್ಲಿ ಇದು ಇರುವುದು 1218.

ಅಮೃತಸ್ವರ : ಇದು ಸಹಸ್ರದಳಕಮಲ- ಬ್ರಹ್ಮರಂಧ್ರದಲ್ಲಿರುವುದು 189.

ಅಱುವು : ಆಚಾರಕ್ಕಿಂತ ಅಱುವು ಮುಖ್ಯ 1136.

ಅಱುವುಸಂಗಿ : ಮನಗುಣನಾಸ್ತಿಯಾದ ವನು, 1107

ಅಷ್ಟದಳ ಕಮಲ : (ನೋಡಿ 'ಪರಮ ಯೋಗಿ' 810)

ಅಷ್ಟವಿಗ್ರಹ : ಮಹಾಘನಲಿಂಗದ ಚಿದಂಗವೇ ಅಷ್ಟತನುಗಳಾಗಿ ಲಿಂಗಕ್ಕೆ ಸ್ಥೂಲದೇಹವಾಗಿರುವಂಥದೇ ಅಷ್ಟ ವಿಗ್ರಹ 744.

## ಆ

ಆಕಾರ : ಆಕಾರಕ್ಕೆ ಭಾವವೇ ಪ್ರಾಣ 1137.

ಆಚಾರ : ಲಿಂಗಕ್ಕಿಂತ ಆಚಾರ ಮುಖ್ಯ 1136.

ಆದಿ : ಅನಾದಿಸ್ವರೂಪಾದ ಸುಚೈತನ್ಯ ಲಿಂಗದ ಚಿತ್ರ್ಕಾಶದ ಬೆಳಗೆ ಅಂಗ—ಕರಚರಣಂಗಳಾಗಿ ಮೂರ್ತಿಯಾಗಿ ಆದಿ ಎನಿಸಿತು 743.

ಆದಿಯ ಪ್ರಸಾದ : ನಾದಬಿಂದು ಸೂಸದ ಮುನ್ನ ಆದಿಯ ಪ್ರಸಾದವನ್ನು ಶರಣರು ಭೇದಿಸಿಕೊಂಡರು 255.

ಆಯತ : ಕಾಯವು ಸಕಲಲಿಂಗವಾದರೆ ಅದೇ ಆಯತ (ನೋಡಿ 'ಸ್ವಾಯತ' ಮತ್ತು 'ಸನ್ನಿಹಿತ' 1082)

## ಇ

ಇಂದ್ರಿಯ ಶುದ್ಧಿ : ಮನಶ್ಶುದ್ಧಿ ಮತ್ತು ತನುಶುದ್ಧಿಗೆ ಇಂದ್ರಿಯಶುದ್ಧಿಯೇ ಮೂಲ 1102.

ಇಷ್ಟಲಿಂಗ : ಇಷ್ಟಲಿಂಗವು ಪ್ರಾಣಲಿಂಗವಲ್ಲ, ಇಷ್ಟಲಿಂಗ ಹೋದರೆ ಪ್ರಾಣ—ಲಿಂಗ ಹೋಗದು 181. ಈ ಇಷ್ಟ ಲಿಂಗದ ದೆಶೆಯಿಂದ ಶರಣನ ಪಾಂಚ ಭೌತಿಕದೇಹವು ಪಂಚಬ್ರಹ್ಮಮಯ ವಾಗುವುದು 774.

## ಉ

ಉಭಯ ಪ್ರತಿಷ್ಠಾಲಿಂಗ : ಕೈಯಲ್ಲಿರುವ ಇಷ್ಟಲಿಂಗ 1218.

## ಐ

ಐಕ್ಯ : ಭಾವವಳಿದು ಬಯಕೆ ಸವೆದವನು 1271. ಭಾವಸೂತಕವಿಲ್ಲದವನು 1277.

ಐಕ್ಯಸ್ಥಲ : ಶರಣನ ಮುಂದಿನ ಮೆಟ್ಟು ಐಕ್ಯಸ್ಥಲ 151.

ಓಂ : ಅ = ನಾದ, ಉ = ಬಿಂದು, ಮ್ = ಕಳೆ (ಬ. ಸ್ತೋ. 40, 136) ಅ ಎಂಬ ನಾದವೆತ್ತಲು, ಉ ಎಂಬ ಬಿಂದು ಬಂದು ಕೂಡಲು, ಮ್ ಎಂಬ ಕಳೆ ಬೆಳಗಲು ಅಖಂಡ—ಗೋಳಕಾಕಾರವಾದ ಆದಿಪ್ರಣವ ವೆನಿಸಿತು. ಆದಿ–ಅನಾದಿ–ಅಂತ್ಯ ಪ್ರಣವಗಳು ನಮ್ಮ ಬಸವಣ್ಣನ ಸ್ಥೂಲ ಸೂಕ್ಷ್ಮ ಕಾರಣ. ಈ ಬಸವಣ್ಣ ನಿಂದಲೇ ಪಂಚಭೂತ, ಚಂದ್ರ, ಸೂರ್ಯ, ಆತ್ಮ ಎಂಬ ಅಷ್ಟದೇಹ ಗಳು ಹುಟ್ಟಿದವು. ಇವುಗಳಿಂದ ಸಕಲ ಸೃಷ್ಟಿಯೂ ಆಯಿತು. (ಬ. ಸ್ತೋ. 136.)

## ಕ

ಕರಣಚತುಷ್ಟಯ : (=ಅಂತಃಕರಣ ಚತುಷ್ಟಯ) ಮನ, ಬುದ್ಧಿ, ಚಿತ್ತ, ಅಹಂಕಾರ, 199, 1187.

ಕರಣ : ಕರಣಗಳು ಲಿಂಗದಲ್ಲಿ ಅಡಗಿ ಲಿಂಗೈಕ್ಯವಾಗಬೇಕೇ ಹೊರತು ಅವು ನಾಶವಾಗಬಾರದು 152.

ಕರಣಂಗಳು (ಲಿಂಗ—) = ಜ್ಞಾತೃ, ಜ್ಞಾನ, ಜ್ಞೇಯ. ತನುತ್ರಯದಲ್ಲಿರುವ ಮೂರು ಕರಣಂಗಳು ಇವೇ 239.

ಕರಸ್ಥಲ : ವಸ್ತುವು ಹೃದಯ, ಭ್ರೂಮಧ್ಯ, ಬ್ರಹ್ಮರಂಧ್ರ ಇಲ್ಲೆಲ್ಲೂ ಇಲ್ಲ ; ಅದಿರುವುದು ಕರಸ್ಥಲದಲ್ಲಿ. ಅಲ್ಲಮಪ್ರಭುವಿನ ಗುರುವಾದ ಅನಿಮಿಷದೇವನು ಕರಸ್ಥಲದವನು. 928.

ಜ್ಯೋತಿರ್ಲಿಂಗ : ಕಣ್ಣುಗಳಲ್ಲಿರುವುದು ಈ ಜ್ಯೋತಿರ್ಲಿಂಗ 1218.

## ಧ

ಧ್ಯಾನ : ಪೂಜೆ, ಸ್ತೋತ್ರ, ಜಪಗಳಿಗಿಂತ ಶ್ರೇಷ್ಠವಾದುದು 1171.

## ತ

ತತ್ವ (ಪಂಚವಿಂಶತಿ–) : ಶ್ರೋತ್ರಾದಿ ಜ್ಞಾನೇಂದ್ರಿಯ ಐದು, ವಾಗಾದಿ ಕರ್ಮೇಂದ್ರಿಯ ಐದು, ಶಬ್ದಾದಿ ವಿಷಯಗಳು ಐದು, ಪ್ರಾಣಾದಿವಾಯುಗಳು ಐದು, ಅಂತಃಕರಣಚತುಷ್ಟಯ, ಜೀವ ಒಂದು; ಎಲ್ಲವೂ ಸೇರಿ ಇಪ್ಪತ್ತೈದು ತತ್ವಗಳು 17, 563, 782.

ತತ್ತ್ವಮಸಿ : ತತ್ = ಲಿಂಗ, ತ್ವಂ = ಅಂಗ, ಅಸಿ = ಐಕ್ಯ 782.

ತನು : ತನು ಉಂಟೆಂದರೆ ಪಾಶಬದ್ಧ 947.

ತನು (ಅಷ್ಟ—) : ಪಂಚಭೂತಗಳು + ಸೋಮ ಸೂರ್ಯ + ಆತ್ಮ. 136, 217, 1080.

ತನುಶುದ್ಧಿ : ಮನ ಶುದ್ಧಿಯಾದಲ್ಲದೆ ತನು ಶುದ್ಧಿಯಿಲ್ಲ 1102.

## ದ

ದಾಸೋಹಿ : ಅಶೇರೋಷವನ್ನು ಬಿಟ್ಟವ 922.

ದಿವ್ಯಾಗಮಂಗಳು : ಇವುಗಳಲ್ಲಿ ದೀಕ್ಷಾ ಕ್ರಮ ಉಕ್ತವಾಗಿದೆ 79. ಆ ಪ್ರಕಾರ ದೀಕ್ಷೆಯನ್ನು ಮಾಡಬೇಕು 79, 751.

ದೃಷ್ಟತ್ರಿವಿಧ : ( = ನಿತ್ಯತ್ರಯ) ಗುರು, ಲಿಂಗ, ಜಂಗಮ 96.

ದೇವರು : ವೇದ, ಶಾಸ್ತ್ರ, ಪುರಾಣ, ಕಲ್ಲು ಕಾಷ್ಠ, ಪಂಚಲೋಹಗಳನ್ನು ದೇವರೆನ್ನುವರು, ಅವು ದೇವರಲ್ಲ 854.

## ನ

ನಾದ-ಬಿಂದು-ಕಳೆ : ಸುಚೈತನ್ಯಲಿಂಗವೆ ಸುನಾದಸ್ವರೂಪು. ಆ ಸುಚೈತನ್ಯ–ಜ್ಞಾನಲಿಂಗದ ಚಿತ್‌ಪ್ರಭಾಂಗವೆ ಬಿಂದು. ಆ ಲಿಂಗದ ಕಳಾಬೆಳಗೆ ಕಳೆ. ಅಂತಹ ಬಿಂದುಕಲಾಯುಕ್ತವಾಗಿರುವುದೇ ಸುನಾದಲಿಂಗ. ಹಾಗೆ ಬಿಂದುಕಳಾಯುಕ್ತವಾದ ಸುನಾದಸ್ವರವೇ ಅಕಾರ,ಉಕಾರ,ಮಕಾರಸ್ವರೂಪಾಗಿ (ಓಂ) ಸ್ವರಾಕ್ಷರದಲ್ಲಿ ಅಧಿಷ್ಠಿಸಿಕೊಂಡಿರುವುದು 741. ಅನಾದಿಪರಶಿವತತ್ವದಿಂದ ಚಿತ್ತು, ಚಿತ್ತಿನಿಂದ (ಬಸವಣ್ಣ, ಬಸವಣ್ಣನಿಂದ) ನಾದ ಬಿಂದು ಕಳೆ. ನಾದಬಿಂದು ಕಳೆಯು ಸಮರಸವಾಗಿ ಅಖಂಡಪರಿಪೂರ್ಣ ತೇಜೋಮೂರ್ತಿಯಾದ ಮಹಾಲಿಂಗವೂ, ಆ ಮಹಾಲಿಂಗದಿಂದ ಪಂಚಸಾದಾಖ್ಯ ಮೂರ್ತಿಯ ಉತ್ಪತ್ತಿಯಾದವು (ಬಸವ ಸ್ತೋತ್ರ 111).

ನಾಭಿಮಂಡಲ : ನಾಭಿಮಂಡಲದಲ್ಲಿ ಈರೈದು (= ಹತ್ತು) ದಳಪದ್ಮ 244.

ನಿರವಯ : ಶಿವಕಳೆ 742.

ನಿರಾಕಾರ : ನಿರಾಕಾರಕ್ಕೆ ಮಹಾಜ್ಞಾನವೆ ಪ್ರಾಣ 1137.

ನಿರಾಲಂಬ : ಚಿದ್ಬಿಂದು 742 (ನೋಡಿ 'ಚಿತ್ತು' 740) ಹಾಗೆ ಜನಿಸಿದ ಚಿತ್ತು ಆ ಪರಶಿವನಲ್ಲಿ ವಿಯೋಗಿಯಾಗಿ ಬೇರೊಂದನವಲಂಬಿಸುವುದಿಲ್ಲವಾಗಿ ಆ ಚಿತ್ತುವನ್ನು ನಿರಾಲಂಬವೆಂದು ಕರೆಯಲಾಯಿತು 742.

ನಿರಾಳ : ನಿರಾಕಾರ ಚೈತನ್ಯವಾದ ನಾದ 742.

ನಿಶ್ಚಟ ನಿಜಲಿಂಗೈಕ್ಯ : ತನುಮನ ಪ್ರಾಣಗಳು ಗುಹೇಶ್ವರನಿಗೆ ಸಂದು ನಿಸ್ಸಂಗಿಯಾದವನು 154.
ನಿಷ್ಪತಿ : ಮಹಾಘನವಿಂಬುಗೊಂಡರೆ ನಿಷ್ಪತಿ ಕಱಗೊಳ್ಳುವುದು 1085.
ನೆಲೆ (ಆಱು–) = ಷಟ್ಚಕ್ರಗಳು ? 985.
ನೇಮ : ಉದಾಹರಣೆ:—ಕೆಂದಾವರೆಯ ಪುಷ್ಪದ ನೇಮ್ಮ, ಹುವ್ವ ಮುಟ್ಟದೆ ಕೊಯ್ವ ನೇಮ 416. ನೇಮವೆಂಬುದು ಉದ್ಯೋಗದೊಳಗು 522

ಪ

ಪಂಚಬ್ರಹ್ಮ : (1) ಗುರು (2) ಲಿಂಗ (3) ಜಂಗಮ (4) ಪ್ರಸಾದ (5) ಆಚಾರ 759.
ಪಂಚಬ್ರಹ್ಮಮಯ ಜಗತ್ತು : ಅನಾದಿಯಾದ ಸುಚೈತನ್ಯಲಿಂಗದ ಚಿತ್‌ಪ್ರಭಾ–ಬೆಳಗೆ ಅಂಗಚರಣಗಳಾಗಿ ಮೂರ್ತಿಯಾಯಿತು. ಹಾಗೆ ಚಿತ್‌ಪ್ರಭಾ–ಸ್ವರೂಪಾದ ಲಿಂಗವು ಪಂಚಸಾದಾಖ್ಯ ಮುಖವನ್ನು ಪಡೆದು, ಪಂಚಕಲಾಶಕ್ತಿಯುಕ್ತವಾಗಿ,ಅತಿ ಘನತರವಾದ ಸದಾ-ಶಿವನೆನಿಸಿಕೊಂಡಿತು. ಆ ಸದಾಶಿವನ ಪಂಚಮುಖಗಳಿಂದ ಪಂಚತತ್ವಗಳೂ, ಆ ಪಂಚತತ್ವಗಳಿಂದ ಇಪ್ಪತ್ತೈದು ತತ್ವಗಳೂ ಆದವು. ಇವುಗಳಲ್ಲಿ ಇಪ್ಪತ್ತೈದನೇ ತತ್ವವೇ ಜೀವ. ಹೀಗೆ ಪಂಚತತ್ವಗಳಿಂದ ಸಕಲ ಜೀವಂಗಳೂ ಹುಟ್ಟಿರುವುದರಿಂದ ಜಗತ್ತು ಪಂಚಬ್ರಹ್ಮಮಯ.
ಪಂಚಬ್ರಹ್ಮ ಸ್ವರೂಪು : ಪಂಚೇಂದ್ರಿಯಗಳೂ, ಪಂಚವಿಷಯಗಳೂ ಲಿಂಗವೆಯಾದ ಕಾರಣ, ಶರಣನ ಸಾಕಾರವೆ ಪಂಚಬ್ರಹ್ಮಸ್ವರೂಪ 776.
ಪಂಚಭೂತಕಾಯ (×ಪ್ರಸಾದಕಾಯ) : 702.
ಪಂಚವಿಂಶತಿ ತತ್ವಗಳು ಲಿಂಗೈಕ್ಯವಾಗುವ ಬಗೆ : ಶ್ರೋತ್ರಾದಿ ಜ್ಞಾನೇಂದ್ರಿಯಗಳು ವಿದ್ಯಾಶಕ್ತಿಯನ್ನೈದಿ ಮೂರ್ತಿಸಾದಾಖ್ಯವನ್ನು ಒಡಗೂಡಲು ತೇಜಸ್ತತ್ವ ಬಯಲಾಯಿತು. ವಾಗಾದಿ ಕರ್ಮೇಂದ್ರಿಯಂಗಳೈದು ನಿವೃತ್ತಿ ಶಕ್ತಿಯನ್ನೈದಿ ಕರ್ಮಸಾದಾಖ್ಯವನ್ನೊಡಗೂಡಲು ಪೃಥ್ವೀತತ್ವ ಬಯಲಾಯಿತು. ಶಬ್ದಾದಿ ವಿಷಯಂಗಳೈದು ಪ್ರತಿಷ್ಠಾ ಶಕ್ತಿಯನ್ನೈದಿ ಕರ್ತೃಸಾದಾಖ್ಯವನೊಡಗೂಡಲು ಅಪ್ಪುತತ್ವ ಬಯಲಾಯಿತು. ಪ್ರಾಣಾದಿವಾಯುಗಳೈದು ಶಾಂತಿಶಕ್ತಿಯನ್ನೈದಿ ಅಮೂರ್ತಿಸಾದಾಖ್ಯವನ್ನೊಡಗೂಡಲು ವಾಯುತತ್ವ ಬಯಲಾಯಿತು. ಮನಬುದ್ಧಿ ಚಿತ್ತ ಅಹಂಕಾರಂಗಳುಶಾಂತ್ಯತೀತಶಕ್ತಿಯನ್ನೈದಿ ಶಿವ-ಸಾದಾಖ್ಯವನೊಡಗೂಡಲು ಆಕಾಶ–ತತ್ವ ಬಯಲಾಯಿತು. ಹೀಗೆ ಪಂಚ–ವಿಂಶತಿತತ್ವಗಳು ಲಿಂಗೈಕ್ಯವಾಗಲು ಲಿಂಗತತ್ವ ಹನ್ನೊಂದೂ ತಾವು ಒಂದೊಂದನೊಡಗೂಡಿ ಏಕಾರ್ಥವಾದಲ್ಲಿ ಕುಳಸ್ಥಳವಡಗಿತ್ತು. ಹೀಗಾಗಲು ದಿವ್ಯಲಿಂಗವು ವಾರಿಕಲ್ಲು ಕರಗಿ ನೀರಾದಂತೆ ಪರಮಾನಂದದಿಂದ ಸರ್ವಶೂನ್ಯವಾಯಿತು.
ಪ್ರಥಮಭಿತ್ತಿ : ಹಲವಾತ್ಮಪ್ರಕಾಶಗಳನ್ನು ಪ್ರಕಾಶಗೊಳಿಸುವ ಮಹಾಪ್ರಕಾಶವನ್ನುಳ್ಳ ಮಹಾಲಿಂಗವೆ ಸೃಷ್ಟಿಗೆ ಪ್ರಥಮಮೂರ್ತಿ 740.
ಪದವಿ (ಚತುರ್ವಿಧ—) = ಸಾಲೋಕ್ಯ, ಸಾಮಿಪ್ಯ, ಸಾರೂಪ್ಯ, ಸಾಯುಜ್ಯ, 589, 1159.
ಪರಮ : ಪರಮಾತ್ಮ 741, 1190, 1191, 1192.
ಪರಮಯೋಗಿ : ಅಷ್ಟದಳ ಕಮಲವನ್ನು ಮೆಟ್ಟ ನಿಂದಾತ ಪರಮಯೋಗಿಯಾ

ಗದಿರಸು 810.

ಪರಮಾತ್ಮ : ಮಹಾಘನವಸ್ತುವಿನಿಂದ ಉತ್ಪತ್ತಿಯಾಯಿತು. ಇದರಿಂದಲೇ ಅಂತರಾತ್ಮನು ಉತ್ಪತ್ತಿಯಾದುದು. ಇದು ಪಾಶಮುಕ್ತ 745.

ಪರಮಾರಾಧ್ಯ : ಪರಬ್ರಹ್ಮವನ್ನು ಕರ–ಸ್ಥಲಕ್ಕೆ ತಂದುಕೊಟ್ಟ ಗುರುವಿಗೆ ಗುರು 758.

ಪ್ರಸಾದ: ಬೇಡುವವರಿಗೂ ಬೇಡಿಸಿಕೊಂಬವರಿಗೂ ಪ್ರಸಾದವಿಲ್ಲ 157. ಗುರು–ಲಿಂಗವಾರೋಗಣೆ ಮಾಡಿ ಮಿಕ್ಕ ಬೋನವೇ ಪ್ರಸಾದ 173. ಪ್ರಾಣಕ್ಕೆ ಪ್ರಸಾದವು ವ್ಯತ್ತಿಕೆಯಾದರೆ ಆ ಪ್ರಾಣವು ಲಿಂಗವಲ್ಲ 180.

ಪ್ರಸಾದ ತ್ರಿವಿಧ : ಶುದ್ಧ, ಸಿದ್ಧ, ಪ್ರಸಿದ್ಧ 138, 1268.

ಪ್ರಸಾದಕಾಯ : (×ಪಂಚಭೂತಕಾಯ) 702.

ಪ್ರಸಾದಿ : ಲಿಂಗಕ್ಕೆ ಕೊಟ್ಟು ಕೊಂಡರೆ ಪ್ರಸಾದಿ 166. ಬೋನವನ್ನು ಲಿಂಗಕ್ಕರ್ಪಿಸಿ ಮಿಕ್ಕುದನ್ನು ಕೊಳ–ಬಲ್ಲವನೆ ಪ್ರಸಾದಿ 173. ತನುಸೂ–ತಕವಿಲ್ಲದವ 1277.

ಪ್ರಸಿದ್ಧಪ್ರಸಾದಿ : ತ್ರಿಪುರವನ್ನು ಸುಟ್ಟಾತನಲ್ಲದೆ ಪ್ರಸಿದ್ಧ ಪ್ರಸಾದಿಯಲ್ಲ 1268

ಪ್ರಾಣಲಿಂಗ : ಅಷ್ಟಕಮಲದ ಮೇಲಿರುವ ನಿಶ್ಶೂನ್ಯನ ಮರ್ಮವನರಿಯುತರೆ ಅದು ಪ್ರಾಣಲಿಂಗ 142. ಕಾಯದೊಳಗೆ ಜೀವವುಳ್ಳನ್ನಕ್ಕರ ಅದೇ ಪ್ರಾಣ–ಲಿಂಗ 182. ಪ್ರಾಣಸಹಿತಲಿಂಗ (=ಜಂಗಮ)ವೇ ಪ್ರಾಣಲಿಂಗ 846. ಇಷ್ಟಲಿಂಗವು ಪ್ರಾಣಲಿಂಗವಲ್ಲ, ಹಾಗೆನ್ನುವವರು ಮಿಟ್ಟೆಯ ಭಂಡರು 851. ಲಿಂಗಸ್ವಾಯತ ಜಂಗಮವೇ ಪ್ರಾಣಲಿಂಗ 1049, ದೇಹದಲ್ಲಿ ಇಷ್ಟಲಿಂಗವನ್ನು ಸ್ಥಾಪಿಸಿದ-ಲ್ಲದೆ ಪ್ರಾಣಲಿಂಗ ಸಂಬಂಧವಾಗದು 1084.

ಪ್ರಾಣಲಿಂಗಿ (×ವಾಯುಪ್ರಾಣಿ) 565. ಅನಲಪವನ ನಿಂದಲ್ಲದೆ ಪ್ರಾಣಲಿಂಗಿಯಲ್ಲ 565. ಮನಸೂತಕವಿಲ್ಲದವ 1277.

ಪ್ರಾಣವಾಯುಪಂಚಕ : ಪ್ರಾಣ, ಅಪಾನ, ವ್ಯಾನ, ಸಮಾನ, ಉದಾನ 143.

ಪಾದೋದಕ : ಅಂತರಂಗಶುದ್ಧಿಯಾದ ಮೇಲೆ ಮಾತ್ರ ಇದು ಸಾಧ್ಯ 161. ಕಾಯವು ಸಕಲಲಿಂಗವಾದರೆ ಪ್ರಾಣ ಸಕಲನಿಃಕಲಲಿಂಗ. ಪ್ರಾಣವು ಕಾಯಕ್ಕಿಂತ ಸೂಕ್ಷ್ಮ. ಈ ಪ್ರಾಣಕ್ಕಿಂತ ಸೂಕ್ಷ್ಮತರವಾದುದು ಭಾವ. ಪ್ರಾಣವು ಸಕಲನಿಃಕಲ ಲಿಂಗವಾದರೆ ಅದೇ ಸ್ವಾಯತ. 1082. ಕರಣವಿಲ್ಲದ ಪ್ರಾಣ ಶ್ರೇಷ್ಠ 1260.

ಪಾಶ: ತನು ಉಂಟೆಂದರೆ ಪಾಶಬದ್ಧ 947

ಪಾಶಬದ್ಧ : ಪರಮಾತ್ಮನೊಬ್ಬನೇ ಪಾಶಮುಕ್ತ. ಉಳಿದ ಅಂತರಾತ್ಮ ಜೀವಾತ್ಮರೆಲ್ಲ ಪಾಶಬದ್ಧರು 745

ಪಾಶಮುಕ್ತ : ಪರಮಾತ್ಮನು ಪಾಶಮುಕ್ತ 745

ಪುಟ (ತ್ರಿ-) : ಲಿಂಗ, ಜಂಗಮ, ಪ್ರಸಾದ 158.

## ಬ

ಬ್ರಹ್ಮ (ಪಂಚ—) = ಪಂಚಭೂತಗಳಡಗಿದರೆ ಪಂಚಬ್ರಹ್ಮಮಯ 199, 776.

ಬ್ರಹ್ಮಮೂರ್ತಿ (ಪಂಚ–) : ಶಿವ, ಗುರು, ಲಿಂಗ, ಜಂಗಮ, ಆಚಾರ, 272. 759. ಅಥವಾ ಪ್ರಸಾದ, ಗುರು ಲಿಂಗ, ಜಂಗಮ, ಆಚಾರ 919.

ಬಯಲು : (× ಘಟ್ಟ) ಬಯಲೆ ಸ್ವರೂಪಾಯಿತ್ತು 739, ಬಯಲು ಬಲಿ–

ದೊಂದು ಬಿಂದುವಾಯಿತ್ತು 741. ಅಖಂಡಪರಿಪೂರ್ಣ ಚೈತನ್ಯ ಜ್ಞಾನ ಪ್ರಭೆಯ ಬೆಳಗಿನ ಬಯಲುಗನಾದ ನಿಷ್ಕಲ ಪರಬ್ರಹ್ಮ 741. ಬಯಲು > ಬಿಂದು > ಓಂ > ಶರಣ> ಪ್ರಕೃತಿ > ಲೋಕ 741, ಬಸ ವಣ್ಣ ಎಂದು ಬಯಲಾದೆ ಕಾಣಾ ಕಲಿದೇವ (ಬ. ಸ್ತೋ. 48, 72). ಬೆಳಗನುಟ್ಟು ಬಯಲಾದನು ನಮ್ಮ ಬಸವಣ್ಣನು (ಬ.ಸ್ತೋ. 79, 80). ಬಸವಣ್ಣನ ಮುಂದೆ ಬಯಲಾಗಿ ಹೋದೆ (ಬ. ಸ್ತೋ. 125). ಬಸ ವಣ್ಣನ ನಂಬಿ ನಾನು ಕೆಟ್ಟು ಬಯ ಲಾಗಿ ಹೋದೆ (ಬ. ಸ್ತೋ. 124). ಆದಿ ಅನಾದಿಗಳೆಂಬ ನಾಮಕ್ಕೆ ಬಾರದ ಮುನ್ನ, ಶೂನ್ಯ ನಿಶ್ಶೂನ್ಯ ಸುರಾಳ ಳವೆನಿರಾಂಬ ಸುಳುಹುದೋರದಂದು, ತಾನು ನಾನೆಂಬ ತಲ್ಲಣವಿಲ್ಲದಂದು, ಬಟ್ಟಬಯಲ ಬ್ರಹ್ಮವೆ ಘಟ್ಟಿಯಾದ ಘನವೆಂತೆಂದಡೆ (ಬ.ಸ್ತೋ. 136.) ಬಸವನು ಬಯಲ ಬ್ರಹ್ಮವನೆ ಮೇದು ಮೆಲುಕಿರಿದು ಗೋಮಯವಿಕ್ಕಲು ಪೃಥ್ವಿಯಾಯಿತು (ಬ. ಸ್ತೋ. 136)

ಬ್ರಹ್ಮಪಾಶ : ರಜೋಗುಣಪಾಶ 21.

ಬಿಂದು : ಸುಚೈತನ್ಯಜ್ಞಾನಲಿಂಗದ ಚಿತ್ರ ಭಾಂಗ 741. ನಿಷ್ಕಲ ಪರಬ್ರಹ್ಮವು ತನ್ನ ಅಖಂಡ ಚೈತನ್ಯಜ್ಞಾನಪ್ರಭೆ ಯನೊಬ್ಬುಳಿಗೊಂಡಾಗ ಆದ ಚಿತ್ರ ಭಾಂಗಸ್ವರೂಪವಾದ ಲಿಂಗ 741.

## ಭ

ಭಕ್ತ : ಬೇಡದ ಮುನ್ನವೇ ಮಾಡಬಲ್ಲವ 157. ಕ್ರಿಯಾಲಿಂಗಸಂಬಂಧಿಯಾ ದವನು 1086. ಜಂಗಮವು ಪ್ರಾಣ– ಸದೃಶವಾದರೆ ಭಕ್ತನು ದೇಹಸದೃಶ 1208. ಕುಲಸೂತಕವಿಲ್ಲದವ 1277.

ಭಕ್ತಿತ್ರಿವಿಧ=ಗುರುಭಕ್ತಿ, ಲಿಂಗಭಕ್ತಿ, ಜಂಗಮಭಕ್ತಿ 1162.

ಭಾಂಡ (ತ್ರಿ —) : ಪಿಂಡಭಾಂಡ, ಬ್ರಹ್ಮಾಂಡಭಾಂ ಡ, ಚಿಪ್ಪ ್ರಹ್ಮಾಂಡ ಭಾಂಡ 1282.

ಭಾವ : ಕಾಯವು ಸಕಲಲಿಂಗವೂ, ಪ್ರಾಣವು ಸಕಲನಿಃಕಲಲಿಂಗವೂ ಆದರೆ, ಭಾವವು ನಿಃಕಲಲಿಂಗ. ಕಾಯ ಕ್ಕಿಂತ ಪ್ರಾಣ, ಪ್ರಾಣಕ್ಕಿಂತ ಭಾವ ಸೂಕ್ಷ್ಮ, ಸೂಕ್ಷ್ಮತರ 1082. ಆಕಾರಕ್ಕೆ ಭಾವವೇ ಪ್ರಾಣ 1137. ಕಾಯವು ಕರ್ಮದಲ್ಲಿ ಸವೆಯದೆ, ಜೀವವು ಸಂಸಾರದಲ್ಲಿ ನೋಯದೆ, ರಾಗ ತಾಮಸ ಅಹಂಕಾರ ಮಾತಿನ ಬಣಬೆ ಇವಿಲ್ಲದಿದ್ದರೆ ಭಾವಶುದ್ಧಿಯಾ ಗುವುದು 1216. ಭಾವಶುದ್ಧಿಯಾದರೆ ಅಜ್ಞಾನವು ನೆಲೆಗೊಂಡು ಕುಜುಹಳಿದು ಪರಮಸುಖ ಸಮನಿಸುವುದು 1077

(ಅ ? + ) ಭಾವತ್ರಯ : ಪ್ರಾಕ್, ಪ್ರಧ್ವಂಸ, ಅನ್ಯೋನ್ಯ 1170.

ಭಾಷೆ : ಭಾಷೆಯೆಂಬುದು ಪ್ರಾಣಘಾತಕ 723.

ಭೃತ್ಯಾಚಾರಿ : ಭೃತ್ಯಾಚಾರಿಗಲ್ಲದೆ ಪ್ರಸಾದ ವಿಲ್ಲ 166.

ಭೂತ (ಪಂಚ — ) : ಪೃಥ್ವಿ, ಅಪ್ಪು, ತೇಜಸ್ಸು, ವಾಯು, ಆಕಾಶ 199.

ಭೋಗ (ಅಷ್ಟ—) : ತೃಪ್ತಿ, ವಸನ, ಪರಿಮಳ, ಪುಷ್ಪ, ಆಭರಣ, ತಾಂಬೂಲ, ಸಂಗ, ಗೀತ 1172. ಇದು ಲಿಂಗವಂತರಿಗೆ ತ್ಯಾಜ್ಯವಲ್ಲ; ಲಿಂಗಾರ್ಪಣಮಾಡಿ ಅನುಭವಿಸಬೇಕು. 1121.

## ಮ-ಯ

ಮಧ್ಯದಳ : (1) ಉತ್ಪತ್ತಿ ಸ್ಥಿತಿಲಯ.

ಈ ಮೂರರಲ್ಲಿ ಮಧ್ಯದಲ್ಲಿರುವ "ಸ್ಥಿತಿ". 492. (2) ಲಯ 492.

ಮನ : ಮನವನ್ನು ಚಿತ್ತವಲ್ಲಿ ನಿಲಿಸಬೇಕು 351. ಮನ ಲಿಂಗವಾದರೆ ನೆನಹು—ಗೆಡುವುದು 1085. ಇಂದ್ರಿಯಶುದ್ಧವಾದರೆ ಮನ ಶುದ್ಧವಾಗುವುದು 1102.

ಮನೋಲಯ : ಪೂಜಾ ಸ್ತೋತ್ರ ಜಪ ಧ್ಯಾನಗಳಿಗಿಂತ ಅಧಿಕ, ಶ್ರೇಷ್ಠ 1171.

ಮಲತ್ರಯ : ಆಣವ, ಮಾಯಾ, ಕಾರ್ಮಿಕ 937, 1255.

ಮಹಾಘನವಸ್ತು : ಮಹಾಘನವಸ್ತುವಿಂದ ಪರಮಾತ್ಮನೂ ಪರಮಾತ್ಮನಿಂದ ಅಂತರಾತ್ಮನೂ, ಅಂತರಾತ್ಮನಿಂದ ಜೀವಾತ್ಮನೂ ಉದಿಸಿದರು 745.

ಮಹಾಘನಶೂನ್ಯಬ್ರಹ್ಮ : (= ಶೂನ್ಯ ಪರಬ್ರಹ್ಮ) ಇದರಿಂದ ಅಂಗಸ್ಥಲ, ಲಿಂಗಸ್ಥಲ ಎಂಬೆರಡಾದವು. ಅಂಗಸ್ಥಲದಿಂದ ಇಪ್ಪತ್ತೈದು ತತ್ವಗಳೂ, ಲಿಂಗಸ್ಥಲದಿಂದ ಹನ್ನೊಂದು ತತ್ವಗಳೂ ಹುಟ್ಟಿದವು. ಶೂನ್ಯಪರಬ್ರಹ್ಮವು ದಿವ್ಯಾನಂದಲೀಲಾಭಾವದಿಂದ ಅಂಗಸ್ಥಲವಾಯಿತು, ಮತ್ತು ಭಕ್ತಿತದರ್ಥವಾಗಿ ಲಿಂಗಸ್ಥಲವೂ ಆಯಿತು 782.

ಮಹಾಜ್ಞಾನ : ನಿರಾಕಾರಕ್ಕೆ ಮಹಾಜ್ಞಾನವೆ ಪ್ರಾಣ 1137.

ಮಹಾಪ್ರಸಾದಿ : ಪ್ರಸಾದದ ಪೂರ್ವಾಶ್ರಯವನ್ನು ಕಳೆದವ 1141.

ಮಹಾಲಿಂಗ : ಮಹಾಲಿಂಗದ ಚಿದ್ಭಾವ—ದಿಂದೊಗೆದ(ನೋಡು 'ಚಿತ್ತು' 740) ಚಿನ್ಮೂರ್ತಿಗಳೆ ಸದಾಶಿವಾದಿಗಳು. ಅವರ ಚಿದ್ಭಾವದಿಂದ ಒಗೆದ ಚಿತ್—ಕಲಾಂಶಿಕವೆ ಬ್ರಹ್ಮ ವಿಷ್ಣು ಮೊದಲಾದ ಹಲವಾತ್ಮರುಗಳಾಗಿ ಮೂರ್ತಿಗಳಾದವು 742. ಮಹಾಲಿಂಗದ ಚಿದಂಗವೇ ಮುವ್ವತ್ತಾರು ತತ್ವಗಳಾದವು. ಆ ಮುವ್ವತ್ತಾರು ತತ್ವಗಳನ್ನೊಳಕೊಂಡು ಮೇಲಿರುವುದೇ ಮಹಾಲಿಂಗ 766.

ಮಾಹೇಶ್ವರ : ಛಲಸೂತಕವಿಲ್ಲದವ 1277.

ಯೋಗ (ಅಷ್ಟಾಂಗ — ) : ಯಮ, ನಿಯಮ, ಆಸನ, ಪ್ರಾಣಾಯಾಮ, ಪ್ರತ್ಯಾಹಾರ, ಧ್ಯಾನ, ಧಾರಣ, ಸಮಾಧಿ 257.

ಯೋಗಿಗಳು : ಅಂಗದ ಹೊಲಬನರಿಯದೆ ಯೋಗಿಗಳೆಲ್ಲ ಭಂಗಿತರಾದರು 516.

## ಲ

ಲಿಂಗ (ಷಟ್ — ) : ಆಚಾರಲಿಂಗ, ಗುರುಲಿಂಗ, ಶಿವಲಿಂಗ, ಜಂಗಮಲಿಂಗ, ಪ್ರಸಾದಲಿಂಗ, ಮಹಾಲಿಂಗ; ಇವುಗಳನ್ನು ಕ್ರಮವಾಗಿ—ಒಂದರಿಂದ ಒಂದನ್ನು—ಪಡೆಯಬೇಕು 757.

ಲಿಂಗತ್ರಯ : ಇಷ್ಟ, ಪ್ರಾಣ, ಭಾವ, 848.

ಲಿಂಗಪರಿಣಾಮ : ಕಾಯವೆಂಬ ಕಲ್ಪಿತವೂ, ಪ್ರಾಣವೆಂಬ ಸೂತಕವೂ ಹೋದಲ್ಲದೆ ಲಿಂಗಪರಿಣಾಮವಿಲ್ಲ 1119.

ಲಿಂಗಪ್ರಸಾದಿ : ಆದಿಯಿಲ್ಲದಿದ್ದರೆ ಲಿಂಗಪ್ರಸಾದಿ 167.

ಲಿಂಗಸಂಗಿ : ತನುಗುಣನಾಸ್ತಿಯಾದವ 1107.

ಲಿಂಗಸ್ವಾಯತ : ಮನವಿಲ್ಲದಿರುವಿಕೆ 1075.

ಲಿಂಗೈಕ್ಯ : ಕಾಯಜೀವಸಂಬಂಧವ ಬಲ್ಲಡೆ ಆತ ಲಿಂಗೈಕ್ಯ 804.

ಸಾಲದು. ಭಾವ ಬತ್ತಲೆಯಾಗಿ ಮನ ದಿಗಂಬರವಾಗಿರುವುದೇ ಸಹಜ— ನಿರ್ವಾಣ 530.

ಸ್ಥಲ (ತ್ರಿವಿಧ) : ಗುರು, ಶಿಷ್ಯ, ಲಿಂಗ 64.

ಸ್ವಪ್ನ : ದೇಹೋಹಂಭ್ರಮೆ. ಶಿವಾಂಶಿಕನೆಂಬುದನ್ನು ಮರೆತು ದೇಹೋಹಮೆಂದು ಭ್ರಮಿಸುವುದು 12.

ಸ್ವಯೋಭೋಗ : ಲಿಂಗ ಮತ್ತು ಶರಣ ಈ ಉಭಯದ ಸಂಗಸುಖಭೋಗವು ತಾನೆಯಾಗಿ ಭೋಗಿಸುತ್ತಿರುವುದು 783.

ಸ್ವಯೋಲಿಂಗ : ತಾನೇ ಲಿಂಗ 783.

ಸಾದಾಖ್ಯ (ಪಂಚ) : ಮೂರ್ತಿ, ಕರ್ಮ, ಕರ್ತೃ, ಅಮೂರ್ತಿ, ಶಿವ 782.

ಸಾದಾಖ್ಯಗಳು (ಷಡು—) : ಮಹಾವೃಕ್ಷದಿಂದ ಷಡುಸಾದಾಖ್ಯಂಗಳು ಉದಿಸಿದವು 892.

ಸಾಧನ ತ್ರಿವಿಧ= ಜ್ಞಾತೃ, ಜ್ಞಾನ, ಜ್ಞೇಯ 780; ಇವೇ ತ್ರಿವಿಧ ಭ್ರಾಂತಿಸೂತಕಗಳು 780.

ಸ್ವಾಯತ : ಪ್ರಾಣವು ಸಕಲ ನಿಃಕಲಲಿಂಗವಾದರೆ ಅದೇ ಸ್ವಾಯತ (ನೋಡು 'ಸನ್ನಹಿತ' 1082)

ಸಿದ್ಧ ಪ್ರಸಾದಿ : ಕಾಲನ ಕೊಂದಾತನಲ್ಲದೆ ಸಿದ್ಧಪ್ರಸಾದಿಯಲ್ಲ 1268.

ಸೂಕ್ಷ್ಮತನು : ಮನ ಬುದ್ಧಿ ಅಹಂಕಾರದಿಂದ ಆದುದು 774.

ಸ್ಥೂಲತನು : ಭೂತವೈದರಿಂದಾದುದು 774.

ಸೃಷ್ಟಿ : (1) ಸಹಜ > ನಿರಾಲಂಬ > ನಿರಾಳ > ನಿರವಯ > ಅನಾದಿ > ಶರಣ > ಸದಾಶಿವ > ಶಿವ (=ಈಶ್ವರ) > ರುದ್ರ > ವಿಷ್ಣು > ಬ್ರಹ್ಮ > ಸಕಲ ಜಗತ್ತು[ಇದು ಸೃಷ್ಟಿ ಕ್ರಮ] 742.
(2) ಅನಾದಿ > ಆದಿ> ಅತೀತ > ಅಕಾಶ > ವಾಯು > ಅಗ್ನಿ > ಅಪ್ಪು > ಪೃಥ್ವಿ > ಸಕಲ ಜೀವರು[ಇದು ಸೃಷ್ಟಿ ಕ್ರಮ] 743.
(3) ಅನಾದಿಪರಶಿವನು ಲೀಲೆಗೆ ಸಾಕಾರವಾದ 1052.

ಸ್ತೋತ್ರ : ಪೂಜೆಗಿಂತ ಶ್ರೇಷ್ಠ

—

# ವ್ಯಕ್ತಿನಾಮ ಪದಸೂಚಿ

ಮ



ಶ



ಸ

---

# ಸ್ಥಲನಾಮ ಪದಸೂಚಿ

# ಬೆಡಗಿನ ಪದಕೋಶ

| | |
|---|---|
| ಭೌತವರ್ಗ | ಭೂ_ಖಗೋಳ ವರ್ಗ |
| ಪಶು_ಪಕ್ಷಿ_ಪ್ರಾಣಿವರ್ಗ | ಗ್ರಾಮ_ಗೃಹ_ಸಾಮಗ್ರಿವರ್ಗ |
| ಸಸ್ಯವರ್ಗ | ದಿಕ್_ಸಂಖ್ಯಾವರ್ಗ |
| ಮಾನವ_ದೈಹಿಕವರ್ಗ | ಅತಿಮಾನವ ವರ್ಗ |

ಸಂಕೀರ್ಣವರ್ಗ

ವಿ.ಸೂ. :—ಅರ್ಥದ ಮುಂದೆ ಕೊಟ್ಟಿರುವ ಸಂಖ್ಯೆಯು ಅದು ಯಾವ ವಚನಕ್ಕೆ ಸಂಬಂಧಿಸಿದುದೆಂಬುದನ್ನು ಸೂಚಿಸುತ್ತದೆ; ಸಂಖ್ಯೆಯಿಲ್ಲದಿದ್ದರೆ ಆ ಅರ್ಥವು ಅಂಥ ಪದಕ್ಕೆ ಎಲ್ಲೆಡೆಯಲ್ಲೂ—ಅಂದರೆ ವಚನ 1 ರಿಂದ 694 ರವರಿಗೆ—ಅನ್ವಯಿಸುವುದು. 1—694 ರವರಿಗಿನ ವಚನಗಳಲ್ಲಿ ಸಿಗುವ ಬೆಡಗಿನ ಪದಗಳಿಗೆ ಕೊಟ್ಟಿರುವ ಅರ್ಥಕ್ಕೆ ಆಧಾರ ಮಹಲಿಂಗನು ಅವಕ್ಕೆ ಬರೆದಿರುವ ವ್ಯಾಖ್ಯಾನ. 735—784 ರವರಿಗಿನ ವಚನಗಳಲ್ಲಿ ಸಿಗುವ ಬೆಡಗಿನ ಪದಗಳಿಗೆ ಬರೆದಿರುವ ಅರ್ಥಕ್ಕೆ ಆಧಾರ ಕಲುಮಠದ ಪ್ರಭುದೇವರ ವ್ಯಾಖ್ಯಾನ. 1313-1321 ರವರಿಗಿನ ವಚನಗಳಲ್ಲಿನ ಬೆಡಗಿನ ಪದಗಳ ಅರ್ಥಕ್ಕೆ ಚೆನ್ನವೀರಾರ್ಯನು "ಶಿವಯೋಗ ಪ್ರದೀಪಿಕೆ"ಯಲ್ಲಿ ಆ ವಚನಗಳಿಗೆ ಬರೆದಿರುವ ವ್ಯಾಖ್ಯಾನವೇ ಆಧಾರ. ಆದ್ದರಿಂದ ಹೀಗೆ ಅರ್ಥೈಸುವಲ್ಲಿ ಈ ಗ್ರಂಥಸಂಪಾದಕನ ಸ್ವಂತ ಕಲ್ಪನೆ ಎಳ್ಳಷ್ಟೂ ಇಲ್ಲ.

## ಭೌತವರ್ಗ

### ಅ

ಅಗ್ನಿ : (1) ಜ್ಞಾನ (2) ಅಗ್ನಿಯವಿಕಾರ ದಿಂದಾದ ಭಿನ್ನರೂಪ 229. (3) ಕುಂಡಲಾಗ್ನಿ 270. (4) ಆತ್ಮ 293. (5) ಉದರಾಗ್ನಿ 569. (6) ತನುಗುಣಗಳಿರುವ ದೇಹ 616.

ಅಗ್ನಿ ಮುಖ : ಕುಂಡಲಾಗ್ನಿ 240.

ಅಗ್ನಿಯ ಒಡಲು : ಅಗ್ನಿಯಂಶಿಕವಾದ ಶರೀರ 322.

ಅಗ್ನಿಯ ಕಿವಿಮೂಗು : ಅಗ್ನಿಯಂಶ ದಿಂದಾದ ದುರಭಿಮಾನ ಮತ್ತು ಅಹಂಕೃತಿ 541

ಅನಲ : (1) ಜ್ಞಾನ (2) ತಾಪತ್ರಯ 151. (3) ಕುಂಡಲಾಗ್ನಿ 284. (4) ಅಗ್ನಿ ವಿಕಾರದ ರೂಪ ಲಕ್ಷಣ 565.

ಅನಲ (ರೂಹಿಲ್ಲದ—): ಜ್ಞಾನಾಗ್ನಿ 297

ಅಪ್ಪು :(1) ತನು ( = ಮನ ?) 252. (2) ಪ್ರಾಣ 293.

ಅವನಿ : ದೇಹ

ಅಂಗ : ದೇಹ

[ಭೌತವರ್ಗ]

ಅಂಬರ : (1) ಆತ್ಮ (2) ಆತ್ಮದ ಮರವೆ 319. (3) ಆತ್ಮತತ್ವ ತಾನೆಂಬ ಅಹಂಕಾರ 576.

ಆ

ಆಕಾಶ : (1) ಆತ್ಮ (2) ಆತ್ಮಜ್ಞಾನ 229. (3) ವ್ಯೋಮಚಕ್ರ 270, 588. (3) ಬ್ರಹ್ಮಾಂಡ 494. (4) ಮಹದಾಕಾಶ 665. (5) ಚಿದಾಕಾಶ 1321.

ಆಕಾಶಗಂಗೆ : ಬ್ರಹ್ಮರಂಧ್ರದ ಅಮೃತ ಗಂಗೆ 198.

ಆಕಾಶದ ಮೃದು : ಆತ್ಮ 19.

ಉ

ಉದಕ : (1) ಮನಸ್ಸು (2) ಮನದ ನೀವು 19. (3) ಅಪ್ಪುವಿನ ವಿಕಾರದಿಂದಾದ ಸಂಸಾರರಸ 229. (4) ಪರಮಾನಂದಜಲ 560. (5) ಧ್ಯಾನ 1320.

ಉದಕದ ಕೈಕಾಲು : ಮನಸ್ಸಿನ ಸಂಕಲ್ಪ ವಿಕಲ್ಪ 541.

ಉರಿ : (1) ಜ್ಞಾನ 36 (2) ತಾಪತ್ರಯ 30, 32, 768. (3) ಲಿಂಗ— ಜ್ಞಾನ, ಶರಣಜ್ಞಾನ 149. (4) ಶಿವಜ್ಞಾನಸ್ವರೂಪವಾದ ಕುಂಡಲಾಗ್ನಿ ಪ್ರಭೆ 238. (5) ಏಕ ರಸಭಾವ, 628.

ಉರಿಯಲಿಂಗ : ಸುಜ್ಞಾನಾಗ್ನಿ 418.

ಉರಿವ ಕಮಲ ; ಹೃದಯ 1320.

ಕ

ಕಿಚ್ಚು : (1) ಜ್ಞಾನ (2) ತಾಪತ್ರಯಾಗ್ನಿ 44. (3) ಅಹಂಕಾರ 114. (4) ಉಪತಾಪಾಗ್ನಿ 549. (5) ಉದ

[ಭೌತವರ್ಗ]

ರಾಗ್ನಿ ಇಲ್ಲದ ಉದಾತ್ತಸ್ಥಿತಿ 561.

ಕುಂಭಿನಿಯುದರ : ಅಹಂಕಾರಭಿತ್ತಿ 18.

ಗ

ಗಗನ : (1) ಆತ್ಮ (2) ಬಯಲು 34. (3) ವ್ಯೋಮಚಕ್ರ 245. (4) ಬ್ರಹ್ಮರಂಧ್ರ 422. (5) ಆತ್ಮಾಕಾಶ, ಚಿದಾಕಾಶ 415, 452. (6) ಪರಮಾತ್ಮ 434.

ಗಗನ ಮಂಡಲ : ಬ್ರಹ್ಮರಂಧ್ರ 247.

ಗಗನ ಸಿದ್ಧಾಂತ : ಆತ್ಮವಿದ್ಯೆ 281.

ಗಾಳಿ : ಪ್ರಾಣವಾಯು

ಗಾಳಿಯ ಧೂಳಿ : ರಜೋಗುಣಯುಕ್ತ— ವಿಕಾರ 211.

ಜ

ಜಲ : (1) ಮನಸ್ಸು (2) ರಸ 16. (3) ಸಂಸಾರ 28. (4) ಜಲ— ಬುದ್ಬುದಸದೃಶಪಿಂಡ 463. (5) ಸಂಸಾರರಸ 494.

ಧ

ಧರೆ : ದೇಹ

ಧಾರಿಣಿ : ಪಿಂಡ 340.

ಧಾರುಣಿ : ಲಿಂಗಕ್ಷೇತ್ರವಾದ ಶರಣನ ಸರ್ವಾಂಗ 690.

ನ

ನೀರ ಸುಟ್ಟ ಕಿಚ್ಚಿನ ಬೂದಿ : ಮನಸ್ಸನ್ನು ಮೂಲಜ್ಞಾನಾಗ್ನಿಯಲ್ಲಿ ಸುಟ್ಟ ಬಳಿಕ ಉಳಿವ ಚಿದ್ಭಸ್ಮ 278.

ನೀರು : (1) ಮನಸ್ಸು (2) ಮನದ ಸಂಚಲ 24. (3) ವಿಷಯರಸ 215, 1314. (4) ಜಲಬುದ್ಬುದ 313 (5) ಮನದ ವ್ಯಾಕುಲಪ್ರವಾಹ

## ಪಶು-ಪಕ್ಷಿ-ಪ್ರಾಣಿವರ್ಗ

[ ಪಶು-ಪಕ್ಷಿ-ಪ್ರಾಣಿವರ್ಗ ]



ಇ



ಉ



ಎ



[ ಪಶು-ಪಕ್ಷಿ-ಪ್ರಾಣಿವರ್ಗ ]



ಏ



ಒ



ಕ

[ ಪಶು-ಪಕ್ಷಿ-ಪ್ರಾಣಿವರ್ಗ ]

ಕುಱಿಗಳು : ಇಂದ್ರಿಯಗಳು 1317

ಕೆಚ್ಚಲು : ವಿಷಯರಸತುಂಬಿದ ಸ್ಥಾನ 48

ಕೇಸರಿ : ಸುಜ್ಞಾನ 261

ಕೊಕ್ಕಱನಾಯಿತ್ತು : ಹೋರಾಟ ನಡೆಸಿತ್ತು 371

ಕೊಂಬು : (1) ಅಹಂಕಾರ 313, 539 (2) ಅಹಂಕಾರ ಮಮಕಾರ 38

ಕೋಗಿಲೆ (ಕರಿಯ_): (1) ಕ್ರಿಯಾಶಕ್ತಿ (2) ಸತ್ತ್ರಣವ ಜ್ಞಾನ 1314

ಕೋಡಗ : ಮನಸ್ಸು 31, 49, 211, 313, 543, (2) ಸ್ವಭಾವತತ್ವವೆಂಬ ಉನ್ಮನಿತತ್ವ 111

ಕೋಡಗ (ಆಡಾಡ ಬಂದ—) : ಸ್ವಾನುಭಾವವಿವೇಕದಿಂದ ಆಚರಿಸುತ್ತಿದ್ದ ಮನಸ್ಸು 555

ಕೋಡು (ಎರಡು) : ಅಹಂಕಾರಮಮಕಾರ 249

ಕೋಣ : ಜೀವ 38

ಕೋಣ (ಕಾಡು—) : ಜೀವ 479

ಕೋಳಿ : (1) ವೃತ್ತಿಜ್ಞಾನ 299 (2) ಮೂಲಜ್ಞಾನದಲ್ಲಿ ಸಮುದ್ಭವಿಸಿ ಶರಣನಿಗೆ ಅರಿವನೆಚ್ಚರಿಸಿಕೊಟ್ಟು ಸೋಹಂ ಎಂದು ಧ್ವನಿಮಾಡುವುದರಿಂದ ಆ ಸತ್ತ್ರಣವಕ್ಕೆ ಕೋಳಿ ಎಂದು ಸಂಜ್ಞೆ 371

ಕೋಳಿ (ಸತ್ತ—) : ಸತ್ತ್ರಣವ 439

## ಗ

ಗಜ : (1) ಅಹಂಕಾರ (2) ಸೋಹಂ ಎಂಬ ಮದ 238

ಗಜ (ಮದ_) : (1) ಅಹಂಕಾರ (2) ಅಷ್ಟಮದ 211, 328

ಗರಿ : (ಮುನ್ನೂಱಱವತ್ತು — ) : ಮುನ್ನೂರರವತ್ತು ದಿನಗಳು 1318

[ ಪಶು-ಪಕ್ಷಿ-ಪ್ರಾಣಿವರ್ಗ ]

ಗರುಡ : ಕಾಲಪಕ್ಷಿ 1318

ಗಿಳಿ : ಪರಮಹಂಸ 36

ಗಿಣಿ : ಪರಮಹಂಸ 597

ಗಿಣಿ (ಅನಂತನೆಂಬ—) : ಅಪ್ರಮಾಣದ ಪರಮಹಂಸನು 597

ಗಿಳಿ (ಅಭಿನವ—) : ಜೀವ 15

ಗಿಳಿ (ಇಪ್ಪತ್ತೈದು — ) : ಪಂಚವಿಂಶತಿಭೂತಗಳು (ಜೀವನು ಪಂಚವಿಂಶತಿ ಭೂತಾತ್ಮಕನು) 15

ಗುಬ್ಬಿ : ಸರ್ವಾಚಾರ 1315

ಗೂಡು : ಪಂಚಭೂತಪಿಂಡವಾದ ದೇಹವೆಂಬ ಮನೆ 208

ಗೋಸಾಸಿರ : ಸಹಸ್ರಸೂಕ್ಷ್ಮನಾಳಗಳಲ್ಲಿ ಚರಿಸುವ ಪ್ರಾಣವಾಯು 260

## ಚ

ಚಿಕ್ಕಾಡು : ಅಣುಮಾತ್ರವಿರುವ ಚಿತ್ತು 681

ಚೇಳು : ಮಿಥ್ಯೆ 375

## ತ

ತತ್ತಿ : ಚಿದ್ಬ್ರಹ್ಮಾಂಡದೊಳಗೆ ಹುಟ್ಟಿದ ಪ್ರಪಂಚಬ್ರಹ್ಮಾಂಡ 13

ತತ್ತಿ (ಮೂಱು—) : ಸ್ಥೂಲ ಸೂಕ್ಷ್ಮ ಕಾರಣವೆಂಬ ದೇಹತ್ರಯ 681

ತುಪ್ಪುಳು : ಕುರುಹು 768.

ತುಂಬಿ : (1) ಪರಿಪೂರ್ಣ 112, 241, 429, 679, 680. (2) ಪರಿಪೂರ್ಣವೆ ತಾನೆಂಬ ಅಹಂಕಾರ 689. (3) ಲಿಂಗ 306. (4) ಜ್ಞಾನ 306.

ತುಂಬಿಯಾಳಾಪ (ಒಂಬತ್ತು —) : ದೇಹದ ನವದ್ವಾರಗಳೊಳಗೆ ಪರಿಪೂರ್ಣವಾಗಿರುವ ಪ್ರಾಣಲಿಂಗಪ್ರಭೆಯ ಶಿವೋಹಂಭಾವ 112.

[ ಪಶು-ಪಕ್ಷಿ-ಪ್ರಾಣಿವರ್ಗ ]

ತುಂಬಿ (ಮಜಾ) : ಅಜ್ಞಾನ, ಭ್ರಮೆ 95
ತೋಳ : ಮೃತ್ಯು 1314, 1317

ದ

ದುಂಬಿ (ಮಜಾ—) : ಅಜ್ಞಾನ, ಭ್ರಮೆ 95

ನ

ನಂದಿ : ಲೋಕವೆಲ್ಲಕ್ಕೂ ಆದಿಯಾದ ಮತ್ತು ಪ್ರಥಮದಲ್ಲಿ ಅಂಗದೊಳಗೆ ಅಳವಟ್ಟ ಚಿತ್ತ 433
ನಂದಿ ನಂದಿಯ ಸುಂಗಿ : ತನುಮುಖ-ಸಂಬಂಧದಿಂದ 25
ನಾಯಿ : ಇಂದ್ರಿಯ 46, 49
ನಾಯಿ (ನಾಡ-) : ಇಂದ್ರಿಯ 1314
ನೆಗಳು : ಮೃತ್ಯು 360.
ನೊಣ : ಸಂಶಯ 681

ಪ

ಪಕ್ಕ ( =ಪಕ್ಷ =ರೆಕ್ಕೆ ) : ಭಕ್ತಿ ಮತ್ತು ಜ್ಞಾನ 768
ಪಕ್ಕ (ಆಱು—) : ಆರು ಋತುಗಳು 1318
ಪಕ್ಷಿ : (1) ಜೀವ 34. (2) ಪರಮಹಂಸ 297 (3) ಮನಸ್ಸು 768.
ಪಕ್ಷಿ (ಎರಡು—) : ರವಿ ಮತ್ತು ಶಶಿ 1318.
ಪಕ್ಷಿ (ಹಲವು—) : ಪಂಚವಿಂಶತಿ ತತ್ತ್ವಗಳೊಳಗೆ ಲಯವಾಗಿರುವ ಜೀವ ಹಂಸನ ಪಾದದ ಬಹುಗತಿ 671
ಪಂಜರ : (1) ದೇಹ 36 (2) ದೇಹ-ಭಾವ 95 (3) ಪ್ರಣವಕ್ಕೆ ಪಂಜರವಾಗಿರುವ ಚಿದ್ಬಿಂದುವಿನ ಅರಿವು 371
ಫಣಿ : (1) ಕುಂಡಲಿನಿ 272 (2) ಮೂಲಕುಂಡಲಿ 1321

[ ಪಶು-ಪಕ್ಷಿ-ಪ್ರಾಣಿವರ್ಗ ]

ಫಣಿಯ ಹೆಡೆಯ ಮಣಿಯ ಮೇಲೊಂದು ಮಣಿ : ಸತ್ತ್ರಣವಜ್ಞಾನದಲ್ಲಿ ಬೆಳಗುತ್ತಿರುವ ಸುಜ್ಞಾನ 1321
ಪ್ರಾಣಿಗಳು : ಜೀವರ ಜೀವಭಾವ 227

ಬ

ಬಳ್ಳು : (1) ಶಿವೋಹಂ ಎಂಬ ಧ್ವನಿ 111 (2) ಕ್ರೀ 1320
ಬೆಕ್ಕು : (1) ಪರಿಪೂರ್ಣಜ್ಞಾನ 299 (2) ತನ್ನ ನಿಲವು 36
ಬೆಕ್ಕು (ನಾಸಿಕ—) : ವಾಸನಾಶ್ರದ್ಧೆ 371
ಬೆಳ್ಳಕ್ಕಿ : ಶುಭ್ರವರ್ಣವುಳ್ಳ ಪರಮಹಂಸ 619

ಮ

ಮಂಜರನೇತ್ರ : ಅಜ್ಞಾನವೆಂಬ ಮನಸ್ಸು ಮುಂದಿದ್ದರೂ ಪರಶಿವತತ್ತ್ವವನ್ನರಿಯಬೇಕೆಂಬ ಅರ್ಥದ ಸುಜ್ಞಾನದ ನಿಬ್ಬರದ ನೋಟ 240
ಮತ್ಸ್ಯ : ಲಿಂಗದ ಮುಖ 1320
ಮಱಿ : ಜೀವ 1314
ಮಱಿ ( ಎರಡು— ) : ಜೀವ ಮತ್ತು ಪರಮ 1317
ಮಱಿಗಳು : ಕರಣೇಂದ್ರಿಯಗಳು 768
ಮೃಗ : (1) ಜೀವ 215, 293, 319 (2) ಜೀವಭಾವ 319 (3) ಮಾಯೆ 561
ಮೃಗ ( ಆರುಬಣ್ಣದ — ) : ಷಡುವರ್ಣಾತ್ಮಕ ಸ್ವರೂಪವಾಗಿರುವ ಮಾಯೆ 664
ಮೃಗ ( ಸತ್ತ— ) : ದೇಹಭಾವವನ್ನು ಬಿಟ್ಟು ಶಿವಭಾವವನ್ನು ಪಡೆದ ಜೀವ 215
ಮೊಲ : ಜೀವ 286

## ಸಸ್ಯವರ್ಗ

### ಅ

ಅಡವಿ : ಭವ, ಭವಾರಣ್ಯ 33, 220, 319
ಅರಣ್ಯ : ಭವಾರಣ್ಯ, ಭವ, 76, 151, 537
ಅರಳಿಯ ಮರ : ಉಲಿವ ಶಬ್ದ, ವಾಗ್ಜಾಲ 208

### ಎ

ಎಲೆ (ಐದು—) : ಪಂಚಕರ್ಮೇಂದ್ರಿಯ 242
ಎಲೆ (ಹತ್ತು—) : ದೇಹವೆಂಬ ವೃಕ್ಷಕ್ಕೆ ದಶನಾಳಗಳೆ ಶಾಖೆಗಳು; ಆ ಶಾಖೆಗಳೊಳಗೆ ಪ್ರಾಣವಾಯು ದಶಮುಖ-ಪ್ರಪಂಚವನ್ನು ತಳೆದಿರುವುದು. ಆ ಪ್ರಪಂಚುಗಳೆ ಎಲೆಗಳು 592

### ಕ

ಕದಳಿಯ ಬನ : ಕಾಯ, ದೇಹ 229
ಕಮಲಗಳು (ಎಸಳಾಱು—) : ಷಟ್ಚಕ್ರಗಳು 1315
ಕಾಡು : (1) ಭವ, ಭವಾರಣ್ಯ 49, 76, 151, 537, 1314 (2) ದೇಹ 1314
ಕಾಡುಗಿಚ್ಚು : ತಾಪತ್ರಯ 76
ಕಾಯಿ (ಐದು—) : ಪಂಚಜ್ಞಾನೇಂದ್ರಿಯಗಳು 242
ಕಾಯಿ (ಹತ್ತು—) : ? 592
ಕಾರೆಯ ಮುಳ್ಳು : ವಿಷಯಾದಿಕಂಟಕ 111
ಕೊನೆ : ಉನ್ಮನಿ 1314
ಕೊಂಬು (=ಕೊಂಬೆ) : (1) ಇಂದ್ರಿಯ 31 (2) ಸರ್ವಾಚಾರಸಂಪತ್ತು 532 (3) ಮೇರುಶಿಖರ 1318

## [ಸಸ್ಯವರ್ಗ]

### ಗ

ಗಿಡು : (1) ದೇಹ 306, 313, 592 (2) ಸದಸದ್ವಿವೇಕ. 532, 561 (3) ವಿವೇಕವೃಕ್ಷಸ್ವರೂಪನಾದ ಶರಣ 566
ಗಿಡು (ಐದು ಬಣ್ಣದ—) : ಪಂಚಭೂತಾತ್ಮಕ ದೇಹ 242
ಗಿಡು (ಬೇರಿಲ್ಲದ—) : ಚಿತ್ತೆಂಬ ಪಿಂಡ 297
ಗಿಡು (ಹತ್ತು ಬಣ್ಣದ—) : ದಶವಾಯುಗಳಿಂದ ಬದ್ಧವಾದ ದೇಹ 592
ಗಿಡು (ಹುಟ್ಟದ—) : ಜನನವಿರಹಿತ ಶಿವಜ್ಞಾನ 375
ಗೊನೆ : ಸ್ಥಳ 1314

### ತ

ತಱಗೆಲೆ : ಸಂಸಾರ 39
ತಾಳಮರ : ದೇಹ. ತಾಳೆಯ ಮರವು ಮದ್ಯರಸಕ್ಕೆ ಪ್ರಯೋಜನವಲ್ಲದೆ ಯಾತಕ್ಕೂ ಬಾರದು. ಅಷ್ಟಮದ-ಭೂಯಿಷ್ಟವಾದ ದೇಹವೂ ಅಷ್ಟೆ. 286, 617
ತಾಳ ಮೇಲೆ ಕೇಳುವ ಸುನಾದ (ಏಳು—): ಸುಷುಮ್ನನಾಳದ ಸಪ್ತಗ್ರಂಥಿಗಳ ಕಟ್ಟುಚ್ಚಿ ಬ್ರಹ್ಮರಂಧ್ರವನ್ನು ಸೇರಿದರೆ ಅಲ್ಲಿ ಕೇಳಬರುವ ಸತ್ಪ್ರಣವ 287
ತಾಳ (ಏಳು—) : ಸುಷುಮ್ನನಾಳದ ಸಪ್ತಗ್ರಂಥಿಗಳು 287
ತಿರುಳು : ಪರತತ್ವವೆಂಬ ನಿರ್ಬೀಜ
ತೋಟ : ದೇಹ 44
ತೋಟ (ಅಱುಮೂಱು ಒಂಬತ್ತು—) : ನವಚಕ್ರದಳಗಳು 1314

### ದ

ದಳ (ವೃಕ್ಷವಿಲ್ಲದ—) : ದೇಹಭಾವವಿಲ್ಲದ

[ಮಾನವ-ದೈಹಿಕವರ್ಗ]

ಹ

ಹಗಿಸು : ದೇಹದಲ್ಲಿ ಹುಟ್ಟುವ ಸಂಸಾರ-ರಸ 616
ಹಣ್ಣು : ಪ್ರಸಾದ 242
ಹವಳಬಳ್ಳಿ : ಮಂತ್ರಚೇತನ 1315
ಹುಲ್ಲು : ಸಂಸಾರಪ್ರಪಂಚು 286, 511
ಹುಲ್ಲು : ? 560
ಹುಲ್ಲು ನೀರು : ಸಂಸಾರವಿಷಯರಸಾದಿಗಳು 1314
ಹುಳ್ಳಿ : ಜೀವ 47
ಹೂವು : ಶತಪತ್ರ, ಸಹಸ್ರಾರ, ಬ್ರಹ್ಮರಂಧ್ರದ ಶತಪತ್ರ 422
ಹೂ (ಒಂದೆ-) : ಏಕಮೇವ ಪರಬ್ರಹ್ಮ 420
ಹೂ (ಐದು—) : ಪಂಚವಿಷಯಗಳು 242
ಹೂ (ಸಿಡಿಲ ಬಣ್ಣದ ಎಂಟು-) : ಅಷ್ಟತನುಗಳೆಲ್ಲ ಸದ್ವಾಸನಾರೂಪವನ್ನು ಪಡೆದು, ನಿಜವು ವಿಕಸಿತವಾಗಿ, ಜ್ಯೋತಿರ್ವರ್ಣವನ್ನು ಧರಿಸಿರುವುದು 532
ಹೂ (ಹತ್ತು-) : ಪ್ರಪಂಚಗಳೊಳಗಿನ ದಶೇಂದ್ರಿಯವಾಸನೆಯೆಂಬ ಹೂಗಳು 592
ಹೂಮಿಡಿ ಫಲಂಗಳು : ಚತುರ್ವಿಧ ಫಲಪದಗಳು 346

ಮಾನವ-ದೈಹಿಕವರ್ಗ

ಅ

ಅಕ್ಕ : ಅನಾದಿ 1314
ಅಂಗ : ಸಂವತ್ಸರ [ಅರವತ್ತು ವರ್ಷಗಳಾದರೆ ಒಂದು ಸಂವತ್ಸರ] 1319

[ಮಾನವ-ದೈಹಿಕವರ್ಗ]

ಅಂಗನೆ (ಅಂಗವಿಲ್ಲದ—) : ಅಕಾಯರೂಪಿಣಿಯಾದ ಪರಾಶಕ್ತಿ 9
ಅಂಗನೆ (ಐದು ಮುಖದ-): ಪಂಚಭೂತಮುಖಿಯಾದ ಮಾಯೆ 70
ಅಂಗುಲಿ : ದಿನಗಳು 1319
ಅಂಗೈಯ ಮೊಲೆ: ಕರಸ್ಥಲದ ಲಿಂಗ 17
ಅಟ್ಟೆ ಅಜ್ಞಾನ 400
ಅಟ್ಟೆ ಸಹಸ್ರವಾಗು : ಕರಣಗಳೆಲ್ಲ ಲಯವಾಗು 537
ಅತ್ತೆ : (1) ಶರಣನ ಹೆಂಡತಿಯಾದ ಜ್ಞಾನಶಕ್ತಿಯ ತಾಯಿ ಪರಾಶಕ್ತಿ 111 (2) ಪ್ರಕೃತಿ, (3) ಜ್ಞಾನಶಕ್ತಿ 1308, 1314, 1320
ಅಧರಪಾನ : ಪಶ್ಚಿಮನಾಳವನ್ನು ಬಗೆದೆಗೆದು ಪಡೆದ ಅಮೃತಬಿಂದು 406
ಅಂಧಕ (ಕಣ್ಣಿಲ್ಲದ-) : ನಿಜವನರಿಯದ ಯೋಗಿ 1321
ಅಜುಹಿಸವರು : ಶಿವಜ್ಞಾನಾದಿಕರಣಗಳು 1317
ಅಳಿಯ : (1) ಶರಣ 1314, (2) ಆತ್ಮ 1320
ಅಸಿಯಳು : ಲಿಂಗ 1315

ಎ

ಎಂಜಲು : ಭವಭವಗಳಲ್ಲಿ ಉಂಡುಂಡು ಮಿಕ್ಕ ಪ್ರಾರಬ್ಧಕರ್ಮ 509

ಒ

ಒಡಯರು : ಜ್ಞಾನಸಂಬಂಧಿಗಳು 566
ಒಡಲು : ಅಂತರ್ದೇಹ
ಒಡಹುಟ್ಟಿದಳಾದಳು : ಶಿಷ್ಯನು ಗುರುತತ್ತ್ವಸಹಿತವಾಗಿ ಉದಯವಾದನು 80

ಕ

ಕಂಗಳ ಕರುಳು : ಇದಿರಿಟ್ಟು ತೋರುವ ಭಿನ್ನರೂಪ 451

[ಮಾನವ-ದೈಹಿಕವರ್ಗ]

## ಪ



## ಬ



[ಮಾನವ-ದೈಹಿಕವರ್ಗ]



## ಭ



## ಮ

ಶೇಷನೆಂಬ ಶರಣ 588 (5) ಸುಜ್ಞಾನ 670

ಶಿಶು (ಕುಳ್ಳಿರ್ದ—) : ಸ್ಥಿರಚಿತ್ತ 111

ಶಿಶು (ನಿರಾಳವೆಂಬ—) : ಮಹಾಜ್ಞಾನ-ತತ್ವ 665

ಶಿಶು (ಹುಟ್ಟಿದ—) : ಶಿಷ್ಯ 1310

ಶಿಶು ತಾಯ ಬೆಸಲಾಗಿ : ತಾನೆಂಬ ಭಾವವನ್ನು ಕಳೆದುಳಿದ ಶರಣನು ತಾನೇ ಶಿವತತ್ವಸ್ವರೂಪನಾಗಿ ಆ ಚಿತ್ ಶಕ್ತಿಗೆ ತಾನೇ ಮಾತೃಸ್ಥಾನವಾದ 17

ಶಿಷ್ಯ (ವ್ರತಗೇಡಿ—) : ಭಿನ್ನವ್ರತ ನೇಮುಗಳಳಿದು ಅಲ್ಲಿ ಲೀನವಾದ ಶಿಷ್ಯ 630

## ಸ

ಸತಿ (ನಡೆವ—) : ಕ್ರಿಯಾಶಕ್ತಿ 89

ಸತಿ (ಮೇಲುದಾಯದಲೊಬ್ಬ —) : ಪರಾಶಕ್ತಿ 86

ಸ್ವಪ್ನ : (1) ದೇಹೋಹಂಭಾವ 12 (2) ಮಿಥ್ಯೆ 34

ಸ್ವಾಮಿ : ದೇಹಿ, ದೇಹಧಾರಿಯಾದ ಜೀವಾತ್ಮ 33

ಸೂಕ್ಷ್ಮನಾಳ : ಸುಷುಮ್ನನಾಳ 247

## ಹ

ಹಜ್ಜೆ : (1) ಮಹಾಸತ್ಪಥದ ನಿಜ 299 (2) ನಿಂದ ನಿಲವು 664

ಹಜ್ಜೆಯನಿಕ್ಕು (ಮುಂದಣ—) : ಸತ್ಪಥದಲ್ಲಿ ಅಡಿಯಿಡು 215

ಹಲ್ಲು : ಇದಮಹಂ ಎಂಬ ಮಥನ 555

ಹಸುಗೂಸು : ಜೀವನು 1320

ಹೃದಯದ ಕಂದ : ಮೂಲಾಹಂಕಾರ 28

ಹೆಂಡತಿ : (1) ಶಿಷ್ಯ 80 (2) ಶರಣ 1309

ಹೆಂಡತಿ (ಆದಿಯ—): (1) ಜ್ಞಾನಶಕ್ತಿ 89 (2) ದೇಹಭಾವ 1317

ಹೆಂಡಿರು : ಶರಣರು 1314

ಹೆಣ (ಆನೆಯ—) : ದೇಹ

ಹೆಣ (ಐದು—) : ಶಬ್ದ ಸ್ಪರ್ಶ ರೂಪ ರಸ ಗಂಧ 26

ಹೆಣ (ಕಾಯವಿಲ್ಲದ—) : ಅಕಾಯನಾದ ಶರಣ 588

# ಭೂ—ಖಗೋಳವರ್ಗ

## ಅ

ಅರ್ಕನ ಅದ್ಭುತದಲ್ಲಿ : ಸೂರ್ಯಗ್ರಹಣ ಚಂದ್ರಗ್ರಹಣವೆಂಬೆರಡು ಶಿವಶಕ್ತಿ ಗ್ರಹಣದಲ್ಲಿ 192

ಅಂಬುಧಿ : ಭವಸಾಗರ 249

ಅಜೀ : ಜಡರೂಪವಾದ ದೇಹ 557

ಅಸ್ತಮಾನ : ಮನೋಲಯ 539

## ಆ

ಆದಿಪುರ : ಚಿದ್ಬಿಂದುಪಿಂಡ 452

## ಇ

ಇರುಳು : ಅಜ್ಞಾನ 13, 218

ಇರುಳು ಹಗಲು : ಅಜ್ಞಾನ ಸುಜ್ಞಾನ 222

ಇಂದುರವಿಗಡಣ : ಜ್ಞಾನವಿಪರೀತಭಾವ, ಸುಜ್ಞಾನಪ್ರಭೆ 25

## ಉ

ಉಡು : ನಕ್ಷತ್ರಲಕ್ಷಣವುಳ್ಳ ಕಂಗಳ ನಾಳದ ಸೂಕ್ಷ್ಮತೇಜಸ್ತತ್ವ 602

ಉತ್ತರಾಪಥ : (1) ಮೋಕ್ಷಮಾರ್ಗ 227 (2) ಮೋಕ್ಷ 418

ಉದಯ : ಜನನ 539

[ಭೂ-ಖಗೋಳವರ್ಗ]

ಚಂದ್ರಸೂರ್ಯ : ಈಡಾಪಿಂಗಳ 259 (2) ಶಿವಶಕ್ತಿ 309, 539 (3) ಶಾಂತಿದಾಂತಿ 415, 539

ಚಂದ್ರಾಹಾರ : ಅಮೃತಾಹಾರ 570

## ಜ

ಜಲಧಿವಳಯ : (1) ಪರಮಾಮೃತಾಂಬುಧಿ 274 (2) ಅಪ್ಪುಮಯವಾದ ದೇಹ 769

ಜಂಬೂದ್ವೀಪ : ಸ್ಥೂಲತನು 18

## ತ

ತಟಾಕ : ಅಮೃತಬಿಂದು 251

ತಾರಕಿ : ಪರಮಚಿತ್ಕಲಾಲಿಂಗ 758

ತಾರಕಿ (ಮಿಂಚುವ—) : ಮಹಾಜ್ಞಾನ ಪ್ರಭೆ 258

ತುಂಬು ( = ತೂಬು) : ಚಿತ್ತ 1310

ತೂಬು (ಒಂಬತ್ತು—) : ನವನಾಳಗಳು 494

ತೊಟ್ಟಿಲು : ಅಂಗದಾಚಾರ 1309, 1310.

ತೊಱೆ : ಹರಿವ ಮನಸ್ಸು 664

ತೊಱೆ (ತುಂಬಿದ—) : ಸಂಸಾರ 360

## ದ

ದಿನ (ಆಱು—) : ಷಡಂಗಯೋಗ 48

ದಿನ (ಮೂಱು—) : ಜ್ಞಾತೃ ಜ್ಞಾನ ಜ್ಞೇಯವೆಂಬ ತ್ರಿಸೋಪಾನ 48

ದಿನಕರ : ಪ್ರಾಣ 1308

ದಿವ : ಅರಿವು 13

ದಿವಾರಾತ್ರಿ : ಅರಿವು ಮರವೆ 13

ದಿವಿ : ಹಗಲು 1319

ದೇವಲೋಕದ ಪುಷ್ಪ : ಸಹಸ್ರದಳ-ಕಮಲ 197

[ಭೂ-ಖಗೋಳವರ್ಗ]

ದೇಶ (ಆಱುಮೂಱು—) : ಒಂಬತ್ತು ಅಂಗ 1317

ದೇಶ (ದಿಕ್ಕುಗೆಟ್ಟ—) : ಭಕ್ತಿರಾಜ್ಯ 1314

ದೇಶ (ನಾಲ್ಕು—) : ನಾಹಂಮುಖ್ಯ ಚತುರ್ವಿಧಭಾವ 1317

ದೇಶದಲ್ಲಿ ಬೞಿನಾಯಿತ್ತು : ಶಿರೋಲಿಖಿತ ವಳಿಯಿತು 227

## ಧ

ಧಾತು (ದೂರದ—) : ಪರಮಾರ್ಥಕ್ಕೆ ದೂರಸ್ಥವಾಗಿರುವ ಷಡುವರ್ಣಗಳ ರೂಪು 235

ಧಾರಾವರ್ತ : ಸಂಸಾರಸಾರ 340

## ನ

ನೀಲಗಿರಿ : ಅಜ್ಞಾನಾಹಂಕಾರ 485

ನೆಳಲು : (1) ಸದ್ಭಾವಚ್ಛಾಯೆ 242 (2) ಮರೆ, ಅಜ್ಞಾನ 111 (3) ಮಾಯೆ 459, 561, 616, (4) ಸಂಕಲ್ಪವಿಕಲ್ಪ 634 (5) ಮನಸ್ಸು, ಮನದ ಮಱವೆ 769

## ಬ

ಬಯಲ ಮರ : ಮಿಥ್ಯೆ ಎಂಬ ವೃಕ್ಷ 662

ಬಯಲ ಸುಟ್ಟ ಕಿಚ್ಚಿನ ಬೂದಿ : ಮಿಥ್ಯೆಯನ್ನು ಮಹಾಜ್ಞಾನಾಗ್ನಿಯಲ್ಲಿ ಸುಡಲು ಉಳಿದ ಶಿವತತ್ವ 278

ಬಯಲು : (1) ಜಗತ್ತು ಮಿಥ್ಯೆಯೆಂದರಿಯುವುದು 16 (2) ಮಿಥ್ಯೆ 278. (3) ನಿರಾಳತತ್ವ 292, (4) ನಿರ್ದೇಹ 296 (5) ಶಿವತತ್ವ 400 (6) ಮಾಯಾಮಿಥ್ಯೆ 504 (7) ಶಿವೋಹಮೆಂಬ ಪದ (=ಸ್ಥಾನ)

[ಗ್ರಾಮ-ಗೃಹ-ಸಾಮಗ್ರಿವರ್ಗ]

ಊಷ್ಮತೃಷೆ : ಕಾಮೋಷ್ಣವೆದ್ದು ಉಂಟಾಗುವ ಆಶಾತೃಷ್ಣೆ 18

ಏ

ಏರಿ : ದೇಹ 1314

ಒ

ಒನಕೆ : ಏಕೋಭಾವ 634

ಒರಳು : ತನು 634

ಒಲೆ : (1) ತನುತ್ರಯ 226 (2) ತ್ರಿಪುಟ 1314 (3) ತ್ರಿಗುಣ 1314

ಓ

ಓಕುಳಿ (ಪರಿಮಳದ—) : ಸ್ವಾನುಭಾವ ವಾಸನೆ 235

ಓಗರ : ಸ್ವಯಂಪ್ರಕಾಶವೆಂಬ ಪದಾರ್ಥ 576

ಓಗರ (ಒಂದೆ—) : ನಿತ್ಯತೃಪ್ತಲಿಂಗಕ್ಕೆ ಆ ಶರಣನೊಬ್ಬನೆ ಪದಾರ್ಥ 420

ಓಗರ (ಹೆಸರಿಲ್ಲದ—) : ಪರಮಹರ್ಷದಿಂದಾದ ಮನವೆಂಬ ಶುದ್ಧದ್ರವ್ಯವನ್ನು ಜ್ಞಾನಾಗ್ನಿಯಿಂದ ಪಾಕಮಾಡಲು, ಅದು ಅನ್ನಬ್ರಹ್ಮವೆಂಬ ನಾಮವನ್ನು ಪಡೆದು ನಿರ್ನಾಮವಾಗಿರುವಿಕೆ.

ಓಡು : (1) ಹೃದಯ 1314 (2) ಪ್ರಕೃತಿ 1314

ಓಲೆ : ಪ್ರಾರಬ್ಧಲಿಪಿ 290

ಕ

ಕಟ್ಟೆ (=ಕಲ್ಲುಕಟ್ಟೆ) : ಮನಸ್ಸು 773

ಕಡುಗಲಿವಿದ್ಯೆ : ಸದ್ವಿದ್ಯೆ 690

ಕದನ : ಅನುಭಾವದ ಹೋರಟೆಯ ಕದನ 611

ಕಂದಲಿ : ದೇಹ 680

[ಗ್ರಾಮ-ಗೃಹ-ಸಾಮಗ್ರಿವರ್ಗ]

ಕಂಪಲು : (1) ದೇಹಭಾವ 245 (2) ದೇಹ 1312, (3) ಶಿವಭಾವ 1317

ಕನ್ನಡಿ : ತನ್ನನಿದಿರಿಟ್ಟು ನೋಡಿ ತನ್ನನರಿಯುವುದು 102

ಕರ್ಪೂರ : ಸ್ವಾನುಭಾವ 101

ಕಂಬಳಿ : ಮಹಾಜ್ಞಾನ

ಕಂಬಳಿ (ಜಾಡಿಸಿ=ಜಾಡಿಸಿದ—) : ಸುಮ್ಮಜ್ಞಾನ 1317

ಕಂಭ : (1) ಶರಣನ ಏಕೋಭಾವ 430, 671 (2) ಭಾವ 291, 1310 (3) ದೃಢಬುದ್ಧಿ 16 (4) ದೇಹ 1313

ಕಂಭ (ಅರಗಿನ—) : ಶರಣನ ಭಾವ 605

ಕಂಭ (ಚೌಕದಲ್ಲಿ ಎರಡು—) : (a) [ವಚನಸಾರದ ಪಾಠಾಂತರದ ಪ್ರಕಾರ] ಶಿವ ಮತ್ತು ಶಕ್ತಿ 194 (b) (ಚೌಕದವೆರಡು—) : [ಮಹಲಿಂಗನ ವ್ಯಾಖ್ಯಾನದ ಪ್ರಕಾರ] ಚೌಕಾಕಾರವಾದ ಎರಡು ಕಂಭ ಅಂದರೆ ಶಿವ ಮತ್ತು ಶಕ್ತಿ 194

ಕಂಭ (ತಳ—) : ಏಕೋಭಾವ 112

ಕಂಭ (ಜವಳಿ—) : ಲಿಂಗನಿಷ್ಠೆ 99

ಕಬ್ಬಿಲ (ಕರಿಯ—) : ಕಾಮ

ಕಬ್ಬುನ : ದೇಹ 228

ಕಳಶ : (1) ಸುಜ್ಞಾನ (2) ? 598

ಕಳಶ (ಇಟ್ಟ—) : ಭಕ್ತಿ 1309

ಕಳ್ಳರು : ಇಂದ್ರಿಯಗಳು 33

ಕಳ್ಳ (ಜವನ ಕದ್ದ—) : ಶಿವ 124

ಕಿಚ್ಚು : ? 616

ಕೀಲು (ರಥದ—) : ದೇಹವು ನಿರ್ವಯಲಾಗುವ ಸಂಚ 581

ಕುಲದಲಧಿಕನು : ಜೀವ 50

ಕೂಳು (ಕೊರೆ—) : ಆಹಾರ 15

ಕೆಂಗಟಾಗೋಲು : ಶಿವಜ್ಞಾನ 1313

ಕೆಂಡ : ಶಿವೋಽಹಂಕಾರಸ್ವರೂಪವಾದ ಮಹಾಜ್ಞಾನಾಗ್ನಿಪ್ರಕಾಶ 605
ಕೆಂಡದಂಡೆ : ಸುಜ್ಞಾನಾಗ್ನಿ 628
ಕೆಸಜುಗಲ್ಲು : ಜ್ಞಾನವಿಶ್ರಾಂತಿಯೆಂಬುದೊಂದು ಜ್ಞೇಯಸ್ಥಲ 112
ಕೇರಿ (ಈರೈದು) : ದಶನಾಳಗಳು 261
ಕೇರಿ (ಹತ್ತು—) : ದಶನಾಳ 211
ಕೇರಿ ಕೇರಿ : ಅಂತರಂಗದ ಕರಣ ಬೀದಿಗಳು 328
ಕೊಡ : (1) ಸರ್ವಾಂಗ, ದೇಹ 566 (2) ಮನಸ್ಸು 1311
ಕೊಡ (ಚಂದ್ರಕಾಂತದ—) : ಶಿವಯೋಗಿಯ ಕಾಯ 272

ಖ

ಖಂಡ ಭಂಡ : ಇಂದ್ರಿಯಗಳು ಮತ್ತು ಕರಣಗಳು 18

ಗ

ಗಾಡಿಕಾಜಿ : ಏಕನಿಷ್ಠೆಯವನು 1314
ಗ್ರಾಮ : ತನು 271
ಗ್ರಾಮ (ಇಪ್ಪತ್ತೈದು—): ಇಪ್ಪತ್ತೈದು ಭೂತತತ್ವಗಳು 267
ಗೆಜ್ಜೆ (ಉಲಿವ—) : ಪ್ರಕೃತಿಗುಣದಿಂದ ಉಲಿವ ಕರಣಗಳು 16
ಗೊರತಿ : ಜ್ಞಾನಶಕ್ತಿ 431
ಗೊರವ : ಶಿವ 111
ಗೊರವಿತಿ : ಚಿತ್ ಶಕ್ತಿ, ಚಿತ್ಸತಿ 1315

ಘ

ಘಟ (ತುಪ್ಪದ—) : ಚಿತ್ತು 262
ಘಟ್ಟ (ಕರಿಯ—) : ಅಜ್ಞಾನಕಾಳಿಕೆ ಮುಸುಕಿಕೊಂಡಿರುವ ಚಿತ್ತಘಟ್ಟ 325



ಚ

ಚಂದ್ರಮತಿ : ಪರಮಶಾಂತಿ 681
ಚಪ್ಪರ (ಉರಿಯ—) : ಮಹಾಜ್ಞಾನಮಂಟಪ 634
ಚಿತ್ರ : ಲಿಂಗ 409
ಚಿತ್ರ (ಎರಡನೆಯ ಭಿತ್ತಿಯ—) : ಸ್ವಾನುಭಾವವಿವೇಕ 409
ಚಿತ್ರ (ಪ್ರಥಮ ಭಿತ್ತಿಯ—) : ಇಷ್ಟಲಿಂಗ 409
ಚಿತ್ರ (ಮೂಜನೆಯ ಭಿತ್ತಿಯ—) : ತೃಪ್ತಿಲಿಂಗ 409

ಜ

ಜಾಗರದ ಬಲವಿಲ್ಲ : ತನ್ನನ್ನು ತಾನು ಎಚ್ಚರಿಸಿಕೊಳ್ಳುವ ಬಲವಿಲ್ಲ 583
ಜಾಲೆಗಾಜಿ : ಬೆಸ್ತ 122
ಜೂಜು : ಅನುಭವಮುಖದಿಂದ ತತ್ವವನ್ನರಿಯುವ ಪ್ರಯತ್ನ 583
ಜೋಗುಳ : ಶಿವೋಽಹಂ ಎಂಬ ನಾದ 634, 665, 668
ಜೋಗುಳವಾಡಿತು : ಶಿವಮಂತ್ರೋಚ್ಚಾರಣೆಯನ್ನು ಮಾಡಿತು 1310
ಜ್ಯೋತಿ : ಮಹಾಜ್ಞಾನಾಗ್ನಿ 678 (2) ಪರಬ್ರಹ್ಮ 574 (3) ಜ್ಞಾನಜ್ಯೋತಿ 463 (4) ಜ್ಞಾನ 220, 235, 1315.

ತ

ತಳವಾರ (ಬಲ್ಲಿದ—) : ಏಕಾಗ್ರಚಿತ್ತಸ್ವರೂಪಶರಣ 541
ತಳವಾರ (ಸೊಕ್ಕಿದ—) : ಹಮ್ಮು 1317
ತುತ್ತು (ಬಾಯ—) : ಪ್ರಾರಬ್ಧಾದಿ ಕರ್ಮಗಳು 67
ತೊಟ್ಟಿಲು : ದೇಹ 14

[ಗ್ರಾಮ-ಗೃಹ-ಸಾಮಗ್ರಿವರ್ಗ]

## ದ

ದಂಡೆ (ಪದಿನಾಱು —) : ಅರಿವಿಗೆ ಸುಗುಣನಿರ್ಗುಣಪೂಜೆ ಹದಿನಾರು, 1309
ದರ್ಪಣ : ಪರಬ್ರಹ್ಮ 13
ದಾರಿ : ಮುಮುಕ್ಷುಮಾರ್ಗ 111
ದಾರಿದ್ರ್ಯ : (1) ತನುಮನಧನಗಳ ನಷ್ಟ 645
ದ್ವಾರ : ಯೋನಿದ್ವಾರ 267
ದ್ವಾರ (ಉತ್ತರ—) : ಈಡೆ ಎಂಬ ನಾಳ 267
ದ್ವಾರಮಂಟಪ (ತ್ರಿಕೋಣ—) : ಮಣಿಪೂರಕಕರ್ಣಿಕೆ 267
ದ್ವಾರ (ದಕ್ಷಿಣ—) : ಪಿಂಗಳೆ ಎಂಬ ನಾಡಿ 267
ದ್ವಾರ (ಹತ್ತೆಂಬ—) : ದಶವಾಯುಗಳ ಗುಣಪ್ರಕೃತಿ 563
ದೀಪ : ಪ್ರಭೆ 583
ದೇಗುಲ : (1) ಚಿತ್ಪಿಂಡ 431 (2) ಚಿದಾಕಾಶ 430
ದೇಗುಲ (ಊರ—): ಅಂತರಂಗ 1317

## ಧ

ಧವಳಾರ: ಮಹಾನುಭಾವಾಂತರಂಗ 445
ಧವಳಾರ (ನೆಲ ಹುಟ್ಟದಂದಿನ—) : ತನುವೆಂಬ ಭಾವ ತಲೆದೋರದೆ ಇರುವ ಶರಣನ ಮಹಾನುಭಾವಾಂತರಂಗ 445
ಧಾರೆವಟ್ಟಲು : (1) ಮಹಾನುಭಾವವಿವೇಕ 290 (2) ಸುವಿಚಾರ331

## ನ

ನಂದಾದೀವಿಗೆ : ಸುಜ್ಞಾನ ಪ್ರಕಾಶ 420
ನಾರಿ : (1) ಮಾಯೆ 463 (2) ಶಿವಭಾವ 276 (3) ಭಾವ 557, 662 (4) ಪರಾಶಕ್ತಿ 681
ನಾರಿಯರು (ರೂಹಿಲ್ಲದ—) : ಷಡುಶಕ್ತಿಯರು 634
ನೀರಹರಿ : ಸ್ವಜ್ಞಾನಂದಪ್ರವಾಹ 111
ನೀಲ : (1) ಮಾಯೆ 101 (2) ಅಜ್ಞಾನ 586
ನೂಲು (ಬಣ್ಣವಿಲ್ಲದ— ) : ಬದ್ಧತ್ರಿಗುಣವಳಿದು ಮನೋಮಂತ್ರದಿಂದ ನಿರ್ಧರಿಸಿದ ನೆನಹಿನ ಸೂತ್ರ 1321
ನೆಲಗಟ್ಟು : ? 598
ನೆಲಹು : ? 772
ನೇಣು : ಸ್ವಾನುಭಾವವಿವೇಕ 245

## ಪ

ಪಟ್ಟಣ : ದೇಹ 261, 1309
ಪಟ್ಟಣ (ಚೌಷಷ್ಟಿ—) : ಅರವತ್ತುನಾಲ್ಕು ಭೇದದ ಕಾ( = ಕ ?)ರಣಗ್ರಾಮಗಳು 267
ಪದಶಿಲೆ : ಸುಚಿತ್ತವೆಂಬ ನೆಲಗಟ್ಟು 112
ಪರಿವಾರ (ಇಪ್ಪತ್ತೈದು—) : ತ್ರಿತತ್ವಭಾವದಿಂದ ಉದಯವಾದ ಇಪ್ಪತ್ತೈದು ತತ್ವಗಳು
ಪರುಷ : ಸುಜ್ಞಾನ 228
ಪ್ರತಿಬಿಂಬ : ಇದಿರಿಟ್ಟು ತೋರುವ ಪರಬ್ರಹ್ಮವು ತನ್ನಲ್ಲಿ ತೋರಿ ಪ್ರತಿಬಿಂಬಿಸಿತ್ತು ಎಂಬ ಪ್ರತಿಬಿಂಬಭಾವ 13
ಪಾಯದಳ : ಕರಣಗಳು 211
ಪುತ್ಥಳಿ (ಅರಗಿನ—) : ದೇಹ 30, 36
ಪುರ : ದೇಹ 235
ಪುರ (ಛತ್ತೀಸ—) : ಮುವ್ವತ್ತಾರು ತತ್ವಗಳು 267
ಪುರ (ತ್ರಿ—) : ಅಂಗತ್ರಯ 485
ಪುರ (ಮೂಱು—) : ಅಂಗತ್ರಯ 211
ಪುರ (ವಜ್ರಯೋನಿಖಗರಂಧ್ರ—) : ಪರಬ್ರಹ್ಮರಂಧ್ರ 150

[ಗ್ರಾಮ-ಗೃಹ-ಸಾಮಗ್ರಿವರ್ಗ]

ಪ್ರಕಾಶವನ್ನುಳ್ಳ ಮ ಹಾ ಲಿಂ ಗ ವೆ ಸೃಷ್ಟಿಗೆ ಪ್ರಥಮಮೂರ್ತಿ 740

ಭಿತ್ತಿ (ಮೂಜಿನೆ—) : ಕಾರಣತನು

ಭಿತ್ತಿ ಮೂಜು : ತನುತ್ರಯ 409

ಭೋಜನವಿಲ್ಲದೆ : ಸುಖಸ್ವರೂಪ ತಾನಾಗಿ ·576

## ಮ

ಮಂಟಪ (ಜಗದಗಲದ—): ಚಿತ್ತೇ ಶರಣನ ಅಂಗ, ಚಿದಾಕಾಶವೇ ಶರೀರಮಂಟಪ 434

ಮಂಟಪ (ತ್ರಿಕೋಣದ್ವಾರ—): ಮಣಿಪೂರಕಚಕ್ರ

ಮಂಟಪ (ಪೃಥ್ವೀಕುಳ—) : ದೇಹ 112

ಮಠ : ದೇಹ 398

ಮಠ (ಪಂಚ—) : ಪಂಚಭೂತಗ್ರಾಮಗಳು 398

ಮಡಕೆ : ಘಟಾದಿಯಾತ್ಮ 1314

ಮಡಕೆ (ಮಂಜಿನ—) : ಅಭ್ರಚ್ಛಾಯಾಮಾತ್ರವಾದ ದೇಹ 467

ಮಣಿ : (1) ಜ್ಞಾನ 443 (2) ಸುಜ್ಞಾನ 588 (3) ನಿಜ

ಮಣಿ (ಸಣ್ಣನವಿರಳ—) : ಶಿವತತ್ವಶುದ್ಧಚಿದ್ವಾರ 1321

ಮದುವೆ : ಶರಣ ಮತ್ತು ಲಿಂಗ ಇವರ ಸಂಗಸಮರತಿಯ ಕಾಲ 628

ಮನೆ : (1) ದೇಹ 99, 220 (2) ಅಂತರಂಗಜ್ಞಾನಸ್ಥಲ 572

ಮನೆ (ಹಿಂದೆ—) : ಭಕ್ತಿತನು 1314

ಮನೆಯ ಕಟ್ಟಿದರೆ : ಹುಟ್ಟಿದರೆ 76

ಮನೆಯಾತನು : ಜೀವೇಶ 1308

ಮರಣ : (1) ಸಾವು (2) ತನ್ನಲ್ಲಿ ತಾನು ಲೀನವಾಗುವಿಕೆ (3) ಶರಣಸತಿ ಲಿಂಗ ಪತಿಭಾವನಾಸ್ತಿ 629

[ಗ್ರಾಮ-ಗೃಹ-ಸಾಮಗ್ರಿವರ್ಗ]

ಮಸಣಿಗುಂಟಣಿ : ಕಾಲಮೃತ್ಯು 1320

ಮಾಥ : ದೇಹ 26

ಮಾಣಿಕ : (1) ಜ್ಞಾನ 584, 586 (2) ಮಹಾಜ್ಞಾನ 596, 671 (3) ಲಿಂಗ 1313

ಮಾಣಿಕದಾರತಿ : ಮಹಾಜ್ಞಾನ 588

ಮಾಣಿಕ್ಯ : ಜ್ಞಾನ 54

ಮಾನಿಸರು (ಐವರು—): ಪಂಚಪಾಯುಗಳು 42 [ಪಂಚೇಂದ್ರಿಯಗಳು ?]

ಮಾಳಿಗೆ : ಅಂತರಂಗ 1310

ಮಾಳಿಗೆ (ಇಮ್ಮೈಯ ಸಿರಿಯ—) : ಈಡಾ ಪಿಂಗಳ ಸುಷುಮ್ನ 1315

ಮಾವ : ಪುರುಷ 1308

ಮುಂಜೂರು : ಪೂರ್ವಕ್ರೀಯು ?

ಮುತ್ತು : ಮುಕ್ತಿ 101, 690

ಮುತ್ತು (ಕರಿಯ—): ಅಜ್ಞಾನಸಂಬಂಧದ ಮುಕ್ತಿ 690

ಮುತ್ತೈದೆಯರೈವರು : ಪಂಚಶಕ್ತಿಯರು 1309

ಮುಸುಕು (ಕರಿಯ ಬಣ್ಣದ-) : ಅಜ್ಞಾನ 322

ಮುಸುಕನುಗಿದು (ಐದರ—) : ಪಂಚೀಕರಣವನ್ನು ಮುಸುಕಿದ ಮಾಯಾ ಪಟಲವ ತೆಗೆದು [ಪಂಚೀಕರಣ= ಪಂಚೇಂದ್ರಿಯ, ಪಂಚಭೂತಗ್ರಾಮ]

ಮೂಕುತಿ : ಮುಕ್ತಿ 1313

ಮೂರ್ಬೀದಿ : ಭೂತ ವರ್ತಮಾನ ಭವಿಷ್ಯ 1319

ಮೇಲುಕಟ್ಟು (ಮುಗಿಲಗಲದ—) : ಮಹದಾಕಾಶ 434

ಮೇಲುಹೊದಿಕೆ : ಆಚಾರ 99

## ರ

ರಣ : ಲಯಕಾಲ 489

[ಗ್ರಾಮ-ಗೃಹ-ಸಾಮಗ್ರಿವರ್ಗ]

ಚಿಚ್ಛಕ್ತಿ 445 (3) ಅನುಕೂಲೆ 1314 (4) ಶರಣ 1314, 1315

ಸೂಳೆ (ಆಕಾಶವರ್ಣದ—) : ಅಜ್ಞಾನ-ತಮೋವರ್ಣವನ್ನುಳ್ಳ ಮಾಯೆ 322

ಸೆಜ್ಜೆ : (1) ಮನಸ್ಸು 299 (2) ದೇಹ 595

ಸೊಡರು : ಜ್ಞಾನ 33

ಸೋರುಮುಡಿಯಾಕೆ : ಚಿತ್‌ಶಕ್ತಿ 111

## ಹ

ಹಚುಗೋಲು : ದೇಹ 360

ಹಸಿವು : ತೃಷ್ಣೆ 663

ಹಂಚರ : ಆಕಾಶ 395

ಹಂದರ : (ಜ್ಞಾತೃಭಾವವನ್ನು ಮರೆತು ಅರಿತ) ಜ್ಞೇಯವೆಂಬ ಅತೀತಸ್ಥಾನ 555

ಹಸೆ : (1) ಸದಾಚಾರಸತ್ಕ್ರಿಯೆ 86 (2) ಭೂಮಿ 395 (3) ಸದಾ-ಚಾರ 629

ಹಾರುವ (ಅರಿದ—) : ಸಿದ್ಧಿಗೆ ತಕ್ಕ ಸಾಧನೆಯುನ್ನು ಮಾಡದ ಜೀವ 33

ಹಾಲು : ಪರಮಾಮೃತ 581

ಹಾವಡಿಗ : ಶಂಕಾವಿಷಸಂಬಂಧಿಯಾದ ಸರ್ಪವನ್ನು ಹಿಡಿದಿರುವ ಜೀವ 111

ಹಾಳೂರು : (1) ದೇಹ 49 (2) ಇಲ್ಲವೆಯಾಗಿರುವ ಪಂಚಭೂತಪಿಂಡ 328

ಹಿಟ್ಟು (ಎಂಟು—) : ಅಷ್ಟಮದ 398

ಹಿತ್ತಲ ಗೋಡೆ : ಜಡಭೌತಿಕ 1308

ಹೆಂಗೂಸು (ಒಬ್ಬ—) : ಮಾಯೆ 208

ಹೆಡಿಗೆ (ಹಿಕ್ಕೆಯ—) : ಮಲಿನಭಾವ 1317

ಹೊಗೆ : (1) ಅಜ್ಞಾನಭಾವ 226

[ದಿಕ್-ಸಂಖ್ಯಾವರ್ಗ]

(2) ಮನೋವಿಕಾರ 489 (3) ಭಿನ್ನಭಾವ 569

ಹೊತ್ತಾತ : ಶರಣ 629

ಹೊಲಬು : ಖಂಡಿತ(=ಭಿನ್ನ)ದ ಹೊಲಬು 439

ಹೊಲೆಗೇರಿ : ದೇಹ 50

## ದಿಕ್-ಸಂಖ್ಯಾವರ್ಗ

### ಅ

ಅದ್ವಯವಾಯಿತ್ತು : ದ್ವೈತಭಾವವಳಿ-ಯಿತು 16

### ಆ

ಆಱ ಮೀಱದಲ್ಲದೆ : ಷಡುವರ್ಣಗಳನ್ನು ಮೀರಿ, ಷಡಂಗಯೋಗಾತೀತನಾಗಿ ಬೆರಸಿದಲ್ಲದೆ 644

ಆಱು : (1) ಶಕ್ತಿತ್ರಯಗಳ ತನು-ಮಾತ್ರ ಮತ್ತು ಪ್ರಾಣಮಾತ್ರಗಳನ್ನು ವಿಭಾಗಿಸಲು ಆಧ ಷಡುಶಕ್ತಿಗಳು 357 (2) ಷಟ್ಸ್ಥಲ : ಸ್ಥೂಲದಲ್ಲಿ ಭಕ್ತ ಮಾಹೇಶ್ವರ, ಸೂಕ್ಷ್ಮದಲ್ಲಿ ಪ್ರಸಾದಿ ಪ್ರಾಣಲಿಂಗಿ, ಕಾರಣದಲ್ಲಿ ಶರಣ ಐಕ್ಯ 471 (3) ಷಡುವರ್ಣಗಳು 676

ಆಱು ತತ್ತ್ವಗಳು : ವಿಷ್ಣು, ಬ್ರಹ್ಮ, ರುದ್ರ, ಈಶ್ವರ, ಸದಾಶಿವ, ಉಪಮಾತೀತ 631

ಆಱು ದಿನ : ಷಡಂಗಯೋಗ 48 (=ಷಟ್ಸ್ಥಲ ?)

ಆಱು ಮೂಱು ಒಂಬತ್ತು [6+3=9] 1314

### ಇ

ಇಪ್ಪತ್ತೇಳು : ನಕ್ಷತ್ರಗಳು 1319

[ಅತಿಮಾನವವರ್ಗ]

ಚ

ಚಿತ್ರಗುಪ್ತರ ಕೈಯ ಪತ್ರ: (1) ಸಂಚಿತ ಪ್ರಾರಬ್ಧ ಆಗಾಮಿ ಎಂಬ ಕರ್ಮ-ಲಿಖಿತ 289 (2) ವಿಧಿಕಲ್ಪಿತವೆಂಬ ಪ್ರಾರಬ್ಧಕರ್ಮದ ತಲೆಯ ಬರೆಹ 328

ತ

ತ್ರಿಜಗಾಧಿಪತಿಯ ಕೋಣೆ: ಶಿವತತ್ವ-ವಿರುವ ಬ್ರಹ್ಮರಂಧ್ರ 245

ತ್ರಿಣಯನವಯವ: ನಿಜದ ನಿಲವು 1321

ದ

ದೇವ: (1) ಶಿವ 539 (2) ಅಂತ-ರಂಗದೊಳಗಿರುವ ಪರಶಿವತತ್ವ 549 568 (3) ಶಿವತತ್ವಾಂಶಸಂಭೂತ-ವಾದ ಕಾರಣಶರೀರ 549

ದೇವಕನ್ನಿಕೆ: ಜ್ಞಾನಶಕ್ತಿ 67

ದೇವ-ದೇವಿ: ಶಿವಶಕ್ತಿ 539

ದೇವರು: ಪ್ರಾಣಲಿಂಗ 1317

ದೇವಿ: ಶಕ್ತಿ 539

ಪ

ಪ್ರಮಥರು (ದೇವಲೋಕದ—): ರುದ್ರ ಲೋಕದಲ್ಲಿಯ ಪದವಿಗೆ ಆಶೆಪಡುವ ಭಂಗಿತರು 422

ಬ

ಬ್ರಹ್ಮ: (1) ಬ್ರಹ್ಮತತ್ವಾಂಶಸಂಭೂತ-ವಾದ ರಜೋಗುಣಸಂಬಂಧದ ಸ್ಥೂಲ ತನು 15, 549, 568, (2) ಬ್ರಹ್ಮನಾಳ 259 (3) ಶಿವಜ್ಞಾ-ನೋದಯವಾದ ಚಿದ್ಬ್ರಹ್ಮ 289 (4) ರಜೋಗುಣ 415, 508, 539

[ಅತಿಮಾನವವರ್ಗ]

ಬ್ರಹ್ಮನ ಶಿಖಿ: ಬ್ರಹ್ಮರಂಧ್ರದ ಕೋಡೆ-ನಿಸುವ ಸುಷುಮ್ನೆ 284

ಬ್ರಹ್ಮನೋಲಗ: ಬ್ರಹ್ಮಸೃಷ್ಟಿ 24, 235

ಬ್ರಹ್ಮಪಾಶ: ರಜೋಗುಣಪಾಶ 21

ಬ್ರಹ್ಮವಿಷ್ಣ್ವಾದಿಗಳು: ರಜಸ್ಸತ್ವಾದಿ ಕರಣಗುಣಗಳು 1315

ಬೊಮ್ಮದ ಮನೆಯ ಕೋಣೆ: ಬ್ರಹ್ಮ ರಂಧ್ರ 1315

ಭ

ಭದ್ರಕಾಳಿ (ಭದ್ರ = ಮಂಗಳ, ಕಾಳಿ = ಸಂಹಾರಸ್ವರೂಪಿಣಿ): ಶರಣನ ಸಕಲ-ಕರಣಗಳನ್ನೂ ತಾನೇ ಲಯವಾಗು-ವಂತೆ ಮಾಡಿರುವ ಮಂತ್ರಶಕ್ತಿಯ ಆಧಾರಸ್ಥಲ 596

ಭದ್ರೆ: ಮಂಗಳಸ್ವರೂಪಿಣಿಯಾದ ಚಿ-ಚ್ಛಕ್ತಿ 528

ಭೂತ: ಆತ್ಮ 1313

ಮ

ಮಾರಿಮಸಣಿ: ಕಾಲಾಪಮೃತ್ಯು 1320

ರ

ರಕ್ಕಸಿ: ಮಾಯೆ 14, 678

ರಕ್ಕಸಿ (ಕಾಳ—): ಮಾಯೆ 67

ರಕ್ಕಸಿಯ ಮಗಳು: ಕ್ರಿಯಾಶಕ್ತಿ

ರಕ್ಕಸಿಬಾಣತಿಯ ತೊಟ್ಟಿಲು ನುಂಗಿತ್ತು: ಮಾಯೆಯನ್ನು ಆ ದೇಹವೇ ಅವ-ಗ್ರಹಿಸಿಕೊಂಡಿತು 14

ರುದ್ರ: (1) ತಮೋಗುಣಸಂಬಂಧವೇ ರುದ್ರತತ್ವ. ಆ ತಮೋಗುಣಸಂಬಂಧ-ವಾದ ಕಾರಣತನುವಿನ ಜೀವಭಾವ-ಭ್ರಮೆಯ ಮರವೆ. 15 (2) ತಮೋ ಗುಣ 415, 613 (3) ಶಿವಾಹಂ-

[ಸಂಕೀರ್ಣವರ್ಗ]



ಇ



ಉ



ಏ



ಒ



ಓ



ಓಂಕಾರಪ್ರಭವಾವೇದಾಃ
ಓಂಕಾರಪ್ರಭವಾಸ್ಸ್ವರಾಃ ।
ಓಂಕಾರಪ್ರಭವಂ ಚೈತತ್
ತ್ರೈಲೋಕ್ಯಂ ಸಚರಾಚರಂ ||

ಕ

[ಸಂಕೀರ್ಣವರ್ಗ]



ಯ



ರ



ಲ



ವ



[ಸಂಕೀರ್ಣವರ್ಗ]

ಶ



ಸ



ಹ

# ಬೆಡಗಿನ ವಚನಗಳ ಭಾವಾನುವಾದ

[ವಿ. ಸೂ: ಪ್ರಭುದೇವರ ವಚನಗಳನ್ನೆಲ್ಲ ಒಂದೆಡೆ ಸೇರಿಸಿ ಅವಕ್ಕೆ ಅಮೂಲಾಗ್ರವಾಗಿ ಯಾರೊಬ್ಬರೂ ವ್ಯಾಖ್ಯಾನವನ್ನು ಬರೆದಿಲ್ಲ. ಅಲ್ಲಮನ ವಚನಚಂದ್ರಿಕೆಯಲ್ಲಿನ 1-694 ವಚನಗಳಿಗೆ ಮಾತ್ರ ಮಹಲಿಂಗನ ವ್ಯಾಖ್ಯಾನವಿವೆ. ಪ್ರಭುದೇವರ ವಚನಗಳನ್ನು ತನ್ನಿಂದ ಸಾಧ್ಯವಾದಷ್ಟು ಒಂದೆಡೆ ಸಂಕಲನ ಮಾಡಿ ಅವಕ್ಕೆಲ್ಲ ವ್ಯಾಖ್ಯಾನ ಮಾಡಿರುವವನಿವನೊಬ್ಬನೇ. ಮಿಕ್ಕವರು, ಅಂದರೆ, ಸಿಂಗಳದ ಸಿದ್ಧಬಸವರಾಜದೇವರು ಮತ್ತು ಕಲ್ಲುಮಠದ ಪ್ರಭುದೇವರು ಕ್ರಮವಾಗಿ "ಎಲ್ಲ ಪುರಾತನರ ಬೆಡಗಿನ ವಚನಗಳು" ಮತ್ತು "ಲಿಂಗಲೀಲಾವಿಲಾಸಚಾರಿತ್ರ" ಎಂಬ ಸರ್ವಶರಣವಚನಸಂಕಲನರೂಪವಾದ ತಮ್ಮ ಗ್ರಂಥಗಳಿಗೆ ವ್ಯಾಖ್ಯಾನವನ್ನು ಮಾಡುವಾಗ ಅಲ್ಲಲ್ಲಿ ಬರುವ ಪ್ರಭುದೇವರ ವಚನಗಳಿಗೂ ವ್ಯಾಖ್ಯಾನವನ್ನು ಬರೆದಿದ್ದಾರೆ*. ಅಂಥವುಗಳಲ್ಲಿನ ಪ್ರಭುದೇವರ ಬೆಡಗಿನ ವಚನಗಳಿಗೆ ಅವರು ಕೊಟ್ಟಿರುವ ವ್ಯಾಖ್ಯಾನದ ಭಾವಾನುವಾದವನ್ನು ಮಾತ್ರ ನಾನು ಈ ವಿಭಾಗದಲ್ಲಿ ಕೊಟ್ಟಿದ್ದೇನೆ. ಯಾವುದಾದರೂ ಒಂದೇ ಬೆಡಗಿನ ವಚನಕ್ಕೆ ಹಲವರ ವ್ಯಾಖ್ಯಾನವಿದ್ದು ಅವು ಪರಸ್ಪರ ಪೂರಕವಾಗಿದ್ದರೆ ಅಥವಾ ಅವುಗಳಲ್ಲಿ ವಿಶಿಷ್ಟ ದೃಷ್ಟಿಯಿದ್ದರೆ ಅವನ್ನೂ ಅಲ್ಲಲ್ಲೇ ಆವರಣ ಚಿಹ್ನೆಗಳಲ್ಲಿ ಉಲ್ಲೇಖಿಸಲಾಗಿದೆ.

ಚೆನ್ನವೀರಾರ್ಯನೆಂಬವನು ತನ್ನ "ಶಿವಯೋಗಪ್ರದೀಪಿಕೆ"ಯಲ್ಲಿನ ವಚನಗಳಿಗೆ ಪ್ರತಿಪದಾರ್ಥವನ್ನು ಮಾತ್ರ ತಿಳಿಸಿರುವನೇ ಹೊರತು ಅವುಗಳಿಗೆ ವಿವರಣಾತ್ಮಕ ವ್ಯಾಖ್ಯಾನವನ್ನು ಕೊಟ್ಟಿಲ್ಲ. ಆದ್ದರಿಂದ ಶಿವಯೋಗಪ್ರದೀಪಿಕೆಯಿಂದ ಅಲ್ಲಮನ ವಚನಚಂದ್ರಿಕೆಗೆ ಸೇರಿಸಿಕೊಂಡಿರುವ (1313-1321) ಬೆಡಗಿನ ವಚನಗಳಿಗೆ ಭಾವಾನುವಾದವಿಲ್ಲ."

ಪ್ರಸ್ತುತ ಗ್ರಂಥದಲ್ಲಿ 1-694 ರ ಪರ್ಯಂತರವಲ್ಲಿನ ಬೆಡಗಿನ ವಚನಗಳಿಗೆ ಕೊಟ್ಟಿರುವ ಭಾವಾನುವಾದವು ಮಹಲಿಂಗನ ವ್ಯಾಖ್ಯಾನವನ್ನೂ, 758 ನೇ ಮತ್ತು 768 ನೇ ವಚನಗಳಿಗೆ ಕೊಟ್ಟಿರುವ ಭಾವಾನುವಾದವು ಕಲ್ಲುಮಠದ ಪ್ರಭುದೇವರ ವ್ಯಾಖ್ಯಾನವನ್ನೂ, 696-1180 ರ ಪರ್ಯಂತರದಲ್ಲಿನ ವಚನಗಳಿಗೆ ಕೊಟ್ಟಿರುವ ಭಾವಾನುವಾದವು ಸಿಂಗಳದ ಸಿದ್ಧಬಸವರಾಜದೇವರ ವ್ಯಾಖ್ಯಾನವನ್ನೂ ಅನುಸರಿಸಿವೆ. ಈ ಭಾವಾನುವಾದವು ಆ ಪ್ರಾಚೀನರ ನಡುಗನ್ನಡದ ವ್ಯಾಖ್ಯಾನಕ್ಕೆ ನಾನು ಮಾಡಿರುವ ಹೊಸಗನ್ನಡದ ಛಾಯಾನುವಾದವೇ ಹೊರತು ಬೇರೇನೂ ಅಲ್ಲ. ಮಿಕ್ಕ ಬೆಡಗಿನ ವಚನಗಳಿಗೆ ಪ್ರಾಚೀನರ ವ್ಯಾಖ್ಯಾನ ದೊರೆತಿಲ್ಲ. ಬೆಡಗಿನ ಪದಕೋಶದ ಸಹಾಯದಿಂದ ಅವನ್ನು ಅರ್ಥಮಾಡಿಕೊಳ್ಳಲು ಪ್ರಯತ್ನಿಸಬಹುದು.

ಭಾವಾನುವಾದದ ಮೊದಲಿಗೆ ಕೊಟ್ಟಿರುವ ಸಂಖ್ಯೆಯು ಅಲ್ಲಮನ ವಚನಚಂದ್ರಿಕೆಯಲ್ಲಿನ ವಚನಗಳ ಕ್ರಮಾಂಕವನ್ನು ಸೂಚಿಸುವುದು.]

---

*ಇಂಥದೇ ಒಂದು ವಚನಸಂಕಲನಗ್ರಂಥವಾದ "ಏಕೋತ್ತರಶತಸ್ಥಲ"ವೆಂಬುದನ್ನು ಮಹಲಿಂಗನು ಸಂಪಾದಿಸಿದ್ದಾನೆ.

9. ವೃತ್ತಿಜ್ಞಾನವಳಿದ ಶುದ್ಧಜ್ಞಪ್ತಿಯೇ ತಲೆಸೂಗಿರುವ ಪರಬ್ರಹ್ಮಸಿಗೆ ಕರಣಾದಿಗಳೆಂಬ ಕರುಳಿಲ್ಲದ ಪರಕಾಯವೇ ಒಡಲು. ಅವನಿಗೆ ಅಕಾಯರೂಪಿಣಿಯಾದ ಪರಶಕ್ತಿಯೇ ಸತಿ. ಇವರಿಬ್ಬರ ಮಗಳಾದ ಚಿತ್‌ಶಕ್ತಿಯ ಮಗನೇ ಶರಣ. ಆ ಚಿತ್‌ಶಕ್ತಿಯನ್ನು ಶರಣನು ಕೃತನಿಶ್ಚಯಹಸ್ತದಿಂದ ಬಿಗಿವಿಡಿದ.

13. ಪರಶಿವತತ್ತ್ವದಲ್ಲಿ ಉದಯಿಸಿದ ಚಿದ್ಬ್ರಹ್ಮಾಂಡದಿಂದ ಈ ಪ್ರಪಂಚಬ್ರಹ್ಮಾಂಡ ಹುಟ್ಟಿದಾಗ ಅದರಿಂದ ಹೊರಬಂದ ಜೀವರು ತಮ್ಮ ಸ್ವಭಾವವನ್ನು ಮರೆತು, ಮಿಥ್ಯೆಯನ್ನು ನೆಮ್ಮಿ, ತಮ್ಮ ನಿಲವಾವುದೆಂದರಿಯದೆ, ವ್ಯರ್ಥವಾಗಿ ಪರಬ್ರಹ್ಮವನ್ನರಸಿ, ತೊಳಲಿ ಬಳಲುತ್ತಿದ್ದಾರೆ. ಇದು ಅಪೂರ್ಣಜ್ಞಾನದ ಪರಿಣಾಮ. ವಿವೇಕವೆಂಬ ಶಿಷ್ಯನು ತನ್ನ ಜ್ಞಾನದೃಷ್ಟಿಯಿಂದ ಪರಬ್ರಹ್ಮವೆಂಬ ದರ್ಪಣದಲ್ಲಿ ನೋಡಲು, ಶಿವನೇ, ನಾನೆಂಬ ಪೂರ್ಣಜ್ಞಾನೋದಯವಾಗುವುದು. ಜ್ಞಾನವನ್ನು ಸದಾ ನುಂಗುತ್ತಿದ್ದ ಅಜ್ಞಾನವು ಆಗ ಗುಹೇಶ್ವರನಲ್ಲಿಯೇ ಲಯವಾಗಿ ಹೋಗುವುದು. ("ದಿವಾರಾತ್ರಿಯ ಉದಯದ ಬೆಳಗನು ಕತ್ತಲೆ ನುಂಗಿತ್ತು"–ಇದು ಮಹಲಿಂಗನ ವ್ಯಾಖ್ಯಾನದ ಪ್ರಕಾರ ಪಾಠಾಂತರ; ಇದಕ್ಕೆ ಅರ್ಥ: ಅರಿವು ಮರವೆಗಳೆರಡನ್ನೂ ತನ್ನಲ್ಲಿ ಹುಟ್ಟಿಸುವ ಅರಿವಿನ ಬೆಳಕು ಮಿಥ್ಯಾಜ್ಞಾನಪ್ರವೇಶಿತವಾಗುವುದು. ಆದ ಆ ಮರವೆಯನ್ನರಿಯಲು ಅದು ಪರಬ್ರಹ್ಮದಲ್ಲಿ ಅಳಿಯುವುದು.)

14. ಮಾಯೆಗೆ ಜೀವ ಪ್ರಾಣ ಎಂಬ ಇಬ್ಬರು ಮಕ್ಕಳು. ಈ ಮಕ್ಕಳಿಗೆ ಆಶ್ರಯಸ್ಥಾನವಾದ ದೇಹವೆಂಬ ತೊಟ್ಟಿಲ ಮೇಲೆ ಪಂಚಭೂತಗಳು. ಇವನ್ನೆಲ್ಲ ನುಂಗುವಳು ಮಾಯೆ. ಹೀಗೆ ಮಾಯಾಧೀನತೆಯಿಂದ ದೇಹಕರ್ಮವಶನಾಗಿರುವವರಿಗೂ ನನಗೆ ತೊಳಲಾಟ ಮತ್ತು ಬರಿಯ ಮಾತಿನ ಹೋರಾಟ; ಮಾಯೆಯನ್ನು ಒಳಕೊಂಡಿರುವುದು ಈ ದೇಹ.

15. ಆತ್ಮನ ಅಹಂಕಾರವಿಭ್ರಾಂತಿಯ ತೂರ್ಯಾವಸ್ಥೆಯಲ್ಲಿ ಜೀವಶುಕನುದಯಿಸಿ ಸಂಸಾರಪ್ರಪಂಚಿನಲ್ಲಿ ನೆಲಸಿದನು. ಈ ಜೀವಶುಕನು ಪಂಚವಿಂಶತಿ ಭೂತಾತ್ಮಕ. ಇವನಿಗೆ ರಜೋಗುಣದ ಸ್ಥೂಲತನುವೇ ನಿವಾಸಸ್ಥಾನ, ಸಾತ್ತ್ವಿಕಗುಣದ ಸೂಕ್ಷ್ಮತನುವಿಂದಾದ ಇಂದ್ರಿಯವಿಷಯಾದಿಭೋಗಗಳೇ ಆಹಾರ, ತಮೋ ಗುಣದ ಕಾರಣತನುವಿನ ಮರವೆಯು ಆ ಜೀವಭಾವಭ್ರಾಂತಿಗೆ ಸಿಲುಕಿತು. ಹೀಗೆ ಬ್ರಹ್ಮ ವಿಷ್ಣು ರುದ್ರರೆಂಬ ತತ್ತ್ವತ್ರಯಗಳಿಗೆ ಇದಿರಿಟ್ಟಿರುವ ಈ ಜೀವಭ್ರಾಂತು ಆವರಿಸಿರುವ ಕಾರಣ ಲಕ್ಷ್ಯಕ್ಕೂ ತನ್ನ ನಾಮಕ್ಕೂ ನಷ್ಟ ಉಂಟು. (ಪರಶಿವನು ತನ್ನ ಚಿದ್ವಿಲಾಸದಿಂದ ಮಹಾಲಿಂಗವಾಗಿ ಪರಮಾತ್ಮನೆನಿಸಿದ. ಆ ಪರಮಾತ್ಮನು ತನಗೆ ತಾನೇ ಸೇವ್ಯಸೇವಕನಾಗಿರಬೇಕೆಂಬ ಚಿತ್ತು ತನ್ನಲ್ಲಿ ತೋರಲು, ಆ ತೋರಿದ ಅಹಂಭಾವದ ಚಿಚ್ಚೈತನ್ಯವು ಬೇರ್ಪಟ್ಟು ಜೀವಹಂಸನಾಗಿ ಉದಯಿಸಿತು. ಈ ಜೀವಹಂಸನು ಪಂಚವಿಂಶತಿಭೂತಾತ್ಮದೇಹವನ್ನು ಆಶ್ರಯಿಸಿ, ತನ್ನ ನಿಜವನ್ನು ಮರೆತು, ದೇಹಸಂಸಾರಪ್ರಪಂಚನ್ನು ಸ್ವಯವೆಂದು ಸಂಭ್ರಮಿಸುತ್ತಿದ್ದಿತು....ಹೀಗೆ ಗುಣತ್ರಯಗಳನ್ನು ಮುಂದುಗೊಂಡಿದ್ದ ಜೀವನ ತನುವಾಸನೆ ಎಂದೆಂದೂ ಬಿಡದೆ ಗ್ರಹಿಸಿತ್ತು. ಹೀಗೆ ಮಿಥ್ಯಾದೇಹಸಂಬಂಧದಿಂದ ಜೀವನಾಗಿ ತನ್ನನ್ನು ಮರೆತಿರಲು, ತಾನು ಶಿವನೆಂಬ ತಥ್ಯವೇ ತನಗೆ ಮಿಥ್ಯವಾಗಿ ತೋರಿತ್ತು—ಕಲ್ಲುಮಠದ ಪ್ರಭುದೇವರು.)

16. ದೇಹಕ್ಕೆ ಅಪ್ಪುವಿನ ಅಂಶ (= ಮನೋ)ರಸವನ್ನು ಉಡಿಸಿ, ಹಲವು ಪ್ರಕಾರದ ಪ್ರಕೃತಿಯ ಉಲಿಯುವ ಇಂದ್ರಿಯಗಳನ್ನು ಕಟ್ಟಿ, ಅಗ್ನಿ(= ತಾಪತ್ರಯ ?) ವಾಯು (=ಪ್ರಾಣವಿಕಾರ ?)ಗಳೆರಡನ್ನೂ ಈ ದೇಹಕ್ಕೆ ಆಧಾರಸಾಮುಗ್ರಿ (= ಸಂಚ) ಯನ್ನಾಗಿಟ್ಟು, ಜೀವನ ಹಣೆಯಲ್ಲಿ ಪ್ರಾರಬ್ಧವೆಂಬ ಅರಳೆಲೆಯ ಅಲಂಕಾರವನ್ನು ನೇರ್ಪ-ಡಿಸಿ, ಜೀವರನ್ನು ಪರಶಿವನು ಯಂತ್ರವಾಹಕ(= ಸೂತ್ರಧಾರ)ನಾಗಿ ಆಡಿಸುತ್ತಿದ್ದಾನೆ. ಈ ಮಿಥ್ಯೆಯನ್ನು ದೃಢಬುದ್ಧಿಯಿಂದ ಅರಿತು, ನಿತ್ಯವಾದುದೊಂದೇ ಪರಬ್ರಹ್ಮವಸ್ತು-ವೆಂದು ನಿರ್ಧರಿಸಿಕೊಂಡರೆ, ಆ ನಿತ್ಯವಾದುದೊಂದೇ ಉಳಿದು ದ್ವೈತಭಾವವಳಿಯುವುದು.

17. ದೇಹಕ್ಕೆ ಪ್ರಧಾನವಾದದ್ದು ಪಂಚವಿಂಶತಿತತ್ತ್ವಗಳು. ಸಪ್ತವ್ಯಸನ-ಗಳು ಈ ದೇಹಕ್ಕೆ ಸಂಸಾರರಸವನ್ನು ಕೊಡುವುವು. ಆ ರಸವನ್ನು ಗ್ರಹಿಸಲು ಅಷ್ಟ-ಮದಗಳೇ ಮುಖಗಳು. ಆ ಮುಖಗಳಿಗೆ ಚತುರ್ದಶ ಇಂದ್ರಿಯಗಳೇ ಬಾಯಿ. ಆ ಹದಿನಾಲ್ಕು ಬಾಯ್ಗಳಲ್ಲಿ ವಿಷಯವನ್ನು ಜಗಿದು ತಿನ್ನುವ ಹಲ್ಲುಗಳೆಂದರೆ ನೂರಿಪ್ಪತ್ತು ಕರಣಮಥನಗಳು. ಇಂತಹ ಜೀವನ ಹೃದಯದಲ್ಲಿ ಅಡಗಿರುವ ಜ್ಞಾನಾಗ್ನಿಯನ್ನು ಸ್ವಾನು-ಭಾವ ಬೋಧೆಯಿಂದ ಪುಟಗೊಳಿಸಿದರೆ, ಆಗ (ಬರುಮಾತಿನ ಹೋರಾಟ) ಶಬ್ದಜಾಲ ಗಳೆಲ್ಲ (ಲೌಕಿಕ ವಾಗ್ವರ್ತನೆಯ ಕರ್ಮವೆಲ್ಲ—ಕ. ಪ್ರ*)ಉಡುಗಿ, ಮನಸ್ಸಂಕಲ್ಪಭಾವ ದಿಂದ ತೋರುವ ನಾನಾವರ್ಣಗಳೆಲ್ಲ ಅಡಗುವವು. [1]ಇದು ಸಿದ್ಧಿಸಿದ ಮೇಲೆ ಶರಣನನ್ನು ಅವನ ತಾಯಾದ ಚಿತ್‌ಶಕ್ತಿಯೇ ಅವಗ್ರಹಿಸಿಕೊಳ್ಳುವಳು. ಆ ಚಿತ್‌ಶಕ್ತಿಯೊಳಗೆ ತಾನೆಂಬ ಭಾವವನ್ನು ಕಳೆದುಳಿದ ಶರಣನು ತಾನೇ ಶಿವತತ್ತ್ವಸ್ವರೂಪನಾಗುವುದರಿಂದ ಆ ಚಿತ್‌ಶಕ್ತಿಗೆ ತಾನೇ ಮಾತೃಸ್ವರೂಪನೂ ಆದಂತಾಗುವನು. ಇಂತಾದ ನಿಜದ ನಿಲವು ಕರಸ್ಥಲದ ಲಿಂಗದೊಳಗಡಗಿತು.[1] ([1]ಅಂತು ಮನದ ಧರ್ಮಗಳಳಿದ ಶರಣನು ಅನಾದಿ-ಯಲ್ಲಿ ಚಿಚ್ಛಕ್ತಿಯಿಂದ ಉದಯಿಸಿದನಾಗಿ ಆ ಚಿಚ್ಛಕ್ತಿಗೆ ಮಗ. ಮತ್ತೆ ಆ ಬಳಿಕ ಚಿಚ್ಛ-ಕ್ತಿಯೇ ತನ್ಮಯವಾಗಿ ಆ ಶರಣನನ್ನವಗ್ರಹಿಸಿದುದರಿಂದ ಆ ಚಿಚ್ಛಕ್ತಿಗೆ ಮಾತೃಸ್ವರೂಪ ವಾದ ಚಿತ್ಕಲಾಲಿಂಗವು ಶರಣನ ಚಿದ್ಭಾವದಲ್ಲಿ ಉದಯಿಸಿ ಇಷ್ಟಲಿಂಗವಾಗಿ ಕರಸ್ಥಲಕ್ಕೆ ಬಂದು ಚಿದಮೃತಸ್ವರೂಪಾಗಿ ಶರಣನ ಕರಸ್ಥಲದಲ್ಲಿದ್ದು ಪರಮಪ್ರಸಾದಾಮೃತವನ್ನು ಶರಣನಿಗೆ ಉಣಿಸುತ್ತಿತ್ತು—ಕ. ಪ್ರ*)

18. ಸ್ಥೂಲತನುವಿನ ಗುಣಧರ್ಮಗಳ ವ್ಯವಹಾರವನ್ನು ಮಾಡುತ್ತಿರುವ ಜೀವನು ಸಕಲೇಂದ್ರಿಯಕರಣಗಳೆಂಬ ಸಾಧನದ್ರವ್ಯಗಳನ್ನು ಗಳಿಸಿಕೊಂಡು, ಅಹಂಕಾರ ವೆಂಬ ಭಿತ್ತಿಯ ಮೇಲೆ ಕರಣಾದಿವಿಕಾರಗಳೆಂಬ ದ್ರವ್ಯಗಳನ್ನು ಹರಡಿಕೊಂಡಿರುವನು. ಆ ವಿಕಾರವಿಷಯಗಳಲ್ಲಿ ಕಾಮೋಷ್ಣವೆದ್ದು, ಆಶಾತೃಷೆ ಹೆಚ್ಚಲು, ಸಂಸಾರವಿಷಯರಸಾಂಬುಧಿ ಯನ್ನು ಕುಡಿದೂ, ಆ ಆಶಾತೃಷೆ ಹಿಂಗದೆ ಹೋಯಿತು. ಮಾಯಾಸಂಕಲ್ಪಸಂಭೂತನಾದ ಜೀವನು ಆ ಮಾಯೆಯ ಮೃತಚೋಹವನ್ನು ಧರಿಸಿ ಜಾತಿನಾಮವರ್ಣಗಳಿಗೊಳ-ಗಾದನು ಶಿವತತ್ತ್ವವು ಇಂಥಹ ಜೀವನ ಮಿಥ್ಯಾಪಿಂಡದ ಮಧ್ಯೆ ಅಡಗಿರುವುದು.

19. ಅನಾತ್ಮತತ್ತ್ವ ಆತ್ಮತತ್ತ್ವಗಳೆರಡನ್ನೂ ಅನುಭಾವದ್ವಾರದಿಂದ ಅರಿಯುವ ಮನಸ್ಸು ನಿಜದರಿವನ್ನು ಅರಿಯುವ ಬಗೆಯನ್ನು ಕಾಣದೆ ಅಲ್ಲಿಯೇ ಸಂಕಲ್ಪಬದ್ಧವಾಯಿತು.

---

* ಕಲ್ಲುಮಠದ ಪ್ರಭುದೇವರು.

ಮನದೊಳಗೆ ತೃಷ್ಣೆ ಹುಟ್ಟಿ ಸಂಸಾರರಸಕ್ಕೆ ಬಾಯಾರಿದುದರಿಂದ ಅಂತರಂಗದೊಳಗೆ ತನ್ನ ನಿಜವು ನಷ್ಟವಾಗಿ, ಕೇವಲ ಬಾಹ್ಯಾಚರಣೆಯಲ್ಲಿಯೇ ಬಳಲಿಕೆಯುಂಟಾಯಿತು. ಹಾಗಾದ ಮೇಲೆ ಅಲ್ಲಿ ಗುಹೇಶ್ವರನಿಲ್ಲ.

20. ("ಜೀವನುದರ ಅಲ್ಲಿ" ಎಂಬ 'ಹ' ಪಾಠಾಂತರಕ್ಕೆ ಮಹಲಿಂಗನ ವ್ಯಾಖ್ಯಾನ ಸರಿಹೊಂದುವುದು.) ಬ್ರಹ್ಮಾಂಡದೊಳಗಿರುವುದೆಲ್ಲವೂ ಒಬ್ಬ ಜೀವನ ಪಿಂಡಾಂಡದೊಳಗುಂಟು. ಇದನ್ನರಿತು ತನ್ನ ತನುವನ್ನು ಕಿರಿದೆನ್ನದೆ, ಬ್ರಹ್ಮಾಂಡವನ್ನು ಘನವೆನ್ನದೆ, ಆ ಘನತತ್ತ್ವವು ತಾನೇ ಎಂದರಿತರೆ, ಪೂರ್ಣತ್ವ ಒಳಪಡುವುದು.

24. ಶರಣನು ಜ್ಞಾನದೃಷ್ಟಿಯಿಂದ ಮಾಯಾಡಂಬರದ ಸ್ಥಿತಿಗತಿಯನರಿತು ನಿರೀಕ್ಷಿಸಲು, ಬ್ರಹ್ಮಸೃಷ್ಟಿಯ ಪಸರವೆಲ್ಲವೂ ಮಿಥ್ಯವಾಯಿತು. ಆ ಮಿಥ್ಯವನ್ನು ವಿಷ್ಣುತತ್ತ್ವಸಂಬಂಧವಾದ ಶುದ್ಧಸಾತ್ತ್ವಿಕವು ಅವಗ್ರಹಿಸಿತು. ಆ ಶುದ್ಧಸಾತ್ತ್ವಿಕವು ರುದ್ರತತ್ತ್ವವೆಂಬ ನಿಜದ ಸುಷುಪ್ತಿಯ ಸ್ಥಾನವಾದ ಕಾರಣ, ಅದು ಆ ರುದ್ರನೊಳಗೆ ಲೀಯವಾಯಿತು. ಆ ನಿಜದ ಸುಷುಪ್ತಿಯೊಳಗೆ ತನ್ನ ವಿವೇಕವೆಂಬ ವೃಕ್ಷವು ಮೂಲಸ್ಥಾನವಿಲ್ಲದೆ ನಿರ್ಬೀಜದಲ್ಲಿ ಬೆಳೆದು, ನೀರೆಂಬ ಮನದ ಸಂಚಲವಳಿದು, ಉನ್ಮನಿಯ ತತ್ತ್ವದ ಸದ್ಭಾವಚ್ಛಾಯೆಯೊಳಗೆ ತಾನೇ ಪ್ರತಿಬಿಂಬಿಸಿತು.

25. ಪರಮಶಾಂತಿ ಎನಿಸುವ ಚಿತ್ತಿನೊಳಗೆ, ತಾನೇ ಶಿವತತ್ತ್ವವೆಂಬರಿವಿನ ಕುರುಹು ಲಕ್ಷ್ಯಕ್ಕೆ ಬರಲು, ಅದೆ (ಚಂದ್ರಮನೆಂಬ) ಆ ಚಿತ್ತಿನೊಳಗಣ (ಎರಳೆಯ) ಕಳಂಕ. ಆ ಕಳಂಕವೆಂಬ ಅಜ್ಞಾನಕಾಳಿಕೆಯನ್ನು ಶಂಕಾದೃಷ್ಟಿ ಆವರಿಸುವುದು. ಆ ಅಜ್ಞಾನಶಂಕೆಯು ಜ್ಞಾನವನ್ನು ಅರಿಯಲೀಯದೆ, ಅಂವಂದಿಗೆ ಬಂದು ಕಾಡುತ್ತಿರುವುದು. ಸುಜ್ಞಾನದ ಶಿರಸ್ಸು ಮತ್ತು ಅಜ್ಞಾನದ ಒಡಲು ಇವೆರಡು ಪರಸ್ಪರ ಸಂಬಂಧಿಸಿಕೊಂಡು ಕಾಡುತ್ತಿರುವುವು. ಹೀಗೆ ಸುಜ್ಞಾನದ ಪ್ರಭೆಯು ಜ್ಞಾನಾಜ್ಞಾನಯುಕ್ತದಿಂದಳಿದು ಉಳಿದ ತನುಮುಖಸಂಬಂಧದಿಂದ ಅಧೋಮುಖಪ್ರವೇಶವಾಗುತ್ತಿರುವುದು. ಹೀಗೆ ಜ್ಞಾನವಿಪರೀತಭಾವವನೆಯ್ದಿ ಪ್ರತಿಸೂರ್ಯನ್ಯಾಯದಂತಿರುವುದು.

26. ತನುವಿನ ಮಧ್ಯದ ಅಜ್ಞಾನದೃಷ್ಟಿಯೊಳಗೆ ಪಂಚೇಂದ್ರಿಯವಿಷಯಗಳು ಬಿದ್ದಿವೆ. ತತ್ಸಂಬಂಧಿಗಳಾದ ಪಂಚೇಂದ್ರಿಯಗಳು ಆ ವಿಷಯಗಳನ್ನು ಮುಟ್ಟಿ ಮುಟ್ಟಿ ಸಂಸಾರದುಃಖಜೀವಿಗಳಾಗುವವು. ಹೀಗೆ ವಿಷಯಗಳೂ ಅಳಿಯದೆ, ಭವವೂ ಕೆಡದೆ, ದೇಹವು ತಾಪತ್ರಯದಲ್ಲಿ ಬೇಯುತ್ತಿದೆ.

28. ಹೃತ್ಕಮಲಕರ್ಣಿಕಾಕುಹರಮಧ್ಯದ ಮೂಲಾಹಂಕಾರವೆಂಬ ಬೀಜದೊಳಗೆ ಉದಯಿಸಿದ ಅಜ್ಞಾನವು ಅಂತರಂಗದೊಳಗೆ ಹೆಚ್ಚಿ ಬೆಳೆದು, ದಶವಾಯುಗಳ ದಶನಾಳಗಳೊಳಗೆ ಶಾಖೋಪಶಾಖೆಯಾಗಿ, ನಿರ್ಮಿಸಿದ ಸಕಲ ಕರಣಗಳೇ ಪರ್ಣಕುಸುಮಗಳಾಗಿ, ದಶೇಂದ್ರಿಯಗಳೆಂಬ ಫಲ ತಲೆದೋರಿತು. ಆ ಇಂದ್ರಿಯಫಲಸುಖವನ್ನು ಯಾರು ಬಯಸುವರೋ ಅವರಿಗೆಲ್ಲ ಆ ಸಂಸಾರಸುಖ ಕಂಗೊಳಿಸಿತು. ಅದಕ್ಕೆ ಕೈನೀಡಿದ ಸುಖಲಾಲಸಿಗಳು ಸಂಸಾರಸಾಗರದಲ್ಲಿ ಜಾರಿಬೀಳಲು, ಶಿವಜ್ಞಾನಿಗಳದನ್ನು ಕಂಡು ಹಾಸ್ಯವನಾಡುತ್ತಿದ್ದರು.

29. ('ತಲಹಿಲ್ಲದೆ' ಎನ್ನುವುದಕ್ಕೆ ಬದಲಾಗಿ 'ತಲೆಯಿಂದ' ಎಂಬ ಪಾಠಾಂತರನೇ ಮಹಲಿಂಗನ ವ್ಯಾಖ್ಯಾನಕ್ಕೆ ಅನುರೋಧವಾಗಿದೆ. ಆದರೆ ಆ ಪಾಠಾಂತರವು

ಯಾವ ಪ್ರತಿಗಳಲ್ಲೂ ಸಿಗುವುದಿಲ್ಲ.) ಅಜ್ಞಾನಪ್ರಪಂಚು ವಿಶ್ವವನ್ನಾವರಿಸಿದುದನ್ನು ಶರಣನು ಅದರ ಉಪಟಳಕ್ಕೊಳಗಾಗದೆ–ಕಂಡನು. ಆಗ ಆ ಮಾಯೆಯನ್ನು ಇದಿರಿಟ್ಟು-(= ಮುಂದುಮಾಡಿಕೊಂಡು) ಅರಿಯುವ ಅಪೂರ್ಣಜ್ಞಾನವು ಪೂರ್ಣಜ್ಞಾನದಲ್ಲಿ ಲಯವಾಯಿತು. ಆ ಪೂರ್ಣಜ್ಞಾನದ ನಿಲವು ಸರ್ವರಿಗೂ ಸಾಧ್ಯವಿಲ್ಲ.

30. ಮಲತ್ರಯಾತ್ಮಕ ದೇಹಕ್ಕೆ ತಾಪತ್ರಯಾಗ್ನಿ ಹತ್ತಿದರೆ ಮನಸ್ಸಿಗೆ ಕಾಮ-ತೃಷ್ಣೆಯಾಯಿತು. ಆ ತೃಷ್ಣೆಯನ್ನು ಹಿಂಗಿಸಲು, ಜೀವನು ತನುವೆಂಬ ಭೂಮಿಯ ಮೇಲೆ ವಿಷಯಕೂಪವನ್ನು ತೋಡಿ, ಅಲ್ಲಿನ ಸಂಸಾರಜಲವನ್ನು ಕುಡಿದು ಸತ್ತನು. ಒಡನೆ, ವಿಷಯದ ಭೂಮಿಯೂ ಬತ್ತಿತು. ಈ ಅಧ್ರುವಕ್ಕಾಗಿ ಮೂರು ಲೋಕವೂ ಕೆಟ್ಟುಹೋಗುತ್ತಿದೆ.

31. ಮನವೆಂಬ ಕೋಡಗ ಇಂದ್ರಿಯಗಳೆಂಬ ಶಾಖೋಪಶಾಖೆಗಳಿಗೆ ಲಂಘಿ-ಸುವುದು. ಅದನ್ನು ಹಿಡಿದು ನಿಲ್ಲಿಸುವೆನೆಂದು ನೆನೆದರೆ—ಆ ರೀತಿ ನೆನೆವ ಮನವೇ ತಾನಾಗಿರುವುದರಿಂದ–ಸರ್ವಾಂಗವನ್ನೂ ಸಂಕಲ್ಪಭಾವದಿಂದ ಅವಗ್ರಹಿಸಿತು. ಸುಜ್ಞಾನ-ಬೋಧೆಯಿಂದ ನಯವಾಗಿ ಒಡಂಬಡಿಸಿದರೆ ಅದೇ ಮನಸ್ಸು ಸಂಚಲವನ್ನು ಬಿಟ್ಟು ನಿಶ್ಚಲವಾಯಿತು. ಆ ಮನೋಮೂರ್ತಿಶಿವನುತಾನೆಂದರಿಯಲು, ಆ ಮನವು ಅಲ್ಲಿಯೇ ನಿರ್ವಯಲಾಯಿತು.

32. ಪಂಚಭೂತಗಳ ಮೇಳದಿಂದ ಮಿಥ್ಯಾಪಿಂಡವೆಂಬ ಅದ್ಭುತ ಉದಯವಾಯಿತು. ಕೂಡಲೇ ಆ ಪಿಂಡದೊಳಗಣ ಜ್ಞಾನಾಗ್ನಿ ತಣ್ಣಗಾಯಿತು. ಆ ಒಡನೆ ಮನಸ್ಸಿನಲ್ಲಿ ವಿಷಯತೃಷ್ಣೆ ಘನವಾಯಿತು. ತಾಪತ್ರಯಾಗ್ನಿಯು ವಾಯುವಿಕಾರದೊಡ-ಗೂಡಲು ದುಸ್ಸಂಚಲಪ್ರಾಣವಿಕಾರವು ಪ್ರವರ್ತಿಸಿತು.

33. ಭವವೆಂಬರಣ್ಯದೊಳಗೆ ಹೊಲಬುದಪ್ಪಿ ನಿಲವು ಕಾಣಬಾರದ ಜೀವ-ನೆಂಬ ಮಿಥ್ಯಾಚರ್ಮದೇಹಿಯನ್ನು ಪರಮಾರ್ಥವಂಚಕರೆಂಬ ಕರಣಗಳು ಎಡೆಬಿಡದೆ ಬೆಂಬಳಿವರಿದು ಭಿನ್ನವಿವೇಕದಿಂದರಸಿ ನೋಡುತ್ತಿರುವಲ್ಲಿ ಜ್ಞಾನಜ್ಯೋತಿಯಾರಿ, ಅನ್ನೋ-ದಕದ ಆಧಾರದಲ್ಲಿರುವ ಬರಿಯರಿವಿನ ಜ್ಞಾನಿಗಳು ತಮ್ಮ ನಿಜವನ್ನರಿಯದೆ ಭಿನ್ನರುಚಿಯ-ನ್ನುಂಡು ವೃಥಾಹಂಕಾರದಿಂದ ಮದಾನ್ವಿತರಾಗಿ, ಮತ್ತೆಯೂ ಅಸಾಧ್ಯವೆನಿಸುವ ಶಿವ-ತತ್ತ್ವಕ್ಕಾಗಿ ಆಶೆಪಟ್ಟರೆ, ತಾ ಹಿಡಿದ ಮಿಥ್ಯಾದ್ವೈತವೆಂಬ ತನ್ನ ಪಿಂಡದ ಸಂಸಾರರಸ-ವನ್ನು ಪೋಷಿಸಿದಂತೆಯೇ !

34. ಮಿಥ್ಯಾಚ್ಛಾಯಾಮಾತ್ರವಾದ ಜೀವಹಂಸನು ಶಿಶುವಿನ ಕೈಯ ಶುಕನ ಹಾಗೆ ಏನನ್ನೂ ಅರಿಯನು. ಅಂತಹ ಜೀವನಿಗೆ ಬಯಲ ಸರಳನ್ನು ತೊಟ್ಟು ಮಿಥ್ಯ-ವನ್ನೇ ಲಕ್ಷ್ಯಮಾಡಿ ಪರಶಿವನು ಎಚ್ಚು ಕೆಡಹಿದ. ಹೀಗೆ ಬಯಲ ಬಾಣದಲ್ಲಿ ಕೆಡಹಲು ಆ ಜೀವನು ತನುವೆಂಬ ಭೂಮಿಯ ಮೇಲೆ ಬಿದ್ದು ಮೃತವಾಗಿ ಅವಸ್ಥಾತ್ರಯಕ್ಕೊಳ-ಗಾದನು. ಇದೇ ರೀತಿಯಲ್ಲಿ ತ್ರಿಜಗತ್ತೂ ಮೃತವಾಗಿ ಅವಸ್ಥಾತ್ರಯದೊಳಗಿರುವುದು ಪರಮೇಶ್ವರನ ನಿರೂಪ.

35. ಸಂಸಾರಸಾಗರವನ್ನು ಮುತ್ತಿದ ಮಾಯಾತಮಂಧವು ಜೀವನನ್ನು ಪರಿ-ಭವನವಸಾಸಿರಪ್ರಳಯಪರಿಯಂತರ ಮುಸುಕಿಕೊಂಡಿರುವುದು. ಸೃಷ್ಟಿ ಹುಟ್ಟುವಂದು ಜೀವನನ್ನು ಮುಸುಕಿದ ಮಾಯಾತಮಂಧ ಆ ಸೃಷ್ಟಿಯ ಲಯಪರಿಯಂತರ ಬಿಡ-

ದಾಗಿ ಅದು ಒಂದು ಪರಿಭವ. ಅಂತಹ ಪರಿಭವನವಸಾಸಿರಪರಿಯಂತರ ಮಾಯಾ-ತಮಂಧದಲ್ಲಿ ಜೀವನಿರುವನು. ಅಂತಹ ಜೀವನ ನಿಲವನರಸಿ ಕಾಣುವೆನೆಂದರೆ ಬಯಲೊಳಗೆ ಸಿಡಿಲೆರಗಿದಂತೆ ಕಾಣಲಾಗದು. ಆ ಜೀವನ ನಿಲವು ಸ್ವಪ್ನದೃಷ್ಟಿಯು ಮುಂದೆ ತೋರಿದ ಸ್ವಪ್ನದ ನಿಲವಿನಂತೆ ಅಸಹಜ, ಪರಿಮಳದಿಂದಗಲಿದ ತುಂಬಿಯಸ್ನು ಆ ಪರಿ-ಮಳಭ್ರಮೆ ಮುಸುಕಿಕೊಂಡಿರುವಂತೆ ಭ್ರಾಂತಿಭಾವಮಯ, ಮತ್ತು ರೂಪುಂಟಾಗಿಯು ಇಲ್ಲವೆಯಾಗಿರುವ ಇಂದ್ರಚಾಪದಂತೆ ಬರಿಯ ತೋರಿಕೆ. ಆ ಕಾರಣದಿಂದ ಅವನ್ನು ಬೆರಸಿ ನೋಡಲಸಾಧ್ಯ. ಇಂತಹ ಜೀವನಿಂದಾದ ಸುಖವನ್ನು ಸುಖಿಸುವೆನೆಂದರೆ, ಇಲ್ಲವೆಯ ಫಲವನುಂಟೆಂದು ಭಕ್ಷಿಸಿ ಸುಖವನರಿಯದ ಮುಗ್ಧೆಯ ಮರುಳುತನದಂತಿರು-ವುದು. ಅದು ಇಂದ್ರಜಾಲಿಕನ ಕೃತ್ರಿಮದಿಂದಾದ ಅಮ್ಮಾವಿನ ಹಯನಂತೆ ತಥ್ಯ-ವಾಗದು.

36. ಮಾಯಾಪ್ರಪಂಚವು ಪಿಂಡವೆಂಬ ಶಾಸನದ ಮೇಲೆ ಸಂಚಿತಾದಿ ಕರ್ಮ-ತ್ರಯವನ್ನು ಸಂಕಲ್ಪಯುಕ್ತದಿಂದ ಲಿಖಿಸಿ, ಸತ್ಯವಾದ ಆತ್ಮವನ್ನೇ ಸುಳ್ಳುಮಾಡಿ, ಸುಳ್ಳಾದ ತನುವನ್ನೇ ಸತ್ಯಮಾಡಿತು. ಈ ಭೇದವನ್ನು ಸದ್ವಿವೇಕದಿಂದರಿತು, ಮಲಾತ್ಮಕ ದೇಹಕ್ಕೆ ಸುಜ್ಞಾನಪ್ರಭೆಯನ್ನು ಆವರಣವನ್ನಾಗಿ ಮಾಡಿಕೊಂಡರೆ, ಅದು ನಿರ್ಮಲದೇಹ-ವಾಗಿ, ಅದಕ್ಕೆ ಮಹಾಜ್ಞಾನವೇ ಶೃಂಗಾರವಾಗುವುದು. ಆತ್ಮತತ್ತ್ವದೊಳಗೆ ಸ್ವಲೀಲಾಪರ-ನಾಗಿರುವ ಪರಮಹಂಸನು ದೇಹವೆಂಬ ಪಂಜರದೊಳಗಿದ್ದು, ತನ್ನ ನಿಲವನ್ನು ಗ್ರಹಿಸಿ ಹಿಡಿದು, ತದೇಕಾಗ್ರಚಿತ್ತದಿಂದ ಜ್ಞಾನಶಕ್ತಿಯ ಅಭಿನ್ನಸಂಗದಲ್ಲಿ ಏಕರಸವಾಗಿರುವನು.

37. ಸಂಸಾರಸಾಗರದೊಳಗೆ ಕಾಮನೆಂಬ ಬೆಸ್ತನು ಮಾಯಾಜಾಲವನ್ನು ಬೀಸಿದ. ಶಬ್ದಾದಿಭಿನ್ನವಿಷಯಗಳೈದು, ಅಭಿನ್ನಸಂಬಂಧದ ಜ್ಞಾನೇಂದ್ರಿಯಗಳೈದು, ತಮಗೆ ಜ್ಞಾನವಿಲ್ಲದೆ ಮನಸ್ಸಿನಾಧೀನದಿಂದ ಚರಿಸುವ ಕರ್ಮೇಂದ್ರಿಯಗಳೈದು ಅವನ ಮುಂದೆ ಬಿದ್ದಿದಾವೆ. ಹೀಗಾಗಿ ಆ ಕಾಮಜಾಲದೊಳಗೆ ಸಿಕ್ಕಿರುವ ಜೀವನ ಪಾಶ ಚ್ಛೇದವಾಗಲು, ಆ ಮಾಯಾಜಾಲ ನಿವೃತ್ತಿಯಾಗುವುದು. ಆಮೇಲೆ ಆ ಜೀವಭಾವ-ಭ್ರಾಂತಿ ಅಳಿದು ಸುಜ್ಞಾನೋದಯವಾದ ಶರಣನು ತನ್ನ ಸ್ವರೂಪವನ್ನರಿತು, ಸ್ವಜ್ಞಾ-ನಂದಜಲಪ್ರವಾಹದಲ್ಲಿ ಮುಳುಗಾಡುತ್ತಲಿರುವನು.

38. ಜೀವನೆಂಬ ಪಶುವಿಗೆ ಅಹಂಕಾರ ಮಮಕಾರಗಳೆಂಬ ಎರಡು ಕೋಡು. ಆ ಅಹಂಕಾರ ಮಮಕಾರಗಳ ಸಂಕಲ್ಪಮಾರ್ಗಭೇದದಿಂದ ಏಳುನೂರೆಪ್ಪತ್ತು ನಾಳ-ಗಳು ಸಂಸಾರವಿಷಯರಸವನ್ನು ಆಸ್ವಾದಿಸಿಕೊಂಡಿರುವವು. ಆ ನಾಳಗಳಿಗೆಲ್ಲಕ್ಕೂ ಮಧ್ಯ-ಸ್ಥಾನವಾಗಿ ನವಛಿದ್ರವಾದ ತನುವೆಂಬುದೊಂದು ಬಗರಿಗೆಯಿದೆ. ಆ ತನುವಿನೊಳ-ಗೊಬ್ಬ ಮಾಯೆ. ಏಳುನೂರೆಪ್ಪತ್ತು ನಾಳಗಳಲ್ಲಿ ವ್ಯವಹರಿಸುವ ಜೀವನ ಅಹಂಕಾರಾದಿ ವಿಕಾರಗಳು ಆ ಮಾಯೆಯ ಕೊರಳಿಗೆ ತಕ್ಕ ಭೂಷಣಗಳೆನಿಸಿವೆ.

39. ಕಾಲವ್ಯಾಘ್ರವನ್ನೇ ಶಿರಃಪ್ರಧಾನವನ್ನಾಗಿ ಮಾಡಿಕೊಂಡು ಮಾಯೆ-ಯೆಂಬ ಹರಿಣಿ ಇರುವಳು. ಆ ಮಾಯೆಯೆಂಬ ಹರಿಣಿಯನ್ನೇ ಶಿರಃಪ್ರಧಾನವನ್ನಾಗಿ ಮಾಡಿಕೊಂಡು ಕಾಲವ್ಯಾಘ್ರನಿರುವನು. ಮಾಯೆಯು ಆ ಕಾಲವ್ಯಾಘ್ರನ ಮುಖ-ದಿಂದ ಲೋಕವನ್ನೆಲ್ಲ ಸಂಹರಿಸುತ್ತಿರುವಳು. ಆ ಕಾಲವ್ಯಾಘ್ರನು ಆ ಮಾಯಾಮುಖ-ದಿಂದ ಲೋಕವನ್ನೇ ಗ್ರಹಿಸುತ್ತಿರುವನು. ಇವೆರಡಕ್ಕೂ ಸಂಬಂಧವನ್ನೇರ್ಪಡಿಸಿರು-

ವುದು ಅಜ್ಞಾನವೊಂದೇ. ಆ ಕಾಲವ್ಯಾಘ್ರನಲ್ಲದೆ, ಆ ಮಾಯೆಯಲ್ಲದೆ, ಪ್ರಾರಬ್ಧಕರ್ಮ-ವೆಂಬ ಭೋಕ್ತೃ ಪುಣ್ಯಪಾಪಗಳನ್ನನುಭವಿಸುತ್ತಿರುವನು. ಹೀಗೆ ಜ್ಞಾನಹೀನವಾದ ಮಾಯಾಭ್ರಾಂತಿಯಿಂದ ಸಂಸಾರವನ್ನು ಸವಿದ ಕಾರಣ, ಆ ಜೀವನು ಪ್ರಪಂಚದ ಮರೆಯಲ್ಲಿ ಅಡಗಿಹೋದನು.

43- ಯಾರದೋ ದುಃಖಾಧಿಕ್ಯಕ್ಕೆ ಯಾರೋ ಚಿಂತಿಸುವರು. ಯಾರದೋ ದುಃಖರಾಹಿತ್ಯಕ್ಕೆ ಯಾರೋ ಒಳಗೊಳಗೇ ಕುದಿಯುವರು. ಇದು ಯಾರ ದುಃಖ ? ಇದೇನು ದುಃಖ ? ! ಮಾಯದ ಮರುಳುತನದಲ್ಲಿ ಹುರುಳಿಲ್ಲ–ಎಲ್ಲರನ್ನೂ ಅದು ಕೊಂದು ಕೂಗುತ್ತಿದೆ.

48. ಜೀವನು ಕುಬ್ಜನಾದರೂ, ತಾನು ಸಂಸಾರವಿಷಯರಸವನ್ನು ತುಂಬಿ-ಕೊಂಡಿರುವ ಸ್ಥಾನ ಹಿರಿದು; ಆ ಜೀವಪಶುವಿಗೆ ಅಹಂಕಾರ ಮಮಕಾರಗಳೆಂಬೆರಡು ಕೊಂಬುಗಳು ಅತ್ಯುನ್ನತವಾಗಿರುವವು. ಆ ಜೀವನ ನಿಲವನ್ನರಿಯುವೆನೆಂದು ಷಡಂಗ-ಯೋಗಸೋಪಾನವನ್ನು ಮಾಡಿ, ಆರಡಿಯನ್ನು ದಾಟ ಅರಿಯುವೆನೆಂಬನ್ನಕ್ಕರ, ಆ ಜೀವನ ನಿಲವು ಜ್ಞಾತೃ–ಜ್ಞಾನ–ಜ್ಞೇಯವೆಂಬ ತ್ರಿಸೋಪಾನವನ್ನು ಮೆಟ್ಟಲೊಡನೆ ಆ ಮೂರರಲ್ಲಿ ಅದು ಇಲ್ಲವೆಯಾಯಿತು. ಈ ಭೇದವನ್ನು ತಿಳಿದ ಶರಣನು ಪರತತ್ತ್ವದ ಸಂಗವನ್ನು ಹಾರೈಸುತ್ತಿರುವನು.

49. ಅಹಂಕಾರವು ಜೀವನ್ಮೃತವೆನಿಸಿ ಶರೀರಗತವಾಗಿ ಬಿದ್ದಿರಲು, ಆ ಜೀವ-ನ್ಮೃತಪಿಂಡವನ್ನು ಮನವೆಂಬ ಮರ್ಕಟನು ತದ್ದೇಹಸಂಕಲ್ಪಹಸ್ತದಿಂದ ಹಿಡಿದು ಲಾಲಿಸುತ್ತಿರುವುದು. ಭವಾರಣ್ಯದಲ್ಲಿ ಮಾಯೆ ಸರ್ವರನ್ನೂ ಮರುಳುಮಾಡುತ್ತಿರುವಳು. ಮಿಥ್ಯಾಭಾವದ ಪಂಚಭೂತದೇಹಗ್ರಾಮದಲ್ಲಿ ಇಂದ್ರಿಯಗಳೆಂಬ ನಾಯಿಗಳು ಕರಣ-ಮಥನಕರ್ಕಶದಿಂದಿವೆ. ಇದು ಶರಣನಿಗೊಂದು ಸೋಜಿಗ.

50. ಶಿವಸ್ವರೂಪಿಯಾದ ಆತ್ಮನು ಮಲಾತ್ಮಕದೇಹವನ್ನು ಮನೆಯನ್ನಾಗಿ ಮಾಡಿಕೊಂಡು ಕುಲಛಲಸೂತಕ ಕೆಡದೆ ಇದ್ದನು. ಆದ್ದರಿಂದ ಶಿವಸತ್ಕುಲಜರಾದ ಶಿವಜ್ಞಾನಿಗಳು ಅವನ ಮುಖವನ್ನು ನೋಡದಾದರು; ಕುಲಸೂತಕ ಉಳ್ಳವರೆಲ್ಲರು ಬಂದು ಅವನ ಕೈವಿಡಿದರು. ವಿವೇಕದಿಂದ ಸರ್ವಸೂತಕರಹಿತ ತಾನೆಂದರಿಯಲು ಆ ಸೂತಕ ನಿವೃತ್ತಿಯಾಗುವುದು.

54. ಜ್ಞಾನೋದಯವಾಗಿ ಅಂತರಂಗದೊಳಗೆ ಬೆಳಗು ಪ್ರಸರಿಸಲು, ಅಜ್ಞಾನ-ತಿಮಿರ ಹರಿದು, ಜೀವನು ಸದ್ಗುರುಪಾದವನ್ನು ದೃಢಭಾವದಿಂದ ಹಿಡಿಯುವನು. ಹೀಗಾಗಿ ಅನಾಯಾಸದಿಂದ ಜೀವನು ಕೃತಾರ್ಥನಾಗುವನು. ಜೀವಪಶು ಜ್ಞಾನರತ್ನವನ್ನು ನುಂಗಲು ಪಶುತ್ವವಳಿದು, ಆ ಜ್ಞಾನರತ್ನ ಉಳಿಯಿತು. ಕಾಯವೇ ಅಕಾಯವಾಗಿ, ಆ ಅಕಾಯವೇ ನಿತ್ಯಕಾಯವಾಯಿತು. ಇಂತಹ ನಿಲವನ್ನು "ಮುಟ್ಟುವೆ, ಗ್ರಹಿಸುವೆ" ಎಂದರೆ ಅಸಾಧ್ಯ. ಅಂತಹ ಅಗಮ್ಯಕಾಯವೂ ನಿಸ್ಸಂಚಲಪ್ರಾಣವೂ ಲಿಂಗದಲ್ಲಡಗಿ, ಆ ಲಿಂಗವು ಕರ-ಸ್ಥಲಕ್ಕೆ ಬಂದಿತು.

67. ಮಾಯೆಯಿಂದ ಹುಟ್ಟಿದ ಜೀವನು, ಇಲ್ಲದ ಸಂಸಾರರಾಶಿಯನ್ನು ಮುಂದಿಟ್ಟುಕೊಂಡು,ತನುವೆಂಬ ಕೊಳಗದಲ್ಲಿ ಮೊಗೆಯುತ್ತ,ಸುರಿಯುತ್ತ, ಜನನಮರಣ-

ಕ್ಕೊಳಗಾಗುವನು. ಆ ಮಾಯೆಯ ದುರ್ವಾಸನಾಸ್ವೀಕಾರವೆಂಬ ನಾಸಿಕವನ್ನೂ, ಸಂಸಾರವಿಷಯರಸದ ಘನಸ್ವರೂಪವಾದ ಮೊಲೆಯನ್ನೂ ಛೇದಿಸಿ ಅಭಿಮಾನವನ್ನು ನಿವೃತ್ತಿಮಾಡಿದ ಶರಣನು ಜ್ಞಾನಶಕ್ತಿಯಸಂಗವನ್ನಾಶ್ರಯಿಸಿ, ಪ್ರಾರಬ್ಧಾದಿ ಕರ್ಮಗಳನ್ನು ಉಣಲೊಲ್ಲದೆ ಉಗುಳುವನು.

70. ಪಂಚಭೂತವೆಂಬ ಮುಖವನ್ನುಳ್ಳ ಮಾಯೆಗೆ ಸ್ಥೂಲಪಂಚಭೂತ, ಸೂಕ್ಷ್ಮಪಂಚಭೂತ, ಕಾರಣಪಂಚಭೂತವೆಂಬವು ದೇಹಗಳಾದವು. ಜೀವಪಶು ವಾಸಿಸು-ವುದು ಈ ಮಾಯಾಪಿಂಡದಲ್ಲೇ. ಹೀಗಿದ್ದು, ತಮ್ಮ ನಿಜವನ್ನರಿಯದೆ ಬಾಯ್ಗೆ ಬಂದಂತೆ ವಾಗ್ವಿಲಾಸವನ್ನು ಮೆರೆಯುವರು.

74. ಶಂಕಾವಿಷವಿರುವ ಪಂಚೇಂದ್ರಿಯಗಳೆಂಬ ಐದು ಸರ್ಪಗಳಿಗೆ ಮನಸ್ಸೇ ತನು. ಆ ಮನಸ್ಸು ಸಂಕಲ್ಪ–ವಿಕಲ್ಪದಿಂದ ಹಿಡಿಯುತ್ತ, ಬಿಡುತ್ತ, ಬೇಕು–ಬೇಡ ಎಂಬೆರಡರಲ್ಲಿ ಸರ್ವರನ್ನೂ ಧಾವತಿಗೊಳಿಸುತ್ತಿರುವುದು. ಆ ಮನಸ್ಸಿನ ಸಂಕಲ್ಪ–ವಿಕಲ್ಪದಿಂದ ಆ ಇಂದ್ರಿಯಗಳೆಂಬ ಸರ್ಪಗಳು ಪ್ರಾಣವನ್ನು ಅವಗ್ರಹಿಸಿಕೊಂಡಿರಲು, ಅರಿವು ಸತ್ತು, ಪ್ರಾಣವು ಇಂದ್ರಿಯಗಳಿಚ್ಛೆಗೆ ಸುಳಿದಾಡುವುದು. ಹೀಗೆ ನಿತ್ಯವನ್ನರಿಯದ ಒಡಲೊಳಗೆ ಲಿಂಗಭಕ್ತಿ ಎಡೆಗೊಳ್ಳದು.

76. ನಿರ್ಜನಭವಾರಣ್ಯದಲ್ಲಿ ಪಂಚಭೂತಸಪ್ತಧಾತುಪಿಂಡವನ್ನು ಜೀವನು ಆಶ್ರಯಿಸಿರಲು, ತಾಪತ್ರಯಾಗ್ನಿಯೆದ್ದು ಆ ಪಿಂಡವನ್ನು ಆವರ್ತಿಸಿಕೊಂಡಿತು. ಆ ಅಗ್ನಿಯಲ್ಲಿ ತನು ಉರಿದು ಬೇಯುತ್ತಿರಲು, ಜೀವನ ನಿಲವು ಕಾಣಲಾಗದು. ತನುಗುಣ-ಕರಣಗಳು ಯಾವುವೂ ಅಳಿಯದೆ ಪ್ರವರ್ತಿಸುತ್ತಿದ್ದವು. ಈ ಕಾರಣದಿಂದ ಜೀವನು ಸಂಸಾರವಲ್ಲಿ ಅಳಲುತ್ತ ಬಳಲುತ್ತಿದಾನೆ.

80. ಗುರುವೇ ಪತಿ, ಶಿಷ್ಯನೇ ಸತಿ. ಆದರೂ, ಆ ಗುರುವಿಗಿಂತ ಮುನ್ನವೇ ಶಿಷ್ಯನಿಗೆ ಜ್ಞಾನೋದಯವಾಗಿ ಸಂಸಾರಪಾಶಚ್ಛೇದನವಾಗುವುದು ; ಆಮೇಲೆ ಆ ಶಿಷ್ಯನು ಬಂದು ಗುರುವನ್ನಾಶ್ರಯಿಸುವನು. ಆದರೂ "ನ ಗುರೋರಧಿಕಂ." ಆ ಶಿಷ್ಯನು ಶ್ರೀ ಗುರುತತ್ತ್ವದಿಂದ ಭಿನ್ನವಿಲ್ಲದೆ ಆ ಗುರುತತ್ತ್ವಸಹಿತವೆ ಉದಯವಾದ. ಆ ಶಿಷ್ಯನಲ್ಲಿ ಗುರು ಅವಿರಳ ಸಂಗವನ್ನು ಮಾಡಲಾಗಿ, ಲಿಂಗವೆಂಬ ಶಿಶು ಹುಟ್ಟಿತು. ಆ [1]ಲಿಂಗಭಾವವು ಜ್ಞಾನ-ಶಕ್ತಿಯಿಂದ ಹುಟ್ಟಿ, ಆ ಜ್ಞಾನಶಕ್ತಿಯನ್ನೇ ಆಲಿಂಗಿಸಿ, ಭಕ್ತ್ಯಂಗನೆ ಎನಿಸಿಕೊಂಡು, ಲಿಂಗಭಕ್ತಿಯನ್ನು ಮಾಡುತ್ತಿದ್ದಿತು.[1] ([1]ಹಾಗೆ ಉದಯಿಸಿದ ಇಷ್ಟಲಿಂಗಕ್ಕೆ ಶಿಷ್ಯನೇ ಮಾತೃಸ್ಥಾನವಾದ ಭಕ್ತ್ಯಂಗನೆ ಎನಿಸಿಕೊಂಡು, ಲಿಂಗಭಕ್ತಿಯನ್ನು ಮಾಡುತ್ತಿರಲು, ಆ ಸದ್ಭಕ್ತನ ಅಂಗಪ್ರಾಣಸರ್ವೇಂದ್ರಿಯಗಳಲ್ಲಿ ಲಿಂಗ ಅಳವಟ್ಟಿತು.—ಕ. ಪ್ರ.) ಹೀಗೆ ಸರ್ವಾಂಗಲಿಂಗಿಯಾದ ಶರಣನು ಗುರುಭಕ್ತಿಯನ್ನು ಬಿಡದೆ ಮಾಡುತ್ತಿದ್ದನು. ಅಂತಹ ಸದ್ಭಕ್ತಿ ಲಿಂಗಕ್ಕೆ ಪರಿಣಾಮವಾಯಿತು.

83. ಯೋನಿದ್ವಾರವನ್ನು ತಿರುಗಿ ನೋಡದೆ, ತಾನು ಶಿವತತ್ತ್ವದ್ವಾರದಿಂದ ಬಂದೆನೆಂದರಿತು ಪರಿಣಾಮಿಸಿದ. ಶರೀರವಿಡಿದು ನಿಂತ ನಿಲವನ್ನು ಮುಂದುಗೆಡಿಸಿ, ತನ್ನ ಸ್ವಭಾವದಿಂದ ನಿಂತ ನಿಲವನ್ನು ಮುಂದುಗೊಂಡಿದ್ದನು. ಇಂತಹ ಶಿಷ್ಯನ ಹೃದಯವೂ, ಆ ಶ್ರೀಗುರುವಿನ ಹೃದಯವೂ ಏಕೋಭಾವವಾಗಿತ್ತು. ಆ ಸದ್ವಿವೇಕಿಶಿಷ್ಯನ ಆ ಸದಾಚಾರಕ್ರಿಯಾಚರಣದಲ್ಲಿ ಕೃತನಿಶ್ಚಯವೆಂಬ ದೃಢಹಸ್ತ ಹುಟ್ಟಿತು. ಕೃತನಿಶ್ಚಯ

ಹಸ್ತದಲ್ಲಿ ಸದ್ಭಕ್ತಿಕ್ರೀಯನ್ನೇ ಪೃಥವಿಡಿದು ಅಭಕ್ತಿಕ್ರೀಯನ್ನೆಲ್ಲ ವಿಸರ್ಜಿಸಿದರೆ ಆ ಭಕ್ತಿ ಲಿಂಗದ ಪರಿಣಾಮವಾಗುವುದು.

86 ತಾನು ಅನಾದಿಸಂಸಿದ್ಧಪರಶಿವನೆಂದರಿತ ಶರಣನ ಸದ್ವಿವೇಕದ ಭಾಗೆ-ಯಿಂದ ಸದ್ವಾಸನಾಸ್ವರೂಪಿಯಾದ ಚಿತ್‌ಶಕ್ತಿಯುದಯವಾಗಲು, ಆ ಚಿತ್‌ಶಕ್ತಿ ಪ್ರಥಮ-ವಿವೇಕಭಾಗೆಯಿಂದ ಬಾಲ್ಯವಿವೇಕಿನಿ ಎನಿಸಿಕೊಂಡಳು. ಚಿತ್‌ಶಕ್ತಿಗೂ ಆ ಶರಣನಿಗೂ ಜ್ಞಾನವಿಷಯಸಂಗ ಒಂದೆ ಎಂದರಿತು ಸತಿಪತಿಭಾವವು ಸಂಬಂಧಿಸುವಲ್ಲಿ, ಇಚ್ಛಾಶಕ್ತಿ, ಕ್ರಿಯಾಶಕ್ತಿ, ಮಂತ್ರಶಕ್ತಿ, ಆದಿಶಕ್ತಿ, ಪರಾಶಕ್ತಿ ಎಂಬೈವರು ಸಖೀಭಾವದಿಂದ ತತ್ಸಂಬಂಧಕ್ಕೆ ಅನುಗುಣೆಗಳಾದರು. ಸದಾಚಾರಸತ್ಕ್ರಿಯೆಯೆಂಬುವೇ ಆಧಾರ-ಸ್ಥಲವಾಗಿರುವುದರಿಂದ ಅವೇ ಹಸೆ. ಆ ಸತ್ಕ್ರಿಯಾಸಂಪತ್ತೆಂಬ ನೆಲಗಟ್ಟಿನ ಮೇಲೆ ಆ ಶರಣನು ಸ್ವಸ್ಥನಾಗಿ ನಿಂತಾಗ, ಆ ಶಕ್ತಿ ಅವನ ಕೈವಿಡಿದಳು. ಆ ಚಿತ್ತಿನ (=ಚಿತ್ ಶಕ್ತಿಯ) ಸಂಗದಿಂದ ಸಹಜಕ್ರಿಯಾಸಂಪನ್ನನಾದ ಶರಣನಿಗೆ ಉತ್ತರಕಕ್ಷವಾದ ಪರಾಶಕ್ತಿ ಮುಂದುದೋರಿದಂತೆಲ್ಲ ಆತನು ಭಕ್ತಿಯಲ್ಲಿ ಅತ್ಯಂತ ಅರ್ಥವಿಶೇಷಸಂಪನ್ನ-ನಾಗುವನು. ಆ ಅರ್ಥಕ್ಕೆ ಪಂಚಶಕ್ತಿಯರೆಲ್ಲರೂ ಸದ್ಭಕ್ತಿವಿವೇಕದಲ್ಲಿ ಸಂಗಿಗಳಾಗು-ವರು. ಇಂತಪ ಶಿವತತ್ತ್ವವನ್ನು ಕಾಣುವೆನೆಂಬ ಶರಣನಿಗೆ ಆ ವಸ್ತು ಸಮೀಪಸ್ಥ-ವಾಗಿರುವುದು. ಇದನ್ನರಿಯುವುದಕ್ಕೆ ಸತ್ಪಥ ಅನೇಕವಾಗಿರುವುದು.

89. ಶರೀರವೆಂಬ ವೃಕ್ಷವು ಪ್ರಾಣವಾಯುವಿಕಾರದಿಂದ ಶಬ್ದಜಾಲಗಳನ್ನುಚ್ಚ-ರಿಸುತ್ತಿರಲು, ಆ ಶರೀರದ ಮಾಯಾಚ್ಛಾಯೆಯಲ್ಲಿದ್ದು ಶಬ್ದಮುಗ್ಧನಾಗುವೆನೆಂದರೆ ಆ ಪರವು ಸಾಧ್ಯವಾಗದು. ಭಕ್ತಿಜ್ಞಾನವೈರಾಗ್ಯಮುಖ್ಯವಾದ ಕ್ರಿಯೆಗಳೆಲ್ಲಕ್ಕೂ ಇಚ್ಛೈಸುವುದೆ ಮುನ್ನ; ಅದು ಹೇಗೆಂದರೆ, ಇಚ್ಛೆಯಿಲ್ಲದೆ ಯಾವುದೂ ಸಾಧ್ಯವಾಗದಾಗಿ. ಗುರು ಕಾರುಣ್ಯಪಟ್ಟವನ್ನು ಕಟ್ಟುವ ಕಾಲದಲ್ಲಿ ಇಚ್ಛಾಶಕ್ತಿಯೆ ಪಟ್ಟದ ರಾಣಿವಾಸ. ಅಂತಹ ಇಚ್ಛಾಶಕ್ತಿಯಲ್ಲಿ ಶ್ರದ್ಧೆಯಿಲ್ಲದೆ ಇಚ್ಛೆಯ ಮುಖವನ್ನು ಮುದ್ರಿಸಿದರೆ, ಆ ಕ್ರಿಯಾಶಕ್ತಿಯ ವಿವೇಕದ ಮೇಲೆ ಸ್ವಸ್ಥನಾಗಿರುವೆನೆಂಬುದು ಸಾಧ್ಯವಾಗದ ಮಾತು. (ಕ್ರಿಯಾಶಕ್ತಿಗೆ 'ನಡೆವಸತಿ' ಎಂಬ ನಾಮ.) ಜ್ಞಾನಶಕ್ತಿಯೆಂಬ ಸ್ತ್ರೀ ಶರಣನಿಗೆ ಆದಿಯಿಂದ ಉಳ್ಳ ಸತಿಯಾದ ಕಾರಣ, ಆ ಜ್ಞಾನಶಕ್ತಿಯ ಸಂಗ ಹಿಂಗಲು, ಅಜ್ಞಾನವರ್ತನೆ ಎಡೆಗೊಂಡು, ಮಾಡುವ ಕ್ರೀಗಳೆಲ್ಲವು ಅಜ್ಞಾನಕ್ರೀಗಳಾಗಿ ಜಡಭಾವವಾವರಿಸಿ, ಭಕ್ತಿಸ್ಥಲದ ಮೇಲೆ ಚರಿಯಿಸಲಾಗುವುದಿಲ್ಲ. ಈ ಕ್ರಮುವನ್ನರಿಯದೆ, ಭ್ರಮೆಯಳಿಯದೆ ಮಾಡುವ ಭಕ್ತಿಯೆಲ್ಲವೂ ಹಾಸ್ಯಕ್ಕೊಳಗಾಗುವುದು.

95. ಹೃದಯದಲ್ಲಿ ಅಜ್ಞಾನ ಹುಟ್ಟಿ, ಅದು ಆತ್ಮತತ್ತ್ವವನ್ನು ಆವರ್ತಿಸಿ, ತಮೋವಿವರ್ಧನೆಯನ್ನುಂಟುಮಾಡಿತು. ಆ ಅಜ್ಞಾನಭ್ರಮರನ ಪ್ರಪಂಚುಕ್ರೀಡೆಯಿಂದ ಜಗ-ವೆಲ್ಲ ಮರವೆಯನೆಯ್ದಿತು. ಇಂತಹ ಅಜ್ಞಾನಭ್ರಮರನನ್ನು ಕೆಡಿಸುವ ಪರಿಯೆಂತೆಂದರೆ: ಪಂಚೀಕರಣಗಳ ವರ್ಣಧರ್ಮಗಳನ್ನುಳ್ಳ ಜೀವಹಂಸನ ಆಶ್ರಯವೆನಿಸುವ ಪಿಂಡವನ್ನು ಅನಿತ್ಯವೆಂದರಿತು ಸದ್ವಿವೇಕದಿಂದ ಖಂಡಿಸಲು–ಅಂದರೆ ಶರಣನು ಅನುಭಾವಮುಖದಿಂದ ಶರೀರಭಾವವನ್ನು ಖಂಡಿಸಲು–ಆ ಅಜ್ಞಾನಭ್ರಮರನ ಪ್ರಪಂಚೆಂಬ ರೆಕ್ಕೆಗಳು ಲೋಪ-ವಾಗಿ ಆ ತನುಮಧ್ಯದಲ್ಲಿ ಲಯವಾಗುವುದು. ಹೀಗೆ ಅಜ್ಞಾನ ಭ್ರಮೆಯಳಿಯಲು ಪರ-ತತ್ತ್ವದ ನಿಲವಿನ ಭೇದವನ್ನು ಮಹಾನುಭಾವಿಗಳ ಸಂಗದಿಂದ ಕಾಣಬಹುದು.

99. ಸಕಲಕ್ರೀಗಳೇ ಬಿಸುಜಂತೆ, ಲಿಂಗನಿಷ್ಠಾಭಾವವು ಆ ಕ್ರೀಗಳೆಲ್ಲಕ್ಕೂ ಆಧಾರಸ್ತಂಭ, ಅದಕ್ಕೆ ಆಚಾರವೆಂಬ ಮೇಲುಹೊದಿಕೆ. ಹೀಗೆ ಭಕ್ತನು ತನ್ನ ತನು-ವೆಂಬ ಗೃಹವನ್ನು ಇಂಬುಮಾಡಿ, ಮತ್ತಾ ಕ್ರೀಗಳನ್ನು ಜ್ಞಾನಾಗ್ನಿಯಿಂದ ದಹಿಸಿ ಸುಜ್ಞಾನಕ್ರೀಗಳನ್ನಾಗಿ ಮಾಡಿ, ಆ ಲಿಂಗನಿಷ್ಠೆಯನುಭಾವವನ್ನು ಜ್ಞಾನಾಗ್ನಿಯಿಂದ ದಹಿಸಿ ಮಹಾಜ್ಞಾನನಿಷ್ಠೆಯ ಮಹಾಜ್ಞಾನನಿರ್ಭರವನ್ನಾಗಿ ಮಾಡಿ, ಮೇಲುಹೊದಿಕೆಯೆಂಬ ಆಚಾರವನ್ನು ಜ್ಞಾನಾಗ್ನಿಯಿಂದ ದಹಿಸಿ ಜ್ಞಾನಾಚಾರವನ್ನಾಗಿ ಮಾಡಿ, ಸರ್ವಾ-ಚಾರಸಂಪತ್ತುವಿಡಿದ ಶರಣನ ತನುಗೃಹವನ್ನು ಸುಜ್ಞಾನಗೃಹವನ್ನಾಗಿ ಮಾಡಿ ಮಹಾ-ಲಿಂಗಕ್ಕೆ ಇಂಬುಮಾಡಿದನು. ಹೀಗಾದ ಶರಣನ ತನುಮನಪ್ರಾಣಭಾವಗಳಳಿದು ಭವಂನಾಸ್ತಿಯಾಗಿ ಅವನು ಸದ್ಯೋನ್ಮುಕ್ತನಾಗುವನು.

101. ಮನೋಮಧ್ಯದಲ್ಲಿರುವ ಮಹಾಲಿಂಗದ ನಿಜವು ಗುರುಕಾರುಣ್ಯ-ಮಹಾನುಭಾವಸಂಯೋಗದಿಂದ ಅಂತರಂಗದಲ್ಲಿ ಉದಯಿಸಿ ಬಹಿರ್ಗತವಾಗಿ ಇಷ್ಟಲಿಂಗ-ರೂಪಿಂದ ಕರತಳಾಮಳಕವಾಗುವುದು. ಕರ್ಪೂರವೆಂದರೆ ಸ್ವಾನುಭಾವ. ಇಂತಹ ಸ್ವಾನುಭಾವಸದ್ವಾಸನಾಸಂಬಂಧದಿಂದ ಬೋಧಾರಸವನ್ನು ಕರ್ಣದ್ವಾರದಿಂದ ಸ್ವೀಕರಿ-ಸಿತು. ಮುತ್ತೆಂದರೆ ಮುಕ್ತಿ. ಆ ಮುಕ್ತಿಯ ನಿರ್ಮಲಪ್ರಭೆಯನ್ನು ಸ್ವಾನುಭಾವ-ಸುಗಂಧವವಗ್ರಹಿಸಿತು. ಸುಜ್ಞಾನದೃಷ್ಟಿಯೊಳಗೆ ಮಹಾಘನದ ಅರ್ಥವೆಡೆಗೊಂಡು ಆ ಸುಜ್ಞಾನದೃಷ್ಟಿಯ ಅರ್ಥವು ಶಿವತತ್ತ್ವವನ್ನವಗ್ರಹಿಸಿತ್ತು. ನೀಲವೆಂದರೆ ಮಾಯೆ. ಆ ಮಾಯೆಯ ನಿಲವಿನೊಳಗೆ ತ್ರಿಜಗವಡಗಿಕ್ಕು.

102. ಶರಣನು ಸದಾಚಾರದ ಸಚ್ಚರಿಯವೆಂಬ ಚರಣದಿಂದ ಸತ್ಪಥದಲ್ಲಿ ಶಿವಲೀಲೆಯಿಂದ ನಡೆಯುವನು. ಇಂತಹ ಸದಾಚಾರ ಸಚ್ಚರಿಯಕ್ಕೆ ಕರ್ತೃಸ್ಥಾನವಾವು-ದೆಂದರೆ—ಇಷ್ಟಲಿಂಗವೆ ಆಚಾರಲಿಂಗವಾದ ಕಾರಣ, ಆ ಲಿಂಗಪ್ರವರ್ತನೆ ಕರಸ್ಥಲದಲ್ಲಿ-ರುವುದು. ಆ ಕರಸ್ಥಲದ ಲಿಂಗಕ್ಕೆ ನೋಟವೆ ಆಶ್ರಯಸ್ಥಾನ; ಹೇಗೆಂದರೆ ಕೂಟಕ್ಕೆ ನೋಟವೇ ಕಾರಣ. ಈ ಪಥವನ್ನರಿತು ನಿಜದಲ್ಲಿ ನಿಂತು, ಆ ಅರಿವನಿದಿರಿಂಗೆ ತೋರಿ ಮಾತನಾಡಿದರೆ, ತನ್ನ ಮಾತು ತನ್ನನಾಲಿಂಗಿಸಿಕೊಂಬ ಹಾಗೆ ಮಾತನಾಡಿದರೆ ಅದು ಏಕ-ವಾಕ್ಯಪ್ರತಿಷ್ಠೆ. ಕನ್ನಡಿಯನ್ನು ನೋಡಲು ತನ್ನಿಂದ ಭಿನ್ನವಿಲ್ಲವೆಂಬಂತೆ ತನ್ನನ್ನು ತಾನು ಇದಿರಿಟ್ಟು ನೋಡಿ, ಕಂಡು ತನ್ನನರಿವುದೆ ಸದ್ವಿವೇಕ. ಇಂತಹ ವಿವೇಕವನ್ನು ತಿಳಿಯ-ದವರು ಅಕ್ರಮಿಗಳು.

106. ಉಪಾಧಿಯಿಂದ ಪೂಜಿಸಿ, ಕಾಮಿಸಿ, ಮುಕ್ತಿಯನ್ನು ಬಯಸಲು, ಆ ಬಯಕೆ ಲಿಂಗಕ್ಕೆ ಅನ್ಯವಾಗುವುದು. ಆದರೆ, ಆ ಉಪಾಧಿಯನ್ನು ಬಿಟ್ಟು, ಜ್ಞಾನಾಗ್ನಿ-ಯನ್ನು ಸರ್ವಾಂಗದಲ್ಲಿ ಧರಿಸಿ, ಪರಮಾನಂದಲೀಲೆಯಲ್ಲಿರುತ್ತಿರಲು, ಅದು ಲಿಂಗಕ್ಕೆ ಸುಖಕರವಾಗುವುದು. ಹೀಗೆ ವೃತ್ತಿಜ್ಞಾನಕ್ರಿಯಾಭೇದವನ್ನು ನಿವೃತ್ತಿಮಾಡಲು ನಿಜವು ಸಾಧ್ಯವಾಗುವುದು.

111. ಮನದ ಮರವೆಯನ್ನು ಕಳೆದು, ತನುಮಧ್ಯದಲ್ಲಿರುವ ಮೂಲಾ-ಹಂಕಾರದ ವಶವೃತ್ತಿಗೆ ಸಿಲುಕದೆ, ತಾನು ಆ ಅಹಂಕಾರವನ್ನು ಅವಗ್ರಹಿಸಿ ತನ್ನೊಳಡಗಿಸಿ-ಕೊಂಡು, ವಾಗ್ವೃತ್ತಿಯನ್ನು ನಿವೃತ್ತಿಮಾಡಲು, ತನುವಿಂದ ಉದಯಿಸಿ ಬೆಳೆದ ತನು-ಧರ್ಮಕರ್ಮಗಳನ್ನು ಸ್ವಜ್ಞಾನಂದಪ್ರವಾಹವು ಅವಗ್ರಹಿಸುವುದು. ಹೀಗೆ ಮುಮುಕ್ಷು-

ಮಾರ್ಗವು ಈ ಶರೀರದ ಮರಣವನ್ನು ಕೆಡಿಸಲು, ನಿತ್ಯತ್ವವಳವಟ್ಟು, ಪರಮಹರ್ಷಾನು-ಭೂತಿಯಾಗುವುದು. ಸುಜ್ಞಾನೋದಯವಾದ ಶರಣಸತಿಯ ಸತ್ಕ್ರಿಯಾಕರ್ಮವೆಂಬ ಪೂರ್ವಭಾಗೆ(=ಪೂರ್ವಕಾಂಡ)ಯನ್ನು ಬಿಟ್ಟು, ಸುಜ್ಞಾನವರ್ತನೆಯೆಂಬ ಅಪರಭಾಗೆಯಲ್ಲಿ ಲಿಂಗವೆಂಬ ಪತಿ ಬಂದು ಮೂರ್ತಿಗೊಂಡಿರಲು, ಮನೋಧರ್ಮಮಾರ್ಗದಲ್ಲಿ ಚರಿಸುತ್ತಿರುವ ಸಕಲಕರಣಗಳ ಘಟಗಳು ಭಿನ್ನವಾಗುವುವು. ವಿಷಯಾದಿಕಂಟಕಗಳಿಂದ ದೇವದಾನವ ಮಾನವಾದಿಗಳು ಮುಂದುಗೆಡುತ್ತಿರುವಲ್ಲಿ, ಶಿವಶರಣನು ವಿಷಯಾಸಕ್ತ-ನಾಗದೆ ನಿಲ್ಲುವನು. ಆಗ ಶರಣನಂತರಂಗದ ಚಿತ್‌ಶಕ್ತಿಯು ಭಿನ್ನಸಂಗವಳಿದು ಸುಜ್ಞಾನಲಿಂಗದಲ್ಲಿ ಅಭಿನ್ನಸಂಗವನ್ನು ಮಾಡುವಳು. ಆಗ ಶಿವೋಽಹಂ ಎಂಬ ಧ್ವನಿ ಅಹಂಬ್ರಹ್ಮ ಎಂಬುದನವಗ್ರಹಿಸುವುದು. ಉದಕದೊಳಗಿದ್ದು ವಿಷೋಪದ್ರವವಿಲ್ಲದೆ ಸರ್ವಭಯಭೀತಿಯಿಂದಿರುವ ಜಲಸರ್ಪ(=ಒಳ್ಳೆ)ನ ಹಾಗೆ, ಭಕ್ತಿರಸಾಂಬುಧಿಯಲ್ಲಿ ನಿರ್ವಿಷಯಯುಕ್ತನಾದ ಭಯಭಕ್ತಿಭಾವದಲ್ಲಿ (ದ್ದುದರಿಂದ) ಭವಾಂಬುಧಿಯಡಗುವುದು. ಹೀಗೆ ಸಕಲಕರ್ಮಾವಶೇಷವಾಗಿ ಸ್ಥಿರಚಿತ್ತದಿಂದ ಸ್ವಸ್ಥನಾಗಿದ್ದ ಶಿಷ್ಯನೆಂಬ ಶಿಶು ಬಹು-ವರ್ಣಧರ್ಮಗಳನ್ನು ತನ್ನೊಳವಗ್ರಹಿಸುವನು. ಪರಾಶಕ್ತಿಯಿಂದುದಯಿಸಿದ ಜ್ಞಾನ-ಶಕ್ತಿಯ ಪುರುಷನಾದ ಶಿವಶರಣನು ಪರಶಿವತತ್ತ್ವಸ್ವರೂಪನಾದ ಕಾರಣದಿಂದ, ಆ ಪರಾ-ಶಕ್ತಿಯ ಸಂಗವನ್ನು ಮಾಡಲು, ಸ್ವಭಾವತತ್ತ್ವವೆಂಬ ಉನ್ಮನಿತತ್ತ್ವವು ಉದಯವಾಗಿ, ಪಂಚೇಂದ್ರಿಯಗಳೆಂಬ ಹೆಡೆಗಳನ್ನುಳ್ಳ ಶಂಕಾವಿಷಸಂಬಂಧಿಯಾದ ಸರ್ಪನನ್ನು ಹಿಡಿದಿ-ರುವ ಜೀವನನ್ನು (ಆ ಉನ್ಮನಿ ತತ್ತ್ವವು) ಅವಗ್ರಹಿಸಿ, ಅವನನ್ನು ಜೀವನ್ಮುಕ್ತನನ್ನಾಗಿ ಮಾಡುವುದು. ಹೀಗೆ ಜೀವನ್ಮುಕ್ತನಾದ ದಿವ್ಯಶಿವಯೋಗಿಯ ಸಗುಣಬ್ರಹ್ಮದ ಮೂಲ-ಕುಂಡಲಿಯು ಬ್ರಹ್ಮರಂಧ್ರದ ಪರಮಶಾಂತಿ ಬಿಂದುವಿನಲ್ಲಿ ಅಳಿದು, ಸಾತ್ವಿಕ ರಾಜಸ-ವೆಂಬೆರಡೂ ನಿವೃತ್ತಿಯಾಗಿ, ಅಂತರಂಗ ಬಹಿರಂಗದೊಳಗುಳ್ಳ ಸಮಸ್ತ ವ್ಯಾಕುಳಚಿಂತೆ-ಗಳೆಲ್ಲವಳಿದು ನಿಶ್ಚಿಂತೆಯಾಗಿ, ಶಿಖಿಕರ್ಪೂರಸಂಯೋಗದಂತೆ ಶಿವಶರಣನಿರುವನು.

112. ಪಂಚಭೂತಸಂಮಿಶ್ರವಾದ ಮತ್ತು ಪೃಥ್ವಿಯಂಶವಧಿಕವಾದ ತನುವಿನ ಮೇಲೆ ಸುಚಿತ್ತವೆಂಬ ನೆಲಗಟ್ಟನ್ನು ಸಿದ್ಧಮಾಡಿ, ಆಧಾರಸ್ಥಲವನನುಗೊಳಿಸಿ, ಅದರ ಮೇಲೆ ಏಕೋಭಾವಸ್ತಂಭವನ್ನಿರಿಸಿದೆ. ಅದರ ಮೇಲೆ ಸುಜ್ಞಾನದ ಕಳಶಸ್ಥಾಪನೆ. ಆ ಸುಜ್ಞಾನದ ಮೇಲೆ ಜ್ಞಾನವಿಶ್ರಾಂತಿ ಎಂಬುದೊಂದು ಜ್ಞೇಯಸ್ಥಲವು ಸರ್ವಕಳಾವಿಶ್ರಾಮಸ್ಥಾನ-ವೆನಿಸಿ, ಸಕಲವನ್ನೂ ತಾನೆ ಧರಿಸಿಕೊಂಡಿರುವುದು ( = ಕೆಸರುಗಲ್ಲು). ಇಂತಹ ಒಬ್ಬ ದಿವ್ಯಯೋಗಿಯ ಪಿಂಡದೊಳಗೆ ನವನಾಳಗಳೆಂಬ ನವದ್ವಾರಗಳೊಳಗೆ ಪರಿಪೂರ್ಣವಾಗಿ-ರುವ ಪ್ರಾಣಲಿಂಗದ ಪ್ರಭೆಯು ಶಿವೋಽಹಂ ಶಿವೋಽಹಂ ಎನ್ನುತ್ತಿರುವುದು. ಈ ಬಗೆಯ ಪ್ರಭೆಯ ಮೇಲೆ ಮಹಾಘನದ ರತಿಸಂಗವು ಅಭಿನ್ನಸಂಯೋಗವಾಗುತ್ತಿರಲು, ಕಾಮ-ವಿಕಾರದ ಪರಿಕರವಾಗಿರುವ ನಾನಾಕರಣಗಳೆಲ್ಲವೂ ಲಿಂಗಕರಣಗಳಾಗಿ, ಅಹಂಕಾರವೆಂಬ ಶಿರ ಹರಿದು ಭಿನ್ನವಾಗಿ, ಆ ಲಿಂಗಶರಣನು ದಗ್ಧಪಟದಂತೆ ಲೀಲಾಮಾತ್ರದಲ್ಲಿ ಇರುವನು. ಹೀಗೆ ಪಿಂಡದೊಳಗೆ ಭೂತೇಂದ್ರಿಯಗಳೆಲ್ಲವೂ ಅಳಿದು ಭೂಗತವಾದವು.

114. ಕಲ್ಲಿನಂತಹ ಹೃದಯದ ಜಡಪಿಂಡಮಧ್ಯದಲ್ಲಿ ಅಹಂಕಾರವೆಂಬ ಕಿಚ್ಚು ಹುಟ್ಟುವುದು. ತೃಣಪ್ರಾಯವಾದ ಸಂಸಾರಸುಖವನ್ನು ಸವಿಯುವ ಜೀವವು ಕಾಲವ್ಯಾಘ್ರನ ಕೂಡೆ ಸಖ್ಯಮಾಡುವುದು. ಇಂತಹ ಜೀವಭಾವಭ್ರಾಂತಿಯಿಂದ

ಸಮಸ್ತ ಜೀವರು ಜೀವನ್ಮೃತರಾಗಿ ಚಲಿಸುತ್ತಿರುವರು. ಈ ಅಜ್ಞಾನಸಂಸಾರಿಗಳಿಗೆ ಭಕ್ತಿ ಇಲ್ಲ.

141. ವಿಶ್ವ–ತೈಜಸ–ಪ್ರಾಜ್ಞರೆಂಬ ಜೀವತ್ರಯವು ಇಷ್ಟ–ಪ್ರಾಣ–ಭಾವವೆಂಬ ತ್ರಿವಿಧಲಿಂಗಸ್ಥಲದಲ್ಲಿ ಸಂಗವಿಲ್ಲದ ಕಾರಣ, ಮೂರು ಲೋಕದ ಜೀವಜಾಲವು ಮಾಂಸಬಿಂದುವನ್ನು ಧರಿಸಿಕೊಂಡು ಚರಿಸುತ್ತ, ಪಂಚಭೂತಗುಣಭ್ರಾಂತಿಯಿಂದ ಕೆಡುತ್ತಿರುವುದು.

150. ಮಾಯೆಯೆಂಬ ಅದ್ಭುತವು ಮೂರು ಲೋಕವನ್ನೂ ಅವಗ್ರಹಿಸಿದೆ. ಆ ಮಾಯೆಯೊಳಗೆ ಜೀವಭ್ರಮೆಯೆಂಬ ಗ್ರಹದಾಟ. ಅದನ್ನರಿತರೆ, ಭ್ರಮೆ ಹಿಂಗಿ, ಜ್ಞಾನಶಕ್ತಿ ಸಂಗವಾಗಿ, ಆ ಪರಬ್ರಹ್ಮರಂಧ್ರದಲ್ಲಿ ಪರಮಜ್ಞಾನಲಿಂಗವು ತಾನೆಯಾಗಿರುವುದು.

151. ಭವಾರಣ್ಯದಲ್ಲಿ ತಾಪತ್ರಯಾಗ್ನಿ ಎದ್ದು ಸುಡುತ್ತಿರಲು, ಮಾಯೆಯ ಮಂಜಿನ ರಂಜನೆಯ ಕಾಹುಕಟ್ಟಿನೊಳಗಿದ್ದು ಅದ್ವೈತವನ್ನು ಸಾಧಿಸುವೆನೆಂಬ ವೀರರೆಲ್ಲರು ಮುಂದುಗೆಡುತ್ತಿರುವರು. ಶರಣನು ಸ್ವಭಾವಸ್ಥಲದಲ್ಲಿ ನಿಲ್ಲಲೊಡನೆ ನಿರಾಳವು ಸಾಧ್ಯವಾಗುವುದು.

156. ಬಯಲೊಳಗೆ ಚರಿಸುವ ಪವನದಂತೆ, ಒಡಲುವಿಡಿದೂ ಹಿಡಿಯದೆ ಚರಿಸುವ ಶರಣನು, ಧಾತು(ಬಣ್ಣದ)ಮಾತುಗಳನ್ನು ನುಂಗಿ ಉಗುಳುವನಲ್ಲ. ಅದು ಹೇಗೆಂದರೆ ದೇಹಚಿಹ್ನವಡಗಿ, ಗುರುಕರುಣದಿಂದಾದ ನಾನಾಕ್ರೀಗಳೆಲ್ಲ ಅರತು, ನೇಮವೆಂಬ ನಾಮವಡಗಿ, ತನುಮುಖ ತಾನೆಂದು ನಿಂದ ಕಾರಣ, ಆ ಶರಣನು ಲಿಂಗೈಕ್ಯನು.

193. ಮನೋಮೂರ್ತಿಯಾಗಿ ಉದಯವಾದ ಪೀಠಿಕೆಯಲ್ಲಿ ಆ ಮನವೇ ಲಿಂಗವಾಗಿ ಸ್ಥಾಪಿತವಾಯಿತು. ಆ ಲಿಂಗಕ್ಕೆ ದೇಹವೇ ದೇವಾಲಯವಾಗಿ, ಪ್ರಾಣವೇ ಪೂಜಾರಿಯಾಗಿ, ಸದ್ವಾಸನೆ ಎಂಬ ಪುಷ್ಪದಲ್ಲಿ ಪೂಜೆಯನ್ನು ಮಾಡಿ, ನವನಾಳದಾದಿಮಧ್ಯಸ್ಥಾನದಲ್ಲಿ ಶರಣನು ನಿಜನಿವಾಸಿಯಾದ ಕಾರಣ, ಪ್ರಾಣಲಿಂಗಸಂಬಂಧವಳವಟ್ಟಿತು.

194. [ಈ ವಚನದ ಮೊದಲನೆಯ ಪಂಕ್ತಿಯಲ್ಲಿ ವಿರಾಮಚಿಹ್ನೆಗಳಾವುವೂ ಇರಬಾರದು] ಜ್ಞಾನವುಳ್ಳ ಪಿಂಡವೆಂಬ ಶಿವಾಲಯಕ್ಕೆ ಶಿವಶಕ್ತಿಗಳೆಂಬೆರಡು ಕಂಭ, ತ್ರಿತತ್ತ್ವಭಾವವೆಂಬ ಪೂಜೆ. ಈ ಪ್ರಾಣಲಿಂಗಪೂಜೆ ಯಾರಿಗೂ ಅಳವಡದು.

196. ಸ್ವಸ್ಥಪದ್ಮಾಸನದ ಮೇಲೆ, ನಿಶ್ಚಲತನುವೆಂಬ ಮಂಟಪದ ಮನದೋವರಿಯೊಳಗೆ, ಭಿನ್ನರುಚಿಯಡಗಿ, ಪಂಚವರ್ಣಾತ್ಮಕಬಿಂದುವಿನಲ್ಲಿ ನಿಂತಿರಲು, ನಿವಾಸಜ್ಞಾನದ ಅಗ್ರದ ಪ್ರಭೆಯು ವಾಗ್ಬ್ರಹ್ಮವನ್ನೂ, ವಿವೇಕಗಮನಾಗಮನವನ್ನೂ ಅಡಗಿಸಿ ನಿಂತ ನಿಲವು ಸಚರಾಚರವನ್ನು ಮೀರಿರುವುದು.

197. ಆಧಾರಬ್ರಹ್ಮರಂಧ್ರಾಂತರದೊಳಗೆ ಜ್ಯೋತಿರ್ಲಿಂಗಪ್ರತಿಷ್ಠೆಯಾಗಿರಲು, ಬ್ರಹ್ಮರಂಧ್ರದ ಅಮೃತವೆ ಆ ಲಿಂಗಕ್ಕೆ ಅಭಿಷೇಕವಾಗಿ, ಸಹಸ್ರದಳಕಮಲವೇ ಪೂಜೆಯಾಗಿ, ದಶವಾಯುಗಳಡಗಿದವು; ಅವಸ್ಥಾತ್ರಯದ ಅಧಿದೇವತೆಗಳು ನಿಶ್ಶಬ್ದವಾದರು. ಹೀಗಾಗಲು ಆ ಸುಜ್ಞಾನಲಿಂಗವು ನಿಜಸ್ಥಾವರವಾಯಿತು.

208. ವಾಗ್ಜಾಲದಲ್ಲಿ ಜೀವಹಂಸನು ಪಂಚಭೂತಪಿಂಡವೆಂಬ ಒಂದು ಗೃಹವನ್ನು ಮಾಡಿರಲು, ಆ ಪಿಂಡದಲ್ಲಿ ಮಾಯಾಸ್ತ್ರೀಯು ಅಂತಃಕರಣಚತುಷ್ಟಯವೆಂಬ

ಮಣಿಯನ್ನಿಟ್ಟು, ದಶವಾಯುಗಳ ಮಿಳಿಯನ್ನು ಕಟ್ಟಿ, ಕರ್ಮವಾಸನೆಯೆಂಬ ಉಯ್ಯಾಲೆಯನ್ನಾಡುತ್ತಿರುವಳು. ಅಂತಃಕರಣಚತುಷ್ಟಯಗಳಳಿದು, ದಶವಾಯುಗಳ ದುರ್ವರ್ತನೆ ಛೇದನವಾಗಲು ಆ ಮಾಯೆ ಹಾಳಾಗುವಳು. ಹೀಗಾಗಲು ವಾಯುಪ್ರಾಣವಳಿದು ಲಿಂಗಪ್ರಾಣವಳವಡುವದು.

211. ಸ್ಥೂಲಾದಿ ತನುತ್ರಯಕ್ಕಿರುವ ಏಕೈಕವಾದ ಸಂಸಾರಮಾರ್ಗದಲ್ಲಿ, ಮನವೆಂಬ ಮರ್ಕಟನು ಭವಪಾಶದಲ್ಲಿ ಬಿಗಿದಡೆದಿದ್ದು, ಸರ್ವರಿಗೂ ಹಾಸ್ಯಾಪಮಾನವನ್ನು ಮಾಡುತ್ತಿರುವುದು. ತನುತ್ರಯಗಳನ್ನು ತನ್ನವೆಂದು ಮಾಡಿಕೊಂಡು, ಅವುಗಳ ಭೋಗಾದಿಭೋಗಗಳಿಗೆ ತಾನೇ ಕರ್ತೃವಾಗಿ ಭೋಗಿಸುತ್ತಿರುವ ಜೀವನು ತನ್ನ ಸಕಲಕರಣಗಳೆಂಬ ಪಾಯದವಳ ಸಹಿತ ಇದ್ದರೂ, ಆ ಜೀವನನ್ನೂ ಸಕಲಕರಣಗಳನ್ನೂ ಆ ಮನಸ್ಸು ಅವಗ್ರಹಿಸಿಕೊಂಡಿರುವುದು. ಆ ಮನಸ್ಸಿಗೆ ಒಂದು ಅಂತರ್ದೇಹವುಂಟು, ಜ್ಞಾನವಿಲ್ಲ ; ಆ ಮನಸ್ಸು ಚಲಿಸುವುದನ್ನು ಕಾಣಬಹುದು, ಅದರ ಹೆಜ್ಜೆ ನಿಡಿಯಬಾರದು. ಆ ಮನಸ್ಸಿಗೆ ಪ್ರಾಪಂಚಿಕವನ್ನು ಹಿಡಿಯುವುದಕ್ಕೆ ಸಂಕಲ್ಪವೆಂಬ ಹಸ್ತವಿದ್ದರೂ, ಆಹ್ವಾನಿಸಲು ತಾನು ಆ ಆಹ್ವಾನದೊಳಗೇ ಆಹ್ವಾನಿತವಾಗಿರುವುದು. ಆ ಮನಸ್ಸಿನಿಂದ ಹುಟ್ಟಿದುದೇ ಅಹಂಕಾರ. ಮನಸ್ಸು ಆ ಅಹಂಕಾರದ ಮೇಲೆ ಕುಳಿತು, ರಜೋಗುಣಸಂಯುಕ್ತವಾದ ವಾಯುವಿಕಾರದ ಕೂಡೆ ಕ್ರೀಡಿಸುತ್ತ, ತನ್ನಲ್ಲಿಲ್ಲದ ಆತ್ಮತತ್ತ್ವದ ವಿದ್ಯದ ಮೇಲೆ, ತಾನಲ್ಲದೆ ಮತ್ತಾರೂ ಬಲ್ಲವರಿಲ್ಲವೆಂದು, ಅಂಗವಿಸಿ ತೋರುತ್ತಿದೆ. ಮತ್ತು ದಶೇಂದ್ರಿಯಗಳೆಂಬ ಅತ್ಯುಗ್ರವಿಷಸರ್ಪನನ್ನು ತನ್ನ ಸಂಕಲ್ಪವೆಂಬ ಹೇಳಿಗೆಯೊಳಗಿಕ್ಕಿ ಸಿಕ್ಕಿಸಿಕೊಂಡು, ಇಚ್ಛಾ-ಕ್ರಿಯಾ-ಮಂತ್ರ-ಆದಿ-ಪರಾ ಎಂಬ ಪಂಚಶಕ್ತಿಯರ ಜ್ಞಾನಚಕ್ಷುವಿಗೆ ಸಂಸಾರದ ಕನ್ನಡಕವನ್ನು ಕಟ್ಟಿ, ಸುವಿವೇಕವನ್ನು ಮರೆಸುತ್ತಿರುವುದು. ದಶನಾಳಗಳಲ್ಲಿ ಚರಿಸುವ ದಶವಾಯುಗಳ ಮಸ್ತಕದ ಮೇಲೆ ತಾನೇ ಅಧಿಷ್ಠಾಯಕವಾಗಿ ತೋರುತ್ತ ಇರುವ ಮನಸ್ಸಿನ ಸಂಕಲ್ಪವೆಂಬ ಹಸ್ತದೊಳಗೆ ಸುಜ್ಞಾನರತ್ನವನ್ನು ತಂದು ಸುಸಂಕಲ್ಪವನ್ನು ಮಾಡಲು ಮಿಥ್ಯಾಸಂಕಲ್ಪವು ಮಾದು, ಜ್ಞಾನಸಂಕಲ್ಪಸಿದ್ಧಿಯಾಗಿ, ಆ ಮನವು ವಿಕಾರಾದಿ ಭಾವಗಳೆಲ್ಲವನ್ನು ಮರೆತು, ಆ ಸುಜ್ಞಾನದೊಳಗೆ ಪರಮಕಾಷ್ಠೆಯನೆಯ್ದಿರುವುದು. ಅಂತಹ ನಿರ್ಣಯವನ್ನು ಕೂಡಿದ ಬಳಿಕ, ಕೂಡಿದಂತಿರಬೇಕಲ್ಲದೆ, ಮರಳಿ ಕೂಡುವೆನೆಂಬ ಭಿನ್ನಭಾವ ತೋರಲೂ ಆಗದು ; ಮತ್ತು ಆ ಅರಿವನ್ನು ಅಗಲಲೂ ಬಾರದು.

215. ದೇಹವೆಂಬ ವಿಷಯರಸಕೂಪವು ಆತ್ಮನ ಮೇಲಿದೆ. ಆ ವಿಷಯರಸವನ್ನು ಜೀವನೆಂಬ ಮೃಗವು ಕುಡಿಯಲು ಬಂದು, ಅದರಲ್ಲೇ ಬಿದ್ದು ಮುಳುಗಿದಾಗ ಜ್ಞಾನಾಂಜನಶಲಾಕೆಯಿಂದ ಆ ಜೀವನ ಜೀವಭಾವವನ್ನು ಸಂಹರಿಸಿ, ಆ ವಿಷಯಕೂಪದಿಂದ ಹೊರಕ್ಕೆ ತೆಗೆಯಲು, ಅದು ಶಿವಭಾವವನ್ನು ಹೊಂದಿ ಸತ್ಪಥದಲ್ಲಿ ನಡೆಯುವುದು. ನಡೆಯುತ್ತಿರಲು ಕರಸ್ಥಲದಲ್ಲಿ ಜ್ಞಾನಾಗ್ನಿದೃಗ್ವಿಷಯವಾದ ಇಷ್ಟಲಿಂಗ ಸಂಬಂಧವಾಗಿ, ಅದರ ಮೂಲಕ ಪ್ರಾಣಲಿಂಗದೊಳಗೆ ಸಂಗಸುಖವು ಸಾಧ್ಯವಾಗುವುದು.

218. ಅಜ್ಞಾನದ ಮುಖದಲ್ಲಿ ನವಲಿಂಗಪ್ರಯುಕ್ತವಾದ ಜ್ಞಾನರತ್ನ ಅಡಗಿತ್ತು. ಅರಿವಿನ ಮುಖದಲ್ಲಿ ಒಂದು ವಿವೇಕವೃಕ್ಷವಿತ್ತು. ಆ ಲಿಂಗಜ್ಞಾನರತ್ನವನ್ನು ವಿವೇಕವೆಂಬ ವೃಕ್ಷವವಗ್ರಹಿಸಿದರೆ ಪ್ರಾಣಲಿಂಗಕ್ಕೆ ಸುಖ.

220. ಭವಾರಣ್ಯದಲ್ಲಿ ಜೀವನು ದೇಹವೆಂಬ ಮನೆಯ ಮಾಡಿರಲು, ಜೀವ-ಭಾವ ಹಿಂಗಿ ಲಿಂಗಭಾವವೆಡೆಗೊಳ್ಳದಿರುವುದರಿಂದ, ಆ ದೇಹಗೃಹ (ದುರಾಶ್ರಯವೆನಿಸಿಕೊಂಡು) ಇದ್ದರೂ ಇಲ್ಲದಂತಾಗಿತ್ತು. ಮನೋಮಧ್ಯದೊಳಗಣ ಜ್ಞಾನಜ್ಯೋತಿಯು ಪ್ರಾಣವಾಯುವಿಕಾರದಲ್ಲಿ ಆರಿತು. ಅದು ಕಾರಣ ಅಂತಹ ಪಿಂಡದಲ್ಲಿ ಆ ಲಿಂಗವು ಎರವಾಯಿತು.

235. ಮನೋಮಧ್ಯದ ಜ್ಞಾನವು ಅಹಂಕಾರವನ್ನವಗ್ರಹಿಸಲು, ಪರಮಾರ್ಥಕ್ಕೆ ದೂರಸ್ಥವಾಗಿದ್ದ ಷಡುವರ್ಣಗಳ ರೂಪು ಮಹಾನುಭಾವಸಾರಾಯದಲ್ಲಿ ಅಡಗುವುದು. ಆಗ ಆ ಶಿವಯೋಗಿಯ ದೇಹದೊಳಗಿರುವ ಪಂಚೀಕರಣಗಳ ಭಿನ್ನಜ್ಞಾನವೆಂಬ ಶಿರಸ್ಸು-ಗಳಳಿದು ನಿಜಸ್ವಾನುಭಾವವಾಸನೆಯಲ್ಲಿ ಶರಣನು ನಿಮಗ್ನನಾಗಿರುವನು. ಹೀಗಾದಕಾರಣ ತನ್ನ ಮುಂದೆ ತೋರುವ ಬ್ರಹ್ಮಸೃಷ್ಟಿಯಿಂದಾದ ವಿಶ್ವವೆಲ್ಲಾ ಮಿಥ್ಯೆಯಾಗಿ ಹರಿದು-ಹೋಗುವುದು. ಬಳಿಕ ರುದ್ರತತ್ತ್ವಸಂಬಂಧವಾದ ತಮೋಗುಣಧರ್ಮಗಳೆಲ್ಲ ಅಳಿದು, ನಿಜದಲ್ಲಿ ಸುಷುಪ್ತಿಯನ್ನು ಪಡೆಯುವನು ಶರಣ.

238. ಪ್ರಾಣವಾಯುವು ಶಿವಯೋಗಸಾಧನದಿಂದ ಸುಷುಮ್ನಾನಾಳದಲ್ಲಿಂದ ಬ್ರಹ್ಮರಂಧ್ರವನ್ನು ಸೇರಿ,ಅಲ್ಲಿರುವ ಶಿವಾಮೃತವನ್ನು ಸುವಿವೇಕವೆಂಬ ಮುಖದ್ವಾರದೊಳಗೆ ತುಂಬಿಕೊಳ್ಳಲು, ಶಿವಜ್ಞಾನರೂಪವಾದ ಕುಂಡಲಾಗ್ನಿಪ್ರಭೆಯಲ್ಲಿರುವ ಪರಿಪೂರ್ಣಶಿವ-ತತ್ತ್ವವು ಸಕಲಕ್ರಿಯಾಸಾಧನಗಳಳಿದುಳಿವ ಘೃತದಂತೆ ಇರುವುದು. ಗಿರಿ ಎಂದರೆ ನಾಸಿಕಾಗ್ರವೆಂಬ ಶಿಖರಿ. ಅದರ ಮೇಲೆ ಸೋಹವೆಂಬ ಮದಗಜವನ್ನು ಏರಿ ಈಡಾಪಿಂಗಳವೆಂಬ ದ್ವಾರದಲ್ಲಿ ಹೋಗುತ್ತ ಬರುತ್ತಿರುವ ಜೀವನೆಂಬ ಶಿಶುವಿಗೆ ಶಿವ-ತತ್ತ್ವಾಮೃತವನ್ನು ಸದ್ಬೋಧೆಯಿಂದುಣಿಸಲು, ಆ ಜೀವನ ಜೀವಧರ್ಮವಳಿದು ಶಿವತತ್ತ್ವ ವಿವೇಕಿಯಾಗಿ, ಹರನ ಮಂಥಣೆಯ ಶೂಲನೆಂಬ ತಲೆಗುಣದ ಮಸ್ತಕವನ್ನು ಮೆಟ್ಟಿ, ಆ ಪರಶಿವತತ್ತ್ವದಲ್ಲಿ ಜೀವನು ಅವಿರಳಸಂಬಂಧವನ್ನು ಪಡೆಯುವನು.

239. ಮೋಕ್ಷಮಾರ್ಗದಲ್ಲಿ ಮಿಥ್ಯಾಜ್ಞಾನವು ಮಾಯಾಸ್ವರೂಪವಾಗಿ ಮುಂದುಗೊಂಡಿರುವುದು. ಆ ಮಾಯೆಯನ್ನು ಮುಂದುಗೊಂಡಿರುವ ಕಾರಣ, ಸ್ಥೂಲ-ಸೂಕ್ಷ್ಮ-ಕಾರಣವೆಂಬ ತನುತ್ರಯಗಳಲ್ಲಿ ಜ್ಞಾತೃ-ಜ್ಞಾನ-ಜ್ಞೇಯವೆಂಬವು ಮೂರು ಕರಣ-ಗಳಾದವು. ಇಂತಹ ಅಂಗತ್ರಯಕ್ಕೆ ಲಿಂಗತ್ರಯವನ್ನು ಸಂಬಂಧಿಸಲು ಸರ್ವಾಂಗವೂ ಲಿಂಗವಾಗಿ ಸಕಲ ಕರಣಗಳೂ ಲಿಂಗಕರಣಗಳಾದವು.

240. ಜ್ಞಾನದರ್ಪಣದ ನಿಬ್ಬರದ ವೃಷ್ಟಿಯಲ್ಲಿ ಆದಿಶಕ್ತಿಯನ್ನು ವೃತ್ತಿಜ್ಞಾನಾ-ಮೃತಕರಮಯವಾದ ಬಿಂದುವೆಂದೂ, ಪರಶಕ್ತಿಯನ್ನು ನಿವೃತ್ತಿಜ್ಞಾನಾಮೃತಕರಮಯ-ವಾದ ಬಿಂದುವೆಂದೂ ತಿಳಿದು ನೋಡಿ, ಆ ಅಖಂಡಶಕ್ತಿದ್ವಯವನ್ನು ದಶನಾಳಗಳಲ್ಲಿ ಬೀಸುವ ಸೂರ್ಯಾನಿಲಸಮ್ಮಿಶ್ರಹಸ್ತದಿಂದ ಹಿಡಿದು ಸಮರಸ ಪಾಕವನ್ನು ಮಾಡಿದ ಮೇಲೆ, ಅಲ್ಲಿ ಒಸರಿಸಿದ ಅಮೃತಬಿಂದುವನ್ನು ಕುಂಡಲಾಗ್ನಿಮುಖಕ್ಕೆ ಸಲಿಸುವರಲ್ಲದೆ, ಆ ಸುಖವನ್ನು ಪ್ರಾಣಲಿಂಗಮುಖಕ್ಕೆ ಸಲಿಸುವವರು ಯಾರೂ ಇಲ್ಲ. ಇಂತಹ ಶಿವಯೋಗಾ-ಮೃತವನ್ನು ತತ್ಪ್ರಾಣಲಿಂಗಕ್ಕೆ ಸಮರ್ಪಿಸಿ ವಿರಳವಿಲ್ಲದೆ ಕೊಳಬಲ್ಲಾತನೇ ದಿವ್ಯಶಿವ-ಯೋಗಿ.

241. ಸೋಹಂ ಸೋಹಂ ಎಂದು ಈಡಾಪಿಂಗಳಮಾರ್ಗದಲ್ಲಿ ಉಲಿದಾಡು.

ತ್ತಿರುವ ಜೀವಹಂಸನ ನಿಲವಿನ ಮೇಲೆ ಶಿವೋಽಹಂ ಎಂಬ ಸ್ವಾನುಭಾವವು ಬಂದು ಆವ-ರ್ತಿಸಲು ವಾಯುವಿಕಾರಸ್ಪಂದವಳಿದು, ಆ ಶಿವೋಽಹಂ ಎಂಬ ಶಬ್ದ ಭಿನ್ನಮಥನವಿಲ್ಲದೆ ತುಂಬಿಸುತ್ತಿದ್ದರೆ ಮಾತ್ರ, ಭವದುಃಖವು ಮರಳಿಬಾರದು. ಇಂತಹ ಪರಮಹಂಸನ ಮೇಲೆ ಪರಿಪೂರ್ಣವೆಡೆಗೊಳ್ಳಲು, ಆ ಶಬ್ದವೆ ಬ್ರಹ್ಮನಾದವಾಯಿತು. ಅಂತಹ ಶಬ್ದ-ಬ್ರಹ್ಮವು ಖಂಡಿತವಲ್ಲದ, ಅಖಂಡಿತಸುಖ. ಆ ಸುಖವು ಮಹಾಲಿಂಗಕ್ಕೆ ಸಮರ್ಪಿತ-ವಾದ ಭೇದವನ್ನು ದೇಹಿಗಳರಿಯರು.

242. ಪಂಚಭೂತಮಯದೇಹದಲ್ಲಿ ಪಂಚಕರ್ಮೇಂದ್ರಿಯಗಳು, ಪಂಚ ವಿಷಯಗಳು, ಪಂಚಜ್ಞಾನೇಂದ್ರಿಯಗಳು ಇವೆ. ಈ ಪಂಚಜ್ಞಾನೇಂದ್ರಿಯಗಳ ತತ್ತತ್ ಸ್ಥಾನಗಳಲ್ಲಿನ ಆಚಾರಲಿಂಗ, ಗುರುಲಿಂಗ, ಶಿವಲಿಂಗ, ಜಂಗಮಲಿಂಗ, ಪ್ರಸಾದಲಿಂಗ-ಗಳಿಗೆ ಪಂಚವಿಷಯಗಳನ್ನು ಅರ್ಪಿಸಿ, ಆ ಪ್ರಸಾದವನ್ನು ಸ್ವೀಕರಿಸಲು ಆತನೇ, ಶಿವನು.

243. ಹೃದಯವೆಂಬ ಭಾವಿಯ ತಡಿಯಲ್ಲಿ ಕದಳೀಫಲಕುಸುಮೋಪಮವಾದ ಅಷ್ಟದಳಕಮಲವುಂಟು. ಆ ಕಮಲಕರ್ಣಿಕಾಮಧ್ಯದ ಯೋಗಾಮೃತಫಲರಸವನ್ನು ಕುಂಡಲಿಸ್ಥಾನದಲ್ಲಿರುವ ಸುಪ್ತಭುಜಂಗನು ಲಿಂಗಪ್ರಾಣಾನಿಲಮಿಶ್ರದಿಂದಲೂ, ಮಹಾನು-ಭಾವಬೋಧೆಯಿಂದಲೂ ಎಚ್ಚತ್ತು, ಆ ಫಲರುಚಿಯನ್ನು ಆಸ್ವಾದಿಸಲು, ಅಲ್ಲಿಯೇ ಪ್ರಾಣಲಿಂಗಪ್ರಸಾದಸಂಬಂಧವಾಗಿ ಸಂತುಷ್ಟವಾಯಿತು.

244. ನಾಭಿಸ್ಥಾನದಲ್ಲಿನ ಮಣಿಪೂರಕದ ದಶದಳಪದ್ಮನಾಳದಲ್ಲಿ ಉದಯ ವಾದ ಲಿಂಗಪ್ರಾಣಾನಿಲವು ಶಿವಾಹಂಕಾರದ ತುರ್ಯಾವಸ್ಥೆಯಲ್ಲಿ ತೋರಲು, ಆ ತುರ್ಯಾ-ವಸ್ಥೆಯಲ್ಲಿ ಅ-ಉ-ಮ ಎಂಬ ಪ್ರಣವಾಕ್ಷರತ್ರಯವು ಏಕರಸವಾಗಿ ಬ್ರಹ್ಮಸ್ವರೂಪವ ನೈದುವುದು. ಆ ಸಮರಸದ ಸುಖದಲ್ಲಿ ಉದಯವಾಗಿ ತೋರುವ ಕಂದಮೂಲವೆಂಬ ಸಹಸ್ರದಳಪದ್ಮದೊಳಗಿರುವ ಅಮೃತವನ್ನು ಆರೋಗಣೆಮಾಡಲು ಅಲ್ಲಿ ಅದು ಪ್ರಾಣಾ-ರ್ಪಿತವಾಗುವುದು.

245. ಆಧಾರಚಕ್ರದಲ್ಲಿ ಉದಯವಾದ ಬಾಲನಾದ ಪ್ರಾಣಾನಿಲನಲ್ಲಿ ಸ್ವಾನು-ಭಾವವಿವೇಕವೆಂಬ ಸೂತ್ರವನ್ನು ಸಂಬಂಧಿಸಿ, ವ್ಯೋಮಚಕ್ರದಲ್ಲಿ ಸಂಬಂಧವನ್ನು ಮಾಡಿ, ಶಿವತತ್ತ್ವವಿರುವ ಬ್ರಹ್ಮರಂಧ್ರಸ್ಥಾನದಲ್ಲಿ ಕಾಮಧೇನುವಿನ ಅಮೃತವಿರಲು ಅದನ್ನು ಉಣ್ಣುವೆನೆಂಬ ಕುಂಡಲಾಗ್ನಿಯ ಭಿನ್ನತೃಪ್ತಿಯನ್ನು ಕೊಂದು, ಕಂದಲೆಂಬ ದೇಹಭಾವ-ವನ್ನು ಭೇದಿಸಿ, ಈ ಕ್ರಮದಲ್ಲಿ ಆ ಪರಮಾಮೃತವನ್ನು ಸ್ವಾನುಭಾವದ ಉಪಾಯಾಂತರ ದಿಂದ ಕರೆದುಕೊಂಬಾತನೆ ಶಿವಯೋಗಿ. ಹಾಗೆ ಆ ಅಮೃತವನ್ನು ಅಂಗಮುಖಕ್ಕೆ ಆಹುತಿಯನ್ನಿಕ್ಕಲು ತೃಪ್ತಿಯಾಗಿ, ಆ ಅಮೃತವೇ ಅಂಗವಾಗಲು, ಅದು ಅನ್ಯವಿಷಯಕ್ಕೆ ಕರೆಯದಾಗಿ ಹಯನೆ ಬರಡು. ಆ ಅಂಗವೆ ಪರಮಾಮೃತವಾಗಿ ತನ್ನಲ್ಲಿ ತಾನು ಒಸರಿ ದಣಿಯುಂಡ ತೃಪ್ತಿಯನ್ನು ನೀಡುತ್ತಿರಲು ಅದೀಗ ಬರಡೆ ಹಯನು. ಈ ತೆರನನರಿಯ ದವರು ಕುಂಡಲಾಗ್ನಿಗೆ ಯೋಗಾಮೃತರಸಾಹಾರವನ್ನಿಕ್ಕಿ ತಾವು ವ್ಯರ್ಥರಾದರು. ಇದ-ನ್ನರಿತವನೆ ದಿವ್ಯರಾಜಯೋಗಿ.

246. ನಾನೆಂಬ ಬ್ರಹ್ಮಾಹಂಕಾರಕ್ಕೆ ನೆಲೆಮನೆಯಾದ ಬ್ರಹ್ಮರಂಧ್ರದಲ್ಲಿ ಅಮೃತಬಿಂದುವು ಕಾಮಧೇನುವಾಗಿ ಶಿವಯೋಗಿಗೆ ಕರೆಯುವುದು. ಆ ಅಮೃತವನ್ನು ಶಿವಯೋಗಸಾಧನದಿಂದ ಕರೆದುಣ್ಣುವೆನೆಂಬ ಶಿವಯೋಗಿಯು ಆಧಾರಸ್ಥಾನದಲ್ಲಿ ಹೆಜ್ಜೆ-

ಯಿಲ್ಲದೆ ನಿರಾಧಾರಪಥದಲ್ಲಿ ನಿಂತು, ಆ ಊರ್ಧ್ವಚಕ್ರದಲ್ಲಿ ಸಂಕಲ್ಪಹಸ್ತವಿಲ್ಲದೆ ಗ್ರಹಿಸಬೇಕು.

247. ಗಗನಮಂಡಲವೆಂದರೆ ಬ್ರಹ್ಮರಂಧ್ರ. ಅದಕ್ಕೆ ಸುಷುಮ್ನನಾಳವು ಶಿವಯೋಗಮಾರ್ಗವಾಗಿರುವ ಕಾರಣ, ಆ ಮಾರ್ಗದಲ್ಲಿ ಶಿವೋಹಂ ಶಿವೋಹಂ ಎನ್ನುತ್ತ ಅಲ್ಲಿ ಶಿವಯೋಗಾಮೃತ ಬಂದು ನೆಲೆಯಾಗಿರುವುದು.

248. ಕಾರ್ಯಕಾರಣತ್ವವೆರಡೂ ಇಲ್ಲದ, ಅಮೃತಬಿಂದುಕಾಮಧೇನುವಿಗೆ ಸುಜ್ಞಾನವೆ ಸ್ತನ. ಆ ಅಮೃತವನ್ನು–ಮನದಲ್ಲಿ ತಾನೆಂಬ ಭಾವವಳಿದು–ಕುಡಿವರೆ ಅವನೆ ಶಿವಸ್ವರೂಪಿ.

249. ಭವಸಾಗರವನ್ನು ಜ್ಞಾನಾಗ್ನಿಯಲ್ಲಿ ದಹಿಸಬೇಕು. ಅವನಿ ಎಂಬ ತನುವಿನ ಭೇದವನ್ನರಿಯಬೇಕಾದರೆ, ಅಹಂಕಾರ ಮಮಕಾರಗಳನ್ನು ಖಂಡಿಸಬೇಕು. ಏಕಮೇವಪರಬ್ರಹ್ಮವೆಂಬ ಒಂದೆ ವಸ್ತುವನ್ನು ತಿಳಿದು, ನಿಜವನ್ನರಿತು, ಪ್ರಾಣವಾಯುವನ್ನು ತಿರಸ್ಕರಿಸಿ ನಿವೃತ್ತಿಯ ಮಾಡಿ, ಶಿವಸುಖಪ್ರಸನ್ನಪ್ರಸಾದವನ್ನು ಪರಿಪೂರ್ಣಭಾವದಿಂದ ಸರ್ವಾಂಗದಲ್ಲಿ ಧರಿಸಿ,ಆ ಸುಖಪ್ರಸನ್ನತೆಯನ್ನು ಪ್ರಾಣಲಿಂಗಾರ್ಪಿತಮುಖಕ್ಕೆ ಸಲಿಸಿದಾತನೆ ದಿವ್ಯಶಿವಯೋಗಿ.

250. ಜ್ಞಾನಾಮೃತಪ್ರಭೆಯನ್ನು ರೇಚಕವೆಂಬ ಹಸ್ತದಿಂದ ಕೊಯ್ದು, ಪೂರಕದಿಂದೋಸರಿಸಿ, ಕುಂಡಲಾಗ್ನಿಯಲ್ಲಿ ಸಮರಸಪಾಕ ಮಾಡಿ, ಆ ಸಮರಸಪಾಕವಾದ ಜ್ಞಾನಾಮೃತಪದಾರ್ಥವನ್ನು ಭಿನ್ನಮುಖಕ್ಕಿಕ್ಕದೆ, ಆಧಾರಸ್ಥಾನದಲ್ಲಿರುವ ಚಿಲ್ಲಿಂಗಕ್ಕೆ ಸಮರ್ಪಿಸಬೇಕು.

251. ಆಧಾರಸ್ಥಾನದಲ್ಲಿ ಆಕುಂಚನವನ್ನು ಬಲಿದು, ವಾಯುವನ್ನೆಬ್ಬಿಸಿ, ಬ್ರಹ್ಮರಂಧ್ರವೆಂಬ ಬೆಟ್ಟಕ್ಕೆ ಕೊಂಡುಹೋಗಿ, ಅಲ್ಲಿರುವ ಅಮೃತಬಿಂದುವನ್ನು ಪಾಕಮಾಡಿದೆವೆಂಬರು. ಆ ಪೂರ್ವಯೋಗಸಾಧನೆಯಿಂದ ಬ್ರಹ್ಮರಂಧ್ರವೆಂಬ ಗಿರಿ ಕರಗದಾಗಿ, ಅಮೃತಬಿಂದು ಸಾಧ್ಯವಾಗದು.

252. ಚಂದ್ರಕಾಂತಕ್ಕೆ ಉದಕವೂ, ಸೂರ್ಯಕಾಂತಕ್ಕೆ ಅಗ್ನಿಯೂ, ಪರುಷಕ್ಕೆ ಸಿದ್ಧರಸವೂ ಕಳೆಯಾಗಿರುವಂತೆ, ಶರಣನ ಅಂಗಕ್ಕೆ ಲಿಂಗವೇ ಕಳೆ. ಅಪ್ಪು ಎಂಬ ಶಿವಶರಣತನುವನ್ನು ಜ್ಞಾನಾಗ್ನಿಯಲ್ಲಿ ಸಮರಸಪಾಕ ಮಾಡಲು ಸರ್ವಾಂಗವೂ ಪ್ರಸಾದಕಾಯವಾಗುವುದು.

253. ತನುವಿಡಿದು, ಬಹಿಂಗದ ಸ್ಥಿತಿಗತಿಯಲ್ಲಿ ವರ್ತಿಸುತ್ತ, ಒಳಗೊಂದು ಅರಿವಿನ ಸುಖವನ್ನು ಕಂಡೆನೆಂದು, ಆ ಸುಖಕ್ಕೆ ಮುಯ್ಯಾನುವುದೀಗ ಅಪಮಾನ. ಸರ್ವಾಂಗಲಿಂಗಸಂಬಂಧವನ್ನರಿಯದೆ ಉಪಾಧಿಯಿಂದ ಲಿಂಗಪ್ರಸಾದವನ್ನು ತನ್ನ ಪ್ರಾಣಕ್ಕೆ ಕೊಂಡಿರುವೆನೆಂಬುದು ಭಿನ್ನಬುದ್ಧಿ.

254. ಸರ್ವಾಂಗಲಿಂಗಸಂಬಂಧವೆಂದರಿಯದೆ, ಇಷ್ಟಲಿಂಗಕ್ಕೆ ರೂಪವನ್ನರ್ಪಿಸಿ, ಮತ್ತೆ ಪ್ರಾಣಲಿಂಗಕ್ಕೆ ರೂಪಿನೊಳಗಣ ರುಚಿಯನ್ನರ್ಪಿಸಿಕೊಂಬೆವೆಂಬುದು ಭಿನ್ನಬುದ್ಧಿ.

255. ....ಅರ್ಪಿತವಿಲ್ಲದ ಮುನ್ನ ಅನರ್ಪಿತಪ್ರಸಾದವಾಗಿರುವ ಆದಿಯ

ಪ್ರಸಾದವನ್ನು ನಾದಬಿಂದುಗಳೆಂಬ ಶಿವಶಕ್ತಿಗಳಳಿಯದ ಮುನ್ನವೇ ಲಿಂಗಾರ್ಪಿತ ಮಾಡಿ ಪ್ರಸನ್ನಪ್ರಸಾದವನ್ನು ಸ್ವೀಕರಿಸಿದನು ಶರಣ.

258. ಆಧಾರದಲ್ಲಿ ಉದಯವಾದ ಸತ್ಯಾಣವವಿವೇಕವು ಮಣಿಪೂರಕಚಕ್ರದಲ್ಲಿ ಸ್ವತಸ್ಸಿದ್ಧವಾಗಿ ನೆಲಸಿದ್ದು, ಸುಷುಮ್ನನಾಳದಿಂದ ಬ್ರಹ್ಮರಂಧ್ರವನೆಯ್ದಿ, ಅಲ್ಲಿಂದ ವ್ಯೋಮಚಕ್ರವನೆಯ್ದಿ ಅಲ್ಲಿರುವ ಅಮೃತವನ್ನುಂಡು ಸುಖಿಯಾಗುವುದು. ಆ ಸುಖವು ಊರ್ಧ್ವಮುಖವೆಂಬ ನಿರ್ಗುಣಯೋಗದಲ್ಲಿ ಉದಯಿಸಿದ್ದ ಮಹಾಜ್ಞಾನಪ್ರಭೆ ತಾನೆ ಯಾಗಿತ್ತು.

259. ಪ್ರಣವಕ್ಕೆ ಆದಿಶಕ್ತಿ ಪ್ರಬೋಧಕ, ಆ ಪ್ರಣವಸ್ವರವು ಈಡಾ ಪಿಂಗಳದ್ವಾರವನ್ನು ಮೆಟ್ಟಿಕೊಂಡಿರುವುದು, ಬ್ರಹ್ಮನಾಳದ ಮೇಲೆ ನೆಲೆಸಿರುವುದು. ಇಂತಹ ಸಗುಣಯೋಗದಲ್ಲಿ ಪ್ರಾಣಲಿಂಗವು ಮನೋಮೂರ್ತಿಯಾಗಿ ಮೂರ್ತಿಗೊಂಡಿರಲು ಆ ಶರಣನಿಗೆ ಅದು ನಿರ್ಗುಣಯೋಗವಾಗಿ ನಿರಾಳದಲ್ಲಿ ತರಹರವಾಗುವುದು.

260. ಕುಂಡಲಿಸ್ಥಾನದಲ್ಲುದಯವಾದ ಸುಪ್ತಭುಜಂಗವು ಖೇಚರಿಮುದ್ರೆಯಲ್ಲಿ ಸ್ವಸ್ಥವಾಗಿ, ಸಹಸ್ರದಳಪದ್ಮದಲ್ಲಿ ಗ್ರಸ್ತಮುಖವಾಗಿ, ಜ್ಞಾನತತ್ತ್ವಭಾವಮೃತವನುಂಡು ಬೆಳಗಿತು. ಹೀಗಾಗಲು ಅಸುರಕರ್ಮಸಂಬಂಧಿಗಳಾದ ಕರಣಗಳು ವಿಕಾರಿಸಲಾರದೆ ಮುನ್ನವೇ ಲಯವಾದವು. ಲಯವಾಗಲು ಸದ್ವಾಸನೆಯು ಮನಃಪ್ರವೇಶವಾಯಿತು. ಆ ಸದ್ವಾಸನೆ ಆವರ್ತಿಸಿ ತಾನೆ ಶಿವತತ್ತ್ವಸ್ವರೂಪನಾದ ಸುಖಪ್ರಸನ್ನತ್ವದಿಂದ ಸಹಸ್ರ ಸೂಕ್ಷ್ಮನಾಳಗಳಲ್ಲಿ ಚರಿಸುವ ಪ್ರಾಣವಾಯು ಪ್ರಕೃತಿಯಳಿದು ನಿರ್ಗಮನವನೆಯ್ದಿತು.

261. ಪಂಚಭೂತಸಂಬಂಧವಾದ ದೇಹದಲ್ಲಿ ದಶನಾಳಗಳೇ ಹತ್ತು ಕೇರಿಗಳು. ಅಲ್ಲಿ ದಶವಾಯು ಮತ್ತು ದಶೇಂದ್ರಿಯಗಳು ಇಪ್ಪತ್ತು ಬೀದಿಗಳು. ಈ ದಶ-ವಾಯುದಶೇಂದ್ರಿಯವೀಥಿಗಳಲ್ಲಿ ಜೀವಭಾವಭ್ರಾಂತಿ ಎಂಬ ಶಂಕಾವಿಷವು ತನ್ಮಯವಾಗಿದ್ದಿತು. ಅಲ್ಲಿ ಅಷ್ಟಮದವೆಂಬ ಆನೆಗಳು ಕ್ರೀಡಿಸುತ್ತಿದ್ದವು. ಸುಜ್ಞಾನೋದಯವಾಗಲು ಅಷ್ಟಮದಗಳು ಮುಖ್ಯವಾದ ಸಕಲಕರಣಗಳು ನಿವೃತ್ತಿಯಾಗಿ ಮನಸ್ಸಿನ ಸಂಶಯಸೂತಕವಳಿಯಿತು. ಆಗ ತ್ರಿತತ್ತ್ವಭಾವದಿಂದುದಯವಾದ ಇಪ್ಪತ್ತೈದು ತತ್ತ್ವಗಳು ಭಿನ್ನವಾಗಿ ನೋಡನೋಡ ಸುಜ್ಞಾನ ಪ್ರಕಾಶವಾಯಿತು.

262. ಸಂಸಾರವಿಷಯಕೂಪವೆಂಬ ತನುವಿನ ಪೂರ್ವಭಾವವಳಿದು ಸರ್ವಾಂಗ ಲಿಂಗವಾಗಲು, ಆ ದೇಹವೇ ಪರಮಾಮೃತಕೂಪ. (ಅದರಲ್ಲಿನ ಅಮೃತರಸವನ್ನು ಮೊಗೆದು ಬಳಸುವುದಕ್ಕಿರುವ) ಚಿದ್ಘಟದಲ್ಲಿ ಆ ಅಮೃತರಸವನ್ನು ಮೊಗೆದು ಅವಿರಳ-ಲಿಂಗಮುಖದಿಂದ ಆರೋಗಣೆ ಮಾಡಲು ಆ ಸುಖವನ್ನು ಸಪ್ಪೆಸಿಹಿ ಎಂದುಪಮಿಸಬಾರದು. ಪರುಷಸಂಗದಿಂದ ಲೋಹವು ಹೊನ್ನಾದ, ಹಾಗೆ ಆಗದೆ, ನಿಜದಿಂದ ತಾನು ಪರವಸ್ತುವಾದರೆ, ಆ ಪರವಸ್ತು ಆಹ್ವಾನವಿಲ್ಲದೆ ಸನ್ನಿಧಾನವಾಗಿ, ಭಿನ್ನವಿಲ್ಲದೆ ಸಂಗ-ವಾಗಿ, ಪರಮಾನಂದಸುಖಗರ್ಭವಾಗುವುದು. ಅಂತಹ ಅರಿವಿನ ತೃಪ್ತಿಯ ಪರವಶವೆ ಪರಮಸುಖ. ಈ ಸುಖವನ್ನರಿಯದ ಕಾರಣ ಮೂರು ಲೋಕವೂ ನಾಶವಾಗುತ್ತಿದೆ.

267. ಪಂಚಭೂತಪಿಂಡದ ಅಹಂಕಾರವೆಂಬ ಶಿರಸ್ಸಿನ ಮೇಲೆ ಇಪ್ಪತ್ತೈದು ಭೂತತತ್ತ್ವಗಳು, ಅರವತ್ತುನಾಲ್ಕು ಭೇದದ ಕಾರಣಗ್ರಾಮಗಳು, ಐವತ್ತಾರು ಸೂಕ್ಷ್ಮ ನಾಳಗಳೂ ಇವೆ. ಈ ಪ್ರಪಂಚೆಲ್ಲವನ್ನೂ ದಾಟ ಮುವ್ವತ್ತಾರು ತತ್ತ್ವಗಳನ್ನು ತಿಳಿದು

ನೋಡಿದರೆ ತ್ರಿಕೋಣಮಂಟಪವೆಂಬ ಮಣಿಪೂರಕಕರ್ಣಿಕೆಯಲ್ಲಿ ಜ್ಞಾನ ಪ್ರಕಾಶಿತವಾಗಿ ಶಿವಶರಣನು ಷಡುಚಕ್ರಸ್ಥಾನದಲ್ಲಿರುವ ಐವತ್ತೆರಡು ಬೀಜಾಕ್ಷರವನ್ನು ತಿಳಿದು, ಎಂಬತ್ತು-ನಾಲ್ಕುಲಕ್ಷ ಯೋನಿದ್ವಾರದಲ್ಲಿ ತಿರುಗಿಬರುತ್ತಿರುವ ಜೀವನ ನಿಲವನ್ನರಿತು, ಈಡಾಪಿಂಗಳ ವೆಂಬ ಉತ್ತರದಕ್ಷಿಣನಾಳದಲ್ಲಿ ಬೀಸುವ ವಾಯುವನ್ನು ನಿಲ್ಲಿಸಿ, ಪಶ್ಚಿಮನಾಳವೆಂಬ ಸುಷುಮ್ನೆಯಲ್ಲಿ ಪ್ರಾಣವಾಯುವನ್ನೆಯ್ದಿಸಿ, ಅಲ್ಲಿ ಸಹಸ್ರದಳಕಮಲದಲ್ಲಿ ತುಂಬಿ-ತುಳುಕುವ ಅಮೃತವನ್ನು ದಣಿಯುಂಡು, ತೊಳಗಿಬೆಳಗುವ ಪರಂಜ್ಯೋತಿಯನ್ನು ಕಾಣಬಲ್ಲ.

268. ಅಗ್ನಿ ಮುಟ್ಟಿದ ಮುನ್ನ ತೃಣದೊಳಗೆ ಅಗ್ನಿಯು ಮಂದಾಗ್ನಿಯಾಗಿ ವಿಶ್ರಮಿಸಿರುವುದು. ಹಾಗೆಯೇ ಲಿಂಗ ಮುಟ್ಟಿದ ಮೇಲೆಯೇ ಅಂಗವು ಲಿಂಗವೆಂಬುದು ಮಾತಲ್ಲ. ಅದೇಸು ಕಾರಣವೆಂದರೆ ಲಿಂಗ ಮುಟ್ಟಿದ ಮುನ್ನವೆ ಅಂಗದೊಳಗೆ ಲಿಂಗ-ವಿದ್ದುದಾಗಿ ಲಿಂಗಸೋಂಕಿಂದ ಆ ಅಂಗವು ಲಿಂಗವೆ ಆಯಿತು. ಅನಂತರ ಜ್ಞಾನಾಗ್ನಿಯು ಮನವನ್ನವಗ್ರಹಿಸಿ, ಆ ಮನವೇ ಜ್ಞಾನಾಗ್ನಿಯನ್ನವಗ್ರಹಿಸಿತು. ಆ ನಿಜದ ನಿಲವು ತನುತ್ರಯವನ್ನೂ ನುಂಗಿತು, ಆತ್ಮತತ್ತ್ವವನ್ನೂ ಅವಗ್ರಹಿಸಿತು. ಜಡರಿಗಿದನರಿಯ ಲಾಗದು. ಇದೇ ನಿಜ ತತ್ತ್ವ, ಇದನ್ನರಿತವನೇ ಶರಣ.

270. ಶಿವಾನುಭಾವಯೋಗದಿಂದ ಕುಂಡಲಾಗ್ನಿಯ ಬಲಿದೆತ್ತಲು, ಆ ಸುಜ್ಞಾ ನಾಗ್ನಿಯು ಸುಷುಮ್ನದ್ವಾರದಲ್ಲಿಂದ ವ್ಯೋಮಚಕ್ರವನೆಯ್ದುವುದು. ಆಗ ಲಿಂಗಾನು-ಭಾವಸಂಪನ್ನತೆ ತಲೆದೋರಿ ಮನಸ್ಸು ಉನ್ಮನಿತತ್ತ್ವವಾಗಿ ಆ ಲಿಂಗಾತ್ಮಭಾವದ ಕಳೆ ಯನ್ನು ಅವಗ್ರಹಿಸಿ, ನಿರಾಳಶಿವತತ್ತ್ವದಲ್ಲಿ ವಿಶ್ರಮಿಸುವುದು. ಆಗ ನಿಜದ ಅರಿವು ಬ್ರಹ್ಮರಂಧ್ರದಲ್ಲಿ ಸ್ಥಾಯಿಯಾಗಿರುವುದು.

271. ತನುವಿನೊಳಗೆ ಹುಟ್ಟಿದ ವಿವೇಕವೃಕ್ಷ ಅಂತರಂಗದಲ್ಲಿ ಪ್ರಭಾವಿಸಿ ಬೆಳೆದು, ಈಡಾಪಿಂಗಳವೆಂಬ ಸೋಮಸೂರ್ಯವಾಯುಗಳ ಭಿನ್ನತ್ವವನ್ನು ಕೆಡಿಸುವುದು. ಹೀಗೆ ಸದ್ವಿವೇಕಪರಿಪಕ್ವವಾದ ಅಂತರಂಗದೊಳಗಣ ಕರಣಗಳೆಲ್ಲವು ಭಿನ್ನಭಾವವಳಿದು ಶಿವಭಾವವನೆಯ್ದಿ, ನಿತ್ಯಪದವಿಯನ್ನು ಪಡೆದು, ಶಿವಧ್ಯಾನಪರಾಯಣತ್ವವನೆಯ್ದಲು, ಆ ಕರಣಗಳ ಸುಜ್ಞಾನಪ್ರಭೆ ಅನಂತಕೋಟಿ ಬ್ರಹ್ಮಾಂಡವನ್ನು ಕಬಳೀಕರಿಸುವುದು....

272. ಪಂಚಭೂತಗಳಳಿದು ಪಂಚಬ್ರಹ್ಮವೇ ತನುವಾಗಲು, ಪ್ರಣವ ಮಂತ್ರವೇ ಪ್ರಾಣಪ್ರತಿಷ್ಠೆ, ಪಂಚೇಂದ್ರಿಯಗಳೇ ಪಂಚಮುಖ, ದಶವಾಯುಗಳೇ ದಶ ಭುಜ. ಇಂತಹ ಶರಣನು ಕುಂಡಲಿಸ್ಥಾನದಲ್ಲಿರುವ ಸುಪ್ತಭುಜಂಗವೆಂಬ ಸುಜ್ಞಾನ ಪ್ರಭೆಯ ಮೇಲೆ ಏಕಾಗ್ರಚಿತ್ತವಾಗಿ ತನ್ನ ತಾನೆ ನೋಡುತ್ತಿದ್ದನು. ಹೀಗೆ ಸಮರಸ-ಸಮಾಧಿಯಲ್ಲಿ ಸನ್ನಿಹಿತನಾಗಿರುವ ಶಿವಯೋಗಿಯ ಕಾಯವೇ ಚಂದ್ರಕಾಂತದ ಘಟ. ಆ ಕಾಯದಲ್ಲಿರುವ ಸುಖರಸವೆ ಅಮೃತರಸ. ಹೀಗೆ ಶರಣನ ಸರ್ವಾಂಗವೂ ಪರಮಾಮೃತಪರಿಪೂರ್ಣವಾಗಿರಲು ಅವನ ಆ ಕಾಯವು ಭಿನ್ನವಾಗದೆ ಮಹಾಜ್ಞಾನಪ್ರಕಾಶ-ದೊಳಗೆ ತೊಳಗಿ ಬೆಳಗುತ್ತಿತ್ತು.

274. ಸ್ಥೂಲಸೂಕ್ಷ್ಮತನುವೆಂಬ ಬಾಹ್ಯಾಭ್ಯಂತರದೊಳಗಣ ಸುಜ್ಞಾನ ಪ್ರಕಾಶವು ಷಡುಚಕ್ರಗಳ ದಳಗಳೆಲ್ಲವನ್ನೂ ಅವಗ್ರಹಿಸಿ ಮೀರಿತು. ಮರವೆಯನ್ನು ಅವಗ್ರಹಿಸಿದ ಜ್ಞಾನಪ್ರಕಾಶದೊಳಗೆ ಅಮೃತಕರನುದಯವಾಗಲು ಪರಮಾಮೃತಾಬ್ಧಿಯ

ಬೆಳವಿಗೆಯನ್ನು ಪನಿಸಬಾರದು. ಇಂತಹ ಶಿವಶರಣನು ಆ ಶಿವತತ್ತ್ವವನ್ನವಗ್ರಹಿಸಿ, ಲೋಕಾದಿಲೋಕಗಳೆಲ್ಲವನ್ನೂ ಮೀರಿ ಒಳಹೊರಗೆ ಏಕಾರ್ಥವಾಗಿ ತೋರುತ್ತಿದ್ದನು.

276. ಶಿವಭಾವವು ಭಿನ್ನವಾಗಿ, ಮನಸ್ಸು (= ಬಿಲ್ಲು) ಸಂಕಲ್ಪವನೆಯ್ದಿದ ಬಳಿಕ, ಜ್ಞಾನವೇನನ್ನೂ ಅರಿಯದಂತಿದ್ದಿತು. ಹೀಗೆ ವೃಥಾ ಕಾಲವು ಸವೆವುತ್ತಿದ್ದ ಕಾರಣ ತನ್ನಿಯಮವ್ರತವು ಅತ್ಯಂತ ಪ್ರಧಾನವಾಗಿ ತೋರಿತು.

277. ಬ್ರಹ್ಮರಂಧ್ರದೊಳಗಿರುವ ಶಾಂತಿಬಿಂದುವು ಆತ್ಮನನ್ನು ಅವಗ್ರಹಿಸಿ ಪರಮಾಮೃತಸ್ವರೂಪವನೆಯ್ದಲು, ಕುಂಡಲಿಸ್ಥಾನದ ಸುಪ್ತಭುಜಂಗವು ಮಹಾಪ್ರಕಾಶ-ದಿಂದ ಸುಷುಮ್ನಾನಾಳದಲ್ಲಿಗೈದಿ ಆ ಅಮೃತವನ್ನು ಆರೋಗಿಸುವುದು. ಆ ಸಮರಸ-ಯೋಗದ ಸುಖವನ್ನು ಭಿನ್ನದೃಷ್ಟಿಯಿಲ್ಲದೆ ಕಂಡು, ಕುಂಡಲಿಯ ಭುಜಂಗನನ್ನು ಆ ಸುಪ್ರಭಾಹಸ್ತದಲ್ಲಿ ಹಿಡಿದು, ಅವಿರಳಸಂಗವನೆಯ್ದಿದ ಭೇದವನ್ನು ಶಿವಶರಣನು ಲೋಕ-ಕ್ಕುಸಿರದೆ ತಾನೆ ಅರಿತ.

278. ಮನಸ್ಸನ್ನು ಮೂಲಜ್ಞಾನಾಗ್ನಿಯಲ್ಲಿ ದಹಿಸಿ ಉಳಿದುದೇ ಚಿದ್ಭಸ್ಮ. ಮಿಥ್ಯೆಯನ್ನು ಮಹಾಜ್ಞಾನಾಗ್ನಿಯಲ್ಲಿ ದಹನಮಾಡಿ, ಉಳಿದುದೇ ಶಿವತತ್ತ್ವದ ನಿಜ-ಪದದ ಮಹದೈಶ್ವರ್ಯ. ಈ ಮಹದೈಶ್ವರ್ಯವೇ ಜಗಚ್ಚೈತನ್ಯ, ಅದೇ ಪರಬ್ರಹ್ಮ.

279. ಪರಮಜ್ಞಾನಿಯನ್ನು ಬ್ರಹ್ಮವು ಬಂದು ಆವರಿಸಿ, ಅಲ್ಲಿಯೇ ನಿಂತಿದ್ದು ಮರಳಿ ಮತ್ತೊಮ್ಮೆ ಕೂಡಲಿಲ್ಲ ಅಗಲಲಿಲ್ಲ. ಆ ಬ್ರಹ್ಮವು ಶರಣನ ಸರ್ವಾಂಗದಲ್ಲಿ ಬೆರಸಿದ್ದು ಮರಳಿ ಬೆರಸಲಿಲ್ಲ. ಅದು ಆ ಶರಣಸನ್ನಿಹಿತವಾಗಿ ನಿಂತೂ ಅನಾಶ್ರಯ-ವಾಯಿತು. ಆ ಅನಾಶ್ರಯವಾದ ಚಿದ್ಬಿಂದುವಿನಲ್ಲಿ ನಿಶ್ಶಬ್ದವೇದ್ಯವಾಯಿತು. ಇಂತಹ ಅಖಂಡಪರಿಪೂರ್ಣವಸ್ತು ತಾನೆಯಾಗಿರಲು ಬೇರೆ ಪರಬ್ರಹ್ಮವನ್ನು ಅರಸಲಿಲ್ಲ.

284. ಆಧಾರಸ್ಥಾನದಲ್ಲಿ ಉದಯವಾದ ಪ್ರಣವಜ್ಞಾನವು ಚಿದಹಂಕಾರದ ಗಿರಿಯಾಗಿರುವ ತ್ರಿಕೂಟದ ಮಧ್ಯದಲ್ಲಿಗೆ ಸೇರಿ ಆನಂದಲೀಲೆಯಿಂದಾಡುತ್ತ, ಅಲ್ಲಿಂದ ಬ್ರಹ್ಮರಂಧ್ರದ ಕೋಡೆನಿಸುವ ಸುಷುಮ್ನೆಯ ತುರ್ಯದಲ್ಲಿಗೈದಿ, ಬ್ರಹ್ಮರಂಧ್ರವನ್ನು ತಲುಪಿ ನಿಜತತ್ತ್ವಸ್ವರೂಪವೇ ತಾನಾಗಿರುವ ಆ ದಿವ್ಯಶಿವಯೋಗಿಯು ಯಾರು ಬಂದು ತನ್ನನ್ನು ಬೋಧಿಸೆಂದರೂ ಅವರಿಗೆ ತನ್ನ ಸ್ವರೂಪವನ್ನೇ ವರಪ್ರದಾಯಕವಾಗಿ ಕೊಡು-ತ್ತಿರುವನು. ಇಂತಹ ಶಿವಯೋಗ ತನಗೆ ಸಾಧ್ಯವಾದ ಪರಿಯೆಂತೆಂದರೆ : ಕುಂಡಲಾಗ್ನಿ ಪ್ರಕಾಶವನ್ನು–ಪಶ್ಚಿಮದ್ವಾರದಲ್ಲಿ ಶಿವೋಹಂ ಎಂಬ ಶಬ್ದಸಂಯುಕ್ತದಿಂದ ಆನಂದ-ಲೀಲಾಯುಕ್ತನಾಗಿ–ಹೊಂದಿ, ಜ್ಞಾನಜ್ಞೇಯಗಳೆಂಬೆರಡನ್ನೂ ನಿಲಿಸಿ, ಏಕರಸಮಾಡಿ ಅದನ್ನು ನೋಡುತ್ತ ತನ್ನಲ್ಲಿಯೆ ಅರತು ಏಕವಾದನು. ಹೀಗೆ ಉಭಯಭಾವವಳಿದು ತನ್ನ ನಿಜವನ್ನು ತಾನೇ ನೋಡುತ್ತ ನೋಡುತ್ತ ತನ್ನಲ್ಲಿ ತಾನರತು ಮಹಾಘನತತ್ತ್ವವೇ ತಾನಾದನು.

285. ತನ್ನಲ್ಲುಳ್ಳ ಪರಮಜ್ಞಾನಾನುಭಾವವನ್ನು ವಿಶ್ವದೊಳಗಣ ಎಲ್ಲ ಮಹಾ-ನುಭಾವಿಗಳಿಂದ ಮಥನಿಸಿ, ಮನದೊಳಗೆ ಸುಖರಸವನೆಡೆಗೊಳಲು ಆ ಸುಖರಸಸರೋ-ವರದೊಳಗೆ ತನ್ನ ಮಹಾನುಭಾವದ ಸದ್ವಾಸನೆ ಪರಿಪೂರ್ಣವಾಯಿತು. ಆ ಪರಿಪೂರ್ಣ ವಾಸನೆಯುಳವಟ್ಟ ಮಹಾಜ್ಞಾನವು ಪರಬ್ರಹ್ಮವಿದು ಎಂಬ ಕುರುಹನ್ನು ಮೀರಿ ಆ ಶರಣನೊಳಗೆ ಅಡಗಿತು. ಅಹಂಕಾರವು ಆತ್ಮನನ್ನು ಕೂಡಿದರೆ ಅಹಂಪರಮಾತ್ಮಾ

ಎಂದು ತೋರುವುದು. ಅಂತಹ ತೋರಿಕೆಯನ್ನು ಶಿವಶರಣನ ನಿಲವು ತನ್ನೊಳಗೆ ಅಡಗಿಸಿಕೊಂಡಿತು.

286. ಶರೀರವೃಕ್ಷದಲ್ಲಿ ಸಂಸಾರರಸಪೂರ್ಣವಿಷಯಕೂಪವಿರುವುದು. ಅದರ ತೀರದಲ್ಲಿ ಸಂಸಾರಪ್ರಪಂಚೆಂಬ ತೃಣ ಹುಟ್ಟಿರಲು ಅದನ್ನು ಜೀವನು ಬಂದು ಭಕ್ಷಿಸುವನು. ಆ ಜೀವನನ್ನು ಮೂಲಾಹಂಕಾರಸಹಿತ ಮಹಾಜ್ಞಾನಾಗ್ನಿಯಲ್ಲಿ ದಹನ ಮಾಡುವುದೆ ಲಿಂಗೈಕ್ಯ.

287. ಶಿವಾನುಭಾವಯೋಗದಿಂದ ಕುಂಡಲಾಗ್ನಿಯನೆಬ್ಬಿಸಿ, ಪೂರ್ವಯೋಗವನ್ನು ನಿರ್ಬಂಧಿಸಿ ನಿಲಿಸಿ, ಪಶ್ಚಿಮಯೋಗದಲ್ಲಿ ಸುಷುಮ್ನನಾಳದ ಸಪ್ತಗ್ರಂಥಿಗಳ ಕಟ್ಟುಬಿಚ್ಚಿ ಬ್ರಹ್ಮರಂಧ್ರವನೆಯ್ದಿ, ಅಲ್ಲಿ ಘೋಷಿಸುವ ಸತ್ತ್ರಣವವು ಸ್ಥೂಲಸೂಕ್ಷ್ಮತನುವಿನಲ್ಲಿ ವೇದಿಸುತ್ತಿರಲು ಆ ಕಾಯವೇ ಕೈಲಾಸವಾಗಿ, ಆ ಶರಣನ ಕರಣಗಳೆಲ್ಲವು ಅಲ್ಲಿರುವ ಪ್ರಾಣಲಿಂಗದ ಸೇವಕರಾದ ರುದ್ರಗಣಗಳಾಗುವವು. ಮತ್ತು ಅಂತಹ ಶರಣನೊಳಗೆ ಅನಂತ ಬ್ರಹ್ಮಾಂಡಗಳೆಲ್ಲವು ಅಡಗಿ ನಿಜದೊಳಗೆ ಐಕ್ಯವಾಗುವವು.

288. ಚಿಚ್ಛಕ್ತಿಯ ಸದ್ವಾಸನಾಪೀಠದಲ್ಲಿ ಚಿಲ್ಲಿಂಗ ಉದಯವಾಗಿ, ಅದರ ಪ್ರಕಾಶ ಸರ್ವಾಂಗದಲ್ಲಿ ಆವರಿಸಿ, ತನ್ನ ತಾನೇ ಶಿವೋಹಂ ಎಂದು ಸ್ತುತಿಸಿಕೊಳ್ಳುತ್ತಿರುವುದು. ಅಂತಹ ಚಿಲ್ಲಿಂಗದ ಶಿವೋಹಮೆಂಬಹಂಕಾರವು ತನ್ನಲ್ಲಿಯೇ ಅರತು ಶಬ್ದಮುಗ್ಧವಾಗುವುದು.

289. ಶಿವಜ್ಞಾನೋದಯವಾಗಲೊಡನೆ ಆ ಚಿದ್ಬ್ರಹ್ಮವು ವಿಷ್ಣುತತ್ತ್ವಸಂಬಂಧವಾದ ಅಂತರ್ದೇಹವನ್ನು ನುಂಗಿತು. ಅಂತಹ ಅಂತರ್ದೇಹವೆ ಚಿದ್ಬ್ರಹ್ಮವನ್ನು ನುಂಗಿ ನಿಂದ ನಿಲವು ಬ್ರಹ್ಮಾಂಡವೆಲ್ಲವನ್ನು ತನ್ನೊಳಡಗಿಸಿಕೊಂಡಿತು. ಬ್ರಹ್ಮರಂಧ್ರದ ಶತಪತ್ರದಳಗಳೆಲ್ಲವನ್ನು ಮೀರಿ, ತನ್ನಲ್ಲಿ ತಾನು ನಿಜವನೆಯ್ದಿದ ಶರಣನು ಸಂಚಿತ ಪ್ರಾರಬ್ಧ ಆಗಾಮಿ ಎಂಬ ಕರ್ಮಲಿಖಿತವನ್ನು ನಿವೃತ್ತಿಮಾಡಿ ಪರಮ ಸುಖವೇ ತಾನಾಗಿದ್ದನು.

290. ದಶೇಂದ್ರಿಯಗಳ ಸಂಚಯವನ್ನು ಭಿನ್ನ ಮಾಡಿ, ಮಹಾನುಭಾವ ವಿವೇಕವೆಂಬ ಧಾರೆವಟ್ಟಲನಿಕ್ಕಿ ಶೋಧಿಸಿ, ಅಸಾರವನ್ನು ಬಿಟ್ಟು, ಲಿಂಗಸಾರವನ್ನು ಹಿಡಿದು ಏಕಗ್ರಾಹಕತ್ವದಿಂದ ತನ್ನ ಸರ್ವಾಂಗದ ಮೇಲೆ ಧಾರಣ ಮಾಡಿದನು. ಶಕ್ತಿ–ಶಿವಗಳೆರಡನ್ನೂ ಏಕಗ್ರಾಹಕತ್ವದಿಂದ ಹಿಡಿದು, ಪ್ರಾಣನ ಧರ್ಮವನ್ನು ಕೊಂದು, ಆ ದೇಹವೆಂಬ ಶಕ್ತಿಯ ಪ್ರಾರಬ್ಧಲಿಪಿಯ ಓಲೆಯನ್ನು ಅನುಭವವೆಂಬ ಸಮುದ್ರದ ತೀರದಲ್ಲಿ ನಿವೃತ್ತಿ ಮಾಡಿದನು. ದೇಹಭಾವವಿಲ್ಲದ ನಿರ್ದೇಹದಲ್ಲಿ ಮಹಾಮಾಯೆಯು ಮೂಲಾಹಂಕಾರಸ್ವರೂಪಿಣಿಯಾಗಿರಲು, ಆ ಮೂಲಾಹಂಕಾರವೆಂಬ ಮಾಯೆಯನ್ನು ಹೀಗೆ ನಿವೃತ್ತಿ ಮಾಡಿದ ಶಿವಯೋಗಿ ತನ್ನ ನಿಜದೊಳಗೆ ತಾನೆ ಐಕ್ಯವಾದ.

291. ಜ್ಞಾತೃಜ್ಞಾನಜ್ಞೇಯವೆಂಬ ತ್ರಿಕೂಟವು ಒಂದಾಗಿರುವ ಕೇಂದ್ರವೇ ಅನಾದಿಭ್ರೂಮಧ್ಯ( = ಮಹಾಜ್ಞಾನ ನಯನ). ಆ ಭ್ರೂಮಧ್ಯದಲ್ಲಿ ಪಂಚಪ್ರಾಣವಾಯುಗಳನ್ನು ಬಂಧಿಸಿ, ಆ ಸಂಧಿಸಿದ ಭಾವಸ್ತಂಭವನ್ನು ನಿರ್ಗುಣಸಮಾಧಿಯಿಂದ ಭಗ್ನ ಮಾಡಿ, ನಿರ್ಭಾವಸ್ವಾಯತ ಮಾಡಲು, ಅಷ್ಟಮದಗಳೆಂಬವು ನಷ್ಟವಾದವು ; ಊರ್ಧ್ವ ಚಕ್ರದಲ್ಲಿ ಷೋಡಶಮುಖವಾಗಿರುವ ಅಮೃತಬಿಂದು ಒಂದೆ ಸಮರಸವಾಗಿ ಪ್ರಣವ-

ಮೋಕ್ಷದಿಂದ ಚಿತ್ತಿನ ಮೇಲೆ ಸುರಿವುತ್ತಿತ್ತು. ಹೀಗೆ ಸರ್ವಾಂಗವು ಸುಧಾವರ್ಷದೊಳಗೆ ಮುಳುಗಲು ಆ ಅಮೃತವನ್ನು ಆ ಮಹಾಲಿಂಗವು ದಣಿಯುಂಡು ಸಹಸ್ರದಳಕಮಲ ಕರ್ಣಿಕಾಪೀಠದಲ್ಲಿ ಶಬ್ದಮುಗ್ಧವಾಗಿದ್ದ ಕಾರಣ ಆ ಶರಣನು ಲಿಂಗೈಕ್ಯನಾದ.

292. ಮನದಲ್ಲಿ ಜ್ಞಾನ ಉದಯಿಸಿ ಅಂತರಂಗವೆಲ್ಲವನ್ನು ದಹನಮಾಡಿತು. ಹೀಗೆ ಸರ್ವಾಂಗದ ಪ್ರಕೃತಿಗುಣವೂ ಜ್ಞಾನಾಗ್ನಿಯಲ್ಲಿ ದಹನವಾಗಲು ಆತ್ಮತತ್ತ್ವದಲ್ಲಿ ವಿವೇಕವೆಂಬ ವೃಕ್ಷ ಹುಟ್ಟಿ ಪಲ್ಲವಿಸಿತ್ತು. ಅಂತರಂಗಬಹಿರಂಗವೆಂಬ ಉಭಯದಳಗ-ಳುಳ್ಳವನು ಜೀವಹಂಸನು, ಆ ಉಭಯದಳವಿಲ್ಲದಾತನು ಪರಮಹಂಸನು. ಆ ಪರಮ ಹಂಸನು ನಿರಾಳತತ್ತ್ವವನವಗ್ರಹಿಸಿ ನಿಜವನೆಯ್ದಿದನು.

293. ಜೀವನ ಸುಜ್ಞಾನಶಿರಸ್ಸಿನಲ್ಲಿ ಜಗವನನ್ನೆಲ್ಲ ತನ್ನೊಳಡಗಿಸಿಕೊಂಡಿರುವ ಪರಮಾಮೃತವೆಂಬ ಜಿಹ್ವೆ ಇರುವುದು. ಆ ಪರಮಾಮೃತಬಿಂದುವನ್ನು ಸುಜ್ಞಾನಚಕ್ಷು-ವಿನಿಂದ ಈಕ್ಷಿಸುತ್ತಿರಲು, ಆ ಬಿಂದುವು ಶಿವೋಹಂ ಶಿವೋಹಂ ಎನ್ನುತ್ತಿದ್ದಿತು. ಅಲ್ಲಿ ಶಿವೋಹವೆಂಬ ಅಹಂಕಾರವು ತನ್ನನ್ನು ಆತ್ಮತತ್ತ್ವ ಪ್ರಾಣತತ್ವಗಳ ಸಮರಸ ಸಮ್ಮೇಳನ ದಿಂದ ಶಿವಯೋಗದ ಬಳಿವಿಡಿದು ಎಯ್ದಿಸಲು ಅಗ್ನಿ ಮತ್ತು ಅಪ್ಪಿನ ಗುಣಧರ್ಮಕರ್ಮ-ದಲ್ಲಾದ ಸ್ಥೂಲತನುವಡಗಿತ್ತು. ಹೀಗೆ ಅಂಗಭಾವವಳಿಯಲು, ಮನದ ಸ್ಥಿತಿಗತಿಯಳಿದು ಜಗದ ವ್ಯವಹರಣೆಯೂ ತನ್ನೊಳಗೆಯೇ ಅಳಿದು ಶರಣನು ಲಿಂಗೈಕ್ಯನಾದನು.

296. ಮಹಾನುಭಾವವಾಸನೆ ಅಂತರಂಗಬಹಿರಂಗದೊಳಗೆ ಪರಿಪೂರ್ಣ-ವಾಗಲೊಡನೆ; ಇದು ಸಂಸಾರದ ಗಮನ, ಇದು ನಿರ್ಗಮನವೆಂಬ ಈ ಎರಡೂ ನಷ್ಟ-ವಾದವು. ಆ ನಿರ್ದೇಹವು–ತನ್ನನ್ನು ಮಹಾಜ್ಞಾನಾಗ್ನಿ ಬಂದವಗ್ರಹಿಸಲು–ಹಿಂದು ಮುಂದಿಲ್ಲದೆ ನಿರ್ಬಯಲಾಯಿತು.

297. ಶರೀರವೆಂಬ ವೃಕ್ಷಕ್ಕೆ ಮೂಲಾಹಂಕಾರವೇ ಜೀವ. ಆ ಮೂಲಾ-ಹಂಕಾರವೆಂಬ ಬೇರಿಲ್ಲದೆ ಉದಯಿಸಿದ ಶರೀರವಾವುದೆಂದರೆ ಚಿತ್ತೆಂಬ ಪಿಂಡ. ಆ ಚಿತ್ಪಿಂಡ ವೆಂಬ ವೃಕ್ಷದಲ್ಲಿ ಭಿನ್ನವಿಲ್ಲದ ಹೃತ್ಪಂಕಜವೆಂಬ ಪುಷ್ಪ ಹುಟ್ಟಿತು. ಆ ಹೃತ್ಕಮಲವನ್ನು ನಿರೂಪವೆನಿಸುವ ಜ್ಞಾನಾಗ್ನಿ ಬಂದು ಆವರಿಸಲು ದೇಹಭಾವ ನಷ್ಟವಾಗಿ, ದ್ವಿದಳವೆಂಬಲ್ಲಿ-ರುವ ಸತ್ತ್ರಣವವು ತಾನೆ ಪರಮಹಂಸನಾಗಿ ಉದಯವಾಯಿತು. ಆ ಪರಮಹಂಸನೆಂಬ ತತ್ತ್ವವು ತಾನಲ್ಲದೆ ಮತ್ತೇನೂ ಇಲ್ಲವೆಂದರಿತು, ಬ್ರಹ್ಮರಂಧ್ರಸ್ಥಾನದಲ್ಲಿ ಮಹಾಜ್ಞಾನಾ ಕ್ಷಿಯನು ತೆಗೆದು ನೋಡಿ, ನಿತ್ಯಾನಂದ ಪರಿಪೂರ್ಣ ಪರಮಾಮೃತವನ್ನು ದಣಿಯುಂಡು ಪಶ್ಚಿಮದ್ವಾರದಲ್ಲಿ ಮಹಾಲಿಂಗವನ್ನವಗ್ರಹಿಸಿತು.

299. ಪರಿಪೂರ್ಣಜ್ಞಾನವು ವೃತ್ತಿಜ್ಞಾನವನ್ನು ಅವಗ್ರಹಿಸಲು ಆ ಖಂಡಿತ-ಭಾವವಳಿದು ಪರಿಪೂರ್ಣಜ್ಞಾನವೇ ಆಯಿತು. ಕ್ರಿಯಾಶಕ್ತಿಯು ರವಿಯೆಂಬ ಮಹಾ ಜ್ಞಾನಪ್ರಕಾಶವನ್ನವಗ್ರಹಿಸಿತು. ಮನವಳಿದು ಮಹಾನುಭಾವ ಉಳಿದರೆ, ಪ್ರಾಣಲಿಂಗ ವೆಂಬ ಭಿನ್ನನಾಮನಿಯಮವಳಿಯಿತು. ಮನವನ್ನು ಮೆಟ್ಟಿ ನಡೆದ ಮಹಾಸತ್ವಪಥದ ನಿಜ ವನಾರೂ ಅರಿಯಬಾರದು. ಅದು ಕಾರಣ ಆ ಮಹಾಲಿಂಗದ ನಿಲವು ಅಲ್ಲಿ ಇಲ್ಲ, ಇಲ್ಲಿ ಇಲ್ಲವೆಂಬ ಖಂಡಿತ( = ಭಿನ್ನುತೆ)ವಳಿದು ಅಖಂಡಿತವಾಯಿತು.

306. ತನುವಿನ ಮೇಲೆ ಲಿಂಗಸ್ವಾಯತವಾಗಿ, ಸರ್ವಾಂಗದಲ್ಲಿ ಆ ಲಿಂಗವು ತುಂಬಲು ಜ್ಞಾನವಿಕಾಸವಾಗಿ, ಆ ಪರಿಪೂರ್ಣಜ್ಞಾನವು ಆತ್ಮ ಪರಮಾತ್ಮಗಳೊಳಗೂ

ಅಖಂಡಪರಿಪೂರ್ಣವಾಗಿತ್ತು. ಆ ಪರಿಪೂರ್ಣಜ್ಞಾನವು ಆ ಮಹಾಲಿಂಗವನವಗ್ರಹಿಸಿ ಪರಮಸುಕಾಷ್ಠೆಯನೆಯ್ದಿ ತಾನೆಯಾಗಿದ್ದಿತು.

313. ಜಲಬುದ್ಬುದದಿಂದ ಹುಟ್ಟಿತು ತನುವೆಂಬ ವೃಕ್ಷ. ಆ ಶರೀರದ ಪ್ರಪಂಚೆಂಬ ದಳಗಳನ್ನು ಸವಿಯುತ್ತಿರುವುದು ಮನವೆಂಬ ಮರ್ಕಟ. ಆ ಮನವೆಂಬ ಮರ್ಕಟನು ಅಹಂಕಾರವೆಂಬ ಕೋಡಿನಲ್ಲಿ ಇದಿರ ಲೆಕ್ಕಿಸದಿರುವುದು. ಇದು ಮಾದಲ್ಲದೆ ಶರಣನಾಗಬಾರದು.

319. ಆತ್ಮದ ಮರವೆಯೊಳಗೆ ಭವವೆಂಬ ಅಡವಿ ಹುಟ್ಟಿತು, ಆ ಅಡವಿಯಲ್ಲಿ ಕಾಮನೆಂಬ ವ್ಯಾಧನು ಜೀವನೆಂಬ ಮೃಗವನ್ನು ತನ್ನ ವಶದಲ್ಲಿ ಹಿಡಿದುಕೊಂಡ. ಆ ಜೀವನಷ್ಟವ ಮಾಡಿದಲ್ಲದೆ ಕಾಮನು ಸಾಯನು. ಹೀಗೆ ಜೀವಭಾವ ಹಿಂಗಿದವರಿಗಲ್ಲದೆ ಜ್ಞಾನವೇದ್ಯವಾಗದು.

322. ಅಗ್ನಿಯಂಶಿಕವಾದ ಶರೀರದಲ್ಲಿ ಅಜ್ಞಾನತಮೋವರ್ಣದ ಮಾಯೆ, ಆ ಮಾಯೆಗೆ ಅಧೀನವಾಗಿ ಜನಿಸಿರುವವು ವಿಶ್ವ ತೈಜಸ ಪ್ರಾಜ್ಞರೆಂಬ ಜೀವತ್ರಯಗಳು. ಈ ಜೀವತ್ರಯರ ಕೈಬಾಯಲ್ಲಿ ಮೂರು ಲೋಕವೂ ಸಿಕ್ಕಿ ಮರುಳಾಗಿ ಕೆಡುತ್ತಿರುವುದು. ಇದನ್ನರಿತು, ಕರಿಯ ಬಣ್ಣವೆಂಬ ಅಜ್ಞಾನದ ಮುಸುಕನ್ನು ಉಗಿದು ಪರತತ್ತ್ವಸಂಧಾನಿಯಾಗದೆ ಇದ್ದಾತ ಶರಣನಲ್ಲ.

323. ಸಂಸಾರಪಾಶದಲ್ಲಿ ಬದ್ಧವಾಗಿ ಸಿಲ್ಕಿದ ಜೀವನಿಗೆ ಅಜ್ಞಾನಮಾಯೆ ಆವರಿಸಿಕೊಂಡಿರುವುದು. ನಿಜತತ್ತ್ವವನರಿಯದೆ ತೆರಹಿಲ್ಲ.

325. ಅಜ್ಞಾನಕಾಳಿಕೆ ಮುಸುಕಿಕೊಂಡಿರುವ ಚಿತ್ತಘಟ್ಟಿಯನ್ನು ಸುವಿವೇಕ-ಬೋಧೆಯಿಂದ ಕರಗಿಸಲಾಗಿ ನಿರ್ಮಲವಾಗುವುದು. ಆಗ ಅಲ್ಲಿ ಜ್ಞಾನರತ್ನ ಕಾಣಬರುವುದು. ಆ ಜ್ಞಾನರತ್ನವನ್ನರಿತಿಹೆವೆಂಬ ಜ್ಞಾನಿಗಳೆಲ್ಲರೂ ತಲೆಕೆಳಗಾದರು. ಆ ಕರಿಯ ಘಟ್ಟಿ ಎಂಬ ಅಜ್ಞಾನವನ್ನು ಭೇದಿಸಿ, ಸುಜ್ಞಾನವೆಂಬ ಬಿಳಿದುಮಾಡಿ, ಅದನ್ನು ಬಿಳಿದು ಮಾಡಿದೆನೆಂಬ ಮನದಜ್ಞಾನಮುಖದ ರೂಪಿನ ಮುಖದ ಮುದ್ರೆಯನಳಿಯಬಲ್ಲಾತಂಗಲ್ಲದೆ ನಿಜತತ್ತ್ವವನ್ನು ಕಾಣಲಾರರು.

328. ಇಲ್ಲವೆಯಾಗಿರುವ ಪಂಚಭೂತಪಿಂಡದೊಳಗೆ ಸುಖವಾಗಿ ಬದುಕಿಹೆನೆಂದಿರಲು, ಸಂಸಾರವೆಂಬ ಸರ್ಪವು ಕಚ್ಚಿತು. ಅಂತರಂಗದ ಕರಣಬೀದಿಗಳೊಳಗೆಲ್ಲಾ ಅಷ್ಟಮದಗಳು ಕ್ರೀಡಿಸುತ್ತಿದ್ದವು. ವಿಧಿಕಲ್ಪಿತವೆಂಬ ಪ್ರಾರಬ್ಧಕರ್ಮದ ತಲೆಯ ಬರಹವ ನಳಿದರೆ ಆ ದೇಹಧರ್ಮವೆಲ್ಲವೂ ಅಳಿದು ಹೋಗುವುದು.

331. ತನುವಿನೊಳಗೆ ಜ್ಞಾನರತ್ನ ಹುಟ್ಟಿತು. ಅದನ್ನು ನೋಡುವೆನೆಂಬಷ್ಟರಲ್ಲಿ ಆ ರತ್ನ ಮನದ ವ್ಯಾಕುಳಪ್ರವಾಹದೊಳಗೆ ಸಿಲ್ಕಿ ಬಿದ್ದಿತು. ಆ ಮನದೊಳಗೆ ಹೊಕ್ಕು ಅರಿಯುವೆನೆಂದರೆ ಆ ಮನವೇ ಇದಿರಿಟ್ಟು ತೋರುತ್ತಿರುವುದಲ್ಲದೆ ಆ ಸುಜ್ಞಾನ ತೋರದು. ಸುವಿಚಾರವೆಂಬ ಧಾರೆವಟ್ಟಲಲ್ಲಿ ಮನವನ್ನು ಶೋಧಿಸಿ, ಅಜ್ಞಾನವನ್ನು ಬಿಟ್ಟು, ಸುಜ್ಞಾನವನ್ನು ಹಿಡಿಯುವೆನೆಂದು ಉದ್ಯೋಗಿಸುತ್ತಿರಲು ಆ ಸುಜ್ಞಾನವು ತನ್ನ ಕಣ್ಣ ಮುಂದೆ ಇದಿರಿಟ್ಟು ತೋರುತ್ತಿರುವುದು. ಆ ಸುಜ್ಞಾನವನ್ನು ಮುಟ್ಟಿ ಗ್ರಹಿಸಿಕೊಂಡಿಹೆವೆಂಬವರ ಮತಿಯೊಳಗೆ ಅದು ತಾನೆ ಪ್ರತಿಬಿಂಬಿಸಿಕೊಂಡಿತ್ತು.

340. ಅಭ್ರಚ್ಛಾಯಾಮಾತ್ರವಾದ ಶರೀರದೊಳಗೆ ಸಂಸಾರಸಾರವೆಂಬ ಮಳೆ ಸುರಿಯುತ್ತಿರಲು, ಧಾರಿಣಿ ಎಂಬ ಪಿಂಡವೆಲ್ಲ ಮುಳುಗಿತು. ಅಜ್ಞಾನಚಕ್ಷುವಿನಿಂದ ತಿಳಿದು-ನೋಡುವೆನೆಂದರೆ, ಪ್ರತಿಸೂರ್ಯನ್ಯಾಯದಂತೆ ಶಿವಭಾವತಪ್ಪಿ ವಿಪರೀತಭಾವ ತಲೆ-ದೋರಿತು. ಇಂತಹ ಅಜ್ಞಾನಿಗಳಿಗೆ ಶಿವಪಥವನರಿಯಬಾರದು. ಸುಜ್ಞಾನಾಸ್ತ್ರದಲ್ಲಿ ಅಜ್ಞಾನವನ್ನು ಕೊಂದಲ್ಲದೆ ಆ ವಿಪರೀತಭಾವವಳಿದು ಶಿವಜ್ಞಾನವು ವೇದ್ಯವಾಗದು.

346. ವಿವೇಕವೃಕ್ಷದಮೇಲೆ ಅಜ್ಞಾನವೆಂಬ ಮಂಜು ಕವಿಯಲು, ಆ ಜ್ಞಾನಾಜ್ಞಾನವಿಡಿದು ಅರಿದ ಅರಿವಿನಿಂದ ಚತುರ್ವಿಧ ಫಲಪದಗಳು ಬೆಳೆದವು. ಈ ಫಲಪ್ರಾಪ್ತಿಯಿಂದ ಭವಗಳು ಬಂದು ಕಾಡುವವು ಎಂದರಿತು ನಿಜದಿಂದ ತನ್ನನ್ನು ತಾನರಿಯಲು ಆ ಫಲಪದಗಳು ಕೆಡುವವು.

360. ಸಂಸಾರವೆಂಬ ತೊರೆಯನ್ನು ಹಾಯಲು ದೇಹವೇ ಹರುಗೋಲು. ದೇಹದಲ್ಲಿರುವ ಸಕಲಕರಣಗಳೇ ಆ ಅರುಗೋಲನೇರಿದವರು. ಆ ಸಂಸಾರ ಜಲದಲ್ಲಿ ಕ್ರೀಡಿಸುವ ಕಾಲನೆಂಬ ಮೊಸಳೆ ಯಾವುದೋ ಘಳಿಗೆಯಲ್ಲಿ ಹರುಗೋಲನ್ನು ನುಂಗಿ ಬಿಡುವುದು, ಎಚ್ಚತ್ತು ನಡೆಸಬೇಕು. ಈ ಮರ್ಮವನ್ನರಿಯುವುದೇ ಹುಟ್ಟೆಂಬ ಶಬ್ದಕ್ಕರ್ಥ. ಭವವನ್ನು ನಿವೃತ್ತಿ ಮಾಡಲು, ಆ ಕಾಯವಳಿಯದೆ ಅಂತರ್ಗತವಾಗಿದ್ದ ಸಕಲರಗಣಲೂ ಅಳಿಯಬೇಕು. ಈ ಮರ್ಮವನ್ನರಿತವನೆ ಸುಜ್ಞಾನಿ.

371. ತಮೋಗುಣಸಂಬಂಧಿಯಾದ ತನುವಿನ ಮರವೆಯಿಂದ ಮನಸ್ಸಂ ಕಲ್ಪವೆಂಬ ಕಪಿ ಹುಟ್ಟಿತು. ಈ ಮನೋಮರ್ಕಟನು ತಪಸ್ವಿಗಳೆಲ್ಲರನ್ನೂ ತಪಸ್ಸೆಂಬ ಪಾಶದ ನಿರ್ಬಂಧದಲ್ಲಿ ಸಂಕಲ್ಪಬದ್ಧರನ್ನಾಗಿ ಮಾಡಿ ತಾನೇ ಅವಗ್ರಹಿಸಿತ್ತು; ಮತ್ತು ಶರೀರಸಿದ್ಧರಾದೆವೆಂಬ ಸಿದ್ಧರನ್ನು ದೇಹೋಹಂ ಎಂಬ ಅಹಂಕಾರದಲ್ಲಿ ಮರ್ದಿಸಿತ್ತು; ಮತ್ತು ಶಿವನನ್ನು ಅರಿತು ಮುಕ್ತರಾಗುವೆವೆಂಬ ಜ್ಞಾನಿಗಳಿಗೆ ಅರಿವನರುಹಲೀಯದೆ, ಭಿನ್ನ ಜ್ಞಾನವನವೆಯ್ದಿಸಿ ಪ್ರಪಂಚದಲ್ಲಿ ಕೆಡಹಿತು. ಆ ಮನಸ್ಸಿನ ಜನ್ಮಸ್ಥಾಯಿಯೇ ಪ್ರಾಣ ವಾಯುಭೂಷಣವೆನಿಸುವ ಕುಂಡಲಿಸರ್ಪನ ಹೇಳಿಗೆಯಾದ ಆಧಾರಚಕ್ರದಲ್ಲಿ ಮರವೆಯ ನೆಯ್ದಿತು. ಆ ಮನಸ್ಸು, ಪವನಸಾಧನೆಯಿಂದ ಯೋಗಿಗಳಾಗುವೆವೆಂಬವರನ್ನು ವ್ಯಾಕುಳಪದದೊಳಗೆ ಕೆಡಹಿತು. ಮತ್ತು ಯೋಗಿಗಳೆಂಬವರ ಕಾಮಾದಿವಿಷಯ ಸ್ಥಾನದಲ್ಲಿ ತಾನೆ ನಿಂತು ಶಬ್ದಾಡಂಬರದಲ್ಲಿ ವಾಗದ್ವೈತಿಗಳ ನುಡಿಸುತಿದ್ದಿತು. [ಮೂಲ ಜ್ಞಾನದಲ್ಲಿ ಸಮುದ್ಭವಿಸಿ ಶರಣನಿಗೆ ಅರಿವನೆಚ್ಚರಿಸಿಕೊಟ್ಟು ಸೋಹಂ ಎಂದು ಧ್ವನಿ ಮಾಡುವ] ಆ ಸತ್ಪ್ರಣವಕುಕ್ಕುಟವನ್ನೂ, ಆ ಪ್ರಣವಕ್ಕೆ ಪಂಜರವಾಗಿರುವ ಚಿದ್ಬಿಂದುವಿನ ಅರಿವನ್ನೂ, ತಿಳಿಯುವೆನೆಂಬವರ ಪಾಸನಾಶ್ರದ್ಧೆಯೆಂಬ ಬೆಕ್ಕನ್ನೂ ಅವಗ್ರಹಿಸಿ ತಾನೇ ತೋರುತ್ತಿತ್ತು. ಆ ಮನಸ್ಸು, ಸತ್ಪ್ರಣವದ ಮತ್ತು ಅರಿವು ಹಿಡಿದು ಪ್ರಣವಬ್ರಹ್ಮವಾದಿ ಗಳೆಂಬ ಸುಜ್ಞಾನಿಗಳ ಮತ್ತು ಅನುಭಾವಿಗಳ ಭಾವದೊಳಗೆ ಭಿನ್ನವಿಡಿಸಿ ತೋರಿ, ಅವರ ಭಿನ್ನಭಾವದ ಸುಖವನ್ನು ತಾನೇ ಅವಗ್ರಹಿಸಿ, ತಾನು ವಿಪರೀತ ಭಾವವನೆಯ್ದಿ ಅವರನ್ನು ಮರೆಮಾಡಿ ಕಾದುತ್ತಿತ್ತು. ಇಂತಹ ಮನೋವಿಕಾರವಳಿಯದೆ ನಿರ್ವಿಕಾರಜ್ಞಾನವಳವಡದು. ಆ ಸತ್ ಪ್ರಣವಾಹಂಕಾರಭಾವ, ಆ ವಿಪರೀತಭಾವ, ಆ ಮನೋಭಾವ ಈ ತ್ರಿವಿಧವೂ ಅಳಿದು, ಕೆದರಿದ ಚರಣವೆಂಬ ನಾನಾ ದುಶ್ಚರಿತಗಳೆಲ್ಲವೂ ಮಾದು, ಮರಣವನ್ನು ಗೆಲಿದು ಕರಣಗಳರತವು. ಈ ಮರ್ಮವನ್ನರಿತಾತನೇ ಲಿಂಗೈಕ್ಯ.

375. ಮಿಥ್ಯೆಯೆಂಬ ಚೇಳು ಜಗವನ್ನು ಕಚ್ಚಲು ಇಲ್ಲದ ಸಂಸಾರದುಃಖ-ದಲ್ಲಿ ಜಗವೆಲ್ಲ ಹೊರಳುತ್ತಿದೆ. ಆ ಸಂಸಾರವಿಷಕ್ಕೆ ಜನನರಹಿತವಾದ ಶಿವಜ್ಞಾನ-ಕ್ರಿಯೆಯೆಂಬ ಔಷಧಿಯನ್ನು ತನುಗುಣಸೋಕದೆ ಪೂಸಲು ಆ ಬೇನೆ ಹೋಗುವುದು.

377. ಹದಿನಾಲ್ಕು ಭುವನವನ್ನು ಮುಸುಕಿದ ಮಾಯೆಯ ಬಲೆ ಆ ಭುವನ ಉಳ್ಳತನಕ ಉಡುಗದು, ಏನನ್ನೂ ಲೆಕ್ಕಿಸದು, ತೊಲಗದು. ಆ ಕಾರಣದಿಂದ ಲೋಕ-ವೆಲ್ಲ ಆ ಬಲೆಯೊಳಗೆ ಏಳುತ್ತ ಬೀಳುತ್ತ ಪಾಶಬದ್ಧವಾಗಿದೆ. ಇಂತಪ ಮಾಯಾಜಾಲವನ್ನು ನೆರೆಹಿಂಗಿಸಿ, ಸುಜ್ಞಾನ ಕಣ್ದೆರೆದು, ಶಿವಶರಣನು ಮಾತ್ರ ಕೃತಾರ್ಥಭಾವಿಯಾಗಿರುವನು.

379. ಇದು ಮಾಯಾಮಿಥ್ಯೆಯನ್ನು ಕುರಿತುದು.

382. ಭವಿಜನ್ಮವೆಂಬುದು ಮುಂದೆ ಬರುವ ಭಕ್ತಿಜನ್ಮಕ್ಕೆ ಕಾರಣ. ಆ ಭಕ್ತಿ ಉದಯವಾಗಿ, ಆ ಶರಣನ ಸರ್ವಾಂಗದಲ್ಲಿ ಲಿಂಗಲೇಪವಾಗಲು, ಆ ಶರಣನು ತಾನೇ ಜನನಮರಣವರ್ಜಿತನಾದ ಮತ್ತು ತನ್ನ ಉದರಕುಹರದೊಳಗಿದ್ದ ಸಕಲಕರ್ಮಗಳನ್ನೂ ನಷ್ಟಮಾಡಿ, ತನ್ನನ್ನು ತಾ ಸಂಹರಿಸಿಕೊಂಡು ತಾನೇ ಉಳಿದ. ಆತನು ಪೂಜಕನಾದ ಭಕ್ತನೂ ಅಲ್ಲ, ಪೂಜಿಸದ ಅಭಕ್ತನೂ ಅಲ್ಲ. ಈ ಉಭಯವನ್ನೂ ಅಳಿದುಳಿದು, ತನ್ನಲ್ಲಿ ತಾನು ಸ್ವಸ್ಥನಾಗಿ ನಿರ್ವಯಲಸಮಾಧಿಯಲ್ಲಿ ನಿಂದ. ಆದ್ದರಿಂದ ಆ ಶರಣನು–ನಾದ ಬಿಂದು ಕಳೆ ಎಂಬ ತ್ರಿವಧವು ಅಳಿದು ನಿಂದ–ನಿಜಪದದಲ್ಲಿ ನಿಯತವಾದನು.

387. ನೆಳಲು=ಸುಶಾಂತ.

391. ಬಿಂದು=ಕರ್ಮತ್ರಯ ಸಂಬಂಧದ ಶರೀರ.

394. ಮುಖವರಿಯದ ಶಿಷ್ಯನಿಗೆ ಮಖವರಿಯದ ಗುರು ಉಪದೇಶದಿಂದ ಅಂಗಕ್ಕೆ ಒಂದು ಲಿಂಗವ ತೋರಿ ಹೋದನು. (ಈ ವಚನದ ಮೊದಲನೇ ವಾಕ್ಯದ ಭಾವವಿದು.)

395. ಸುಜ್ಞಾನೋದಯವೆಂಬ ಶರಣಸತಿಗೂ ಮಹಾಲಿಂಗವೆಂಬ ಪುರುಷ-ನಿಗೂ ವಿವಾಹವೆಂಬ ಸಮರಸಸಂಗವನ್ನು ಮಾಡಲು, ಸಮಸ್ತ ಪ್ರಾಣಿಗಳೂ ತನ್ನ ಆತ್ಮಬಂಧುಗಳಾಗಿ ಸಹಜಸಂಗಿಗಳಾದವು. ಶರಣಸತಿಗೂ ಲಿಂಗಪತಿಗೂ ಸಮರಸಸಂಗ ಸಂಬಂಧವಾಗಲು, ಆ ಲಿಂಗವನ್ನು ಅಂಥದು ಇಂಥದು ಎಂದು ಅರಿಯಲಸಾಧ್ಯ. ಹೀಗಿರುವಲ್ಲಿ, ಭೂಮಿಯೆಂಬ ಹಸೆ, ಆಕಾಶವೆಂಬ ಹಂದರ, ಈ ಎರಡೂ ಅಳಿಯದ ಮುನ್ನವೇ, ಈ ವಿಶ್ವವೆಲ್ಲವೂ ಸಂಸಾರಸಾಗರದಲ್ಲಿ ಮಿಂದು, ಪ್ರಾರಬ್ಧಕರ್ಮಭೋಗವನ್ನು ಅನುಭವಿಸಿ ಹೋಗುತ್ತಿರುವುದು. ಹೀಗೆ ಲೋಕವೆಲ್ಲವು ನಿಜವನರಿಯದೆ ಹೋಗುತ್ತಿರು-ವಲ್ಲಿ ಆ ವಿಧಾನವನ್ನು ತಾನೂ ಅನುಸರಿಸದೆ ನಿರ್ವಯಲಸಮಾಧಿಯಲ್ಲಿ ನಿಂದ ಶರಣನೆ ಮಹಂತನು.

397. ಪಂಚಭೂತಗಳ ಸಂಗದಲ್ಲಿ ಉದಯಿಸಿದೆ. ಪಂಚೇಂದ್ರಿಯಗಳ ಸಂಗದಲ್ಲಿದ್ದೆ. ಇಂತಹ ಪಿಂಡದಲ್ಲಿದ್ದ ಜೀವನಾದೆನಗೆ ಜ್ಞಾನೋದಯವಾಗಿ, ನಾನು ಶಿವಭಾವಸಂಪನ್ನನಾಗಲು, ಆ ಪಂಚಭೂತಗಳು ತಮ್ಮಲ್ಲಿ ತಾವೇ ನಷ್ಟವನೆಯ್ದಿದವು. ಹೀಗೆ ಪಂಚಭೂತಪಿಂಡವಳಿದು ಸರ್ವಾಂಗಲಿಂಗವಾಗಿ, ತಾನಲ್ಲದೆ ಮತ್ತಾರೂ ತನಗಿಲ್ಲದೆ ನಿಸ್ಸಂಗಿಯಾಗಿರಲು ಮಹಾಘನವೇದ್ಯವಾಯಿತು.

398. ಮಿಥ್ಯೆಯೆಂಬ ಪ್ರಪಂಚವು ತನ್ನಿಂದನ್ಯವಾಗಿ ತೋರುತ್ತಿರಲು, ಆ ಮಿಥ್ಯೆಯನ್ನು ಮುಟ್ಟಿಯೂ ಮುಟ್ಟದಿರಬೇಕು. ಆ ಮಿಥ್ಯೆಯಲ್ಲಿ ಅತಿರತಿಸುಖವನ್ನು ಆಶಿಸಿದರೆ ಅರಿವಿನ ಮತಿ ಮಂದವಾಯಿತು. ಬಳಿಕ ಅಷ್ಟಮದ ಪಂಚಭೂತಸಹಿತ ದೇಹವನ್ನು ಧರಿಸಿಕೊಂಡು ನರಸುರಾದಿಗಳ ಹಾಗೆ ಇರುವನು. ಈ ಭೇದವನ್ನರಿತು ಸುಜ್ಞಾನಿಯಾದರೆ ಅಷ್ಟಮದ ಪಂಚಭೂತಗಳು ನಿವೃತ್ತಿಯಾಗಿ, ಕರಣಗಳೆಲ್ಲವು ಗತವಾಗಿ, ಸರ್ವಾಂಗವು ಮಹಾಜ್ಞಾನಾಗ್ನಿಯಲ್ಲಿ ಅಳಿದು ನಿರ್ವಯಲಾಯಿತು.

400. ಶಿವಜ್ಞಾನವಿಲ್ಲದ ಅಜ್ಞಾನವು ಲೋಕವನ್ನೆಲ್ಲ ನುಂಗಿತು. ಆ ಜ್ಞಾನವಳಿದ ಶಿವಜ್ಞಾನವು ಆತ್ಮನೆಂಬ ಆಕಾಶವನ್ನವಗ್ರಹಿಸಿತು. ಇಂತಹ ಅಜ್ಞಾನವನ್ನು ಬೇರ್ಪಡಿಸಿ ನೋಡುತ್ತಿರಲು ಅಲ್ಲಿ ಮನವು ನಿಶ್ಚಲವನೆಯ್ದಿದ್ದಿತು. ಆ ಅಜ್ಞಾನಸುಜ್ಞಾನಗಳೆರಡನ್ನೂ ನಿವೃತ್ತಿಮಾಡಿ ನಿಜಶಿವತತ್ವಸ್ವರೂಪವನರಿಯುತ್ತಿರಲು ಅರಿವು ತನ್ನೊಳಗೆ ಲೀಯವಾಯಿತು.

403. ಜ್ಞಾನಾಜ್ಞಾನಗಳೆರಡೂ ಇಲ್ಲದ ನಿಜಪದಸುಖದ ಸುಗ್ಗಿಯ ಬೆಳಸಿನ ರಾಶಿಯನ್ನು ಯಾರೂ ಅರಿಯಲಾರರು. ಆ ಘನವನ್ನು ಶರಣನು ಅಭೇದ್ಯದೃಷ್ಟಿಯಿಂದ ಕಂಡು,ತನ್ನ ಸ್ವರೂಪು ಲಕ್ಷಣವಿದ್ದ ಹಾಗೆ, ಆ ಘನವನ್ನು ವೇದಿಸಿಕೊಂಡು ಸುಖಿಯಾದನು.

404. ಭವಿಯೆಂದರೆ ನಿಜತತ್ತ್ವಕ್ಕೆ ಹೆಸರು.

406. ದೇಹದಲ್ಲಿ ಜನಿಸಿದುದು ಪ್ರಕೃತಿ. ಆ ಪ್ರಕೃತಿಯ ಮಿಥ್ಯೆಯನ್ನಳಿದರೆ ಮೂಲಶಕ್ತಿಯು ಮೂಡುವುದು. ಆ ಶಕ್ತಿಯ ದೃಢಚಿತ್ತದಿಂದ ಕುಂಡಲಿಯ ಸರ್ಪನ ನೆಬ್ಬಿಸಿ, ಪಶ್ಚಿಮನಾಳವನ್ನು ಬಗೆದೆಗೆದು, ಮಸ್ತಕದ ಅಮೃತಬಿಂದುವನೊಸರಿಸಲು ಆ ಅಮೃತವನ್ನು ಕುಂಡಲಿಯ ಸರ್ಪನುಣ್ಣುವನು. (ನ–ಖ–ಕಂ–ಕಣ : ನ = ನಷ್ಟ, ಖ = ಇಂದ್ರಿಯ, ಕ = ಸಂಸಾರ, ಜಲಕಣ = ಬಿಂದು) ಆ ಅಮೃತಪಾನಮಾಡಲು ಇಂದ್ರಿಯಗಳು ನಷ್ಟವಾಗುವವು. ಸಂಸಾರಜಲಬಿಂದುವೆಂಬುದು—ಇಪ್ಪತ್ತೈದು ತತ್ತ್ವ, ಆ ತತ್ತ್ವಕ್ಕೆ ಅಧಿಷ್ಠಾಯಕವಾದ ಷಡುಶಕ್ತಿ ಕೂಡಿ–ಮುವ್ವತ್ತೊಂದು ಮುಖ ವುಳ್ಳುದು. [' ನ–ಖ–ಕಂಕಣ ಮುಖ ಮುವ್ವತ್ತೊಂದು ಶಿರವ ನುಂಗಿತ್ತು.' ಎಂಬ ಪಾಠಾಂತರವನ್ನು ಸ್ವೀಕರಿಸಬೇಕು.] ಇಷ್ಟನ್ನೂ ಅಮೃತಪಾನಸೇವನೆ ತಾನೆ ಅವಗ್ರಹಿಸಿತು. ಮೋಕ್ಷಮಾರ್ಗಕ್ಕೆ ಅನುಕೂಲವಾದ ಜ್ಞಾನಶಕ್ತಿಯು ಈಶಾನ್ಯತತ್ತ್ವವೆಂಬ ಪರಮಾತ್ಮನಲ್ಲಿ ವಿಶ್ರಮಿಸಿ, ಹಂಗನ್ನು ಹಿಂಗಿ ನಿಶ್ಶಬ್ದನಾಯಿತು. ಇಂತಾಗಿ ಅರಿವಿನೊಳಗೆ ತನ್ನ ತಾನು ಕುರುಹಿಡುವುದನ್ನು ಮರೆಯಲು, ಆ ಮರವೆಯೊಳಗೆ ಸಿಂದ ನಿಜದರಿವು ಕಾಲಕಲ್ಪಿತದಿಂದ ಮಾಡುವ ಲಿಂಗಾರ್ಚನೆಯನ್ನು ಕೆಡಿಸಿತು.

409. ತನುತ್ರಯಗಳ ಮೇಲೆ ಲಿಂಗತ್ರಯವೆಂಬ ಚಿತ್ರ ಅಳವಟ್ಟಿತ್ತು. ಮೊದಲನೆಯದಾದ ಸ್ಥೂಲತನುಭಿತ್ತಿಯ ಮೇಲೆ ಇಷ್ಟಲಿಂಗಸಂಬಂಧವಾಗಲು, ಆ ಲಿಂಗ ಅಲ್ಲಿಯೇ ಲಿಂಗಮಾತ್ರವಾಗಿತ್ತು. ಆ ಲಿಂಗಭಾವವು ಸನ್ನಿಹಿತವಾಗಲು, ಸೂಕ್ಷ್ಮತನುವಿನ ಮೇಲೆ ಸ್ವಾನುಭಾವವಿವೇಕವು ಸ್ವಾಯತವಾಗಿ ಸತ್ಪಥದಲ್ಲಿ ಚರಿಸುತ್ತಿತ್ತು. ತೃತೀಯದಲ್ಲಿ ಸ್ವಾನುಭಾವ ವಿವೇಕವು ನಿಜವನೆಯ್ದಲು, ತೃಪ್ತಿಲಿಂಗಸಂಬಂಧವು ಕಾರಣತನುವಿನ ಮೇಲೆ ಅಳವಟ್ಟು, ನಿರ್ಣಯದಲ್ಲಿ ನಿಷ್ಪತ್ತಿಯನೆಯ್ದಿತು. ಹೀಗೆ ಅಂಗತ್ರಯದಲ್ಲಿ ಲಿಂಗತ್ರಯಸಂಬಂಧವಾಗಿ ಪುನರ್ಜನ್ಮವಿಲ್ಲದೆ ಆ ಅಂಗತ್ರಯಭಾವವು ಅರತುದು.

418. ಸ್ಥೂಲತನುವಿನಲ್ಲಿ ಸುಜ್ಞಾನಲಿಂಗ ಪ್ರಕಾಶಿಸಲು ಆ ಜ್ಞಾನಾಗ್ನಿಯಲ್ಲಿ ಸರ್ವಾಂಗವು ದಗ್ಧವಾಗಿ, ದೇವ–ಭಕ್ತನೆಂಬ ಭಿನ್ನಭಾವವಳಿಯಿತು. ಇಂತಹ ಉತ್ತರ-ಕಕ್ಷೆಯಾದ ಮೋಕ್ಷಮಾರ್ಗವನ್ನು ಕಂಡವರೆಲ್ಲರು ಮಾಯಾತೀತರಾದರು. ಇಂತಹ ಶರಣನ ಸಿಲವು ಕಾಷ್ಠದೊಳಗೆ ಅಂತರ್ಗತವಾದ ಅಗ್ನಿ ಬಹಿರ್ಗತವಾಗಿ ಮರವನ್ನೆಲ್ಲ ಸುಟ್ಟು ಅಗ್ನಿ ಮಾತ್ರ ಉಳಿದ ಹಾಗೆ! ಶರಣನಲ್ಲಿ ದೇಹಭಾವವಳಿದು ಲಿಂಗಭಾವ ಮಾತ್ರ ಉಳಿದಿರುವುದು.

422. ಬಾಹ್ಯಾಭ್ಯಂತರದೊಳಗೆಲ್ಲ ಪರಿಪೂರ್ಣಲಿಂಗವು ವೇದಿಸಿಕೊಂಡಿದ್ದು ಸರ್ವಾಂಗವು ಪರಮಾಮೃತವಾಗಿರುವುದನ್ನರಿಯದೆ, ಗಗನವೆಂಬ ಬ್ರಹ್ಮರಂಧ್ರದಲ್ಲಿರುವ ಅಮೃತವನ್ನು ರೇಚಕವೆಂಬ ಹಸ್ತದಲ್ಲಿ ಹಿಡಿದು, ಪ್ರಾಣಲಿಂಗಕ್ಕೆ ಮಜ್ಜನಕ್ಕೆರೆದು, ಅಲ್ಲಿರುವ ಶತಪತ್ರಮಲವನ್ನು ನಚ್ಚಿಸಿ, ತಾನಾಪಾದೋದಕವನ್ನು ಕೊಂಡು ಸುಖಿಯಾದೆವೆಂಬ ಯೋಗಿಗಳೆಲ್ಲರು ರುದ್ರಲೋಕದಲ್ಲಿಯ ಪದವಿಗಳಿಗೆ ಸಿಕ್ಕು ಭಂಗಿತರಾದರು.

426. ಅಜ್ಞಾನಪ್ರಪಂಚವನ್ನು ಧರಿಸಿಕೊಂಡಿರುವ ಜ್ಞಾನವು ಜ್ಞಾನಾಜ್ಞಾನ-ಸಂಬಂಧವಾದ ಕಾರಣ, ಅದು ಮುಂದೆ ಭವಕ್ಕೆ ಬರಿಸುವುದು. ಸತ್ಕ್ರಿಯೆಗಳನ್ನು ಧರಿಸಿಕೊಂಡಿರುವ ಸುಜ್ಞಾನವು ಆ ಸತ್‌ಕ್ರಿಯೆಗಳಲ್ಲಿ ನಡೆದು ಅಲ್ಲಿಯೇ ವಿಶ್ರಮಿಸಿತ್ತು. ಹೀಗಾಗಲು ಖಂಡಿತಜ್ಞಾನವೂ ಅಳಿಯಿತು. ಆಗ ಪೂರ್ವಾಚಾರವಾದ ಬ್ರಹ್ಮಚರ್ಯ-ವೆಲ್ಲ ಅಳಿದು, ಬ್ರಹ್ಮವೇ ತಾನಾಗಿ, ಚರಿಸುವ ಚರ್ಯೆ ತಾನು ತನ್ನಲ್ಲಿಯೇ ಲೀಯವಾಗಲು, ಷಡ್ವಿಧ ಪ್ರಭೇದವಾದ ಭಕ್ತಿಯು ನಿಷ್ಪತ್ತಿಯಾಯಿತು. ಆಗ ಲಿಂಗವೆಂಬ ಸತ್ವರೂಪು ತನ್ನಲ್ಲಿಯೆ ಲೀಯವಾಗಿ ತಾನು ತಾನಾಗಿದ್ದನು.

429. ಪರಿಪೂರ್ಣಶಿವತತ್ತ್ವಾವರಿಸಲು ಅಪೂರ್ಣವಾದ ಸ್ವಾನುಭಾವವಾಸನೆ ನಿವೃತ್ತವಾಯಿತು. ಹೀಗೆ ಮನೋಮೂರ್ತಿ ಲಿಂಗವಾಗಲು, ಭಿನ್ನಬುದ್ಧಿಯಿಂದ ಲಿಂಗ-ವನ್ನು ನಂಬಿರುವೆನೆಂಬ ಕೃತನಿಶ್ಚಯಬುದ್ಧಿ ಅಳಿದುಹೋಯಿತು. ಕೊನೆಗೆ ಶಿವ-ತತ್ತ್ವವೇ ತಾನಾದ ಕಾರಣ ದೇಹವಳಿದು ನಿರ್ವಯಲಾಯಿತು.

430. ಶರಣನಿಗೆ ಏಕಮೇವ ನ ದ್ವಿತೀಯಂ ಬ್ರಹ್ಮವೆಂಬ ವಿಶಾಲತರ ಅಂತ-ರಂಗವೇ ಮಂಟಪ, ಅದಕ್ಕೆ ಏಕೋಭಾವವೇ ಸ್ತಂಭ, ಆ ಮಂಟಪದಲ್ಲಿರುವ ಪರವಸ್ತು ಒಂದೇ. ಆ ಪರವಸ್ತುವಿಗೆ ಚಿದಾಕಾಶವೆಂಬ ದೇವಾಲಯ ಒಂದೆ. ಇಂತಹ ಶರಣರೆ ನಿತ್ಯಪರಿಪೂರ್ಣತತ್ತ್ವವೇದಿಗಳು.

431. ದೇಹಧರ್ಮಕ್ಕೆ ಹೊರಗಾಗಿರುವ ಚಿತ್ಪಿಂಡವೆಂಬುದೊಂದು ಶಿವಾಲಯ. ಅದರಲ್ಲಿ ಜ್ಞಾನಶಕ್ತಿಯು ಮನವೆಂಬುದೊಂದು ಸೂಜಿಯಲ್ಲಿ ಶಿವಾನುಭವಸೂತ್ರವನ್ನು ಪವಣಿಸಿ ಹಿಡಿದಿರುವಳು. ಆ ಶಿವಾನುಭವಸನ್ನಿಹಿತವಾದ ಮನದ ಕೊನೆಯ ಮೇಲೆ ಚತುರ್ದಶಭುವನವೆಲ್ಲ ಅಡಗಿರುವುದು. ಆ ಮನಸ್ಸನ್ನೂ, ಜ್ಞಾನಶಕ್ತಿಯನ್ನೂ, ಲೋಕ-ಗಳನ್ನೂ ಮಹಾಜ್ಞಾನವು ಅವಗ್ರಹಿಸಿತ್ತು.

433. (ನ = ಚಿತ್ತ) ಚಿತ್ತವೇ ಲೋಕವೆಲ್ಲಕ್ಕೂ ಆದಿಯಾದ ಕಾರಣ, ಅದೇ ಪ್ರಥಮದಲ್ಲಿ ಅಂಗದಲ್ಲಿ ಅಳವಟ್ಟು 'ನಂದಿ' ಎನಿಸಿಕೊಂಡಿತು. (ಮ = ಬುದ್ಧಿ) ಆ ಮೇಲೆ ಸುಬುದ್ಧಿ ಕೃತನಿಶ್ಚಯವು ಮಹತ್ತಿನಲ್ಲಿ ಇಂಬುಗೊಂಡಿತು. ಆಗ (ಶಿ = ರುದ್ರ) ಶಿಕಾರವೆ ಶಿವಸ್ವರೂಪಾಗಿ ಸರ್ವಾಂಗದ ಮೇಲೆ ಎಡೆಗೊಂಡು ಭವಭಾರಪಾಶವಿಮೋಚನ-

ವಾಯಿತು. (ವ = ವಾಯು) ಪಾಶವಿಮೋಚನೆಯಾದೊಡನೆ ಪ್ರಾಣವಾಯುವೇ ಲಿಂಗವಾಗಿ, ಲಿಂಗಪ್ರಾಣವೆನಿಸಿಕೊಂಡು ಅದೇ ಪರಮಹಂಸನಾಮವನೆಯ್ದಿತು. (ಯ = ಜ್ಞಾನ) ಅನಂತರ ಸುಜ್ಞಾನವು ಬಾಹ್ಯಾಂಭ್ಯಂತರದೊಳಗೆ ಸಮವೇದಿಸಿಕೊಂಡಿತು. ಆಗ ಶರಣನು ಸಮಸ್ತ ಲೋಕಕ್ಕೆ ಗುರುವಾದ ಓಂಕಾರವೇ ತಾನಾಗಿದ್ದನು. ಹೀಗೆ ಷಡಕ್ಷರವೇ ಸರ್ವಾಂಗದಲ್ಲಿ ಅಳವಟ್ಟು, ತದ್‌ಭಿನ್ನವಾಗಿರದೆ, ಅಭಿನ್ನವಾಗಿ ಎಡೆಗೊಂಡು, ಉಭಯನಾಮವಳಿದು ಇರುವಾತನೆ ಅಚ್ಚಶರಣ.

434. ಜಗತ್ತೆಲ್ಲವನ್ನೂ ತನ್ನೊಳಗಪ್ಪಿಕೊಂಡಿರುವ ಚಿತ್ತೇ ಶರಣನ ಅಂಗ! ಅಂತಹ ಚಿದಾಕಾಶವೆಂಬ ಶರೀರಮಂಟಪಕ್ಕೆ ಮಹದಾಕಾಶವೆಂಬುದೊಂದು ಮೇಲುಕಟ್ಟನ್ನು ಕಟ್ಟಿ, ಆ ಮಂಟಪದಲ್ಲಿ ಶರಣನು ಸ್ವಸ್ಥವಾಗಿ ಕುಳಿತಿದ್ದು, ಪರಬ್ರಹ್ಮವೆಂಬುದೊಂದು ವಿಚಿತ್ರವ ನೋಡುತ್ತ ನೋಡುತ್ತ ಧ್ಯಾನವಿಶ್ರಾಂತಿಯಲ್ಲಿ ನಿಂತು, ಆ ಶಿವಜ್ಞಾನನಿರೀಕ್ಷಣೆಯಿಂದ ಅದ್ವಯವೆಂಬ ವಸ್ತು ತಾನೆಯಾಗಿ, ಗಗನವೆಂಬ ಪರಮಾತ್ಮತತ್ತ್ವಸ್ವರೂಪದಲ್ಲಿ ಉದಯಿಸಿ ಸ್ವತಃ ಸಿದ್ಧಲಿಂಗನಾದ.

439. ಸತ್ಪ್ರಾಣವ ಉದಯವಾಯಿತು. ಆಗ ಷಡುಚಕ್ರದ ಐವತ್ತೆರಡಕ್ಷರಗಳೆಲ್ಲವು ವಿವೇಕವೃಕ್ಷಸ್ವರೂಪವನೆಯ್ದಿ, ಶಿವೋಹಂ ಎಂಬ ಧ್ವನಿಮಾಡುತ್ತಿದ್ದವು. ಇಂತಾದ ಕಾರಣ ಅಜ್ಞಾನತಿಮಿರವಳಿದು ಸುಜ್ಞಾನಪ್ರಕಾಶವಾಯಿತು. ಸುಜ್ಞಾನೋದಯವೇ ಹೊತ್ತಾರೆ. ಅಂತಹ ಸುಜ್ಞಾನಪ್ರಕಾಶದಿಂದ ಸರ್ವತೋದಿಕ್ಕು ತಾನೆಯಾಗಿ, ಖಂಡಿತದ ಹೊಲಬು ತಪ್ಪಿತು. ಹೀಗೆ ಲಿಂಗಗ್ರಾಹಕವಾದ ಶರಣನು ಇತರವನರಿಯದಿದ್ದ.

441. ದೇಹಪ್ರಕೃತಿಯು ಮುನ್ನವಳಿಯಲು, ಪ್ರಾಣಧರ್ಮ ಬಳಿಕಳಿವುದು. ದೇಹಪ್ರಕೃತಿ ಪ್ರಾಣಧರ್ಮಗಳೆರಡೂ ಅಳಿಯಲೊಡನೆ ಸುಜ್ಞಾನವೆಂಬ ಶಿಶು ಉದಯಿಸಿ, ಆ ಸುಜ್ಞಾನವೇ ಕರಸ್ಥಲದ ಲಿಂಗವಾಗಿ, ಜಿಹ್ವೆಗೆ ಮಂತ್ರವಾಗಿ ಅಳವಟ್ಟಿತು. ಇಂತಹ ಸುಜ್ಞಾನವನ್ನೂ, ಕರಸ್ಥಲದ ಕುರುಹನ್ನೂ ಮಹಾಜ್ಞಾನವವಗ್ರಹಿಸಿ ತನ್ನಲ್ಲಿ ತಾನೆ ವಿಶ್ರಮಿಸಿ ನಿಜ ಉಳಿಯಿತು.

443. ದೇಹಧರ್ಮವಳಿದು ನಿಜವುಳಿದ, ನಿರ್ವಯಲೊಳಗಿರುವ ಮಹಾಜ್ಞಾನವೆಂಬ ರತ್ನವನ್ನು ಶರಣನು ಭಿನ್ನದೃಷ್ಟಿಯಿಲ್ಲದೆ ಕಂಡು, ಅಭಿನ್ನಹಸ್ತದಿಂದ ಹಿಡಿದು, ಮಹಾನುಭಾವಸೂತ್ರದಿಂದ ಪವಣಿಸಿ, ನಿರಾಧಾರವೆಂಬ ಕಂಠದಲ್ಲಿ ಅದನ್ನು ಧರಿಸಿಕೊಂಡ. ಹೀಗೆ ಮಹಾಜ್ಞಾನವು ಶೃಂಗಾರಗೊಳ್ಳಲು ಅದಕ್ಕೆ ಯಾವ ಸಂಗವು ಇಲ್ಲ.

445. ತನುವೆಂಬ ಭಾವ ತಲೆದೋರದಿರುವ ಶರಣನ ಮಹಾನುಭಾವಾಂತರಂಗವೆಂಬ ಧವಳಾರದೊಳಗೆ ಚಿಚ್ಛಕ್ತಿ ಎಂಬ ಸ್ತ್ರೀ ಇರುವಳು. ಅವಳ ಸಂಗಕ್ಕೆ ತಲೆಯಿಲ್ಲದ ಪರಮಾತ್ಮನೆಂಬ ಪುರುಷನ ಸಾನ್ನಿಧ್ಯ. ಆ ಪರಮಾತ್ಮನನ್ನೂ ಚಿಚ್ಛಕ್ತಿಯನ್ನೂ ಸಮ್ಮೇಳಿಸುವವನು ಕರಣಗಳೆಂಬ ಕರುಳು ಒಡಲೊಳಗಿಲ್ಲದೆ ನಿರ್ದೇಹಿಯಾಗಿರುವ ಅಂತರಾತ್ಮನು. ಇಂತಹ ಶರಣಸತಿಯು ಪರಮಾತ್ಮನೆಂಬ ಪುರುಷನನ್ನು ಅಭಿನ್ನಹಸ್ತದಿಂದ ಹಿಡಿದು, ನಿರ್ಗಮನದಿಂದ ಸಮರಸ ಸಂಗವ ಮಾಡಿ ತಾನು ತಾನಾಗಿದ್ದ(ಳು)ನು.

450. ಕಣ್ಣುಗಳೊಳಗಿರುವ ರೂಪಗ್ರಹಣವೆಂಬ ಹಸ್ತದೊಳಗೆ ಸುಜ್ಞಾನವೆಂಬ ಲಾಕುಳವನ್ನು ಹಿಡಿದು, ಕರಸ್ಥಲದೊಳಗೆ ಸರ್ವಾಚಾರಸಂಪತ್ತಿನ ಪಾತ್ರ(=ಪಾತ್ರೆ) ಸ್ವರೂಪವಾದ ಲಿಂಗವನ್ನು ಹಿಡಿದು, ಕರ್ಣದೊಳಗೆ ಮಹಾನುಭಾವಿಗಳ ಉಪದೇಶಾ-

ಮೃತವನ್ನು ಪಡೆದು, ಮನದಲ್ಲಿ ಲಿಂಗರತಿಭಿಕ್ಷವನುಂಡು, ಲಿಂಗಪ್ರಸಾದಪರಿಣಾಮದಲ್ಲಿ ಸುಖಿಯಾದಾತನೇ ಅಚ್ಚಶರಣ.

451. ಕಣ್ಣುಗಳೊಳಗೆ ಇದಿರಿಟ್ಟು ತೋರುವ ಭಿನ್ನರೂಪ ವಿಷಯಗಳೆಲ್ಲವನ್ನೂ ಛೇದಿಸಿ, ಜ್ಞಾನದೃಷ್ಟಿಯನಳವಡಿಸಿಕೊಂಡು; ಮನದೊಳಗೆ ತೋರುವ ಸಂಕಲ್ಪ ವಿಕಲ್ಪ ಮುಖ್ಯವಾದ ಸಂಶಯಾಸ್ಪದಗಳೆಲ್ಲವನ್ನೂ ಜ್ಞಾನಾಗ್ನಿಯಲ್ಲಿ ಸುಟ್ಟು, ಮನೋಮೂರ್ತಿಲಿಂಗವೆಂದರಿತು, ವಾಗ್ವ್ಯವಹಾರದಿಂದೊದಗುವ ಭಿನ್ನಸುಖಗಳನ್ನೆಲ್ಲ ಕೆಡಿಸಿ, ನಾದ ಬಿಂದು ಕಳೆಗಳ ಸಂಚವನ್ನು ನಿವೃತ್ತಿ ಮಾಡಿ, ಶಬ್ದಮುಗ್ಧರಾದವರು ಶರಣರು!

452. ಚಿದ್ಬಿಂದುವೆಂಬ ಪಿಂಡ, ನಾದವೆಂಬ ಪಿಂಡ, ಶಾಂತಿರೂಪವಾದ ಕಳಾಪಿಂಡ: ಹೀಗೆ ಬಿಂದು-ನಾದ-ಕಳೆ ಎಂಬ ಅಪೂರ್ಣಪಿಂಡತ್ರಯಗಳೊಳಗೆ ಲಿಂಗಕಳಾ ಪ್ರಸನ್ನತೆ ನೆಲೆಗೊಳ್ಳಲು, ಅವು ಅಖಂಡಿತ(ಪರಿಪೂರ್ಣ)ರೂಪಾದವು. ಇಂತಾದ ಕಾರಣ, ಅತ್ಮಾಕಾಶವನ್ನು ಮನಸ್ಸು ಅವಗ್ರಹಿಸಿತು. ಹೀಗೆ ಮನದೊಳಗೆ ಆತ್ಮತತ್ವ-ಗ್ರಾಹಕವಾಗಿ ಪರಮಾತ್ಮ ಸ್ವರೂಪವು ಪ್ರಕಾಶಿಸಲು, ಆ ಚಿದ್ಬಿಂದುವಿನೊಳಗೆ ನಾದವಡಗಿ, ಆ ನಾದದೊಳಗೆ ಕಳೆಯಡಗಿ, ನಾದ-ಬಿಂದು-ಕಳೆಗಳು ನಿರ್ವಯಲನೆಯ್ದಿದವು. ಇಂತಹ ಶರಣ ಕಾಲಕಲ್ಪಿತ ಉಪಾಧಿರಹಿತ!

454. ಆತ್ಮತತ್ವದ ಮಧ್ಯದೊಳಗೆ ನನ್ನನ್ನು ನಾನರಿದೆನೆಂಬ ಅಹಂಕಾರ ತಲೆದೋರುತ್ತಿದ್ದಿತು. ಆ ಅಹಂಕಾರವನ್ನು ಮಹಾಜ್ಞಾನಾಗ್ನಿಯಿಂದ ದಹನ ಮಾಡಲು ಆತ್ಮತತ್ವವಳಿದು ನಿಜಾಹಂಕಾರ ಉಳಿಯಿತು. ಇಂತಾದ ಕಾರಣ, ಶಿವಶಕ್ತಿಭಾವಗಳೆರಡೂ ಅಳಿದು, ಶಿವಶರಣ ತಾನೇ ಲಿಂಗವಾಗಿ ಉಳಿದ.

457. ಯಾವ ಪ್ರಪಂಚೂ ಹೊದ್ದದೆ ಇರುವುದೀಗ ಚಿತ್ತೆಂಬ ಬಿಂದು. ಆ ಬಿಂದುವೇ ಶಿವಶರಣನ ದೇಹ, ಆ ಶರಣನು ಶಿವಶಕ್ತಿಸಂಯೋಗಮಥನದಿಂದ ಉದಯಿಸಿದನು; ತನ್ನಿಂದ ತಾನೇ ಸ್ವಯಂಭುವಾಗಿ ಉದಯಿಸಿ, ನಿರ್ಗಮನವೇ ನಿಲವಾಗಿ ನಿಂದು, ಗಮಿಸಿದರೆ ಗಮನಭಾವವಿಲ್ಲದೆ ಇರುವನು. ಅವನು ಬ್ರಹ್ಮ ವಿಷ್ಣು ರುದ್ರರೆಂಬ ತ್ರಿದೇವತೆಗಳರಿಯದ ಪರಮಮುಗ್ಧನು.

463. ಜಲಬುದ್ಬುದವಾದ ಪಿಂಡದೊಳಗೆ ಉದಯಿಸಿ, ಆ ತನುವೆಂಬ ಭೂಮಿ-ಯೊಳಗೆ ಹುದುಗಿಕೊಂಡಿರುವುದು ಮಾಯೆ. ಪ್ರಾಣವಾಯುವಿನ ಮಧ್ಯೆ ಅಡಗಿರುವ ಜ್ಞಾನಜ್ಯೋತಿ ಅಲ್ಲಿಯೇ ತದ್ಗತವಾಗಿತ್ತು. ಸ್ವಬುದ್ಧಿ ಸ್ವವಿರಕ್ತಿಯು ತಲೆದೋರದೆ—ಅಪ್ರಬುದ್ಧಿಕೆಯಿಂದಿರುವ ಶಿಶುವಿನ ಹಾಗೆ—ಭ್ರಾಂತಿಕ್ರೀಡೆಯಿಂದಿರುವಳು ಮಾಯೆ. ಆ ಮಾಯೆಯಿಂದ ಉತ್ಪನ್ನವಾದ ಪಂಚಕರಣಗಳು ಗೂಢವಾದ ಸಂಸಾರರಸವಿಷಯ ಕೂಪದಲ್ಲಿ ಬಿದ್ದು ದುಃಕರಣಗಳಾಗಿದ್ದವು.

471. ಸ್ಥೂಲ—ಸೂಕ್ಷ್ಮ—ಕಾರಣದೇಹಗಳ ಸಂಚವನ್ನು ಕೆಡಿಸಿ, ಭಕ್ತ-ಮಾಹೇಶ್ವರಸ್ಥಲಗಳನ್ನು ಸ್ಥೂಲದ ಮೇಲೂ, ಪ್ರಸಾದಿಪ್ರಾಣಲಿಂಗಿಸ್ಥಲಗಳನ್ನು ಸೂಕ್ಷ್ಮದ ಮೇಲೂ, ಶರಣ ಐಕ್ಯಸ್ಥಲಗಳನ್ನು ಕಾರಣದೇಹದ ಮೇಲೂ ಪ್ರತಿಷ್ಠಿಸಿ, ಷಡು-ಸ್ಥಲಸಂಪನ್ನನಾಗುವುದೇ ಜಂಗಮಲಕ್ಷಣ. ಆ ಷಟ್ಸ್ಥಲವನ್ನೂ ಏಕಮೇವಾದ್ವಿತೀಯಂ ಬ್ರಹ್ಮ ಎಂಬಲ್ಲಿ ನಿಲ್ಲಿಸಿ ಸಮರಸ ಮಾಡಬೇಕು. ಪಂಚೀಕರಣವನ್ನು ಮುಸುಕಿದ ಮಾಯಾಪಟಲವನ್ನು ತೆಗೆದು, ಆ ಪಂಚೀಕರಣಗಳ ಪೂರ್ವ ಕಳೆಯನ್ನು ಕೆಡಿಸಿ, ಪಂಚ

ಭೂತಗಳ ನಿಲವನ್ನು ಹಿಂಗಿಸಬೇಕು, ಮತ್ತು ಮನವಾಕ್ಕಾಯಗಳೆಂಬ ತ್ರಿಕರಣಗಳ ಹೃದಯದ ಗಂಟನೊಡೆಯಬೇಕು, ಅಂತಃಕರಣಚತುಷ್ಟಯಗಳ ಭ್ರಮೆಗೆ ಸಿಲುಕದೆ, ಜ್ಞಾತೃಜ್ಞಾನಜ್ಞೇಯಗಳ ಅವಗುಣವನರಿದು, ತ್ರಿವಿಧವನ್ನೂ ತನ್ನೊಳಗೆ ಏಕೀಭವಿಸಿ ಇರಬೇಕು.

475. ಹಿಂದೆ ತಾನು ಶಿವತತ್ವಪದದಲ್ಲಿ ನಿಂದೆನಲ್ಲಾ ಎಂಬ ವಿಚಾರ ತಿಳಿದಲ್ಲದೆ ತಾ ನಿಂದ ನಿಲವ ಕಾಣಬಾರದು. ಮುಂದೆ ಚರಿಸುವೆನೆಂಬ ದುಃಕ್ರಿಯಾವರ್ತಗಳಳಿದ ಲ್ಲದೆ ಐಕ್ಯಪದ ನೆಲೆಗೊಳ್ಳದು. ದೇಹಧರ್ಮವಳಿದು, ಆತ್ಮತತ್ವದಲ್ಲಿ ಸ್ವಸ್ಥನಾಗಿ ನಿಂದು, (ಮುಗಿಲೆಂದರೆ ಮಾಯೆ) ಆ ಮಾಯೆಯೊಳಗೆ ನಿವೃತ್ತಿಸುಖವನೆಯ್ದಿ, ಸುಜ್ಞಾನಪ್ರಕಾಶ ವಾದಲ್ಲದೆ ತಾನು ಶಿವತತ್ವನಾಗಬಾರದು.

479. ಜಂಗಮನನ್ನು ಕುರಿತ ಮಾತಿದು : ಕರ್ಮಭಕ್ತಿ ಜ್ಞಾನವೆಂಬ ಮಾರ್ಗ ತ್ರಯ ಒಂದಾದೆಡೆ ಮಾಯೆ ಇದ್ದಾಳೆ. ಅವಳ ಮುಖದ್ವಾರದಲ್ಲಿ ಹೊನ್ನು ಹೆಣ್ಣು ಮಣ್ಣೆಂಬ ತ್ರಿವಿಧ ಘಟ್ಟಗಳು ಅಡ್ಡಗಟ್ಟಿರುವುವು. ಅಲ್ಲಿಂದ ವಿಷಮ ಸಂಸಾರರಸ ಒಸ ರುತ್ತಿದೆ. ಭವಾರಣ್ಯದೊಳಗಿರುವ ಜೀವಪಶುವಿನ ಮುಖದಲ್ಲಿ ಅಜ್ಞಾನತಿಮಿರವಾವರಿ- ಸಿದೆ. ಪಂಚಭೂತೇಂದ್ರಿಯಗಳೇ ಮುಖವಾಗಿರುವ ಕಾಲವ್ಯಾಘ್ರನು ಅತಿರೌದ್ರದಲ್ಲಿರು ವುದು. ಇಷ್ಟು ದುರ್ಘಟಗಳನ್ನು ಕಳೆದಲ್ಲದೆ ಲಿಂಗವನ್ನು ಕಾಣಲಾಗದು.

485. ನಿಜವನ್ನರಿಯದ ಮಾತು ಬರಿಯ ವಾಗದ್ವೈತ. ಶಿವಾಹಂಕಾರಜ್ಞಾನ- ಚಕ್ಷುವಿನಲ್ಲಿ ಅಂಗತ್ರಯವನ್ನು ದಹಿಸದೆ, ವಿಷಯಾಗ್ನಿಯೊಳಗೆ ಅವನ್ನು ನಷ್ಟ ಮಾಡು ತ್ತಿರುವರು. ಅನಾತ್ಮತತ್ವಗಳೆರಡನ್ನೂ ನಿವೃತ್ತಿಮಾಡಿ, ಕರಣಗಳನ್ನು ಅಡಗಿಸಲರಿಯದೆ ಅಜ್ಞಾನಾಹಂಕಾರದ ಗಿರಿಯ ಮೇಲೆ ಓಲಾಡುತ್ತಿರುವರು. ಇಂತಹ ವೃಥಾಜ್ಞಾನಾಡಂಬರ ದವರೆಲ್ಲಾ ಕೆಟ್ಟರು.

486. ಕಾಮವಿಕಾರದಿಂದ ಉದಯಿಸಿ, ಅದನ್ನೇ ಉಂಡು ಮತ್ತರಾದ ಕಾಮ ವಿಕಾರಿಗಳು ಲಿಂಗದ ನಿಜವನ್ನರಿಯರು.

489. ಜ್ಞಾನಾಗ್ನಿಯೊಳಗೆ ಕಾಯವೆಂಬ ಶುಷ್ಕವನ್ನು ಹಾಕಿ ದಹಿಸುವರಲ್ಲದೆ, ರೋಷ ಹರುಷ ವೈರಾಗ್ಯವೆಂಬ ಧೂಮವನ್ನು ನಿಲಿಸಲರಿಯರು. ವಾಗದ್ವೈತವನ್ನು ಬೊಬ್ಬಿಟ್ಟು ನುಡಿದು, ಲಯಕಾಲನೊಳಗೆ ಅಳಿದು, ಪ್ರಪಂಚವೆಂಬ ಘಟವನ್ನು ಧರಿಸಿ ಕೊಂಡು ಸುಳಿದಾಡುವವರನ್ನು ಕಾಣಬಹುದಲ್ಲದೆ, ಕರ್ಮಗಳನ್ನು ಹರಿದು, ಸುಜ್ಞಾನವನ್ನು ಬಿಗಿವಿಡಿದು, ಸ್ವಲೀಲೆಯಿಂದ ಪರಮಾನಂದದೊಳಗೆ ಓಲಾಡುವರನ್ನು ಕಾಣೆ.

494. ಆತ್ಮತತ್ವದಿಂದ ಹುಟ್ಟುವುದು ಮಾಯಾಡಂಬರವೆಂಬ ಮೇಘ. ಆ ಮೇಘದಲ್ಲಿ ಸಂಸಾರರಸವೆಂಬ ಸೋನೆ ಸುರಿಯುತ್ತಿರಲು, ತನುತ್ರಯಗಳಲ್ಲಿ ತಡೆದು ತುಂಬಿತ್ತು. ಆ ತನುತ್ರಯದ ಒಳಗೆ ದಶನಾಳಗಳೆಂಬವೇ ವಿಷಯಕೂಪಗಳು, ಹೊರಗೆ ಪಂಚವಿಷಯವೆಂಬುವೇ ಐದು ಭಾವಿ. ಅಲ್ಲಿ ನವನಾಳಗಳೆಂಬ ತೂಬನ್ನು ತೆರೆಯಲು, ಆ ಸಂಸಾರರಸವು ಬ್ರಹ್ಮಾಂಡದೊಳಗೆಲ್ಲ ತಾನೆಯಾಗಿ ಪ್ರವೇಶಿಸಿಕೊಂಡಿತ್ತು. ಇಂತಹ ಸಂಸಾರರಸವನ್ನುಂಡು ವಾಗದ್ವೈತವನಾಡುವರೆಲ್ಲ ಮಿಟ್ಟೆಯ ಭಂಡರು.

504. ಸರ್ವತೋದಿಕ್ಕು ತಾನೆಯಾದ ಮಾಯೆ ಸಂಸಾರದ ಮಿಥ್ಯಾಲೋಕ ವನ್ನೆಲ್ಲಾ ಆವರಿಸಿತ್ತು. ಅಗ ಇಂದ್ರಿಯಕರಣ ವಿಷಯಾದಿಗಳೆಂಬವು ವಿಷಮತರವಾಗಿ,

ಕಾಮನ ಸರಳುಗಳು ಪರಿವೇಷ್ಟಿಸಿಕೊಂಡು, ಅಜ್ಞಾನ ತನುವೃತ್ತಿ ಪರಿವರ್ತಿಸಿಕೊಂಡು ಇತ್ತು. ಇಷ್ಟಾದರೂ ರವಿಯೆಂಬ ಸುಜ್ಞಾನಕ್ಕೆ ಶಿವಭಕ್ತಿಪಥವೇ ರಥ, ಕೃತನಿಶ್ಚಯವೇ ಅಚ್ಚು, ಅಂತಹ ಸುಜ್ಞಾನದ ಭಕ್ತಿಪಥದ ಕೃತನಿಶ್ಚಯವು ಭಿನ್ನವಾದಾಗ, ಶಶಿವಂಶದ ನಿಲವೆಂಬ ಪರಮಶಾಂತಿಯ ನಿಲವನ್ನು ಕ್ರೋಧವೆಂಬ ರಾಹು ಗ್ರಹಣ ಮಾಡುವುದು.

508. ಅಂಗದಲ್ಲಿ ಲಿಂಗಸಂಗಿಯಾದ ಶರಣನ ಸ್ಥೂಲತನುವಿನೊಳಗೆ ಇರುವ ಬ್ರಹ್ಮತತ್ತ್ವಾಂಶವಾದ ರಜೋಗುಣಗಳೆಲ್ಲವು ನಾಶವಾಗಿ, ಕಾಮಿತಕಲ್ಪಿತಗಳಿಲ್ಲದೆ, ಕ್ರಿಯಾ ವ್ರತಗಳೆಲ್ಲ ಅಳಿದವು. . ಹೀಗಾಗಲು ಆ ಶರಣನ ಸೂಕ್ಷ್ಮತನುವಿನಲ್ಲಿರುವ ವಿಷ್ಣು ತತ್ತ್ವದ ಸಾತ್ವಿಕಭಾವವಳಿದು, ಪ್ರಾಣವಿಕಾರಗಳು ಹಿಂಗಿದವು. ಆ ಮೇಲೆ ಶರಣನ ಕಾರಣತನು ವಿನೊಳಗಿದ್ದ ರುದ್ರತತ್ತ್ವದ ತಮೋವೃತ್ತಿಗಳೆಲ್ಲ ಅಳಿದು, ಅಬದ್ಧವಿಚಾರ ಹಿಂಗಿ ಬದ್ಧ-ವಿಚಾರವಿವೇಕವಾಯಿತು. ಹೀಗೆ ತನುತ್ರಯದಲ್ಲಿರುವ ತತ್ವತ್ರಯಗಳನ್ನು ನಾಶಮಾಡಿದ ಯುಕ್ತಿ ಪರಶಿವನನ್ನು ತಾಗುವುದು.

509. ಮಾಯಾಮಿಥ್ಯೆಯನ್ನೇ ಸಂಗ್ರಹಿಸಿಕೊಂಡಿರುವ ತನುವಿಡಿದವರು ಅಹಂಕಾರಿಗಳಾದರು. . ಇಂತಹ ಅಜ್ಞಾನದೇಹಿಗಳು ಭವಭವಗಳಲ್ಲಿ ಉಂಡುಂಡು ಮಿಕ್ಕ ಪ್ರಾರಬ್ಧಕರ್ಮದ ಎಂಜಲನ್ನೆ ಉಣ್ಣುತ್ತ, ಮತ್ತೆ ಬ್ರಹ್ಮಾಭ್ಯಾಸದ ಎಂಜಲ ಮಾತುಗಳನ್ನು ಕಲಿತು ಬಂದು, ಅನುಭಾವವನ್ನು ನುಡಿಯುತ್ತಿರುವರು. ಬ್ರಹ್ಮವು ಅಂತಹ ವಾಗದ್ವೈತ ರಂಜನೆಗೆ ಸಿಲುಕದು. ಅಗರವೆಂದರೆ ಸುಖ. ಆ ಸುಖದ ಸಂಚವನಾರಿಗೂ ಅರಿಯ ಬಾರದು. ಇಂತಹ ಡಂಭಕ ಗುಣವನ್ನು ಕಳೆದು, ನಿರಂಜಕನಾಗಿ ಭೋಕ್ತೃಕರ್ಮರಹಿತ ನಾಗಿರುವಾತನೇ ಅಚ್ಚ ಶರಣ.

514. " ಜಾಗ್ರಾವಸ್ಥಾಸ್ಥಿತೋ ಬ್ರಹ್ಮಾ । ಸ್ವಪ್ನಂ ವಿಷ್ಣುಸ್ಸಮಾಶ್ರಿತಃ ॥
ಸುಷುಪ್ತ್ಯಾಯಾಂ ತಥಾ ರುದ್ರಃ । ತುರ್ಯಾಯಾಮೀಶ್ವರಸ್ತಥಾ ॥
ಅತೀತಾಯಾಂ ಸದಾಶಿವಃ ॥

ಎಂದುದಾಗಿ ಹರಿ, ಬ್ರಹ್ಮ, ರುದ್ರ, ಈಶ್ವರ, ಸದಾಶಿವ ಈ ಐದು ತತ್ವಗಳೂ ಬ್ರಹ್ಮಾಂಡದೊಳಗೆ ಹುಟ್ಟಿ, ಅಲ್ಲಿಯೇ ಅಳಿವವಾದ ಕಾರಣ, ಅವರು ಬ್ರಹ್ಮಾಂಡದೊಳ ಗಣ ವ್ಯಾಪಾರವನ್ನು ಬಲ್ಲರಲ್ಲದೆ ಅಲ್ಲಿಂದತ್ತತ್ತಲಿರುವ ಮಹಾಘನವನರಿಯರು.

519. ಶಿವಜ್ಞಾನ ಪ್ರಕಾಶವಾಗಲೊಡನೆ, ಇರುಳು ಹಗಲುಗಳೆರಡೂ ಶಿವಜ್ಞಾನ ಪ್ರಭೆಯೊಳಗೆ ಅಡಗಿಹೋಗಿ, ಜ್ಞಾನಾಜ್ಞಾನಗಳೆರಡೂ ಅಳಿದು, ಕಾಯ–ಜೀವವೆಂಬ ಉಭಯಭಾವ ಅಳಿಯಿತು. ಇಂತಿವೆಲ್ಲವೂ ಮೂಲಜ್ಞಾನದೊಳಗೆ ಅಳಿವಲ್ಲಿ ತಾನೆಂಬ ಭಾವ ತನ್ನಲ್ಲಿ ಅಳಿಯದೆ ಇದ್ದಿತು.

525. ....ಜಲಬಿಂದುವಿಂದಾದ ತನುವನ್ನು ನಿವೃತ್ತಿ ಮಾಡಿ, ಬಯಲಮುಖ ದಿಂದಾದ ಪ್ರಾಣವನ್ನು ಅಲ್ಲಿಯೇ ನಿವೃತ್ತಿಮಾಡಿ ತನ್ನ ತಾನರಿತರೆ ಆತನೇ ದೇವ.

528. ....ಮೂರು ಲೋಕದ ಮಸ್ತಕದ ಮೇಲೆ ಭಾರವಾಗಿರುವ ರಾಜಸ, ಸಾತ್ವಿಕ, ತಾಮಸಾಹಂಕಾರವೆಂಬ ತ್ರಿವಿಧವನ್ನು ಭೇದಿಸುವ ತನಕ ಶಿವಪಥವು ಸಾಧ್ಯ-ವಾಗದು. ಚಿಚ್ಛಕ್ತಿಯನ್ನು ಮತ್ತು ಮಾಯಾಶಕ್ತಿಯನ್ನು ಭೇದಿಸಿ ನೋಡಿ, ಈ ಎರಡೂ ಭಾವಗಳನ್ನುಂಟುಮಾಡಿ ಇದಿರಿಟ್ಟು ತೋರುವ ಮೂಲಾಹಂಕಾರವನ್ನು ನಷ್ಟಮಾಡುವ ತನಕ ಲಿಂಗೈಕ್ಯ ಸಾಧ್ಯವಿಲ್ಲ.

532. ಭೂತಪಿಂಡವೆಂಬ ಭಾವ ಹಿಂಗಿ, ಭಕ್ತಿಯೆಂಬ ಪಿಂಡ ದೊರಕೊಂಡಿತ್ತು. ಅವರಲ್ಲಿ ಸದ್ವಿವೇಕವೆಂಬ ಸಸಿ ಹುಟ್ಟಿ ಬೆಳೆಯಲು, ಅಷ್ಟತನುಗಳೆಲ್ಲ ಸದ್ವಾಸನಾರೂಪ-ವನ್ನು ಪಡೆದು, ನಿಜವು ವಿಕಸಿತವಾಗಿ ಜ್ಯೋತಿರ್ವರ್ಣವನ್ನು ಧರಿಸಿದ್ದವು. ಆ ಪುಷ್ಪವು ಸರ್ವಾಚಾರಸಂಪತ್ತೆಂಬ ಶಾಖೆಗಳಲ್ಲಿ ಫಲವಾಗಿ, ಅದರಲ್ಲಿನ ಮೂಲಜ್ಞಾನವೆಂಬ ಫಲರಸವು ಪಕ್ವವಾಯಿತು. ಆಮೇಲೆ ಆ ಫಲವು ಅಸಾಧ್ಯಸ್ಥಲವೆಂಬ ಮಹಾಘನದಲ್ಲಿ ತೊಟ್ಟು ಬಿಟ್ಟು ಬೀಳಲು, ಅದನ್ನು ಮಹಾಜ್ಞಾನಾರೂಢನಾಗಿ ನಿರ್ಭಾವಹಸ್ತದಿಂದ ಹಿಡಿದು ಅಭಿನ್ನ ಸುಖದಿಂದ ಭೋಗಿಸಿದಾತನೇ ಅಚ್ಚ ಶರಣ.

537. ಪಂಚಭೂತಗ್ರಾಮವಾದ ದೇಹದಲ್ಲಿ ಉದಯಿಸಿದ ಮಹಾಜ್ಞಾನಾಗ್ನಿಯು ಭವಾರಣ್ಯವನ್ನು ದಹನ ಮಾಡಿತು. ಆಗ ಆ ಭವಾರಣ್ಯವೆಲ್ಲ ಬಯಲಾಗಿ, ಆ ಜ್ಞಾನಾಗ್ನಿಯಿಂದಲೇ ತನುವೂ ದಗ್ಧವಾಯಿತು. ಆ ಜ್ಞಾನಾಗ್ನಿಯ ಪ್ರಭೆ ಸರ್ವತೋ ದಿಕ್ಕಿನಲ್ಲಿ ತಾನೇಯಾಗಿರಲು, ಅದನ್ನು ವಿವೇಕ ಬುದ್ಧಿಯಿಂದ ನೋಡಿ ಕಾಣಿರಿ. ಅತ್ಯಂತ ಉಬ್ಬರದ ವೃತ್ತಿಜ್ಞಾನದ ಪ್ರಭೆಯನ್ನು ಮಹಾಜ್ಞಾನದೃಷ್ಟಿಯಲ್ಲಿ ಲೀನ ಮಾಡುತ್ತಿರಲು, ಅಲ್ಲಿ ಇದಿರಿಟ್ಟು ತೋರುತ್ತಿದ್ದ ಸಕಲ ಕರಣಗಳೂ ಲಯವಾದವು.

539. ರಾಜಸಾಹಂಕಾರ ಮುರಿಯಿತು. ಶಾಂತಿದಾಂತಿಗಳೆರಡೂ ಭಿನ್ನವಾಗಿ ಶರೀರದಲ್ಲಿ ಗತವಾಗಿ ಹೋದವು. ಜನನಗೆಟ್ಟರೆ ಮನೋಲಯವಾಗುವುದು. ಅದು ಕಾರಣ ಊರೆಂಬ ದೇಹ ಜ್ಞಾನಾಗ್ನಿಯಲ್ಲಿ ದಗ್ಧವಾಗಿ ಶಬ್ದಮಥನಗಳು ನಿಂತವು. ಹೀಗೆ ದೇಹಭಾವನಷ್ಟವಾಗಿ ವಾಗ್ವ್ಯವಹಾರವಳಿಯಲು ಶಿವಶಕ್ತಿಗಳೆರಡೂ ನಿವೃತ್ತಿಯಾಗಿ ಆ ಶಿವಶರಣನು ಪರಮ ಸುಖಿಯಾಗಿದ್ದ.

541. ಮನಸ್ಸಿನ ಸಂಕಲ್ಪವಿಕಲ್ಪಗಳನ್ನೂ, ಚರಿತ್ರವನ್ನೂ ಭಗ್ನಗೊಳಿಸಿ, ಅಗ್ನಿಯಂಶದಿಂದಾದ ದುರಭಿಮಾನ ಅಹಂಕೃತಿಗಳನ್ನು ಛೇದಿಸಿ, ಆತ್ಮತತ್ವವನ್ನು ಶಿವಜ್ಞಾನವೆಂಬಲ್ಲಿ ನಿಲಿಸಿದನು. ಇನಿತನ್ನೂ ಪರಮಯೋಗಾರೂಢದಲ್ಲಿ ಸಮಾಧಾನಕ್ಕೆ ತಂದು, ಅಜ್ಞಾನ ಪ್ರವೇಶವಾಗದ ಹಾಗೆ ಎಚ್ಚತ್ತಿರುವ ಏಕಾಗ್ರಚಿತ್ತಸ್ವರೂಪನು ಆ ಶರಣನು. ಬ್ರಹ್ಮವಿಷ್ಣುರುದ್ರರೆಂಬ ತ್ರಿತತ್ವಗಳ ಗುಣಧರ್ಮಕರ್ಮಗಳನ್ನು ಕೆಡೆಮೆಟ್ಟಿ, ನವದ್ವಾರಗಳ ಬಿರುಕನ್ನು ಬಂಧಿಸಿದನು. ಆಮೇಲೆ ಸುಜ್ಞಾನವೆಂಬ ಶಸ್ತ್ರದಿಂದ ಅತ್ಯಂತ ಸೂಕ್ಷ್ಮತರವೆನಿಸುವ ಸಕಲಕರಣಗಳ್ನು ನಷ್ಟಮಾಡಿ ಆ ಶರಣನೆ ನಿಜವಾಗಿ ಉಳಿದನು.

543. ವಿಪರೀತಚರಿತ್ರದ ಮನೋಮರ್ಕಟನು ಶಿವಯೋಗಿಯನ್ನು ಮನ-ಸ್ವರೂಪವಾಗಿ ಅವಗ್ರಹಿಸಿಕೊಂಡಿತು. ಆಗ ಆ ಮನಸ್ಸಿನ ಗ್ರಾಹಕತ್ವವನ್ನು ಪ್ರಾಜ್ಞನೆಂಬ ಜೀವನು ನಿವೃತ್ತಿಮುಖದಿಂದ ಸಲ್ಲವಿಟ್ಟ(ತಡೆಯಿ)ತು. ಆ ಪ್ರಾಜ್ಞನೆಂಬ ಜೀವನ ಸ್ವರವನ್ನೂ, ಮನವೆಂಬ ಮರ್ಕಟನನ್ನೂ ಮಹಾಜ್ಞಾನವವಗ್ರಹಿಸಿಕೊಂಡು ಶಿವಶರಣನು ಪರಮಸುಖಿಯಾದನು.

549. ಲಿಂಗದಲ್ಲಿ ಐಕ್ಯವಾಗುವ ಭೇದವನ್ನರಿಯದೆ ಎಲ್ಲ ಹಿರಿಯರೂ ಮತಿಗೆಟ್ಟರು. ಹೀಗೆ ನಿಜವನೈದುವ ಯುಕ್ತಿ ಹೀನವಾಗಲು ಅಂತರಂಗದೊಳಗಿರುವ ಪರಶಿವತತ್ವವು ಅಲ್ಲಿಯೇ ಗತವಾಯಿತು. ಬ್ರಹ್ಮತತ್ವಾಂಶಸಂಭೂತವಾದ ಸ್ಥೂಲತನುವಿನೊಳಗೆ ಆ ಶಿವತತ್ವವಡಗಿಹೋಗಲು, ವಿಷ್ಣುತತ್ವಾಂಶಭೂತವಾದ ಸೂಕ್ಷ್ಮತನುವಿನೊ-

ಳಗೆ ಉಪತಾಪಾಗ್ನಿ ಏಕಗ್ರಹಣವಾಯಿತು. ಹೀಗಾಗಲು ಆದಿಶಕ್ತಿ ಪರಾಶಕ್ತಿಗಳೆರಡಕ್ಕೂ ಆ ಲಿಂಗಸಂಗದ ಸಮರತಿ ಘಟಿಸದೆ ಸತಿಪತಿಭಾವ ನಷ್ಟವಾಯಿತು.

550. ಅತೀತ(ಭೂತ)ವನ್ನು, ಅನಾಗತ (ಭವಿಷ್ಯ)ವನ್ನು, ವರ್ತಮಾನವನ್ನು ಬಲ್ಲ ಜ್ಞಾನಿಗಳು ಶರಣನ ಅಂಶೀಭೂತರಾಗಿ ಅವರು ಆತನ ಕರುಣದ ಕಂದಗಳಾಗಿರುವರು. ಅಂತಹ ಮಹಾಶರಣನ ಕಕ್ಷದೊಳಗೆ ಹರಿಬ್ರಹ್ಮಾದಿಗಳಡಗಿರುವರು. ಆ ಪರ ಶಿವತತ್ವದಲ್ಲಿ ಹುಟ್ಟಿದ ಚಿಚ್ಛಕ್ತಿ ಆ ಶಿವತತ್ವಕ್ಕೆ ಮಗಳಾಗಿರುವಳು. ಆ ಚಿಚ್ಛಕ್ತಿಯ ಸಂಗವನ್ನು ಮಾಡುವ ಪುರುಷನೆ ಶರಣ. ಆದ್ದರಿಂದ ಆ ಪರಶಿವತತ್ತ್ವಕ್ಕೆ ಆ ಶರಣನು ಮಗಳ ಗಂಡ.

555. ಸ್ವಾನುಭಾವವಿವೇಕದಿಂದ ಆಚರಿಸುತ್ತಿದ್ದ ಮನವು ತನ್ನ ತಾನರಿತು, ಜ್ಞಾತೃಭಾವವನ್ನು ಮರೆತು, ಜ್ಞಾನಭಾವವನ್ನು ಅರಿತು, ಜ್ಞೇಯವೆಂಬ ಅತೀತಸ್ಥಾನದಲ್ಲಿ ವಿಶ್ರಮಿಸಿತು. ಆಗ ಆ ಮನದ ಪರಿಭಾವವನ್ನು ನಿರೀಕ್ಷಿಸಲೆಂದು ಐದಿದ ಸಕಲ ಕರಣಗಳ ಭಿನ್ನದೃಷ್ಟಿಗಳೆಲ್ಲಾ ನಷ್ಟವಾದವು. ಉಳಿದ ಮಹಾವಿವೇಕವೆಂಬ ನವನೀತವನಾರೋಗಿಸಲು ಇದಮಹಂ ಎಂಬ ಮಥನದಂತಗಳೆಲ್ಲವು ಭಗ್ನವಾದವು.

557. ಜಡರೂಪವಾದ ಕಾಯದ ಮೇಲಣ ಮಾಯೆಯೆಂಬ ಹರಿಣಿಗೆ ಶರಣನೆಂಬ ವ್ಯಾಧನು ಸುಜ್ಞಾನವೆಂಬ ಸರಳನ್ನು ನಿಷ್ಠೆ ಎಂಬ ಬಿಲ್ಲಿನಲ್ಲಿ ಹೂಡಿ ಭಾವವೆಂಬ ನಾರಿಯೊಳಗೆ ಪರಿಪೂರ್ಣವಾಗಿ ಸೆಳೆದು ಪ್ರಯೋಗಿಸಲು, ಆ ಮಾಯಾಮೃಗ ಒಂದೇ ಬಾಣದಲ್ಲಿ ಅಳಿಯಿತು. ಹೀಗಾಗಲು ಆ ಭಾವವೆಂಬ ನಾರಿಯು ಅಳಿದು, ನಿಷ್ಠೆಯೆಂಬ ಬಿಲ್ಲು ವಿಶ್ರಮಿಸಿ, ಆ ಮಾಯಾಮೃಗವೂ ಗತವಾಯಿತು.

560. ಜಡಕಾಯದ ಅಂತರ್ಮುಖದೊಳಗೆ ವಿವೇಕವೆಂಬ ನಾಳವಿರುವುದು. ಆ ನಾಳದಲ್ಲಿ ತನ್ನನ್ನು ತಾನೇ ಕಾಣಬೇಕು. ಆ ತನುಗುಣಗಳನ್ನು ಸೋಕದೆ ಶಾಂತಿಯೆಂಬ ಬಿಂದುವನ್ನು ಅನ್ಯವ ಮಾಡಿ ಪರಿಕಿಸದೆ, ತನ್ನಲ್ಲಿ ತಾನೇ ಪರಮಾನಂದ ಜಲವನ್ನು ಉಂಬುದೇ ಪರಮಶಿವಯೋಗ. ಇಂತಾಗಲು ಆ ದೇಹದೊಳಗಣ ತಮೋಗುಣ ಕರಣ ಗುಣಗಳೆಂಬ ಪ್ರಪಂಚವಳಿದು ಅಳಿಯದೆ, ಲಿಂಗತನುಗುಣಗಳಾಗಿ ಆ ಶರಣನು ತನ್ನಲ್ಲಿ ತಾನೆ ಮಹಾಜ್ಞಾನಾಗ್ನಿಯೊಳಗೆ ಸಮರಸಪಾಕವಾದನು.

561. ಮನಃಪ್ರಕೃತಿ, ಮಾಯಾಪ್ರಕೃತಿ, ಮೂಲಾಹಂಕಾರಪ್ರಕೃತಿಗಳೆಂಬ ಮೂರೂ ಅಳಿದುಳಿದು, ಶಿವಯೋಗಿಯಲ್ಲಿ ವಿವೇಕವೆಂಬ ವೃಕ್ಷ ಉದಯವಾಗಲು, ಅದನ್ನು ಜ್ಞಾನವಿಲ್ಲದ ಮಾಯಾಮೃಗವು ಅವಿಚಾರರೂಪಿಂದ ಬಂದು ತನ್ನ ಸುಖವನ್ನು ಸವಿಯುತ್ತಿತ್ತು. ಆ ಮಾಯೆಯನ್ನು ಶರಣನು ಭಿನ್ನದೃಷ್ಟಿಯಿಲ್ಲದೆ ನೋಡಿ ಕಂಡು, ಭಿನ್ನ ಹಸ್ತವಳಿದು, ಅಭಿನ್ನಹಸ್ತದಲ್ಲಿ ಭಾವವೆಂಬ ಬಿಲ್ಲನ್ನು ತುಂಬಿ ತೆಗೆದು, ಜ್ಞಾನವೆಂಬ ಬಾಣವನ್ನು ಹೂಡಿ, ಕೆಡಹಲು, ಆ ಮಾಯೆಯಳಿದು ವಿದ್ಯಾಶಕ್ತಿಯಾಯಿತು. ಆ ಸದ್ವಿದ್ಯೆಯ ಸುಖವನ್ನು ಉದರಾಗ್ನಿಯರತ ಮಹಾಜ್ಞಾನಾಗ್ನಿಯಲ್ಲಿ ಸಮರಸಪಾಕ ಮಾಡಿ ಮಹಾಲಿಂಗಕ್ಕೆ ನಿವೇದಿಸಿದ.

563. ಪಂಚವಿಂಶತಿತತ್ತ್ವದಲ್ಲಿ ಬದ್ಧರಾಗಿ, ದಶವಾಯುಗಳ ಗುಣಪ್ರಕೃತಿ ವಿಡಿದು ಬಳಲುತ್ತಿರುವುದು ಮನಸ್ಸು. ಆ ಮನವು ತನ್ನಲ್ಲಿ ತಾನೇ ತಿಳಿದು ನೋಡಿ, ತಾನೇ ಪರಶಿವತತ್ತ್ವವೆಂದರಿತಾಗ ಆ ಪರಶಿವತತ್ವದಿಂದ ಉದಿಸಿದಾಕೆ ಚಿಚ್ಛಕ್ತಿ. ಆ ಚಿಚ್ಛಕ್ತಿ

ಯಿಂದ ಉದಯಿಸಿದಾತನೆ ಶರಣ. ಅದು ಕಾರಣ ಆ ಶರಣನು ಪರಶಿವತತ್ತ್ವದ ಮಗಳ ಮಗನಾಗಿ, ಆ ಶಿವತತ್ವಕ್ಕೆ ಮೊಮ್ಮಗನಾಗಿ, ಆ ಪರಿಪೂರ್ಣವಿವೇಕವೆಂಬ ನವನೀತವನ್ನು ದಣಿಯುಂಡು ಪರಮಸುಖಸ್ವರೂಪನಾಗಿದ್ದ.

566. ಪಿಂಡದೊಳಗೆ ಅನಂತಲೋಕಗಳಡಗಿರುವವು (ಪಿಂಡಬ್ರಹ್ಮಾಂಡ ಯೋರೈಕ್ಯಂ). ಆ ಲೋಕಪ್ರಪಂಚಗಳು ಮಹಾಜ್ಞಾನಾರೂಢರನ್ನು ಮುಸುಕಲಮ್ಮದೆ ಹೋದವು. ಜ್ಞಾನಾಜ್ಞಾನಸಂಬಂಧಗಳು ಆ ಜ್ಞಾನಿಗಳನ್ನು ನುಂಗಿಕೊಂಡಿರುವವು. ಇದ-ನರಿತ ಶರಣನು ವಿವೇಕವೃಕ್ಷದ ಸ್ವರೂಪಾಗಿ ಚರಿಸುತ್ತಿರಲು ಸಂಸಾರಸಾಗರದ ಭವ-ಮುಖಘಾತಗಳಳಿದವು. ಹೀಗೆ ಸಂಸಾರವಳಿದ ಅಂತರಂಗದಲ್ಲಿ ನಿರುಪಾಧಿಕಜ್ಞಾನದ ಎಚ್ಚರಿಂದ ಸರ್ವಾಂಗವು ಭಿನ್ನವಾಗದೆ ಲಿಂಗಾಂಗನಾಗಲು ಚಿತ್ತೆಂಬ ಶಕ್ತಿಯಲ್ಲಿ ಸಮರಸಸಂಗ ಮಾಡಿ, ಗಗನವೆಂಬ ಆತ್ಮತತ್ವವನ್ನು ಪರಿಪಾಕ ಮಾಡಿ, ಮಹಾಲಿಂಗ-ಮುಖಕ್ಕೆ ಸಮರ್ಪಿಸಿ ಸುಖಿಯಾಗಿರುವನು.

568. ಲಿಂಗಾನುಭಾವದಲ್ಲಿ ಸಂಪನ್ನನಾದ ಶರಣನು ತನ್ನ ಜ್ಞಾನಾಗ್ನಿಯಲ್ಲಿ ಆಧಾರಶಕ್ತಿಯಾದ ಚಿಚ್ಛಕ್ತಿಯನ್ನು ಪರಮಾನಂದರಸಮಯವಾಗುವ ಹಾಗೆ ತಿಳಿಯಾಗಿ ಕಾಸಿ, ಜಗಕ್ಕೆ ಗುರುಸ್ವರೂಪಿಯಾದ ಪರಾಶಕ್ತಿಯನ್ನು ಪ್ರಸಿದ್ಧಮುಖಕ್ಕೆ ತಂದು ಪದಾರ್ಥವನ್ನಾಗಿ ಮಾಡಿ, ಆ ಸ್ವಯಂಪ್ರಕಾಶವಾದ ಬೋನಕ್ಕೆ ಆ ಶರಣನು ತನ್ನ ಭಕ್ತಿ ಪಿಂಡವೆಂಬ ಪದಾರ್ಥವನ್ನು ಸಮರಸಪಾಕ ಮಾಡಿ, ಆ ಪದಾರ್ಥದೊಳಗೆ ಪರಶಿವತತ್ವ ವನ್ನು ಒಡಗಲಸಿ, ಬ್ರಹ್ಮಾಂಶವಾದ ಸ್ಥೂಲತನುವೆಂಬ ಅಡ್ಡಣಿಗೆಯ ಮೇಲೆ ಇಟ್ಟನು. ವಿಷ್ಣ್ವಂಶವಾದ ಕಾರಣತನುವನ್ನು ಶುದ್ಧ ಬೋನವನ್ನಾಗಿ ಮಾಡಿ ಆ ಹರಿವಾಣದಲ್ಲಿ ತುಂಬಿದ. ಆ ಸಕಲ ಪದಾರ್ಥಗಳನ್ನೂ ಹಿಡಿದು, ಅಲ್ಲಿ, ಮಹಾನುಭಾವವೆಂಬುದು ಈಶ್ವರತತ್ವಾಂಶವಾದ ಕಾರಣ, ಆ ವಿವೇಕವೆಂಬ ಮೇಲೋಗರವನ್ನು ಬಡಿಸಿದನು. ಸದಾಶಿವತತ್ತ್ವವೇ ತೃಪ್ತಿಸಾಧನವಾದ ಕಾರಣ, ಆ ತೃಪ್ತಿಯನ್ನೇ ಅಭಿಗಾರ(ತುಪ್ಪ)ವಾಗಿ ಬಡಿಸಿದನು. ಇಂತಹ ಸ್ವಯಂಪ್ರಕಾಶಪದಾರ್ಥವನ್ನು ಆ ಶರಣನು ಶರಣಮುಖ-ಲಿಂಗಕ್ಕೆ ಸಮರ್ಪಿಸಿ, ಪ್ರಸನ್ನಪರಿಣಾಮವನೆಯ್ದಲು, ಅಲ್ಲಿ ಭೋಕ್ತೃವ್ಯವನುಂಬ ಹಸ್ತವು ಲಯವಾಗಿ, ಗಮನವೆಂಬ ಚರಣವು ನಷ್ಟವಾಗಿ ನಿರ್ಗಮನಿಯಾಗಿದ್ದನು.

570. ತನುತ್ರಯಗಳಿಗೆ ಆಧಾರಕರ್ತೃವಾದ ಅಹಂಕಾರದಲ್ಲಿನ ದಶನಾಳ ಗಳೊಳಗೆ ದಶವಾಯುಗಳು ತಲೆದೋರಿರುವವು. ಆ ದಶವಾಯುಗಳ ಸಂಚದ ಭೇದವ-ನೆಲ್ಲರು ಹೇಳುತ್ತಿರುವರು. ಶರಣನು ಆ ದಶವಾಯುಗಳ ಸಂಚವನ್ನು ಕೆಡಿಸಿ, ಜ್ಞಾನಾ-ಮೃತರಸದಲ್ಲಿ ಸರ್ವಾಂಗವನ್ನೂ ಸಮರಸಪಾಕಮಾಡಿ ಆರೋಗಣೆ ಮಾಡಿದನು. ಆ ಆನಂದದಿಂದ ತನ್ನನ್ನು ತಾನೇ ಶಿವನೆಂದರಿತು ತನ್ನನ್ನು ತಾನೇ ಸ್ತುತಿಸುತ್ತಿದ್ದನು. ಇಂತಹ ರಾಜಯೋಗಿಯು ಸಗುಣಯೋಗದ ಅಗ್ನಿಮಂಡಲದ ಮೇಲಣ ತ್ರಿಕೋಣ ಮಂಡಲವೆಂಬ ಕುಂಡಲಿಯ ಮೇಲೆ ಕುಳಿತಿದ್ದು, ಊರ್ಧ್ವಚಕ್ರವೆಂಬ ಇಂದ್ರಿಯಪುರ ದಲ್ಲಿ ಅನುಭಾವ ಸೂತ್ರವನ್ನು ಸಂಬಂಧಿಸಿ, ಅಲ್ಲಿರುವ ಅಮೃತಾಹಾರವನ್ನು ಆರೋಗಿಸಿ, ಸಗುಣ ನಿರ್ಗುಣಯೋಗಗಳೆರಡರಲ್ಲಿಯೂ ಸುಖಿಯಾಗಿ ಅಖಂಡಪರಿಪೂರ್ಣವಾಗಿದ್ದನು.

572. ಲಿಂಗದಲ್ಲಿ ಸರ್ವಾಂಗವೂ ಅರ್ಪಿತವಾದ ಶರಣನಿಗೆ ಅಂತರಂಗ ಬಹಿರಂಗಗಳೆರಡರಲ್ಲೂ ನಿರ್ವಯಲೆ. ಭಕ್ತಿಸ್ಥಲವೆಂಬ ಹೊಲದಲ್ಲಿ ಲಿಂಗವೆಂಬ ತಾಯಿ

ಯಿದ್ದು, ಅಂತರಂಗದಲ್ಲಿ ಶರಣನೆಂಬ ಶಿಶುವಿದ್ದು, ಆ ತಾಯಿ ಆ ಶಿಶುವಿಗೆ ಪರಿಣಾಮವೆಂಬ ಹಾಲನ್ನು ಇದಿರಿಟ್ಟು ಊಡಲಿಲ್ಲ. ಅಂಗದ ಗುಣಧರ್ಮ ಕರ್ಮಗಳನ್ನು ನಿರ್ಬಂಧದಿಂದ ಭಿನ್ನ ಮಾಡದೆ, ಆ ಅಂಗುಗುಣಗಳನ್ನೇ ಲಿಂಗಗುಣಗಳನ್ನಾಗಿಸಿ, ಆ ಲಿಂಗಕಾಯದೊಳಗಿರುವ ಪರತತ್ವವೆಂಬ ನಿರ್ಬೀಜವನ್ನು ಒಡೆಯದೆ ತನ್ಮಯಾರ್ಪಣ ಮಾಡಿಕೊಳ್ಳಬಲ್ಲಾತನೇ ಅಚ್ಚ ಪ್ರಸಾದಿ.

576. ಆತ್ಮತತ್ತ್ವ ತಾನೆಂಬ ಅಹಂಕಾರವಿಲ್ಲದ ಶಿವೋಹಮೆಂಬ ಮೇರುವನ್ನೂ, ಭವವೆಂಬ ಸಮುದ್ರವಿಲ್ಲದ ಮಹಾಘನಗಂಭೀರದ ಅಖಾತವನ್ನೂ, ವೃತ್ತಿಜ್ಞಾನದಿಂದ ಅರಿತು, ನೆಲೆಗೊಳಿಸದೆ, ನಿಜಯುಕ್ತಿಸಾಧನದಿಂದ ಅಳವಟ್ಟು, ನಿಜ ನಿಂದಿತ್ತು. ಉಪಾಧಿಯಿಲ್ಲದ ಸ್ವಯಂಪ್ರಕಾಶವೆಂಬ ಪದಾರ್ಥವನ್ನು ಅಕಾಯವೆಂಬ ಹರಿವಾಣದಲ್ಲಿ ಬಡಿಸಿ, ಆ ಪದಾರ್ಥವನ್ನು ಭಿನ್ನರುಚಿಯಿಂದ ಭೋಗಿಸದೆ, ಆ ಸುಖಸ್ವರೂಪ ತಾನೇ ಆಗಿ ಭೋಗಿಸಿ ನಿತ್ಯನಾಗಬಲ್ಲನಾದರೆ ಅವನೇ ಅಚ್ಚ ಪ್ರಸಾದಿ. ಇಂತಹ ನಿಷ್ಕ್ರಿಯಾಜ್ಞಾನದ ಸಹಜ ಸಮರಸ ಸದ್ಭಕ್ತಿಯಿಂದ ಆಯತಸ್ವಾಯತವೆಂಬ ಭಿನ್ನಭಾವಗಳಳಿಯುವವು.

581. ಜ್ಞಾನವನ್ನರಿಯುವ ವೃತ್ತಿಜ್ಞಾನ್ದದ ಮೇಲೆ ಮಹಾಜ್ಞಾನವಿತ್ತು. ಆ ಮಹಾಜ್ಞಾನವನ್ನು ತಾನೆಂದು ನೆರೆಯರಿಯಲು, ಜ್ಞಾನ–ವೃತ್ತಿಜ್ಞಾನವೆಂಬೆರಡನ್ನೂ ಆ ಮಹಾಜ್ಞಾನವವಗ್ರಹಿಸಿತು. ಹೀಗೆ ತಾನಳಿದು ತಾನುಳಿದು ಪರಮಾಮೃತವನ್ನಾರೋಗಿಸಿ ಸುಖಿಯಾಗಬೇಕು. ದೇಹವು ನಿರ್ವಯಲಾಗುವ ಸಂಚವನ್ನರಿತರೆ ಅದೇ ಯೋಗ. ಹೀಗೆ ತಾನು ತಾನಾದ ಅರಿವಿನ ತೃಪ್ತಿಯು ಶಿಶು ಕಂಡ ಕನಸಿನ ಹಾಗೆ ಅನಿರ್ವಾಚ್ಯವಾಗಿರುವುದು.

583. ಅನುಭಾವ ಮುಖದಿಂದ ತತ್ವವನ್ನರಿಯುವ ವೇಧೆಯುಂಟಾಗಿದ್ದರೂ, ತನ್ನನ್ನು ತಾನೆಚ್ಚರಿಸುವ ಶಕ್ತಿಯಿಲ್ಲ. ಇದು ಕಾರಣ ಸಾವನ್ನಕ್ಕರ ಸರವ ಮಾಡಲಿಲ್ಲ. ತನ್ನ ಸ್ವರೂಪಜ್ಞಾನರತ್ನವು ಭಿನ್ನವಾಗಿ ತನ್ನಿಂದನ್ಯವಾದರೆ, ತಾನೇ ಅರಸಿ ನೋಡಿ, ಧರಿಸಿ ಸುಖಿಯಾಗುವುದಲ್ಲದೆ, ಅದನ್ನು ಇದಿರಿಗೆ ತೋರಿ ಮಾರುವುದು ಕ್ರಮವಲ್ಲ. ಆಧಾರಶಕ್ತಿಯೊಳಗೆ ಕುಂಡಲಿಯ ಸರ್ಪನಡಗಿ, ಸಗುಣಯೋಗವನ್ನು ಮೀರಿ, ಲೋಕಗಳೆಲ್ಲವನ್ನು ಆ ಪ್ರಭೆ ನುಂಗಿತ್ತು. ಇದೇ ಸಗುಣ ನಿರ್ಗುಣವೆಂಬುಭಯುವೂ ಏಕರಸವಾದ ಪರಮರಾಜಯೋಗ.

584. ['ನುಂಗಿ' ಎಂಬ ಪದವು 'ನುಂಗಿತು' ಎಂದಿದ್ದರೆ ವ್ಯಾಖ್ಯಾನಕ್ಕೆ ಹೊಂದಿಕೊಳ್ಳುವುದು. ಆದರೆ ಅದಕ್ಕೆ ಆ ಪಾಠಾಂತರವೆಲ್ಲೂ ಸಿಗುವುದಿಲ್ಲ. "ಅಣುಮಾದಿ" ಎಂಬುದನ್ನು "ಅಣಿಮಾದಿ" ಎಂದೋದಿಕೊಳ್ಳಿ.] ಪರಮಾತ್ಮಸ್ವರೂಪ ತಾನೆಂದರಿಯದೆ, ಮತಿಯ ಬಲುಮೆವಿಡಿದು, ಆತ್ಮನ ನಿಲವನರಿತಿರುವೆನೆಂಬುದೆಲ್ಲವು ಮಾತಿನ ಮಥನವಲ್ಲದೆ ನಿಜವಲ್ಲ. ಅದೇನು ಕಾರಣವೆಂದರೆ, ಆ ಮಾತು ಪರಮಾತ್ಮತತ್ವವೆಂಬ ಜ್ಞಾನರತ್ನವನ್ನು ನುಂಗಿ ಉಗುಳದೆ ಇರುವುದು. ಇದರ ಸಕೀಲಸಂಬಂಧವನರಿತು, ಜಾತಿವರ್ಣ ಆಶ್ರಮನಾಮಗೋತ್ರಗಳನ್ನು ತ್ಯಜಿಸಿ, ವ್ರತನೇಮ ಉಪವಾಸಗಳನ್ನು ತೊರೆದು, ಉಳಿದ ಚಿದ್ವಿಭೂತಿಯನ್ನು ಧರಿಸಲು, ಅಣಿಮಾದಿಗಳನ್ನು ಒಲ್ಲದಿರಲು, ಸಕಲಭ್ರಾಂತಳಿದು, ಪರಂಜ್ಯೋತಿಯಾಗಿ ಆ ಶರಣನು ತೊಳಗಿ ಬೆಳಗುತ್ತಿರುವನು.

585. [" ಆಗಲಿಲ್ಲ " ಎಂಬುದನ್ನು " ಆಗಲಲಿಲ್ಲ " ಎಂದು ಓದಿಕೊಳ್ಳಿ.]

586. ಚತುರ್ದಶ ಲೋಕಗಳೆಲ್ಲ ಒಂದು ಪಿಂಡದಲ್ಲಿ ಅಡಗಿರುವ ಭೇದವನ್ನರಿತು, " ಸರ್ವಂ ಖಲ್ವಿದಂ ಬ್ರಹ್ಮ" ಎಂಬ ವಿಕಾರದಿಂದ ಆ ಭುವನಗಳನ್ನು ನಿವೃತ್ತಿ ಮಾಡಿ, ದಶವಾಯುಗಳ ಸಂಚವನ್ನು ಇಲ್ಲವಾಗಿಸಿದರೆ ಅದೇ ಪರಮಯೋಗ, ಆಮೇಲೆ ಅಂತಃಕರಣಚತುಷ್ಟಯಗಳ ಮಧ್ಯದಲ್ಲಿಯೇ ಏಕರಸವಾಗಿರುವ ಪರಮಚೈತನ್ಯಾತ್ಮನ ಸ್ವರೂಪವನ್ನರಿಯಬೇಕು. ಅಭೇದ್ಯಬದ್ಧಿಯು ಅಜ್ಞಾನದಲ್ಲಿರುವ ಭುವನಗಳನ್ನು ಅವಗ್ರಹಿಸಿ, ಮಹಾಜ್ಞಾನರತ್ನವನ್ನು ನುಂಗಿ, ತನ್ನ ನಿಲವನ್ನು ವಾಕ್ಯಕ್ಕೆ ತಾರದೆ ಅನಿರ್ವಾಚ್ಯವಾಗಿದ್ದಿತು.

588. ಶಿವಯೋಗಸಾಧನಸಂಪತ್ತಿಯಿಂದ ಕುಂಡಲಿಯನ್ನು ಬಲಿದೆತ್ತಲು, ಆ ಕುಂಡಲಿಯ ಸರ್ಪನು ಸುಷುಮ್ನಾನಾಳವನೆಯ್ದಿ, ಬ್ರಹ್ಮರಂಧ್ರದಲ್ಲಿ ವ್ಯೋಮಚಕ್ರವನವಗ್ರಹಿಸಲು, ಅದೀಗ ಆಕಾಶವ ನುಂಗಿದ ಸರ್ಪ. ಆ ಸರ್ಪದ ಶಿರಸ್ಸಿನಲ್ಲಿರುವ ಸುಜ್ಞಾನರತ್ನದೊಳಗಣ ಪರಮಶಾಂತಿಯೆಂಬ ಬಿಂದುವು ಅಗ್ನಿವಾಯುಗಳ ಸಂಚದಿಂದಾದ ತನುಗುಣವನವಗ್ರಹಿಸಿತ್ತು. ಆ ಮೇಲೆ ಆ ಪರಮಶಾಂತಿಯ ನಿಲವಿನಲ್ಲಿರುವ ನಿರವಯಜ್ಞಾನವು ತನುತ್ರಯಗಳೆಂಬ ಸ್ಥಾನಗಳಲ್ಲಿ ಪ್ರವೇಶಿಸಿ, ಪರಿಪೂರ್ಣಾಮೃತವನ್ನು ತುಂಬಿಕೊಂಡು ಸುಖಿಸುವ ಶರಣನಲ್ಲಿ ಕರತಲಾಮಲಕವಾಗಿತ್ತು. ಇಂತಹ ಅಕಾಯನಾದ ಶರಣನು ಮೃತನಾದರೆ ಜವನೊಯ್ದನೆಂಬುದು ಮಿಥ್ಯೆ.

590. ಆತ್ಮತತ್ತ್ವದ ನಿರ್ಬೀಜಸ್ಥಲವು ಜ್ಞಾನಾಗ್ನಿಯಲ್ಲಿ ಸಂಪರ್ಕವಾಗಲು ಅನಾತ್ಮತತ್ವವಾಸನೆಯಳಿದು ಮಹಾನುಭಾವವಿವೇಕವಂಕುರಿಸಿತು....

592. ದಶವಾಯುಗಳಿಂದ ಬದ್ಧವಾದ ದೇಹವೆಂಬ ವೃಕ್ಷದಲ್ಲಿ ದಶನಾಳಗಳೇ ಶಾಖೆಗಳು. ಆ ದಶನಾಳಗಳೆಂಬ ಶಾಖೆಗಳೊಳಗೆ ಪ್ರಾಣವಾಯು ದಶಮುಖಪ್ರಪಂಚವನೆಯ್ದಿರುವುದಾಗಿ, ಆ ಪ್ರಪಂಚುಗಳೆ ಪರ್ಣಗಳು. ಆ ಪ್ರಪಂಚುಗಳೊಳಗೆ ದಶೇಂದ್ರಿಯವಾಸನೆಯೆಂಬ ಪುಷ್ಪಗಳು ವಿಕಸಿತವಾಗಿರುವವು. ಆ ಹತ್ತು ವಾಯುಗಳ ಸಂಚವನ್ನು ಕೆಡಿಸಿ, ಹತ್ತು ನಾಳಗಳ ಮೂಲಪ್ರಕೃತಿಗುಣದಶಕವನ್ನು ನಾಶಪಡಿಸಿ, ಘನದಲ್ಲಿ ವೇದ್ಯವಾಗಲು, ಆ ಧಶೇಂದ್ರಿಯಗಳೂ, ಆ ದಶೇಂದ್ರಿಯದೊಳಗಿರುವ ದಶವಿಷಯಗಳೂ ಆಚಾರಲಿಂಗದಲ್ಲಿ ಸಮರಸವಾದವು.

596. ಲಿಂಗದಲ್ಲಿ ಅವಿರಳಸಂಬಂಧಿಯಾದ ಶರಣನು ಆ ಲಿಂಗಸಂಗದ ಸುಖವನ್ನು ತೋರಿ, ದರ್ಶನವ ಮಾಡಿ ನುಡಿಯಲಿಲ್ಲ. ಆ ಶರಣನ ಕರಣಗಳೆಲ್ಲವನ್ನು ತಾನೇ ಲಯವನ್ನೈದಿಸಿರುವ ಮಂತ್ರಶಕ್ತಿಯ ಆಧಾರಸ್ಥಲವೆಂಬ ಅಂತರದೊಳಗೆ ಪರಮಾಮೃತಕೂಪವಿರುವುದು. ಅದರಲ್ಲಿ ಕುಂಡಲಿಯ ಸರ್ಪವಿರುವುದು. ಆ ಸರ್ಪನು ಪರಮಾನಂದವೆಂಬ ಸಿದ್ಧರಸವನ್ನು ಅವಗ್ರಹಿಸಿ ಲೀಲೆಯಲ್ಲಿ ಓಲಾಡುತ್ತಿತ್ತು. ಪರಮಹಂಸನು (ಆತ್ಮನೆಂಬ ಆಕಾಶದಲ್ಲಿ ಸ್ವಲೀಲಾಪರನಾಗಿರುವ ಕಾರಣದಿಂದ ಆ ಹೆಸರು) ಬ್ರಹ್ಮರಂಧ್ರದಲ್ಲಿ ಮಹಾಜ್ಞಾನರತ್ನವನ್ನು ಕಂಡೆನೆಂದು ಇದಿರಿಟ್ಟುಕೊಂಡು, ಸ್ವಪ್ನಭಾವದ ಹಾಗೆ ನುಡಿಯುವ ಮಾತಿಗೆ ಶರಣನ ನಿಲವು ಕಾಣಬಾರದು.

602. ಜ್ಞಾನದ ಖಂಡಿತಭಾವವು ಹರಿಹಂಚಾಗಿಹೋಯಿತು. ಹೀಗೆ ಖಂಡಿತಜ್ಞಾನವು ಜೀರ್ಣವಾಗಲು, ನಕ್ಷತ್ರಲಕ್ಷಣವುಳ್ಳ ಕಣ್ಣುಗಳ ನಾಳದ ಸೂಕ್ಷ್ಮತೇಜಸ್ತತ್ವವು ಆತ್ಮತತ್ವವನ್ನು ಅವಗ್ರಹಿಸಿ, ಆತ್ಮತತ್ವವು ಮಹಾಜ್ಞಾನದೃಷ್ಟಿಯೊಳಗೆ ಲಯವಾಗಲು

ಅರಿವು ಮರವೆಗಳೆರಡೂ ಅಲ್ಲಿಯೇ ಅಳಿದವು. ತತ್ಫಲವಾಗಿ ಮನೋಲಯವಾದ ಶರಣನು ಸಕಲಚೈತನ್ಯಾತ್ಮವನ್ನು ಧರಿಸಿಕೊಂಡು ಸಮರಸವನ್ನು ಪಡೆದನು.

605. ಶಿವೋಽಹಮೆಂಬ ಅಹಂಕಾರಸ್ವರೂಪವಾದ ಮಹಾಜ್ಞಾನಾಗ್ನಿಯ ಮಹದಹಂಕಾರದ ಗಿರಿಯ ಅತ್ಯತಿಷ್ಠದ್ದಶಾಂಗುಲಸ್ಥಾನದಲ್ಲಿ ಆ ಶರಣನ ಭಾವವೆಂಬ ಸ್ತಂಭವಿರುವುದು. ಆ ಭಾವಸ್ತಂಭದ ಮೇಲೆ ಪರಮಹಂಸನೆಂಬುದೊಂದು ತತ್ತ್ವ ತೋರುವುದು. ಆ ಮಹಾಜ್ಞಾನಾಗ್ನಿಯೊಳಗೆ ಆ ಭಾವವನ್ನೇ ದಗ್ಧ ಮಾಡಲು, ಆ ಭಾವ ನಿರ್ಭಾವವಾಗಿ, ಇದಿರಿಟ್ಟು ತೋರುವ ಪರಮಹಂಸನು ನಿರ್ವಯಲಾಯಿತು.

616. ತೃಣಕಾಷ್ಠದೊಳಗೆ ಅಗ್ನಿಯಿದೆ. ಶಿಲಾಜಡದೇಹಕ್ಕೆ ಮೂಲಾಹಂಕಾರವೆ ಬೀಜ. ಮನಸ್ಸನ್ನು ಮಾಯೆಯು ನೆಳಲಂತೆ ಬೆಂಬಿಡದಿರುವುದು. ಪ್ರಾಣವಾಯುವನ್ನು ಕಟ್ಟಿ ಸುತ್ತಿಕೊಂಡಿರುವುದು ಭವಪಾಶ. ಅಗ್ನಿಗುಣಸಂಬಂಧವಾದ ದೇಹದಲ್ಲಿ ಹುಟ್ಟಿದ ಸಂಸಾರರಸವೇ ಅಗ್ನಿಯ ಹಗಿನು. ತಾಪತ್ರಯದ ತಿಗ್ಮ : ಇವನ್ನು ಅರಿತು ನಿವೃತ್ತಿ-ಮಾಡಿ, ಅವಶೇಷಿಸಿ ಇರುವ ತನ್ನ ಸ್ವಯಂಪ್ರಕಾಶವನ್ನು ತಾನೇ ಅರಿಯಬೇಕು.

617. ಲಿಂಗದ ಮತ್ತು ತನ್ನ ಸಾಮರಸ್ಯವನ್ನರಿಯದೆ ಲಿಂಗೈಕ್ಯವನ್ನು ಸಾಧಿಸುವೆನೆಂಬುದು ಸಾಧ್ಯವಿಲ್ಲ. ಇದನತಿಗಳೆದ ಯೋಗವೆಂತೆಂದರೆ : ದೇಹದ ದುಃಕೃತಿ-ಯನ್ನು ಹಿಂಗಿಸಲು, ಅಲ್ಲಿ ಕರ್ಮಜ್ಞಾನ, ಭಕ್ತಿಜ್ಞಾನ, ಮಹಾಜ್ಞಾನವೆಂಬ ಮೂರು ರತ್ನಗಳು ಇವೆ. ಕರ್ಮಜ್ಞಾನವನ್ನು ಹಿಡಿದಾತನು ಭವಭಾರಕ್ಕೊಳಗಾದ ; ಭಕ್ತಿಜ್ಞಾನವನ್ನು ಬಳಸಿದಾತ ಮೂರು ಲೋಕಕ್ಕೆ ಪೂಜ್ಯನಾದ : ಮಹಾಜ್ಞಾನವನ್ನು ಬಳಸಿದಾತನು ಶಿವತತ್ವಸ್ವರೂಪನು ತಾನೆಯಾಗಿ ಉಪಮಾತೀತನಾದ.

618. ತನುವಿನ ಮೇಲೆ ಜೀವಾತ್ಮ, ಅಂತರಾತ್ಮ, ಪರಮಾತ್ಮ ಎಂಬ ತ್ರಿವಿಧ ಭಾವನೆಗಳುಂಟು. ಅಲ್ಲಿ ಜೀವಾತ್ಮಭಾವಿಯಾಗಿದ್ದಾತ ಶರೀರ ಬದ್ಧನಾಗಿದ್ದ ; ಅಂತ-ರಾತ್ಮಭಾವಿಯಾಗಿದ್ದಾತ ತನ್ನ ಸ್ವರೂಪನರಿಯನಾಗಿ ಜನನ ಮರಣಗಳಿಗೆ ಒಳಗಾದ. ಪರಮಾತ್ಮಭಾವಿಯಾಗಿದ್ದಾತ ಜೀವನ್ಮುಕ್ತನಾದ. ಹೀಗೆ ಆತ್ಮತ್ರಗಳನ್ನು ಭಾವಿಸಿ ಭಿನ್ನ ನಾಗದೆ, ನಿರ್ಭಾವಿಯಾಗಿ ತಾನೆ ಪರಬ್ರಹ್ಮಸ್ವರೂಪಾಗಿರುವಾತನೇ ಶರಣ.

619. ಒಬ್ಬ ಜೀವನ ಉದರದಲ್ಲಿ ಅಜ್ಞಾನದಲ್ಲಿ ಇರುವ ವಿಶ್ವ–ತೈಜಸ–ಪ್ರಾಜ್ಞ ಎಂಬ ಜೀವತ್ರಯಗಳು ಹುಟ್ಟಿದವು. ಈ ಭೇದವನ್ನು ಗಮನಿಸಿ, ಅತ್ಯಂತ ಆರೂಢ-ಜ್ಞಾನವನವಧರಿಸಲು, ಆ ಜ್ಞಾನದೊಳಗೆ ಅಜ್ಞಾನವೆಂಬ ಕತ್ತಲೆಯಳಿಯಿತು. ಅಹಂಕಾರದ ಗಿರಿಯನ್ನು ಶುಭ್ರವರ್ಣವುಳ್ಳ ಪರಮಹಂಸನೆಂಬ ತತ್ತ್ವವವಗ್ರಹಿಸಿತು. ಪರಮಹಂಸ-ನೊಳಗೆ ಅಹಂಕಾರವಳಿದು, ಜ್ಞಾನಾಗ್ನಿಯಿಂದ ಸರ್ವಾಂಗವು ದಹನವಾಗಲು, ಶರಣನು ನಿಜತತ್ತ್ವಸಮಾಧಿಯಲ್ಲಿ ಎಚ್ಚತ್ತು ಸ್ವಸ್ಥನಾಗಿ ಕುಳಿತಿರುವನು. ಹೀಗೆ ನಿಜಸಮಾಧಿಯಲ್ಲಿ ಹಿಡಿಕಟ್ಟನೊಳಗಾದ ಪರಬ್ರಹ್ಮವು ತನ್ನಲ್ಲಿ ಇದಿರಿಟ್ಟು ತೋರದೆ ನಿರ್ವಯಲಾಯಿತು.

628. ಶರಣಸತಿಗೂ ಲಿಂಗಪತಿಗೂ ಸಂಗಸಮರತಿಯಾಗುವ ಕಾಲವೇ ವಿವಾಹ. ಆಗ ಇಚ್ಛಾ, ಕ್ರಿಯಾ, ಮಂತ್ರ, ಆದಿ, ಪರಾ, ಚಿತ್ ಎಂಬ ಷಡುಶಕ್ತಿಯರು ಆ ಸಂಗಕ್ಕೆ ಅನುಕೂಲೆಯರಾಗಿ, ಸುಜ್ಞಾನಾಗ್ನಿಯನ್ನೇ ಮುಡಿದು, ಚಿದ್–ಬ್ರಹ್ಮಾಂಡ ದಲ್ಲಿ ಹುಟ್ಟಿದ ಸುಜ್ಞಾನಕ್ರಿಯೆಗಳೆಂಬ ಅಂಗಲೇಪನವನ್ನು ಮಾಡಿಕೊಂಡು, ಆ ಶರಣ-ನಲ್ಲಿ ಏಕರಸಭಾವವನ್ನೆಯ್ದುವುದಕ್ಕೆ ಉದ್ಯುಕ್ತನಾಗುತ್ತಿರುವನು. ಆಗ ಮನವನ್ನು

ಪರಮಾನಂದ ರಸವಾಗುವಂತೆ ಆ ಜ್ಞಾನದಿಂದ ಪಾಕಮಾಡಿ, ಆ ವಸ್ತುವಿನಲ್ಲಿ ಸಮವೇಧಿಸಲು, ಸತಿಭಾವವೂ ಇಲ್ಲದೆ, ಪತಿಭಾವವೂ ಇಲ್ಲದೆ, ಆ ಸಂಯೋಗಸಂಬಂಧವೇ ಸಮರತಿಯಾಗಿ, ತನ್ನ ನಿಜವು ತನ್ನಲ್ಲಿ ಗರ್ಭೋತ್ಪತ್ತಿಯಾಯಿತು. ತನ್ನಲ್ಲಿ ಹುಟ್ಟಿದ ನಿಜದ ನಿಲವು ಸ್ವಲೀಲಾಪರವನೆಯ್ದಿ, ಪರಮಾನಂದದಲ್ಲಿ ಓಲಾಡಿ, ಚಿಚ್ಛಕ್ತಿಯನವಗ್ರಹಿಸಿ ನಿಂತಿತು. ಆ ನಿಲವನ್ನು ಬ್ರಹ್ಮಾದಿಗಳೂ ಅರಿಯರು.

629. ಶರಣನಲ್ಲಿ ಲಿಂಗೈಕ್ಯವಾಗಲು, ಆ ಶರಣನು ಆ ಲಿಂಗವನ್ನು ಶರಣಮುಖಲಿಂಗವಾಗಿ ಧರಿಸಿ, ಲಿಂಗಶರಣ ಶರಣಲಿಂಗವೆಂಬ ದ್ವೈತಭಾವವನ್ನು ಮಹಾಜ್ಞಾನಾಗ್ನಿಯಿಂದ ದಹನಮಾಡಿ, ಜ್ಞಾತೃಜ್ಞಾನಗಳೆರಡೂ ಏಕರಸವಾಗಲು, ಶರಣಸತಿ ಲಿಂಗಪತಿ ಎಂಬ ಭಾವ ಕೈಗೂಡದ ಮುನ್ನವೆ, ಉಭಯವು ನಾಸ್ತಿಯಾಯಿತು. ಹಸೆ ಎಂದರೆ ಸದಾಚಾರ; ಅದು ಇದ್ದಂತೆ ಇತ್ತು. ಆದರೆ ಆ ಲಿಂಗವೆಂಬ ಭಾವವಳಿದು ನಿರ್ಭಾವ ಉಳಿಯಿತು.

630. ಆಚಾರದ ಚರ್ಯವರತು ಸುಜ್ಞಾನಪರಿಪೂರ್ಣವಾದ ಚಿದ್ಗುರುವಿಗೆ ವೃತ್ತಿಜ್ಞಾನವಿಲ್ಲದ ಅಖಂಡಜ್ಞಾನವುಳ್ಳ ಶಿಷ್ಯ. ಹೀಗೆ ಆಚಾರವಳಿದು ನಿರ್ಗಮನಿಯಾದ ಗುರುವಿನಲ್ಲಿ ಭಿನ್ನವ್ರತನಿಯಮಗಳಳಿದು ನಿಸ್ತರಂಗಯುಕ್ತನಾದ ಶಿಷ್ಯ. ಈ ಗುರು ಶಿಷ್ಯರೆಂಬ ಎರಡು ಭಾವವು ಸಮರಸವಾಗಿ ಪರಬ್ರಹ್ಮದಲ್ಲಿ ಐಕ್ಯವಾಗುವುದನ್ನು ಕಾಣಬಹುದು.

631. ಸುಚಿತ್ತಕಕ್ಷದಲ್ಲಿ ಆಚಾರಲಿಂಗ, ಸುಬುದ್ಧಿಕೃತನಿಶ್ಚಯಹಸ್ತದಲ್ಲಿ ಗುರುಲಿಂಗ, ಅಹಂಕಾರಮಸ್ತಕದಲ್ಲಿ ಶಿವಲಿಂಗ, ಅಂತರಂಗದ ಅಮಳೋಕ್ಯದಲ್ಲಿ ಜಂಗಮಲಿಂಗ, ಸದಾಶಿವತತ್ತ್ವದಲ್ಲಿ ಪ್ರಸಾದಲಿಂಗ, ಉಪಮಾತೀತತತ್ವದಲ್ಲಿ ಮಹಾ ಲಿಂಗ; ಈ ಆರು ತತ್ವಗಳೊಳಗೆ ಷಡುಲಿಂಗಸ್ಥಲಗಳು ಐಕ್ಯವಾಗಿ ನಿರ್ವಯಲಾಗಲು ಅಲ್ಲಿ ಶರಣನು ನಿತ್ಯಪರಿಪೂರ್ಣನಾಗಿ ಮಿಥ್ಯವನಳಿದಿದ್ದ.

634. ಮನದ ಸಂಕಲ್ಪವಿಕಲ್ಪವಳಿದ ತನುವೆಂಬ ಒರಳಿನಲ್ಲಿ ಏಕೋಭಾವವೆಂಬ ಒನಕೆಯನ್ನು ದೃಢವಿಡಿದು ಷಡುಶಕ್ತಿಯರೆಂಬ ನಾರಿಯರು ನಿರ್ಬೀಜವಾದ 'ಸತ್' ಎಂಬ ತಂಡುಲವನ್ನು ನಿರ್ಮಲವಾಗುವಂತೆ ಮಥನವ ಮಾಡುತ್ತ ಇದ್ದಾಗ, ಅಜಾತವೆಂಬ ಶಿವತತ್ವವು ಉದಯವಾಗಲು, ಶಕ್ತಿಯರೆಲ್ಲ ಏಕರಸವಾಗಿ, ಶಿವೋಹಂ ಶಿವೋಹಂ ಎಂಬ ಭಾವವನೆಯ್ದಿದರು. ಶರಣನು ಮಹಾಜ್ಞಾನವೆಂಬ ಮಂಟಪದೊಳಗೆ ಓಲಾಡುತ್ತಿದ್ದನು.

662. ಎಲ್ಲ ಲೋಕಗಳನ್ನೂ ಮಾಯೆಯೆಂಬ ಹರಿಣಿ ಮೋಹವೆಂಬ ಮುಖದ್ವಾರದಿಂದ ಅಗಿದಗಿದು ತಿನ್ನುತ್ತಿರುವಳು. ಆ ಮಾಯೆಯನ್ನು ಕರ್ಮ ಭಕ್ತಿ ಜ್ಞಾನವೆಂಬ ಬೆಳ್ಳಾರವನ್ನು ಬೀಸಿ, ಹಿಡಿದು ಕೊಲ್ಲುವ ಜ್ಞಾನಿಗಳಾರೂ ಇಲ್ಲ. ಆ ಮಾಯೆಯನ್ನು ಲಕ್ಷಿಸಿ ಹಿಡಿಯುವೆನೆಂದರೆ, ಅರಿವಿನ ಮುಂದೆ ತೋರುತ್ತಿರುವುದು. ಆದ್ದರಿಂದ ಅದನ್ನು ಹಿಡಿಯಬೇಕಾದರೆ, ಸುಜ್ಞಾನವೆಂಬ ಶಿರವನ್ನು ದೃಢವಿಡಿಯಲು, ಆ ಮಾಯೆ ತಾನೇ ತಾನಾಗಿ ವಶವಾಗುವುದು. ಈ ಕ್ರಮವನ್ನರಿಯದೆ, ಚಂಚಲಮಾಯೆಯನ್ನು ಸುಜ್ಞಾನದಿಂದ ನಿರೀಕ್ಷಿಸಿ ಸದ್ಭಾವವೆಂಬ ಬಲೆಯನ್ನು ಬೀಸಲು, ಆ ಮಾಯೆ ತಪ್ಪಿಸಿಕೊಳ್ಳುವುದು. ಇದನ್ನರಿತು ಏಕನಿಷ್ಠೆಯೆಂಬ ಬಿಲ್ಲನ್ನು ಜೇವೊಡೆದು, ಕೃತನಿಶ್ಚಯವೆಂಬ ಹಸ್ತದಲ್ಲಿ ಬಿಗಿವಿಡಿದು, ಈಷಣತ್ರಯ ಮುಖ್ಯವಾದ ಸಕಲಪ್ರಪಂಚುಗಳೆಂಬ ಬೆಟ್ಟಘಟ್ಟವನ್ನು ದಾಟ,

ಮಿಥ್ಯೆಯೆಂಬ ವೃಕ್ಷವನ್ನು ಸಾರಿರುವ ಆ ಮಾಯೆಯನ್ನು ಆ ಬಾಣದಿಂದ ಆ ಶರಣನು ಎಚ್ಚು ಕೆಡಹಲು, ಭಾವನಡಗಿ, ಮನವಳಿದು, ಏಕನಿಷ್ಠೆಯು ನಿಸ್ತರಂಗವಾಗಿ, ಜ್ಞಾನವು ನಿರ್ಧರಿಸುವುದು. ಹೀಗೆ ಮಾಯೆಯು ಲೋಪವಾಗಿ, ಶುದ್ಧ ವಿದ್ಯೆ ಉಳಿಯುವುದು. ಉಳಿದ ಶುದ್ಧವಿದ್ಯೆಯನ್ನು ಉದರಾಗ್ನಿಯ ತೃಷ್ಣೆಯರತ ಮಹಾಜ್ಞಾನಪ್ರಕಾಶದಲ್ಲಿ ಪಾಕ ಮಾಡಿ, ಸುಖವನ್ನು ಸುಖಿಸಲು, ಅಲ್ಲಿ ಇದಮಹಂ ಎಂಬ ಮಿಥ್ಯಾಭಾವವಳಿದು, ಏಕರಸವಾಗಿ ಸತ್ (=ಸತ್ತು) ಉಳಿಯಿತು. ಹೀಗಾಗಲು ನಿಶ್ಚಿಂತನಿವಾಸಿಯಾದ ಶರಣನು ಜ್ಞೇಯವೆಂಬ ನಿವಾಸದಲ್ಲಿ ಪರಮಸುಖಿಯಾಗಿದ್ದನು.

664. ['ಬೇಜಿಸಿಸಿದ' ಎಂಬುದನ್ನು 'ಬೇಜಿಸಿಸದ' ಎಂದು ಓದಿಕೊಳ್ಳಿ.] ಷಡುವರ್ಣಾತ್ಮಕವಾದ ಮಾಯೆಯು ಅನಿತ್ಯವಾದ ಕಾರಣದಿಂದಲೇ, ಅದು ತೋರಿಯಡಗಿತ್ತು, ಅಡಗಿ ತೋರಿತ್ತು. ಅದನ್ನು ಕೊಲ್ಲುವೆನೆಂದು ವಿಚಾರಿಸಲೊಡನೆ ಅದು ವಿಶ್ವದೊಳಗೆಲ್ಲಿಯೂ ತಾನೆಯಾಗುವುದೆಂಬ ರಹಸ್ಯವನ್ನರಿತು, ಶರಣನು ಸ್ವಸ್ಥನಾಗಿರಲು, ಆ ಮಾಯಾಮೃಗವು ಹರಿಯುವ ಮನದ ಬೆಂಬಳಿಯಲ್ಲೇ ಬಂದು, ಆ ಶರಣನ ಕಣ್ಣಿನ ಮುಂದೆ ಗುರಿಯಾಗಿದ್ದಿತು. ಆಗ ಜೀವನು ಸೋಹಂ ಸೋಹಂ ಎಂಬ ಪದದ ಅಹಂಕಾರದಿಂದ ತಾನಲ್ಲದೆ ಮತ್ತಾರೂ ಇಲ್ಲವೆಂದು ಗರ್ವಿಷ್ಠನಾಗಲು, ಇಹಪರವೆಂಬ ಸುಖವನ್ನು ತೋರಲೀಸದೆ ತಾನೆ ಘನವನಾಡಿ ತೋರುತ್ತಿದ್ದಿತು ಮಾಯೆ. ಆ ಮಾಯಾಮೃಗವನ್ನು ಭಿನ್ನಭಾವವಿಲ್ಲದ ಸದ್ಭಾವವೆಂಬ ಬಿಲ್ಲಿನಲ್ಲಿ, ಏಕೋನಿಷ್ಠೆಯೆಂಬ ಬಾಣವನ್ನು ತೊಟ್ಟು ಏಕಾಗ್ರಚಿತ್ತದಿಂದ ಲಕ್ಷಿಸಿ ಎಸೆದು ಕೆಡಹಲು, ಆ ಮಾಯೆಯಳಿದು ಶುದ್ಧವಿದ್ಯೆಯುಳಿಯಿತು. ಆ ಸದ್ವಿದ್ಯೆಯ ಕುರುಹನ್ನು ಮಹಾಜ್ಞಾನಾಗ್ನಿಯಿಂದ ಸಮರಸ ಪಾಕ ಮಾಡಿ ಮಹಾಲಿಂಗಕ್ಕೆ ಅರ್ಪಿಸಿ ಸೇವ್ಯಪ್ರಸಾದಿಯಾಗಿ ಸುಖಿಯಾದನು ಶರಣನು.

665. ನಿರವಯ ನಿರಾಳವೆಂಬ ಮಹಾಜ್ಞಾನತತ್ವಕ್ಕೆ ದೇಹವೇ ಆಶ್ರಯಸ್ಥಾನ, ಆ ಉದಯಿಸಿದ ಜ್ಞಾನಶಿಶುವನ್ನು ಪರಶಕ್ತಿಯೆಂಬ ತಾಯಿ ಎತ್ತಿಕೊಂಡು, ಪರಮಾಮೃತವೆಂಬ ಮೊಲೆಯನುಣಿಸಿ, ಪರಿಪೂರ್ಣಾನುಭಾವವೆಂಬ ನವನೀತವನ್ನು ತಿನಿಸಿ ನಿತ್ಯತೃಪ್ತಿಯನೆಯ್ದಿಸಿದಳು. ಆ ಜ್ಞಾನಶಿಶುವಿನ ದೇಹವೆಂಬ ತೊಟ್ಟಿಲನ್ನು ಪರಮಚೈತನ್ಯವೆಂಬ ಪ್ರಾಣವಾಯು ತೂಗಿ, ಶಿವೋಹಂ ಶಿವೋಹಂ ಎಂದು ಜೋಗುಳವಾಡುತ್ತಿರಲು, ಆ ಶಿಶುವನ್ನು ಮಹದಾಕಾಶವನಗ್ರಹಿಸಿಕೊಂಡು ಮಹತ್ತತ್ವದಲ್ಲಿ ಸಿಜವನೆಯ್ದಿತು. ಇಂತಹ ನಿರಾಳದಲ್ಲಿ ಬೆರಸಿ ಸುಖಿಯಾಗಬೇಕೆಂದು ಇಚ್ಛಿಸುವ ಮಹಾಶ್ರದ್ಧೆಯು ಪರಾಶಕ್ತಿಯೆಂಬಾಕೆಯನಱಿಯದವರಿಗೆ ಅಶ್ರದ್ಧೆಯಾಗಿರುವುದು.

667. ಭಿನ್ನಭಾವವಳಿದು ನಿರ್ಭಾವಿಯಾದ ಲಿಂಗೈಕ್ಯನ ನಿಲವು ಅಂಗತ್ರಯದ ಹಂಗನ್ನು ಮುಟ್ಟದು, ಷಟುವರ್ಣಗಳೊಳಗೆ ತೋರಿಕೆಯಾಗಿ ತೋರದು, ಅಷ್ಟತನುಗಳಲ್ಲಿ ಸಿಕ್ಕಿ ದೃಶ್ಯವಾಗದು, ಏಕಮೇವ ನ ದ್ವಿತೀಯಂ ಬ್ರಹ್ಮ ಎಂಬ ವಾಕ್ಯದಲ್ಲಿ ಸಿಲ್ಕಿ ಎಣಿಕೆಗೆ ಬಾರದು ; ಕಾಯಜೀವ ಭ್ರಾಂತುಗಳೊಳಗಿದ್ದು ಉತ್ಪತ್ತಿ ಸ್ಥಿತಿ ಲಯಕ್ಕೊಳಗಾಗದೆ ನಿಶ್ಶಬ್ದವೇದಿಯಾಗಿರುವುದು.

668. ಸ್ವಾನುಭಾವಸನ್ನಿಹಿತವಾದ ಶರಣನ ಪ್ರಾಣವಾಯುವಳಿದು ಪರಮಚೈತನ್ಯಾತ್ಮಕನಲ್ಲಿ ವಿಶ್ರಮಿಸಲು, ಆಕಾಶವೆಂಬ ಆತ್ಮತತ್ವವು ಶಿವೋಹಂ ಶಿವೋಹಂ ಎನುತಿತ್ತು. ಆ ಶಿವೋಹಮೆಂಬ ಪದವು ನಿಶ್ಶಬ್ದ ವೇದಿಸದೆಂಬ ಬಯಕೆಯಲ್ಲಿ ಇರಲು,

ಅಲ್ಲಿ ಪರಮಾಮೃತವೆಂಬ ನಿತ್ಯತೃಪ್ತಿ ಸಾಧ್ಯವಾಯಿತು. ಇಂತಾಗಲು ಆತ್ಮತತ್ವಭಾವವು–ಸೋಹಂ ಎಂಬ ಧ್ವನಿಯಳಿದು– ನಿಶ್ಶಬ್ದಬ್ರಹ್ಮವಾಯಿತು.

670. ಶರಣನಲ್ಲಿ ಜ್ಞಾನವೆಂಬ ಲಿಂಗ ಉದಯವಾದ ಕಾರಣ, ಆ ಶರಣನೆ ಆ ಲಿಂಗಕ್ಕೆ ಮಾತೃಸ್ಥಾನ, ಅಂತಹ ಶರಣನ ಪ್ರಸನ್ನಸುಖವೆಂಬ ಪರಿಣಾಮಾಮೃತವನ್ನು ಆ ಲಿಂಗವು ಆರೋಗಿಸಿ, ನಿತ್ಯತೃಪ್ತಿಯಲ್ಲಿ ನಿಂತ ನಿಲವು ಉಪಮಾತೀತ. ಹೀಗಾಗಲು ಸುಜ್ಞಾನವೆಂಬ ಚಕ್ಷುವಿನಲ್ಲಿ ಅಜ್ಞಾನವೆಂಬ ಕಾಳಿಕೆಯಳಿದು, ಖಂಡಿತಜ್ಞಾನದ ಬಾಯೊ-ಳಗಣ ಮಾಯಾಭ್ರಮೆ ಲೋಪವಾಯಿತು. ಇಂತು ಬಹುವರ್ಣಗಳಡಗಿ ತಾನೆ ಕಡೆಯಾಣೆಯಾಗಿ ಉಳಿದ ನಿಲವು ಆ ಶರಣನಲ್ಲಿ ನಿಃಪತಿಯಾಯಿತು.

671. ಅಂಗೈಯೊಳಗಿದ್ದು ಇಷ್ಟಾರ್ಥವನ್ನು ಕೊಡುವ ಇಷ್ಟಲಿಂಗವು ಅಂಗದೊಳಗೆ ಪ್ರಾಣದೊಳಗೆ ಪರಿಪೂರ್ಣಭಾವವನೆಯ್ದಿ, ಆ ಶರಣನನವಗ್ರಹಿಸಿ, ಆತ್ಮತತ್ವ-ಮಧ್ಯದಲ್ಲಿರುವ ಮಹದಹಂಕಾರವೆಂಬ ಎರಳೆಯನ್ನು ತಾನೆ ಅವಗ್ರಹಿಸಿ, ನಿಜದಲ್ಲಿ ನಿರ್ಧರಿ-ಸಿತ್ತು. ಆ ಶರಣನ ಏಕೋಭಾವಸ್ತಂಭದೊಳಗಿದ್ದ ಮಹಾಜ್ಞಾನರತ್ನಬಿಂದು ನವಕೋಟಿ ಬ್ರಹ್ಮತತ್ವದ ಉತ್ಪತ್ತಿ ಸ್ಥಿತಿ ಲಯಗಳನ್ನು ತನ್ನೊಳಡಗಿಸಿಕೊಂಡಿತು. ಆ ಮಹಾಜ್ಞಾನ-ಬಿಂದುವೆಂಬ ಚಿದ್‌ಬ್ರಹ್ಮಾಂಡವು ಪಂಚವಿಂಶತಿ ತತ್ವಗಳೊಳಗೆ ಲಯವಾಗಿರುವ ಹಂಸನ ಬಹುಗತಿಗಳೆಲ್ಲವನ್ನೂ ತನ್ನೊಳಗೆ ಅವಗ್ರಹಿಸಿ ನಿರ್ವಯಲಾಯಿತು.

678. ಭವಸಾಗರದ ಮಧ್ಯದಲ್ಲಿ ಜಡತನುವೆಂಬ ಪಾಷಾಣವಿರುವುದು. ವಿಷಯ-ಕೂಪವನ್ನು ಮಹಾಜ್ಞಾನಾಗ್ನಿಯು ಬ್ರಹ್ಮನಾದಮಯವಾಗುವಂತೆ ಆಲಿಂಗಿಸುತ್ತಿರಲು, ಮಾಯೆಯೆಂಬ ರಾಕ್ಷಸಿಯ ಬಸಿರಲ್ಲಿ ಬಂದ ಕ್ರಿಯಾಶಕ್ತಿಯು—ಭವಾರಣ್ಯವಳಿದಲ್ಲಿ— ಕೂಡಲೆ ಅಳಿದು, ಕ್ರಿಯೆಗಳೆಲ್ಲವು ನಷ್ಟವಾಗಿ, ನಿಃಪತಿಯಾದಳು. ಹೀಗೆ ಕ್ರಿಯೆಗಳೆಲ್ಲವು ನಷ್ಟವಾಗಿ, ಅಳಿಸಬಾರದ ಮತ್ತು ಬರೆಯಬಾರದ ಪ್ರಣವಾಕ್ಷರತ್ರಯಗಳೆ ತಾನಾಗಿರಲು, ಮನೋಮಧ್ಯದ ಮಹಾಜ್ಞಾನಾಗ್ನಿಯು ಪ್ರಾಣವಾಯುವನ್ನು ಮೀರಿದ ಪರಮಚೈತನ್ಯಾತ್ಮಕತತ್ವವನೆಯ್ದಿತು. ಇಂತಹ ಪರಮ ಚೈತನ್ಯಾತ್ಮನ ನಿಲವಿಗೆ ಮೊದಲು ಕಡೆ ನಡುವಿಲ್ಲ. ಹೀಗೆ ಸರ್ವಾಂಗವೆಂಬ ಪುರವಳಿದು, ಆ ಕಾಯದೊಳಗೆ ಮಹಾಜ್ಞಾನಶಕ್ತಿಯು ಪ್ರವೇಶಿಸಿ, ಆ ಶರಣನನ್ನು ನುಂಗಿದ ಬಳಿಕ,ನಿರಾಳವೆ ನಿಂದಿತ್ತು.

680. ಅನುಭವಸನ್ನಿಹಿತವಾದ ಅಂಗವನ್ನು ಮಹಾಜ್ಞಾನಾಗ್ನಿಯ ಮೇಲಿಡಲು, ಅಲ್ಲಿ ದೇಹವೆ ಕರಗಿ ಅಳಿದು, ಸ್ವಾನುಭಾವವೆಂಬ ನವನೀತ ಉಳಿಯಿತು. ಇಂತಾಗಲು ಪರಿಪೂರ್ಣವೆ ಅವಶೇಷಿಸಿ, ಭಿನ್ನ ಅನುಭಾವವಿಲ್ಲದಾಯಿತು. ಆ ಪರಿಪೂರ್ಣವಾಸನೆ ಇದ್ದಿತಾಗಿ, ಆ ಪರಿಪೂರ್ಣವೆ ತಾನೆಂಬ ಅಹಂಕಾರವಿಲ್ಲ. ಹೀಗೆ, ತಾನೆ ನಿಜವಾಗಿದ್ದನಲ್ಲದೆ ಅಲ್ಲಿ ಉಪಾಧಿಯಿತ್ತೆಂಬ ಕಾರಣ, ಶರಣನೆ ಉಳಿದು, ಲಿಂಗವೆ ನಿಸ್ತರಂಗವಾಯಿತು.

681. ಕರ್ಮಾಧೀನದಿಂದ ಎಂಬತ್ತುನಾಲ್ಕು ಲಕ್ಷ ಜನ್ಮಗಳಲ್ಲಿ ಬಹುಮುಖನಾದ ಜೀವನಿಂದ ಸ್ಥೂಲಸೂಕ್ಷ್ಮಕಾರಣವೆಂಬ ಮೂರು ಪಿಂಡಾಂಡಗಳುಂಟಾದವು. ಈ ಜೀವನು ಅಹಂಕಾರದಿಂದಾಡುತ್ತಿರಲು, ಆ ಅಹಮ್ಮನ್ನು ಅಣುಮಾತ್ರವಾದ ಚಿತ್ತು ನುಂಗಿತು. ಚಿತ್ತಿನಲ್ಲಿ ಅವಗ್ರಾಹಕನಾದ ಶಿವಯೋಗಿಯು ಪರಶಕ್ತಿಸ್ವರೂಪನಾಗಿ ಸ್ವಲೀಲಾಚರಿತ್ರವ-ನೆಯ್ದಲು ಪರಮಶಾಂತಿ ದೊರೆಕೊಂಡಿತು. ಶಾಂತಿಯನ್ನೈದಿದ ಮಹಾಲಿಂಗೈಕ್ಯನು ನಿವೃತ್ತಿ ಮಾಡಿದ ಸಂಶಯಪದದೊಳಗೆ ಭೂಮಂಡಲವೆಲ್ಲ ಅಡಗಿ ಜಿಗುಪ್ಸೆಯನೆಯ್ದಿತು.

690. ಅಜ್ಞಾನಸಂಪರ್ಕವುಳ್ಳ ಮುಕ್ತಿಯನ್ನು ಇದಿರಿಟ್ಟು ನೋಡಿದರೆ, ಆ ಶರಣನಿಗೆ ಅದು ಒಂದು ಶೃಂಗಾರ. ಆ ಅಜ್ಞಾನಸಂಪರ್ಕವುಳ್ಳ ಮುಕ್ತಿಯ ನಿವೃತ್ತಿ-ಜ್ಞಾನವನ್ನು ಮಹಾಪ್ರಕಾಶ( = ಕರ)ದ ಶಬ್ದಬ್ರಹ್ಮ ಒಳಕೊಂಡಿತ್ತು. ಅಂತಹ ಮಹಾ ಪ್ರಕಾಶವನ್ನೇ ಶರಣನ ಸರ್ವಾಂಗದೊಳಗಿರುವ ಪರಶಕ್ತಿಯು ಆವರಣ ಮಾಡಿಕೊಂಡು ನಿರ್ದೇಹವೆಂಬ ಪುರದೊಳಗೆ ಸದ್ವಿದ್ಯೆಯೆಂಬ ಸುಖವನ್ನು ಸೋಡಿ, ನೋಟಗೆಟ್ಟು ಅಲ್ಲಿಯೇ ನಿರ್ಭಾವಿಯಾದಳು. ಇಂತಹ ಶರಣನ ಸರ್ವಾಂಗವೆಂಬ ಲಿಂಗಕ್ಷೇತ್ರವನ್ನು ನಿಜವು ನುಂಗಿ ನಿರ್ವಯಲಾಯಿತು.

693. ಸರ್ವಾಂಗವೂ ಲಿಂಗಸಮರಸವಾದ ಪರಮಸುಖವೂ, ಪರಮಶಾಂತಿ ಎಂಬ ಪರಶಕ್ತಿಯೂ ಏಕಾಗ್ರಚಿತ್ತವೆಂಬ ಕೃತನಿಶ್ಚಯಹಸ್ತದ ಸಖಾಗ್ರದ ಮೇಲೆ ನಿಂತು ತರಹರವಾಯಿತು. ಆ ತರಹರವು ಪರಮಾಮೃತಬಿಂದುಸ್ವರೂಪವನೆಯ್ದಿದ ನಿತ್ಯ-ತೃಪ್ತಿಯೆನಿಸಿತು. ನಿತ್ಯತೃಪ್ತನಾದೆನೆಂಬುದನರಿತು, ಅರಿವಿನ ಮರವೆಯ ಭ್ರಮೆಯನ್ನು ಮಹಾಜ್ಞಾನಕ್ಕೆ ಆಹುತಿಯನಿಕ್ಕಿ, ಆ ಶಿವೋಹಮೆಂಬ ಭ್ರಮೆಯಳಿಯಿತು. ಹೀಗೆ ಪರಿಪೂರ್ಣಶಿವಕಳೆಯನೊಳಕೊಂಡಿರುವ ಮಹಾಲಿಂಗೈಕ್ಯನ ನಿಲವನ್ನು ಮಹದಹಂಕಾ-ರದ ಪರಮೈಶ್ವರ್ಯವು ಅವಗ್ರಹಿಸಿ ಅತ್ಯತಿಷ್ಠದ್ದಶಾಂಗುಲದ ತೂರ್ಯದಲ್ಲಿ ನಿಜನಿವಾಸಿ-ಯಾಯಿತು.

696. ಶಿವಜೀವೈಕ್ಯದ ಸಂಬಂಧವೇ ಅನುಭಾವ. ಈ ಅನುಭಾವಪ್ರತಿ-ಸಾಧಕರಾದ ಆತ್ಮವಿತ್ತುಗಳು ಆಧ್ಯಾತ್ಮದ ನಿಜದ ನಿಲವನೆಯ್ದಲರಿಯದೆ ಮರವೆಯಿಂದ ಗತಿಗೆಟ್ಟರು. ಹಾಗೆ ನಿಜವನೆಯ್ದಲರಿಯದೆ ಜಡಭಾವದಿಂದ ದೇಹಾಭಿಮಾನಿಯಾದ ಜೀವನು ಚಿಕ್ಕವನಾದರೂ ಅವನಿಗೆ ಅಹಂಮಮತೆಗಳೆಂಬ ಕೋಡುಗಳು ಅತ್ಯುನ್ನತವಾ-ಗಿರುವವು. ಜೀವನ ನಿಲವು ಆದಿಸಂಬಂಧವಾದ ಅಷ್ಟತನುಗುಣವಿಡಿದು ಜಡಭಾವವುಳ್ಳು-ದಾದರೂ ಅದು ಅನಾದಿಸಂಬಂಧವಾಗಿರುವುದರಿಂದ ಷೋಡಶಮುಖವಾಗಿರುವ ಚಿದಂಶಿಕ. ಹೀಗೆಂದು ಅರಿದೊಡನೆ ಶರಣನಿಗೆ ತನುಗುಣವಳಿದು, ಪೂರ್ವಾಶ್ರಯನಿವೃತ್ತಿಯಾಗಿ, ಅವನು ಪುನರ್ಜಾತನಾಗುವನು. ಹೀಗೆ ತನುಗುಣವಳಿದು, ಅಂಗದಲ್ಲಿ ಇಷ್ಟಲಿಂಗಸಂಬಂಧ ವಾದುದರಿಂದುಂಟಾದ ಜ್ಞಾನೋದಯದಿಂದ ತನುಗುಣವಳಿಯದ ಮುನ್ನವೆ, ಪ್ರಾಣನ ಧರ್ಮವಳಿದು, ಆ ಪ್ರಾಣನ ಸದ್ವಿವೇಕಮುಖದಿಂದ ಆ ಇಷ್ಟಲಿಂಗವನ್ನು ಅವಗ್ರಹಿಸ-ಲಾಯಿತು. ಹೀಗೆ ಪ್ರಾಣಲಿಂಗಗ್ರಾಹಕನಾದ ಸಜ್ಜೀವನ ನಿಲವು, ಮೀರಿದ ಸ್ಥಲವ-ನೆಯ್ದಿರುವುದು. ಅದನ್ನು ಸ್ವಾನುಭಾವಮುಖದಿಂದ ವಿವರಿಸುತ್ತಿರುವುದೆ ಅನುಭಾವ.

736. ['ಬಗೆಗೊಳಗಾದ' ಎಂಬುದನ್ನು "ಬಗೆಗೊಳಗಾಗದ" ಎಂದು ಓದಿಕೊಳ್ಳಿ.]

758. ಆದಿಯೆಂದರೆ ನಾದ, ಆಧಾರವೆಂದರೆ ಬಿಂದು, ಸಾಗರವೆಂದರೆ ಸಂಸಾರ. ಅಂತಹ ನಾದಬಿಂದುಯುಕ್ತವಾದ ದೇಹಸಂಸಾರವಿಲ್ಲದ ನಿಃಕಲವಸ್ತುವು ವೇದಾಗಮಗಳಿಗೆ ಅಗೋಚರ. ಅಂತಹ ಪರಬ್ರಹ್ಮವೇ ಬಸವಣ್ಣ. ದಶದಿಕ್ಕುಗಳಲ್ಲಿ, ಪರಿಪೂರ್ಣವಾಗಿರುವ ಚಿತ್‌ಪ್ರಕಾಶವೇ 'ದಶಮುಖದ ಮಾಣಿಕ್ಯ.' ಅಂತಹ ಪರಿಪೂರ್ಣ ವಸ್ತುವಿಗೆ ಸಾಕಾರದ ಲೀಲಾಚಿಂತನೆ ತನ್ನಲ್ಲಿ ಎಸಗಿ, ನೋಡಿದ ಚಿತ್ತಿನ ವೃಕ್ಕೇ 'ಎಸಳ ಕಂಗಳು.' ಹಾಗೆ ತೋರಿದ ಚಿತ್ತುವೇ ಪ್ರಕಾಶಿಸಿ, ಅಖಂಡತೇಜೋಮೂರ್ತಿಯಾಗಿ

ಬೆಳೆದು, ನಿಂತ ಮಹಾಲಿಂಗವೆ ಬಸವಣ್ಣ. ಆ ಮಹಾಲಿಂಗನೆಂಬುದೇ ಬ್ರಹ್ಮವೃಕ್ಷ. ಅದು ತನ್ನ ಚಿದ್ವಿಲಾಸಾನಂದದ ಹೆಚ್ಚುಗೆಯಿಂದ ಮೂರ್ತಿಯಾಗಿ, ಪೃಥ್ವಿಕಡೆಯಾದ ತತ್ವಗಳ ಜನನಸ್ಥಲವೂ, ಸ್ಥಿತಿಲಯಕ್ಕಾಲವೂ ತಾನೆಯಾಗಿರುವುದು. ಅಂತಾದ ಲಿಂಗದ ಸಾಕಾರವೇ ಆ ಬಸವಣ್ಣ. ದೇಹಿಗಳ ಹೃತ್ಕಮಲ ಮಧ್ಯದಲ್ಲಿ ಕಾಲೂರಿ ನಿಂತು, ವಿಶ್ವವಿಲಾಸಿಯಾಗಿ, ನೋಡುತ್ತಿರುವ ಪರಮಚಿತ್ಕಲಾಲಿಂಗವೇ ಬಸವಣ್ಣ. ಚಂದ್ರಸೂರ್ಯರಿಬ್ಬರೂ ಎರಡು ನಯನಪುಷ್ಪ, ಆ ನಯನಪುಷ್ಪದ ಪರಿಮಳವೀಗ ಚೈತನ್ಯಪ್ರಕಾಶ. ಆ ಚೈತನ್ಯಪ್ರಕಾಶವಾರಿಗೂ ಕಾಣಲಸಾಧ್ಯ. ಆ ಕಾಣಬಾರದ ಚೈತನ್ಯವೇ ಬಸವಣ್ಣ. ಕಡೆಮೊದಲಿಲ್ಲದ ಅಖಂಡಚಿದ್ದೃಕ್ಕಿನ ಬೆಳಗೆ ಮೂರ್ತಿಯಾಗಿದ್ದ ಚಿಲ್ಲಿಂಗವು ದೇಹಕರಣಗಳ ವೈಭವವಿಲ್ಲದ ವಸ್ತುವು. ಅಂತಹ ಲಿಂಗವೇ ಅನಂತ ಬ್ರಹ್ಮಾಂಡಗಳನೊಳಕೊಂಡಿರುವ ಮಹಾಘನಲಿಂಗ. ಆ ಮಹಾಘನಲಿಂಗವೇ ಬಸವಣ್ಣ. ಸಮುದ್ರದೊಳಗಿರುವ ಅಗ್ನಿಯ ಪ್ರಕಾಶವನ್ನು ಯಾರೂ ಭೇದಿಸಿ ಕಾಣಲಸಾಧ್ಯ, ಹಾಗೇ ದೇಹಸಂಸಾರಸಾಗರದಲ್ಲಿ ಅಡಗಿರುವ ಚಿಜ್ಜ್ಯೋತಿಸ್ವರೂಪನಾದ ಬಸವಣ್ಣನ ನಿಲವನ್ನು ಯಾರೂ ತಿಳಿಯರು. ಹೀಗೆ ಉಪಮಿಸಬಾರದ ಘನಲಿಂಗವಾದ ಬಸವಣ್ಣನೇ ನನಗೆ ಪರಬ್ರಹ್ಮವನ್ನು ಕರಸ್ಥಲಕ್ಕೆ ತಂದುಕೊಟ್ಟ ಗುರುವಿಗೆ ಗುರು, ಎಂದು ಪ್ರಭುದೇವರು ಸಿದ್ಧರಾಮಯ್ಯದೇವರ ಕೂಡೆ ನಿರೂಪಿಸಿದರು.

768. ಆಕಾಶವೆಂದರೆ ಆತ್ಮ. ಆ ಆತ್ಮನು ಚಿದ್ಬ್ರಹ್ಮಾಂಡವೆಂಬ ಬ್ರಹ್ಮಾಂಶಿಕನು. ಪೃಥ್ವಿಯೆಂದರೆ ಜಡಭೌತಿಕವಾದ ದೇಹ. ಹಾಗೆ ಚಿದಂಶಿಕನಾದ ಜ್ಞಾನಾತ್ಮನಿಗೆ ಅಜ್ಞಾನದ ದೇಹಸಂಬಂಧವಾದರೆ, ಆ ಆತ್ಮನ ಅರಿವು, ದೇಹದ ಮರವೆ ಈ ಎರಡರ ಕೂಟದ ಸಂಧಿಯಲ್ಲಿ ಮನವೆಂಬ ಪಕ್ಷಿಯು ಹುಟ್ಟಿತು. ಆ ಮನದಿಂದ ಹಲವು ಕರಣೇಂದ್ರಿಯಗಳು ಹುಟ್ಟಿದವು. ಅಂತಹ ಮನ ಉಂಟಾಗಿದ್ದೂ ಕುರುಹು ತೋರದು. ಹಾಗೆ ಕುರುಹು ತೋರದಿರುವ ಮನವು ವಿಶ್ವಮಯವಾಗಿ ತೋರುತ್ತಿರುವುದು ಚೋದ್ಯ, ಎಂದು ಶರಣನು ಅದನ್ನು ಜ್ಞಾನದೃಕ್ಕಿನಿಂದ ಕಂಡು ಆಶ್ಚರ್ಯಪಟ್ಟನು. ಮನಸ್ಸು ಹಲವು ಮಿಥ್ಯಾದೇಹಗಳೆಂಬ ಕಸವನ್ನು ಕಳೆದು ಹಾಕಿ ಬರುತ್ತಿರುವುದು. ಆದರೆ ಅಂತಹ ಮನಸ್ಸು ನಿರೂಪನಾದ ಆತ್ಮನನ್ನು ಆಶ್ರಯಿಸಿ, ತಾಪತ್ರಯಗಳನ್ನೇ ಅನುಭವಿಸಿ, ಸದ್ವಿವೇಕಸಾರವನ್ನೆಲ್ಲ ತೊಲಗನೂಕುತ್ತಿದೆ. ಹೀಗಿರಲು ಆ ಮನಸ್ಸಿಗೆ ಶಿವಕೃಪೆಯಿಂದ ಭಕ್ತಿಜ್ಞಾನವೆಂಬೆರಡೂ ರೆಕ್ಕೆಯಾಗಿ ಹುಟ್ಟಿದವು. ಒಡನೆಯೇ ಮನಸ್ಸು ಜ್ಞಾನಕ್ರೀಯಿಂದ ಆತ್ಮತತ್ವವಿಚಾರಪರವಾಯಿತು. ಆತ್ಮತತ್ವವಿಚಾರವಳವಡಲು, ಆ ಆತ್ಮನ ನಿಜಸ್ವರೂಪೇ ಲಿಂಗವೆಂದರಿತು, ಜ್ಞಾನಕ್ರೀಯಿಂದ ಲಿಂಗಾಂಗ ಸಂಬಂಧ ಘಟಿಸಿ, ಅಂಗವೆಲ್ಲ ಲಿಂಗವಾಗಿ ಮನವೂ ಲಿಂಗವಾಯಿತು.

791. ತಮೋಗುಣವೆ ಬಿಲ್ಲಾಗಿ, ಅದಕ್ಕೆ ಸಾತ್ವಿಕಗುಣವೆ ಹೆದೆಯಾಗಿ, ರಜೋಗುಣವೆಂಬ ಬಾಣವನ್ನು ಹೂಡಿ, ಮೂರುಲೋಕವೆಲ್ಲವನ್ನೂ ಗುರಿಮಾಡಿ, ಭವಬಾಧೆಗೊಳಗುಮಾಡುತ್ತಿರುವವನು ಶಿವನು. ಇಂತೀ ಭವಬಾಧೆಗೊಳಗಾದ ಜಗದಲ್ಲಿ ಜ್ಞಾನಾಜ್ಞಾನಕಲ್ಪಿತವಿಡಿದಿರುವ ಪ್ರಕೃತಿಪುರುಷನನ್ನು ಅಧೋಮುಖವಾಗುವಂತೆ ಅಡಿಗೊತ್ತಿ ಮೆಟ್ಟಿ, ಮದಮುಖದ ವೃಷ್ಟಿಯನ್ನು ಕರೆದು, ಸಂಸಾರಜಲದಲ್ಲಿ ತಲೆಯೆತ್ತಲೀಯದು ಶಿವನ ಶಕ್ತಿ. ಹೀಗೆ ಭವಕಲ್ಪಿತಕ್ಕೆ ಗುರಿಯಾಗಿ ಸಂಸಾರದುಃಖಿಗಳಾದ ಸಕಲಾತ್ಮರೂ ಜೀವಪಶುಮನ ಗುಣವಿಡಿದಿರುವರು.

805. ದೃಢಬುದ್ಧಿ ಕರಿಗೊಂಡ ಶರಣನು ತನ್ನಲ್ಲಿ ತೋರಿದ ಭಿನ್ನವಿವೇಕ-ವನ್ನು ತಾನೇ ಮಹಾಜ್ಞಾನದಿಂದ ಛೇಧಿಸಿ, ಸದ್ಭಾವಕರದಿಂದ ಹಿಡಿದು, ನಾನಾಸ್ಥಲಪರಿ-ಕ್ರಮದಲ್ಲಿ ಪರಿವರ್ತಿಸುತ್ತಿರಲು, ಅಂತಹ ಶರಣನ ಚಾರಿತ್ರವನ್ನು ಶ್ರುತಮುಖದಿಂದ ಕಂಡು ಗುರುಮುಖದಿಂದ ಕೇಳಿದ ಸ್ವಾನುಭಾವರ ಮುಖದಿಂದ ಪರಾಮರ್ಶಿಸುತ್ತಿದ್ದಾ-ತ್ಮನೆ ಭಿನ್ನವಿಚಾರವರತ ಅಭಿನ್ನವಿಚಾರಸಂಬಂಧಿ. ಹೀಗೆ ನಿವೃತ್ತಿಮುಖವಾದ ಸದ್ವಿವೇಕವು ಮಹಾನುಭಾವವಿವೇಕವನ್ನು ಅವಗ್ರಹಿಸಿ, ನಾನಾಸ್ಥಳಕುಳಗಳನ್ನೆಯ್ದಿ, ಜಡಭಾವರಹಿತವಾಗಿ, ನಿಜದಲ್ಲಿ ನಿರ್ವಯಲನೆಯ್ದುವುದು. [ಈ ಭಾವಾನುವಾದವು 'ನ' ಮತ್ತು 'ಮೂ' ಪ್ರತಿಗಳಲ್ಲಿ ಕಂಡುಬರುವ ವಚನರೂಪಕ್ಕೆ ಮಾತ್ರ ಅನ್ವಯಿಸು-ವುದು. ಸಿಂಗಳದ ಸಿದ್ಧಬಸವರಾಜದೇವರು ತನ್ನ ಗ್ರಂಥದಲ್ಲಿ ಉಲ್ಲೇಖಿಸಿಕೊಂಡಿರುವ ಈ ವಚನವು 'ನ' 'ಮೂ' ಪ್ರತಿಗಳಲ್ಲಿನ ವಚನವನ್ನೇ ಸಂಪೂರ್ಣವಾಗಿ ಹೋಲುವುದು.]

811. ವೃತ್ತಿಜ್ಞಾನವಿಲ್ಲದ ಸಜ್ಜೀವಾತ್ಮನು ತನುಗುಣರಹಿತನಾಗಿ, ಶಿವಸುಖಾ-ನಂದವನ್ನು ಸವಿಯುತ್ತ, ಅಭಿನ್ನಕ್ರಿಯಾಚರಿತ್ರವಿಡಿದು ಚರಿಸುತ್ತಿರುವನು. ಇಂತೀ ಸಜ್ಜೀವನ ನಿಲವನ್ನು ಅರಸುತ್ತಿಪ್ಪ ಶರಣನು ಮರಳಿ ಪುನರಪಿವಿಡಿದು ವರ್ತಿಸನು. ಅಭೇದ್ಯಜ್ಞಾನಸ್ವರೂಪವಾದ ಅವಿರಳ ಪರವಸ್ತುವನ್ನು ಪ್ರಾಣವಾಯುಸೂತ್ರವಳಿದ ಸ್ವಾನುಭಾವಸೂತ್ರದಲ್ಲಿ ಸಂಬಂಧಿಸಿ, ದೃಢಕಂಠದೊಳಗೆ ಶರಣನು ಅಲಂಕರಿಸಿದನು.

813. ಮನೋಮಧ್ಯದಲ್ಲಿ ಉದಯವಾದ ಸದ್ವಿವೇಕವೃಕ್ಷದ ಚಿಚ್ಛಾಯೆ-ಯೆಂಬುದು ಭಿನ್ನವಿಟ್ಟು ತೋರದೆ ಅಲ್ಲಿಯೆ ನಿರ್ಲೇಪವಾಗಿರುವುದು. ಬೀಜವೆಂದರೆ ಜನನ ಸ್ಥಲ; ಆ ಜನನಸ್ಥಲರಹಿತವಾಗಿರುವ ಆ ಸದ್ವಿವೇಕವೃಕ್ಷವು ಅಜಾತಸ್ವಯಂಭುವಾದ ಕಾರಣ ಹೆಸರಿಲ್ಲದಿರುವುದು. ಈ ನಿರ್ಣಯವನ್ನು ಖಂಡಿತಭಾವಿ(ಅರ್ಧಮರ್ಧ ತಿಳಿದವರು)ಗಳು ಅರಿಯರು. ಆ ಸದ್ವಿವೇಕಮಹಾಘನವಸ್ತುವು ತಾನೆ, ಮತ್ತು ಅದೇ ತನ್ನ ನಿಜದ ನಿಲವೆಂದರಿತ ಶರಣನು ಮರಳಿ ಇದಿರಿಟ್ಟರಸುವ ಮರವೆಗೊಳಗಾಗನು. ಇಂತಹ ಶಿವಸದ್ವಾಸನಾಜ್ಞಾನಿಯೆ ನಿರಾಳ ನಿಜಪದಸ್ಥನು.

827. ಜನನ ಕರ್ಮಗಳಿಲ್ಲದ ಚಿದಂಶಸಂಭೂತನಾದ ಆತ್ಮನು ನಿಜವನ್ನು ಮರೆತು ಜೀವಭಾವಭ್ರಾಂತಿಯಿಂದ ಜ್ಞಾನೋತ್ಪತ್ತಿಯಿಲ್ಲದೆ ಮಾಮಾಸುಖವನ್ನು ಹಾರೈ-ಸುವನು. ಇಂತಹ ಜೀವನು ತಾಳೆಮರ (ಕೊಂಬೆಯಿಲ್ಲದ ಮರ)ದ ಗುಣಧರ್ಮವನ್ನುಳ್ಳ ದೇಹವೆಂಬ ವೃಕ್ಷವನ್ನಾಶ್ರಯಿಸಿ ತತ್ಕರ್ಮಫಲಗಳನ್ನು ಅನುಭವಿಸಿದನು. ಹೀಗೆ ಜೀವನು ಇಂತಹ ದೇಹಸುಖಗಳನ್ನು ಮೆಚ್ಚಿ ಬಿಡಲಾರದೆ, ಸಂಸಾರದುಃಖಕ್ಕೊಳಗಾಗಿ ಮರುಗು-ತ್ತಿರುವನು.

864. ಶರಣನ ಕರಸ್ಥಲದ ಲಿಂಗವು ಮನಸ್ಥಲಕ್ಕೆ ವೇದಿಸಿ ನಿಜೈಕ್ಯವಾಗಲು ಜ್ಞಾನಶಕ್ತಿಯು ಸತಿಪತಿಭಾವನಿಷ್ಪತಿಯಾಗಿರುವಳು. ಹೀಗಾಗಲು ಕ್ರಿಯಾಶಕ್ತಿಯು ಆಚಾರವಳಿದುಳಿದಿರುವಳು. ಹೀಗಾಗಲು ಚಂದ್ರಸೂರ್ಯಸ್ವರಗಳು ಧ್ಯಾನಾನಂದ-ಜಲದಲ್ಲಿ ಸೂತಕವಳಿದಿರುವವು. ಇವು ಹೀಗೆ ನಿವೃತ್ತಿಮುಖವನ್ನೆಯ್ದಲು ಆ ಲಿಂಗೈಕ್ಯ-ಪದವನ್ನು ಪ್ರಾಣವಾಯು ಧರಿಸಿಕೊಂಡು ಪರಮವಿಶ್ರಾಂತಿಯಲ್ಲಿರಲು, ಅದನ್ನು ಪರಮ-ಚೈತನ್ಯಾತ್ಮಕನು ಮಹಾಜ್ಞಾನಸಂಪರ್ಕದಿಂದ ನಿರೂಪಿಸಿದನು. ಹೀಗಾಗಲು ಆ ಲಿಂಗೈಕ್ಯ ಪದವು ನಿರ್ನಾಮವೆನಿಸಿರುವುದು.

865. ಆತ್ಮನು ಅವಿಚಾರಕರಣವೃತ್ತಿಗಳಿಂದ ಸಂಸಾರಜಲದಲ್ಲಿ ಕ್ರೀಡಿಸಲು ಜನ್ಮ ಸಫಲವಾಗದೆಂದು, ದುರ್ಬುದ್ಧಿಯನ್ನು ತೊಲಗಿಸಿ, ರಜೋಗುಣಪಾಶವನ್ನು ಕಳೆದು ಕೊಂಡು, ನಿರ್ಲಜ್ಜೆಯನಳವಡಿಸಿದಳು ನಿಜಜನನಿಯಾದ ಚಿಚ್ಛಕ್ತಿ. ಹೀಗೆ ರಜೋಗುಣವನಳವಡಿಸಿಕೊಂಡ ಚಿನ್ಮಾತೆಗೆ ತಾನೇ ನಿಜೋಪದೇಶಕರ್ತೃವಾದಾತ್ಮನು ಜನಕನಾದುದರಿಂದ ಶ್ರೀಗುರುವಿನೊಡನೆ ಮಹಾನುಭಾವವಿವೇಕಮಥನವನ್ನು ಮಾಡಿ ನಿವೃತ್ತಿಮುಖವನೆಯ್ದಿ ಲಿಂಗಶರಣನೆನಿಸಿ ನಿರ್ಭವನಾಗಿರುವನು ಶರಣ ಎಂಬುದು ಈ ವಚನದ ತಾತ್ಪರ್ಯಾರ್ಥ.

869. ಶರಣ ಸತಿಯಲ್ಲಿ ಲಿಂಗಾನುಗ್ರಹವಾಗಿ, ಪೂರ್ವಾಚಾರವನ್ನು ಬಿಡಿಸಿ, ಕರ್ಮಪಾಶವನ್ನು ಹರಿದ ಶರಣನಿಗೆ ಜನ್ಮಕರ್ಮ ದೇಹಧರ್ಮ ನಷ್ಟವಾಯಿತು. ಇಂಥಹ ಶರಣಸತಿಯಲ್ಲಿ ಲಿಂಗವು ಭಿನ್ನಭಾವದ ಲಜ್ಜೆಯನ್ನಳಿದು ನಿರಭಿಮಾನಕ್ರೀಯಿಂದಿರಲು, ಆ ಲಿಂಗದ ನಿಜಸ್ವರೂಪವನ್ನರಿತ ಶರಣಸತಿ—ಜ್ಞಾನಶಕ್ತಿಯ ಮುಖದಿಂದುಲಿವ ಸೋಹಂಭಾವವಳಿದು—ಶಬ್ದಮುಗ್ಧವಾದಳು. ಹೀಗೆ ನಿಶ್ಶಬ್ದವೇದಿಯಾದ ಶರಣಭರಿತಲಿಂಗದ ನಿಲವು ನಿತ್ಯವಾಗಿ, ನಿರ್ಮುಕ್ತವಾಗಿ, ನಿರ್ಭಾವವಾಗಿ, ನಿರ್ಲಜ್ಜಾಭಾವವಾಗಿರುವುದು.

1170. ಪರಮಾನಂದರಸಭರಿತ ಚಿದ್‌ಘಟವನ್ನು ಧರಿಸಿ ಕೊಂಡು, ಪರಮಲೀಲಾ ವಿಲಾಸದಿಂದ ನಟಿಸುತ್ತಿರುವ ಶರಣಸತಿಯ ಕೃತನಿಶ್ಚಯಕರದಲ್ಲಿ ದೃಢನಿಷ್ಠೆಯು ಕರಿಗೊಂಡಿದೆ, ಸಚ್ಛರಿಯದಲ್ಲಿ ದಾಸೋಹಂಭಾವವಿದೆ. ಇಂತಹ ಶರಣಸತಿಯು ಸ್ವಯಂಜ್ಯೋತಿರ್ಲಿಂಗವೆಂಬ ಪುರುಷನನ್ನು ಕೂಡುವ ಲಿಂಗವಿಕಳಾವಸ್ಥೆಯಿಂದಿರಲು, ವಿಷಯಾದಿ ಕಂಟಕಗಳು ಬಹುಮುಖವಾಗಿ ಅಡ್ಡಬರುವವು. ಅವನ್ನು ಶಿವೋಹಮೆಂಬ ಪರಮಾನಂದಭಾವಮಹಾಜ್ಞಾನದೃಷ್ಟಿಯ ಪ್ರಭಾವಾವಲೋಕನಮಾತ್ರದಿಂದ ನಾಶಮಾಡಬೇಕು. ಹೀಗೆ ಸ್ವಾನುಭಾವಜ್ಞಾನದಿಂದ ವಿಷಯಾದಿ ದುರ್ಗುಣಗಳಳಿದು—ಕಾಡುಗಿಚ್ಚು ಕರಡವನ್ನು ಸುಟ್ಟಲ್ಲಿ ಹಿಂದು ಮುಂದಿಲ್ಲವೆಂಬಂತೆ—ಪ್ರಾಣವಿಕಾರವನ್ನು ಹಿಂಗಿ ಪರಮಚೈತನ್ಯನಾದ ಶರಣನು ತಾನಿದಿರೆಂಬ ತ್ರಿಪುಟಿಭಾವರಹಿತನಾಗಿ ಅವಿರಳಾತ್ಮಕನಾಗಿರುವನು.

1176. ನಿರ್ಮಲವಾದ ಮನೋಜಲಧಿಯಲ್ಲಿ ಚಿತ್‌ಪ್ರಕಾಶಬಿಂದು ಸಂಚರಿಸುತ್ತಿರಲು—ಪ್ರವೃತ್ತಿಮುಖವಳಿದು ನಿವೃತ್ತಿಮುಖವಾಗಿ ಕಂಡವರಿಗಲ್ಲದೆ—ಆ ಚಿದ್ಬಿಂದು ಗೋಚರಿಸದು. ಇಂತಹ ಶರಣನು ಆ ಮನೋಶರಧಿಯನ್ನು ಕಲಕದೆ, ದೇಹಧರ್ಮವನ್ನು ಹೊದ್ದದೆ, ಆ ಮಹಾಜ್ಞಾನಬಿಂದುವನ್ನು ಗ್ರಹಿಸಲು ಪರವು ಸಾಧ್ಯವಾಗುವುದು.

1180. ಭ್ರಾಂತವ್ಯಾಪಾರವಳಿದ ಶರಣನು, ದುಸ್ಸಂಚಲವರ್ತನೆಯಿಲ್ಲದ ಸಜ್ಜೀವನು. ಆ ಸಜ್ಜೀವನನ್ನು ಅವಿರಳದತ್ತ ಮುಖವ ಮಾಡಲು, ಆ ಜೀವನು ದಾಸೋಹಂ ಶಿವೋಹಂ ಎನ್ನುತ್ತ ಅವಿರಳ ಭಾವದಲ್ಲಿ ನಿಂತನು. ಆ ಅವಿರಳಭಾವಚಿತ್‌ಕೂಪದಲ್ಲಿ ಆ ಜೀವನನ್ನು ನಿರ್ಬಂಧದಿಂದ ಬಂಧಿಸದೆ, ಸುವಿವೇಕಬೋಧೆಯಿಂದ ಶಿಕ್ಷಿಸುತ್ತಿರಲು, ಆ ಜೀವನು ತಾನಿದ್ದು ತನ್ನ ಪ್ರಕೃತಿಗುಣಗಳನ್ನು ನಾಶಮಾಡಿಕೊಂಡನು. ಹೀಗೆ ಪ್ರಕೃತಿವಿಕಾರವಳಿದ ಶುದ್ಧಾತ್ಮನನ್ನು ನಿರುಪಾಧಿಕಶುದ್ಧಪಾಕಕ್ಕೆ ತಂದು, ಆ ಪರಮಾನಂದಪದಾರ್ಥವನ್ನು ಇದಿರಿಟ್ಟು ಅರ್ಪಿಸಲಿಲ್ಲದ ಕಾರಣ, ಎರಡಿಟ್ಟು ಕೈಕೊಳ್ಳದೆ ಲಿಂಗವು ಪರಮಾನಂದವನೆಯ್ದಿ ಶರಣನಿಗೆ ಪ್ರಸನ್ನಸುಖವನ್ನು ಕರುಣಿಸಿತು.

## ಕಠಿನಪದಗಳ ಅರ್ಥನಿರ್ಣಯಕ್ಕಾಗಿ ಪ್ರಭುದೇವರ ವಚನಗಳ ಜೊತೆಗೆ ಬಳಸಿಕೊಂಡಿರುವ ಇತರ ಆಧಾರಗ್ರಂಥಗಳ ಪಟ್ಟಿ

| | |
|---|---|
| ಆ. ವ : | ಆದಯ್ಯನ ವಚನಗಳು |
| ಎ. ಕ : | ಎಪಿಗ್ರಾಫಿಯ ಕರ್ಣಾಟಕ |
| ಏ. ಕೇ. ವ : | ಏಲೇಶ್ವರ ಕೇತಯ್ಯನ ವಚನಗಳು |
| ಗ. ಭಾ. ರ. ಮಾ : | ಗಣಭಾಷಿತ ರತ್ನಮಾಲೆ |
| ಗಿ. ಕ : | ಗಿರಿಜಾಕಲ್ಯಾಣ |
| ಗು. ಮಂ. ವ : | ಗುಪ್ತಮಂಚಣ್ಣಗಳ ವಚನ |
| ನ. ಮಾ. ವ : | ನಗೆಯ ಮಾರಿತಂದೆಗಳ ವಚನ |
| ಪ್ರ. ಚ : | ಪ್ರಹ್ಲಾದ ಚರಿತ್ರೆ |
| ಪ್ರ. ಲಿಂ. ಲೀ : | ಪ್ರಭುಲಿಂಗಲೀಲೆ |
| ಬ. ದೇ. ರ : | ಬಸವರಾಜ ದೇವರ ರಗಳೆ |
| ಬ. ಪು : | ಬಸವಪುರಾಣ |
| ಬ. ವ : | ಬಸವೇಶ್ವರನ ಷಟ್ಸ್ಥಲದ ವಚನಗಳು |
| ಬ. ವ. ಹೆ : | ಬಸವೇಶ್ವರನ ಹೆಚ್ಚಿಗೆ ದೊರೆತ ವಚನಗಳು |
| ಬ. ಸ್ತೋ : | ಚೆನ್ನಂಜೇದೇವರು ಸಂಕಲಿಸಿದ ಬಸವಸ್ತೋತ್ರದ ವಚನಗಳು |
| ಬ. ಸ್ತೋ. ತ್ರಿ : | ಬಸವಸ್ತೋತ್ರ ತ್ರಿವಿಧಿ |
| ಬೆ. ವ : | ಎಲ್ಲ ಪುರಾತನರ ಬೆಡಗಿನ ವಚನಗಳು |
| ಮೆ. ಮಿಂ. ವ : | ಮೇಜಿಮಿಂಡಯ್ಯನ ವಚನಗಳು |
| ಸ. ಪ : | ಸಮಯ ಪರೀಕ್ಷೆ |
| ಸ. ಮಾ. ವ : | ಸಕಲೇಶ ಮಾದರಸನ ವಚನಗಳು |
| ಸಿ. ಚಾ : | ಸಿದ್ಧರಾಮಚಾರಿತ್ರ |
| ಸಿ. ರಾ. ಸಾ. ಸಂ : | ಸಿದ್ಧರಾಮ ಸಾಹಿತ್ಯ ಸಂಗ್ರಹ |
| ಸೌ. ಇಂ. ಇ : | ಸೌತ್ ಇಂಡಿಯನ್ ಇನ್‌ಸ್ಕ್ರಿಪ್ಷನ್ಸ್ |
| ಹ. ಕಾ : | ಹರಿಶ್ಚಂದ್ರ ಕಾವ್ಯ |

# ಕಠಿನ ಪದಕೋಶ



ಅ

ಅಂಕಣಿ : ಕುದುರೆಯ ಜೀನಿನ ಮೇಲೆ ಕುಳಿತು ಕಾಲಿಡಲು ಕಟ್ಟಿರುವ ರಿಕಾಪು 259

ಅಂಕೆ : (1) ಆಜ್ಞೆ (2) ಊರ್, 911

ಅಕ್ಕೆ : (< ಅಚ್ಚಿಕ್ಕೆ) (1) ರೋದನ 941 (2) ದುಃಖ 43, ನೀ ಹೋಹಾಗಳಕ್ಕೆ, ನೀ ಬಾಹಾಗಳಕ್ಕೆ. "ಅಕ್ಕೆ ಬಾರದ ಮುನ್ನ ಪೂಜಿಸು"(ಬ. ವ. 167) "ದುಃಖವಿಲ್ಲದ ಅಕ್ಕೆ ಹಗರಣಿಗನ ತೆಱನಂತೆ"(ಬ.ವ.218)

ಅರ್ಕಜ : (< ಅಕ್ಕಜ ?) (1) ಆಶ್ಚರ್ಯ, ಅದ್ಭುತ 371

ಅಗಲು: ಊಟದ ತಟ್ಟೆ 1008, 1312, "ಮಡದಿಯೆನ್ನಗಲೊಳಗೆ ಸಕಲದೇವಾನ್ನವ ಒಡೆಯರಿಂದಲೂ ಮಿಗಿಲಾಗಿಕ್ಕಲು ತೆಗೆದಿರಿಸಿದೆನು" (ಬ.ವ.439) "ಬಿಡದೆ ಬಾಯಗಲ ಎಂಜಲ ಕಾಯ್ದಿಪ್ಪೆನು ಕಿಂಕರನು" (ಬ. ವ. 464)

ಅಂಗ : (1) ಗೊಡವೆ ? 389 (2) ರೀತಿ 1221

ಅಂಗವಿಸು (= ಅಂಗೈಸು) : ಹಿಡಿ, ಕರಗತಮಾಡಿಕೋ 766. "ಮಾದೇವಿಯ ಸು ಕಂಡರಸನೇಕಾಂತದಲಿ ತುಡುಕಿದೊಡಾಕೆ ವಿನಯದಲಿ, ಅರಸ ಸ್ಥೈರಿಸು ಮತ್ರಿಯವನುತ್ತರಿಸು, ಬಳಿಕಂಗೈಸು ಎನಲಾ" (ಪ್ರ. ಲಿಂ. ಲೀ. 10–21) "ನಾನವನಂಗವಿಸುವನಲ್ಲ, ನಾನವ ಹಿಡಿವವನಲ್ಲ" (ಬ. ವ. ಹೆ. 353)

ಅಗ್ಘಣಿ (= ಅಗ್ಘವಣಿ) : ನೀರು 120, 118.

ಅಚ್ಚನೆಯನಾಡು : ಅರ್ಚಿಸು, 106

ಅಚ್ಚಿಗ : ದುಃಖ, ಕ್ಲೇಶ, 106 322.

ಅಚ್ಚುಗ : (< ಅಚ್ಚುಕ) (1) ಅದ್ಭುತ, ರಹಸ್ಯ 41 (2) ಸಂತೋಷ, ಪ್ರೀತಿ 106. "ಅಚ್ಚುಕದ ದರಹಾಸಲಕ್ಷ್ಮಿ ಮುಖಾಬ್ಜದೊಳ್ ಮೊಳೆಯೆ" (ಬ. ಪು. 2–23). "ಅಚ್ಚುಗವೇಕಯ್ಯ ಸಂಸಾರದೊಳಗೆ ? ನಿಚ್ಚ ನಿಚ್ಚ ಶಿವ ರಾತ್ರಿಯ ಮಾಡುವುದು (ಬ. ವ. 173)" ಬಸವನ ಪಾದಕ್ಕೆ ಅಚ್ಚುಗ ನಾನಪ್ಪೆನ್ನೈ" (ಸಿ.ರಾ.ಸಾ.ಸಂ. ಪುಟ 30, ಪದ್ಯ 6)

ಅಂಚೆ (< ಹಂಸೆ) : ಹಂಸ 1292

ಅಟಮುಟ : ವಂಚನೆ, ಮೋಸ, 747 "ಆಟಮುಟವೆ ಆಧಾರ, ಕಪಟವೇ ಸದಾಚಾರ, ಕುಟಿಲವೇ ಘನವಾಯಿತ್ತು ಕೆಲಬರಿಗೆ" (ಸ.ಮಾ.ವ. 1) "ಅಟಮುಟದ ಭಕ್ತರ ಕಂಡರೆ ಕೋಟಲೆಗೊಳಿಸುವನು ಕೂಡಲ ಸಂಗಮದೇವ" (ಬ.ವ.ಅ. 133)

ಅಟ್ಟಗೋಲ್ : ಉದ್ದವಾದ ಗಣೆ, ಎಣೆ ? 839

ಅಟ್ಟಾಟಿಕೆ : (ದೂತಪ್ರೇಷಣ ?) ಅಹಂಕಾರ, ಬಿಂಕ, 1011. "ಅಟ್ಟಾಟಿಕೆಯ ಮಾತನಾಡಲದೇಕೋ ? ಮುಟ್ಟಿ ಬಂದುದಕ್ಕಂಜಲದೇಕೋ" (ಬ.ವ. 726)

ಅಟ್ಟೆ : ದೇಹ 400 "ಪಶ್ಚಿಮಪದ್ಮಾಸನದಲ್ಲಿ ಕುಳಿತು ನೆಟ್ಟಿಲುವ ಮುಱಿದು ತುಟಿ ಮಿಡುಕದೆ ಅಟ್ಟೆಯಾಡಿತ್ತಲ್ಲಾ" (ಬ.ವ. 814) "ತಲೆಯಿಲ್ಲದಟ್ಟೆಗೆ ಪಟ್ಟವ ಕಟ್ಟುವ ಉಭಯಭ್ರಷ್ಟರ

ಮೆಚ್ಚುವನೆ" (ಬ.ವ. 72)

ಅಡಗು : ಮಾಂಸ 1175

ಅಡಿವಜ್ಜೆ : ಅಡಿಯ ಹಜ್ಜೆ 1213

ಅಡು : ಬೇಯಿಸು, ಪಾಕಮಾಡು 1246

ಅಡುಗಬ್ಬು : ಕಟ್ಟಿಗೆ, ಸೌದೆ 1175 "ಹಲವಂದದಡುಗಬ್ಬನಾಯ್ದೊಟ್ಟಿ ಹೊಱಗಿಗಟ್ಟಿ ಹೊತ್ತೋರಗೆಯ ಮಕ್ಕಳೊಡನೆ ನಿಂದು" (ಹ. ಕಾ. 12-7)

ಅತಿಗಳೆ : ಬಹಿಷ್ಕರಿಸು, ತ್ಯಜಿಸು 78, 152, 478, 1164, 1196, 1214

ಅಂತರ : ಅಂತರಿಕ್ಷ 1206

ಅಂತು : ಅಂತ, ನಿರ್ಣಯ 318, 395, 412, 435

ಅನ್ನಬರ : ಅದುವರಿಗೆ 1209

ಅನಾಮಿಕ : ಅಸ್ಪೃಶ್ಯ 1173

ಅನು : ಹದ, ಸಿದ್ಧತೆ, 170, 173, 295, 305

ಅನುಭಾವ : ಆಧ್ಯಾತ್ಮ ವಿಚಾರ 1064

ಅನುಮಾನ : ತಿಳಿವಳಿಕೆ, 1127

ಅಪ್ಪು : ನೀರು 62, 913

ಅಪ್ಪುದು : ಆಗುವಂಥದು 657

ಅಂಬು : ನೀರು 97

ಅಭಿಘಾರ : ತುಪ್ಪ 1270

ಅಮಳೋಕ್ಯ : ಬಾಯಿ. ಲಿಂಗಧಾರಣ ಸ್ಥಲಗಳಲ್ಲಿ ಬಾಯಿಯೂ ಒಂದು 474, 842, 1158. ಅಮಳೋಕ್ಯವ ಮಾಡು : ಆಸ್ವಾದಿಸು 1043, 1155. "ಬಸವನೇ ಮುಖಸೆಜ್ಜೆ, ಬಸವನೇ ಅಮಳೋಕ್ಯ" (ಬ.ಸ್ತೋ 119). "ಕಕ್ಷೆ, ಕರಸ್ಥಲ, ಉತ್ತಮಾಂಗ, ಉರಸೆಜ್ಜೆ, ಅಂಗಸೋಂಕು ಅಮಳೋಕ್ಯವೆಂಬುದ ನಾನು ಮನದಲ್ಲಿ ಅಱಿಯದಂದು" (ಬ.ವ.ಹೆ. 251) "ಮನಪರುಷದಿಂದ ಮುಟ್ಟ ನೀಡಿದ ಪದಾರ್ಥ ತೋಱಿದ ಮುನ್ನವೆ ಅಮಳೋಕ್ಯವಾದ ಕೂಡಲ ಸಂಗಮದೇವರ ತೃಪ್ತಿಯನಱಿದಿಹೆನೆಂದು ಕೆಟ್ಟೆನು (ಬ.ವ.ಹೆ. 288).

ಅಮ್ಮಾವು : ಒಂದು ದುಷ್ಟಮೃಗ? 35 "ಹುಲಿಯುಂಟು ಕರಡಿಯುಂಟಮ್ಮಾವು ಉಂಟಲ್ಲಿ ಖಳಮೂರ್ಖ ಚೋರರುಂಟೆಂತಿರಿಸಿ ಪೋಪೆ" (ಸಿ. ಚಾ. 2-31). "ಆಕಳಂ ಹುಲಿ, ಮೀಱಿ ಸುಳಿವವರನಮ್ಮಾವು ಕರಡಿ ಕಾಳ್ಕೋಣಂಗಳುಳಿಯಲೀಯದಿರೆ" (ಹ.ಕಾ. 3-66)

ಅಮ್ಮೆನು : ಸಮರ್ಥನಾಗೆನು 60

ಅರಳೆಲೆ : ಮಕ್ಕಳ ಹಣೆಗೆ ಜೋಲುವಂತೆ ಕಟ್ಟುವ ಅರಳೆಲೆಯಾಕಾರದ ಒಡವೆ 16. "ಜೀವನ ಹಣೆಯಲ್ಲಿ ಪ್ರಾರಬ್ಧ ಸಂಕಲ್ಪಿತವಾಯಿತ್ತು ಎಂಬುದೀಗ ಅರಳೆಲೆಯ ಶೃಂಗಾರವ ಮಾಡಿ ಎಂಬ ಶಬ್ದಕ್ಕರ್ಥ" (ಮಹಲಿಂಗನ ವ್ಯಾಖ್ಯಾನ). "ಅರಳೆಲೆ ಮೇಲಾಡುತ್ತಿರೆ ಭರದಿಂ, ಮಾಂಗಾಯ್ಗಳೊಲೆಯೆ ಕೆಲಬಲದೊಳ್, ನಿಂದರಗಿಳಿಯ ತೊಡಳ್ನುಡಿ ಬಿತ್ತರಿಸೆ ವಸಂತನ ಕುಮಾರನೆನಿಸಿತ್ತಾಮ್ರಂ" (ಗಿ.ಕ. 2-41)

ಅರಿ : ಕತ್ತರಿಸು, 371, 805

ಅರಿದ : ಭಿನ್ನ, ಅಖಂಡವಲ್ಲದ 33, 37

ಅಱಿಕೆ : ಜ್ಞಾನ 940, 1206

ಅರಿದು : ಅಸಾಧ್ಯ 54 ∴. ಶ್ರೇಷ್ಠ 257 331, 848

ಅರೋಚಕ : ರುಚಿಯಿಲ್ಲದಿರುವಿಕೆ, ಓಕರಿಕೆ 455

ಅಱಿತುಹೋಗು : ಒಣಗಿಹೋಗು 100, 910

ಅಱಿಸು : ಹುಡುಕು 33, 48, 1217

ಅಱಿಲುಗೊಳ್ : ... ಲೊಣಗು,

ಬೆಂಡಾಗು, ಬಾಯಾರು 18. "ಅಜಿಲುಗೊಂಡವನಿದಿರಲಮೃತದ ತೊಱೆಯನೇ ಕಂಡಂತೆ" (ಪ್ರ.ಲಿಂ.ಲೀ. 17-4)
ಅಜಿಾಮರುಳು : ಪೆದ್ದ, ಮಂಕ, 502. "ಅಜಿಾಮರುಳನಂ ಹೆತ್ತ ಕಡುಪಾತಗಿತ್ತಿ" (ಸಿ.ಚಾ. 2-47)
ಅಱುದಿಂಗಳು : ಆರು ತಿಂಗಳು 446
ಅಱುವೆ : ಬೆಲೆಬಾಳದ ಬಟ್ಟೆ 602, 1254, "ಸರ್ವತೊಡಿಗೆಗಳನಿತ್ತಂ-ಬರವನುಳಿದಱುವೆಯುಟ್ಟರಸನು" (ಹ.ಕಾ. 8-51)
ಅಱೆ : ಬಂಡೆ 371,557. (ಕೊಂಬೆ ?)
ಅಲಗು : ಆಯುಧ, ಹರಿತವಾದ ಬಾಯಿ-ರುವ ಬಾಣ 838
ಅಳಿವು : ಸಾಮರ್ಥ್ಯ 1311, 1312,
ಅಳಿ : ಕೆಡಿಸು, ಕೀಳು 870
ಅವದಿರ : ಅವರ 794
ಅವಲೋಹ: ಚಿನ್ನಕ್ಕಿಂತ ಕೀಳಾದ ಲೋಹ 345, 1080
ಅವಸರ : ಸಮಯ, ಸಕಾಲ 315, 1012
ಅವಸ್ಥೆ : ದುರವಸ್ಥೆ, ದುಃಖ 125
ಅವಿದ : ಜ್ಞಾನಾತೀತ, ಅವೇದ್ಯ 797
ಅಸಗ : ಅಗಸ 1242
ಅಸಿಯಳು : ಸುಂದರಿ 1315
ಅಸ್ತಿ : ಇರುವುದು (× ನಾಸ್ತಿ) 726
ಅಹ : ಆಗುವ 1034

## ಆ

ಆ : ನಾನು 394
ಆಗಡಿಗತನ: ಧೂರ್ತತೆ 210 "ಆಗಡವ ಮಾಡಿ ಮಾಗುಡವ ಮಿಂದರೆ ತಾ ಕೊಡಬಲ್ಲನೆ ಕೂಡಲಸಂಗಮದೇವ" (ಬ.ವ. 645)
ಆಗರ : ಸುಖ 509. "ಆಗರವೆಂದರೆ ಸುಖ" (ಮಹಲಿಂಗನ ವ್ಯಾಖ್ಯಾನ)
ಆಗು : ಆಗುವಿಕೆ (× ಹೋಗು) 223, 1146
ಆಗುಳಿಸು : ಆಕಳಿಸು, ಆಗಲವಾಗಿ ಬಾಯ್ತೆರೆ 479
ಆಚಾರ್ಯ : ವಿಶ್ವಕರ್ಮ, 156
ಆಡು : ಮಾಡು 106, ವ್ಯವಹರಿಸು, ಬಳಸು 19. ಚರಿಸು 114. ಕುಣಿ 14. ಮೇಯಲಿಕ್ಕೆ ಹೋಗು 681
ಆಟಿಕೆ : ಆಟ 882
ಆಣತಿ : ಅಪ್ಪಣೆ 897, 1109
ಆಧಾರ : ವಿಭೂತಿಯ ಚೀಲ ? 8
ಆಪ್ಯಾಯನ (> ಅಪ್ಯಾನ) : ಸುಖ, ಪ್ರಸನ್ನತೆ 100 ; ಅಂಗಸುಖ 142 165 ; ತೃಪ್ತಿ 262 ; ಹಸಿವು ? 456, 1127. "ಆಪ್ಯಾಯನಕ್ಕೆ ನೀಡುವೆ, ಲಾಂಛನಕ್ಕೆ ಶರಣೆಂಬೆ (ಬ.ವ. 757)
ಆಮಿಷ : (1) ವಿಷಯಾಸಕ್ತಿ (2) ಮಾಂಸ (3) ಸಂಭೋಗ. 91
ಆಯತ : ಸಿದ್ಧಿ, ಸಮಗ್ರತೆ 177, 612, 1073 1271
ಆಯಿತ್ತು : ಆದುದನ್ನು 117
ಆಯಿತ್ತೆ : ಆದುದೇ 41
ಆರಡಿಗೊಳ್ : ಪೀಡಿಸು, 590, 716, 1279
ಆರೈ : ವಿಚಾರಿಸು 1143
ಆರೋಗಣೆ : ಊಟ 162, 173, 254, 570, 1117
ಆರೋಗಿಸು : ಊಟಮಾಡು 1128
ಆಲಿ (ಕಂಗಳ—) : ಕಣ್ಣಿ ಪಾಪೆ, ಕಣ್ಣಿನ ಗುಡ್ಡೆ 144
ಆಲಿಕಲ್ಲು : ಮಂಜಿನ ಗಡ್ಡೆ 666
ಆಲು : ಆರ್ಭಟಿಸು 489

ಆಳವಾಡಿ ನುಡಿ : ಹಳಿದು ಮಾತನಾಡು 129 "ಎಂತಯ್ಯ ಆಳವಾಡಿ ಕಳೆವೆನು" (ಬ.ವ. 370) "ಎಂತು ಆಳವಾಡಿ ಕಳೆವೆನಯ್ಯ? ಹ ಲ ವ-ನೆಲ್ಲವ ಹಂಬಲಿಸಿ ಹಲುಬುವೆನಯ್ಯ" (ಬ.ವ.ಹೆ. 300)

ಆಳಿ : (1) ಸಾಲು, ಸಮೂಹ 327. (2) ಹಿಂಸೆ, ತಿರಸ್ಕಾರ 601, (3) ಸಖಿ ? 607

ಆಳಿಗೊಳ್ : ಹಿಂಸಿಸು 327

ಆಳು : ಅಧಿಕಾರಮಾಡು, ಕಾಪಾಡು 385

ಆಳು : ಸೇವಕ (× ಆಳ್ದನು) 274, 769

ಆಳುದ್ದಿಯ : ಒಂದಾಳುದ್ದದ 215

ಆವು : ಹಸು 48, 572, 365

ಆ ಹಾಂಗೆ : ಆ ರೀತಿಯಾಗಿ 1174

## ಇ

ಇಕ್ಕಿಡು : ದೊಪ್ಪೆಂದು ಬಿಸಾಡು, ಚಚ್ಚು 169

ಇಕ್ಕು : ಬಡಿಸು 250 ; ರಚಿಸು 208

ಇಕ್ಷು : ಕಬ್ಬು 761

ಇಡು : ಎಸೆ 179, ಒಡೆಯ ಹಾಕು 169

ಇಂಡೆ : (1) ಮೊತ್ತ, ಉಂಡೆ, ರಾಶಿ. (2) ಹೂವಿನ ದಂಡೆ 193.

ಇದಿರು: ಇನ್ನೊಂದು, ಅನ್ಯ, ತಾನಲ್ಲದುದು (ತಾನು × ಇದಿರು) 946, 986, 1029. "ತನ್ನ ಬಣ್ಣಿಸಬೇಡ ಇದಿರ ಹಳಿಯಲು ಬೇಡ" (ಬ.ವ. 235)

ಇಂದ್ರಿಯ: ಪುರುಷಜನನೇಂದ್ರಿಯ 469

ಇನಿದು : ಸಿಹಿ 577

ಇಂಬು : ವಿಸ್ತಾರ 135, 758, 867, ಅವಕಾಶ 1003

ಇಂಬುಗೊಳ್ : ಒಳಗೊಳ್ 1164



ಇರಿ : ಸೆಳೆ 864

ಇಱುಬು: ಬೇಟೆಯ ಮೃಗವನ್ನು ಕೆಡಹಲು ಮಾಡಿರುವ ಕುಳಿ 1180

ಇಱುಬುಗೊಳ್ : ಗುಳಿಯಲ್ಲಿ ಬೀಳು 1180. ತಿವಿತಕ್ಕೆಸಿಕ್ಕು, ತಿವಿ."ಖಡ್ಗದಿ ಹೊಡೆವ ಹೇರೀಟಿಯಿಂದಿಱುಬುವ (ಸಿ.ಚಾ. 8-28)

ಇಱುಹೆ : ಇರುವೆ 431

ಇಱುಹೆ (ಕಟ್ಟುಗ್ರದ-): ಕಟ್ಟಿರುವೆ 619

ಇಲ್ಲವೆ : ಇಲ್ಲದಿರುವಿಕೆ, ಅಭಾವ 305, 378, 491, 613

ಇಳಿಯ ಬಿಡು : ಕೈಬಿಡು, ತ್ಯಜಿಸು 1089

## ಈ

ಈಸು : ಮರಿ ಹಾಕು 827

ಈರೇಳು : ಎರಡೇಳು, ಹದಿನಾಲ್ಕು 144 1316

ಈರೈದು : ಎರಡೈದು, ಹತ್ತು 570

ಈ ಹೀಂಗೆ : ಹೀಗೆ 1127

## ಉ

ಉಗಿ : ತೆಗೆ, ಸೆಳೆ 471, 865

ಉಚ್ಚು : ಬಿಚ್ಚು, ತೆಗೆ 494, 1166.

ಉಟ್ಟುದು : ಉಡುಗೆ 865

ಉಡಿ : ಮಡಿಲು 250

ಉಡುಗು : (1) ಹಾಳಾಗು, ನಶಿಸು 395 (2) ಗುಡಿಸು, ಬಾಚು 608

ಉತ್ತರಿಸು : ದಾಟು 1166.

ಉದಮದ : ಉನ್ಮದ, 1100. "ಉದಮದ ಸೊಕ್ಕಿ ತಲೆಗೇಱುತ್ತೆ, ಅಯ್ಯ?" (ಬ.ವ. 585).

ಉನ್ಮನಿ : ಸಹಸ್ರಾರ ಮತ್ತು ಭ್ರೂಮಧ್ಯ ಇವುಗಳ ನಡುವಣ ಭಾಗ ? 907, 188. ಉನ್ಮನಿಸ್ಥಾನ (ರುದ್ರಭಾರತ

p. 87) "ಉಸುಮನಿಯ ಉಲುಹಿನ ಭಾವ" (ಬ. ಸ್ತೋ. ತ್ರಿ. 28)
ಉಪಚಾರ : ಮಿಥ್ಯಾಚರಣೆ 332, 517
ಉಪಾಧಿಕೆ : ಹೊದಿಕೆ ? 924
ಉರವಣಿಸು : (1) ರಭಸದಿಂದ ಚಲಿಸು 586 "ಕಣ್ಗಳೇ ಕರುವಾಗಿ ಉರವಣಿಸಿ ಬಪ್ಪವನ ಬರವ ನೋಡಾ" (ಬ.ವ.ಹೆ. 254)
ಉರುಹು : ಸುಡು, ಧ್ವಂಸಮಾಡು 334, 1264
ಉರೆ : ಚೆನ್ನಾಯ್ತು (ಎಂಬರ್ಥದ ಅವ್ಯಯ) 803
ಉಱುಸು : ಸಹಿಸು, ಹಿಡಿಸು 535, 1304
ಉಲಿ : ಕೂಗು 2, 105, 377, 482, 793
ಉಲುಹು : ಶಬ್ದ 89, 1170, 1320
ಉಳ್ಳವರು : ಧನಿಕರು (× ಇಲ್ಲದವರು) 1126
ಉಳಿ : (1) ಉಳಿದುಕೊಂಡಿರು 464 (2) ಬಿಡು 1022
ಉಳ್ಳಿ : ಈರುಳ್ಳಿ 251
ಉಳುಮೆ : ಶೇಷ 1307

## ಊ

ಊಡು : ಉಣಿಸು 1147
ಊಱು : ಕಚ್ಚು, ಕುಟುಕು 375

## ಎ

ಎಕ್ಕೆ : ಹೊರಸಿನ ಕಾಲುಗಳ ಮೇಲಣ ಚೌಕಟ್ಟು 617
ಎಟ್ಟದ : ನಿಲುಕದ, ಎಟುಕದ 891
ಎಡೆಗೊಳ್ : ಆಕ್ರಮಿಸು 69, 165, 898
ಎಡೆಯಾಡು : ತಿರುಗಾಡು, ನಡುವೆ ತಲೆದೋರು 162, 974, 1008, 1013, 1159
ಎಡೆವೆಱಹು : (ಸ್ಥಳಾವಕಾಶ ?) ಅಂತರ, ಭಿನ್ನಭಾವ 752
ಎಡೆಯಲ್ಲಿ : ಮಧ್ಯೆ, ನಡುವೆ 944
ಎಡೆವೊಕ್ಕ : ಮಧ್ಯೆ ಪ್ರವೇಶಿಸಿದ 949
ಎಡಹು : ಎಡವು, ತಪ್ಪುಮಾಡು 1023
ಎತ್ತು : ಹುಲಿಯನ್ನು ಬೇಟೆಯಾಡಲು (ಬೋನಿನಲ್ಲಿ ?) ಕಟ್ಟುವ ತೋರೆತ್ತು 1281
ಎತ್ತಳ : ಎತ್ತಣ, ಎಲ್ಲಿಯ 1272
ಎಂಬುವನು : ಎಂಬವನ್ನು 1168
ಎಯ್ದೂದೆ : ಎಯ್ದುವುದೆ, ಹೊಂದುವುದೆ, 189
ಎರಡಿಲ್ಲದ : (1) ಅಚಲ, ಏಕಾಗ್ರ, ಭೇದವಿಲ್ಲದ 107, 245. (2) ಐಕ್ಯಕ, ದ್ವಂದ್ವರಹಿತ, ಅದ್ವಿತೀಯ 245, 262,
ಎರಡು : ಭಿನ್ನ, ಅನಿಶ್ಚಯ 213
ಎರವಿನ : (1) ಬಯಸಿದ, ಆಕಾಂಕ್ಷಿತ, ಮೆಚ್ಚಿನ (2) ಪರಿತ್ಯಕ್ತ 220
ಎಱಕ : ಸ್ನೇಹ, ಪ್ರೀತಿ. 1289, 1290, 1291
ಎಱೆ : ಮಜ್ಜನಕ್ಕೆ ನೀರನ್ನು ಸುರಿ 117, 159. ಸಾರನ್ನು ಬಡಿಸು 250
ಎಳತಟವಾಗು : (1) ಬಲಾತ್ಕಾರದಿಂದ ಸೆಳೆಯಲ್ಪಡು 165. "ಬೇಟೆಗೆಯ್ತಂದ ಭೂಪಾಲಕನನೆಳತಟಂ ಮಾಡಿ ತೆಗೆದೆನ್ನಾ ಶ್ರಮಕ್ಕೊಯ್ದು ಬಳಿಕ ನೋಡುವೆನವನ ಸತ್ಯಗಿತ್ಯದ ಬಲುಹ" (ಹ.ಕಾ. 3–11). (2) ನಶಿಸು, ನಿರ್ಗಮಿಸು 801
ಎಸಳುಗಂಗಳು : ಎಸಳಿನಂತಹ ಕಣ್ಣುಗಳು 1259
ಎಸೆ (> ಎಚ್ಚು) : ಬಾಣವನ್ನು ಬಿಡು 34, 97, 147, 215, 561

ಓಡು : ಬೋಕಿ ಹೆಂಚು 146, ಮಡಕೆಯ ಓಡು 1314

ಓಲೆ : ಓಲೆಯ ಗರಿ 36

ಓವರಿ (ಸಂಚದ—) : ರಹಸ್ಯದ ಒಳಕೊಟಡಿ 196

ಓಸರಿಸು : ಹಿಂತೆಗೆ, ಅರಗಾಗು 260. ಓರೆಮಾಡು 244. ತಪ್ಪಿಸಿಕೊಂಡು ಹೋಗು 1079

## ಕ

ಕಕ್ಷಕುಳ : 550 (919 ನೇ ವಚನ ನೋಡಿ)

ಕಕ್ಷಪಾಳ : ಜಂಗಮನ ಕಂಕುಳಲ್ಲಿರುವ ಒಂದು ಚೀಲ 374

ಕಟ್ಟಣೆ : (= ಕಟ್ಟಳೆ) 834

ಕಟ್ಟಳೆ : ನಿಯಮ 52. ಆಜ್ಞೆ, ರಕ್ಷಣೆ 151, 654, 868

ಕಟ್ಟೋಗರ : ಕಟ್ಟಿದ ಅನ್ನ, ಬುತ್ತಿ 179 "ಶಿವಲಿಂಗಪೂಜೆಯಂ ಮಾಡಿ ತನ್ನ-ಲ್ಲಿರ್ದ ಕಟ್ಟೋಗರವನಾಹರಂಗೊಟ್ಟು" (ಸಿ.ಚಾ. 2–16)

ಕಂಠ: ಓಲೆಯ ಗರಿಯ ಮೇಲೆ ಬರೆಯುವ ಕಬ್ಬಿಣದ ಲೇಖನಿ 36

ಕಡವಸ : ಋಷಿಗಳು ಕುಳಿತುಕೊಳ್ಳಲು ಆಸನವಾಗಿ ಬಳಸುವ ಜಿಂಕೆ ಮುಂತಾದುವುಗಳ ಚರ್ಮ, 33. ಕಡವಸದ ಸ್ವಾಮಿ : ಕಂಕುಳಲ್ಲಿ ಚರ್ಮಾಸನವನ್ನು ಸುರಳಿ ಸುತ್ತಿ ಇಟ್ಟುಕೊಂಡಿರುವ ಸ್ವಾಮಿ 33. "ಸೂಡುತಲಿ ಬಿಡು–ಜಡೆಗಳನು, ಕೈಗೂಡುತಲಿ ಕಡವಸವ ....ಜಪಸಮಾಧಿಯ ಮಾಡುವವರಾ ಮಾಯೆ ಬರಲೆದ್ದೋಡಿದರು" (ಪ್ರ. ಲಿಂ. ಲೀ. 7–45)

ಕಂಡ : ಮಾಂಸಧ ಕಂಡ 1228

ಕಡುಜಲ : ವೇಗವಾಗಿ ಹರಿಯುವ ನದೀ ಪ್ರವಾಹ ? 1145

ಕಡೆಯಾಣಿ : 1219 ಕಾಲಿಗೆ ಹಾಕುವ ಚಿನ್ನದ ಆಭರಣ ವಿಶೇಷ ? "ಕರಗಿಸಿ ಎನ್ನ ಮನದ ಕಾಳಿಕೆಯ ಕಳೆಯಯ್ಯ. ಒರೆಬಣ್ಣಕ್ಕೆ ತಂದೆನ್ನ ಪುಟವಿಕ್ಕಿ ನೋಡಯ್ಯ. ಕಡಿಹಕ್ಕೆ ಬಡಿಹಕ್ಕೆ ತಂದೆನ್ನ ಕಡೆಯಾಣಿಯ ಮಾಡಿ, ನಿಮ್ಮ ಶರಣರ ಪಾದಕ್ಕೆ ತೊಡಿಗೆಯ ಮಾಡಿ ಸಲಹು" (ಬ.ವ. 251)

ಕಣ್ಣಡ (=ಕನ್ನಡ, ಕನ್ನಡಕ) : ಮರೆ, ತೆರೆ, ಕಣ್ಣಿಗೆ ಮರೆಯಾಗಿ ಕಟ್ಟುವ ಸಾಧನ, 211. ಲಿಂಗಕ್ಕೆ ಆರೋಗಣೆ ಮಾಡಿಸುವಾಗ ಅದು ತನ್ನ ಮತ್ತು ಇತರರ ಕಣ್ಣಿಗೆ ಕಾಣದಿರುವಂತೆ ಕಟ್ಟುವ ತೆರೆ 711. "ವ್ರತಾಚಾರದ ಮುಂದಣ ಕನ್ನ(=ಣ್ಣ)ಡವ ಕಳೆದು ಕರತಳಾಮಳಕವ ಮಾಡಿ ತೋಱಬಂದ-ನಯ್ಯ ಬಸವಣ್ಣನು (ಬ.ಸ್ತೋ. 22). "ಸೌರಾಷ್ಟ್ರ ಸೋಮೇಶ್ವರ, ನಿಮ್ಮ ಕಾಣದ ಕಣ್ಣಡಕದ ಕಣ್ಣಿನಂತೆ ಕಣ್ಣನಿಸಿ ಕಟ್ಟಿನಯ್ಯ" (ಆ.ವ. 32)

ಕಣಿ : ಕಲ್ಲು 217, 855

ಕ್ಷಣವೇದಿ : ? 275

ಕರ್ತ : ದೇವರು, ದೇವರ ಅವತಾರಿಯಾದ ಜಂಗಮ 1007

ಕದಳಿವರಿ: ಕದಳಿ ಎಂಬ ವನವನ್ನು ದಾಟು? ಕದಳಿಯನ್ನಂತೆ ಸುಲಭವಾಗಿ ಭೇದಿಸು? 1166

ಕಂಥೆ : ಶಿವಯೋಗಿಯು ತೊಡುವ ಬಟ್ಟೆ, ಕಪನಿ 374, 1123

ಕಂದ : (1) ಗೆಡ್ಡೆ 28. (2) ಮಗು 457

ಕಂದಲು : ಗಿಣ್ಣಲು, ಪ್ರಾತೆ 315, 680, 869, 1317

ಕಂದು : (1) ಎಳೆಯ ಕರು 329, (2) ಕಳಂಕ 952
ಕಂದೆಱವಿ : ಕಣ್ತೆರೆಯುವಿಕೆ, ಉದಯ, ಸಂಭವಿಸುವಿಕೆ 943
ಕಂದೆಱೆ : ಅರಳು, ವಿಕಸಿಸು 281; 713
ಕಂಡೊಳಲುಗೊಳ್ : ತಪ್ಪಾಗಿ ಕಾಣು, ದೋಷಯುಕ್ತವಾಗಿ ನೋಡು 158,
ಕನಲು : ಕೋಪಿಸು 488
ಕನಸು : ಮಿಥ್ಯೆ 225
ಕಪ್ಪಡ (ವಸ್ತ್ರ—) : ಬಟ್ಟೆ 730
ಕಪ್ಪರ (<ಖರ್ಪರ) : ಭಿಕ್ಷಾಪಾತ್ರೆ 1123, 374, 449, 450
ಕಪ್ಪು : ಕಳಂಕ 414
ಕಂಬಿ : ಭಾರಹೊರಲು ಬಳಸುವ ಬಿದಿರು ದೆಬ್ಬೆ, ಅಡ್ಡೆ, ದೊಣ್ಣೆ 1311
ಕಬ್ಬಿಲ : ಬೆಸ್ತ 37
ಕಬ್ಬಿಸಿಲು : ಪ್ರಖರವಾದ ಬಿಸಿಲು 367
ಕಬ್ಬುನ : ಕಬ್ಬಿಣ 93, 228, 367, 490, 1263
ಕಮ್ಮಟ (ಕರ್ತಾರನ—) : ದೇವರ ಟಂಕಸಾಲೆ 1015
ಕರ : ಅತಿಶಯ 180
ಕರಡ : ಒಂದು ವಿಧವಾದ ಬೆಟ್ಟದ ಹುಲ್ಲು 204, 1170
ಕರಡಗೆ: ಬುಟ್ಟಿ 870, 94; (ಕಂಚಿನ—) ಕಂಚಿನಲ್ಲಿ ಮಾಡಿದ ಬುಟ್ಟಿ 1311;
ಕರು : (1) ಎರಕ ಹೊಯ್ದ ಅಚ್ಚು, ಎರಕ 368, 396
ಕರುಳು : ಅಳುಕು, ಚಾಂಚಲ್ಯ 134, 1223
ಕರೋಟಿ: ತಲೆಯೋಡು 1274, 1144
ಕಱುಗೊಳ್ : ಮೂರ್ತಿಗೊಳ್, ಸಾಕ್ಷಾತ್ಕಾರವಾಗು, ಹೆಪ್ಪುಗಟ್ಟು 604, 755, 1030, 1085, 1214
ಕಲಿ : ಕಲಿಪುರುಷ 707, 1115
ಕಲ್ಪಿತ : ಕಲ್ಪನೆ, ಸುಳ್ಳು, ಭ್ರಾಂತು, ಮಿಥ್ಯೆ 174, 221, 229, 444, 999, 1066, 1119
ಕಲ್ಪಿಸು : ಊಹಿಸು 273, 1154
ಕಳಿ : (1) ದಾಟು 662 (2) ಬಿಚ್ಚು 864
ಕಳೆ : (1) ಕಳಚು 116. (2) ಕಾಂತಿ, ತೇಜ 183
ಕಳೆದುಕೊಳ್ : ಸೆಳೆದುಕೋ 331
ಕವುಚು : ಬೆವರಿನ ದುರ್ವಾಸನೆ 842
ಕಷ್ಟ : ಕೀಳು 57, 180, 181, 216, 237, 311 (×ಲೇಸು 1292, 1217)
ಕಾಕು : ಕೆಟ್ಟ, ವಕ್ರ 724
ಕಾಡು : ಸುಡುಗಾಡು 26, 49
ಕಾಱು : ಕಕ್ಕು 67
ಕಾಲಗಾಹಿನ ಸರಮಾಲೆ : ಅಂಗರಕ್ಷಕರಾಗಿರುವ ಪದಾತಿಪಂಕ್ತಿ 23
ಕಾಲುವಳ್ಳಿ : ಚಿಕ್ಕ ಹಳ್ಳಿ 865
ಕಾವ : ರಕ್ಷಿಸುವ 8
ಕಾಷಾಂಬರ : ಕಾವಿಬಟ್ಟೆ 895
ಕಾಹು : ರಕ್ಷಣೆ 44
ಕಿಂಕಿಲ (= ಕಿಂಕಲ) : ಕೈಂಕರ್ಯ, ದೈನ್ಯ 1010, 1017, 1263 (×ಅಹಂಕಾರ) 1017, 1265
ಕಿಂಕುರ್ವಾಣ : ಏನು ಮಾಡಬೇಕೆಂಬುದನ್ನರಿಯದ ದಿಙ್ಮೂಢಪರಿಸ್ಥಿತಿ 1127
ಕಿಲ್ಬಿಷ : ಪಾಪ, ಕಲ್ಮಷ 254
ಕೀಲು : ರಹಸ್ಯ 95, 334, 343, 357, 586
ಕ್ರೀ : ಕ್ರಿಯೆ 755
ಕುಂಚಿಗೆ : ನವಿಲುಗರಿಯ ದೊಂದೆ ಅಥವಾ ಕಟ್ಟು 721
ಕುಂಜರ : ಆನೆ 1292

ಕುತ್ತು : ಊರು, ಇಡು 1166

ಕುಂಟಣಿ : ದೂತ, ದೂತಿ 445, 1320

ಕುಡಿತೆ : ಸ್ಯಾರೆ, ಬೊಗಸೆಯ ಅರ್ಧ 558

ಕುಂಡಲಿಗನ ಕೀಟ : ಕಡಜವು ತರುವ ಹುಳು 897. 'ಆರಾರ ಸಂಗವೇನ ಮಾಡದಯ್ಯ ? ಕೀಡಿ ಕುಂಡಲಿಗ ನಾಗದೇ ಅಯ್ಯ ?' (ಬ.ವ. 141). 'ಕುಂಡಲಿಗನೊಂದು ಕೀಡೆಯ ತಂದು ತನ್ನಂತೆ ಮಾಡಿತಲ್ಲ' (ಬ. ವ. ಹೆ. 119)

ಕುಂಭಿನಿ : ಭೂಮಿ 17, 1306

ಕುಱುಹು : (1) ಲಕ್ಷಣ 185, 349 (2) ಪ್ರತಿಮೆ, ಇಷ್ಟಲಿಂಗ (✕ನಿಜ) 1119

ಕುಳ : ರೀತಿ, ವಿಷಯ, ಮೂಲ 130, 749, 1137 'ಶಿವವಥದೊಳಗೆ ಆಡುತ್ತ ಇದ್ದರಲ್ಲದೆ ಒಂದರ ಕುಳವು ತಿಳಿಯದು' (ಬ. ಸ್ತೋ. 58) 'ಭಕ್ತಿಯ ಕುಳವನು ಬಸವಣ್ಣನೇ ಬಲ್ಲ' (ಬ. ಸ್ತೊ. 124)

ಕುಳಸ್ಥಳ : ವಿವರ, ಆದ್ಯಂತ 659, 727, 782, 1007

ಕೂಪರು : ಪ್ರಿಯರು 990

ಕೂರಹು : ಕತ್ತಿ, ಶಸ್ತ್ರ.

ಕೆಂಗಱಿಗೋಲು : ಹಕ್ಕಿಯ ಕೆಂಪು ಗರಿ ಯನ್ನು ಹಿಂದೆ ಕಟ್ಟಿದ ಬಾಣ 1313

ಕೆಡೆ : ಕೆಳಗೆ ಬೀಳು 212, 488

ಕೆದಱು : ಚದುರಿ ಹೋಗು 24

ಕೆಮ್ಮನೆ : ಸುಮ್ಮನೆ, ವೃಥಾ 1010, 1262

ಕೆಲ : ಪಕ್ಕ 39, 1078

ಕೆಲಬಲ : ಅಕ್ಕಪಕ್ಕ 463

ಕೆಳದಿಯರು : ಗೆಳತಿಯರು 86

ಕೆಳಯಿಂಕೆ : ಕೆಳಕೆ, 184, 911

ಕೆಸಱುಗಲ್ಲು : ಅಡಿಗಲ್ಲು, ತಳಪಾಯದ ಕಲ್ಲು 112, 1008 'ಕೆಸಱು ಕಲ್ಲಾದಿಯಾಗಿ ಕಲ್ಲೋೕರ್ಝುರ ಕೆಲಸ' (ಸೌ. ಇ. ಇ.). 'ಚೈತ್ಯಾಲಯಕ್ಕೆ ಕೆಸಱುಗಲ್ಲನಿಕ್ಕಿ' (ಕ. ಎ.)

ಕೈದು : ಆಯುಧ 1174, 1235

ಕೊಡಗೂಸು : ಕನ್ಯೆ 211, 406, 817

ಕೊನೆ : ಕೊಂಬೆ 1314

ಕೊಂಬು : ಮರದ ಕೊಂಬೆ 31, 315 1231, 1318

ಕೊಱಕೂಳು : ಧಾನ್ಯಾಹಾರ, ಹಕ್ಕಿಗೆ ಹಾಕುವ ಕಾಳುಗಳ ಕುಟುಕು 15, 597

ಕೊಳಗ : 4 ಮಾನ = 1 ಬಳ್ಳ, 4 ಬಳ್ಳ = 1 ಕೊಳಗ. 48

ಕೋಡಿಗಳೆ : ದೂಷಿಸು 1173

ಕೋಡಗ : ಕೋತಿ 31

ಕೋಡಿತ್ತು : ತಣ್ಣಗಾಯಿತು 32

ಕೋಲಂಬು : ಬಾಣ 34

ಕೋಲು : ಬಾಣ 838

ಕೋಳಾಗು : ಬಂದಿಯಾಗು, ಬಲಿಯಾಗು 15.

ಕೋಳುವೋಗು : ಬಂದಿಯಾಗು, ಬಲಿ ಯಾಗು 15

ಕೌಪು : ಕೌಪೀನ 895

## ಖ

ಖಟ್ವಾಂಗ : ಶಿವನು ಹಿಡಿದಿರುವ ಎಲು ವಿನ ಆಯುಧ 705, 1274

ಖಂಡ : ಭಿನ್ನ, ಅಪೂರ್ಣ

ಖಂಡಭಂಡ : ಸರಕು 18

ಖಂಡಿತ : ಅಸಂಪೂರ್ಣತೆ, 776, 778, 1168, 1169, 1173

ಖೇಟಗತಿ

ಖೇಟಗತಿ : 1173 ಸುರಕ್ಷಿತ ಪ್ರಯಾಣ 1293

### ಗ

ಗಡಣ : ಗುಂಪು 25, 1297

ಗಡಣಿಸು : ಬಡಿಸು, ಒಟ್ಟು 576, 663

ಗಂಡ (ಎದೆಯ—) : ಎದೆಯ ಮೇಲಣ ಗಂಟಿನ ಗಾಯ 842

ಗಂದೆ : ಗುಳ್ಳೆ 1063

ಗರುವ : ಗರ್ವ 464

ಗಱ : ರೆಕ್ಕೆ 95. ಪುಕ್ಕ 1318

ಗಳಹು : ಹರಟು 177, 1295

ಗಳಿಹ (< ಗಱಹ ?) : ಹರಟೆ, ಅಧಿಕ-ಪ್ರಸಂಗ ? 106

ಗಸಣಿ : ಘಾಸಿ, ವ್ಯಾಕುಳ 214, 707 1115

ಗ್ರಹ : ದೆವ್ವ 56, 150

ಗಾಡಿಕಾಱ : ಚೆಲುವ 1314

ಗಾಡಿಗ : ಮಂತ್ರಗಾರ, ಮಾಟಗಾರ ? 870 ' ಕೋಡಗನೇಡಿಸ ಬೇಡೆಂದಡೆ ಮಾಣದು........ಗಾಡಿಗ ದೂಷಕರಾಡ ಬೇಡ ಎಂದಡೆ ಮಾಣರು ' (ಬ.ವ.ಹೆ. 122) 'ಗಾಡಿಗ ಡಿಂಬುಗಂಗೆ ಚಿಕ್ಕ-ಮುಟ್ಟಗೆ ಹಸುರಂಬಲಿಮುಟ್ಟಗೆ ಬೇಡಿ' (ಬ. ವ. 556), (ಬ. ಪು. 43-52)

ಗಾಣ : ಗಾಳ 336, 474

ಗಾತ್ರ : ದೇಹ 1171

ಗಾಱುಮಾತು : ದೂಷಣೆ, 357

ಗಾಹು : ಕಪಟ, ಮೋಸ 23

ಗಿಟಗಿಟ ಜಂತ್ರ : ತೊಗಲು ಎಲುಬುಗೂಡು ಮಾತ್ರವನ್ನುಳ್ಳ ಬೊಂಬೆ ? 1030 "ಜಂತ್ರಗಿಟಗಿಟಯಾಪ, ಲಿಂಗದ ಚಿಂತೆಯಲಿ ಮಱವಟ್ಟ ಮೈಯ ಮಹಂತ-ನನು ಗೊಗ್ಗಯ್ಯನಲ್ಲಮಸಹಿತ ನೆಱೆ-ಕಂಡ (ಪ್ರ. ಲಿಂ. ಲೀ. 11-20)

ಗಿಳಿವಿಂಡುಗೆಡೆ : ಸ್ವಾ ಸು ಭಾ ವ ವಿ ಲ್ಲ ದೆ ಮಾತಾಡು 641, 793

ಗುಂಟ : ಗೂಟ 408, 842

ಗುಂಡಿಗೆ : ಗುಂಡಿ, ಗುಂಡಾದ ಪಾತ್ರೆ 93, 415, 873

ಗುಣ್ಪು : ಆಳ 887

ಗುಪಿತ : ಗುಪ್ತ ? 1299

ಗುಂಪು (< ಗುಣ್ಪು) : ಆಳ 76

ಗುಸುಟು : ಗೂಷ್ಟು, ಬೂಷ್ಟು. ಅಥವಾ (< ಘೃಷ್ಟ?) ಉಜ್ಜುವಿಕೆ 691

ಗುಹ್ಯ : ಗೂಢ 1287-1289

ಗೊತ್ತು : ಗಮ್ಯಸ್ಥಾನ 1190, 1243

ಗೊಂದಣ : ಗೊಂದಲ 1301

ಗೊಂಡ (< ಗೌಂಡ) : ಗೌಡ 1317

ಗೊರತಿ : ' ಗೊರವ 'ದ ಸ್ತ್ರೀಲಿಂಗರೂಪ, ಗೊರವಿತಿ 431

ಗೊರವ : ಗರುವ, ದೊಡ್ಡವನು, ಗುರು 111, 1170

ಗೊರವಿತಿ : ಗೊರತಿ 1170

ಗೋವಳ : ಗೋಪಾಲಕ 8

### ಘ

ಘಟ : (1) ದೇಹ 182, 715 (2) ವಸ್ತು 392

ಘನ : (× ಕಿಱಿದು) ಹಿರಿದು 20, 22, 26, 335, 411, 480. ಶ್ರೇಷ್ಠ 173. ಅವಿರಳವಸ್ತು 185, 225, 226, 236, 600. ನಿರಾಕಾರ-ವಸ್ತು 214, 470, 899

ಘುಟಿಕಾಸಿದ್ಧರು : ನಾರುಬೇರನ್ನೂ ಪಾದರಸವನ್ನೂ ಗುಳಿಗೆಯಾಗಿ ಕಟ್ಟುವ ಸಿದ್ಧಿಯನ್ನು ಪಡೆದ ವಿಕಾರಿಸಿದ್ಧರು 716

ಘುಟಿಕೆ : ವಜ್ರಕಾಯಸಿದ್ಧಿಯನ್ನು ಕೊಡುವ ಪಾದರಸದ ಗುಳಿಗೆ 1279. 'ನವನಾಥಸಿದ್ಧರೆಲ್ಲರು ಪರಮಘುಟಿಕೆ ಬಸವಾ, ಎಂದೆಂಬರು' (ಬ. ಸ್ತೊ. 47)

## ಚ

ಚರ್ಚ್ಚಗೋಷ್ಠಿ : ಚರ್ಚಾಗೋಷ್ಠಿ 329

ಚತುರಸ : ( <ಚತುರಶ್ರ) ಚೌಕಾಕಾರವುಳ್ಳುದು 586

ಚರ : ಜಂಗಮ 1173

ಚಲ್ಲಣ : ಚೊಣ್ಣ, ಚಡ್ಡಿ 260

ಚಿಕ್ಕಾಡು : ಚಿಗಟ, ಅತಿ ಚಿಕ್ಕ ಕ್ರಿಮಿ 681, 815

ಚಿಕ್ಕುಟ : ಸಣ್ಣ, ಚಿಕ್ಕ ? 143

ಚಿಕ್ಕುಟ ಸಾವು : ಕ್ಷುದ್ರರೀತಿಯ ಮರಣ 511

ಚಿತ್ತಾರ : ಚಿತ್ರ 1306

ಚಿತಿಸಾಗರ : ಚಿತ್ಸಾಗರ 1314

ಚೆಲುವ : ಚೆಲುವು, ಚೆನ್ನು 538

ಚೋಹ : ವೇಷ, ಚೊಗೆ, ತೊಡುವ ಬಟ್ಟೆ 484, 931

ಚೌದಂತ : ಐರಾವತ 1090

ಚೌರಾಶೀತಿ : ಎಂಬತ್ತುನಾಲ್ಕು

## ಛ

ಛತ್ರ : ಅನ್ನ ? 613

ಛೇಗೆ ( = ಛೇಗು) : ಕೇಡು, ನಾಶ, (×ಆಗು) 'ತನಗೆ ಮುನಿವವರಿಗೆ ತಾ ಮುನಿಯಲೇಕಯ್ಯ ? ತನಗಾದ ಆಗೇನು ಅವರಿಗಾದ ಛೇಗೇನು' (ಬ. ವ. 284)

## ಜ

ಜಗತ್ಸ್ರಷ್ಟ : ಬ್ರಹ್ಮ 539

ಜಗದಾರಾಧ್ಯ : ಜಗದ್ಗುರು 573

ಜಂಗಮ : 1172 (1) ಜಂಗಮಮೂರ್ತಿ (2) ಪಶು

ಜಂಗುಳಿ : ಮಂದೆ 8

ಜಂಘೆ (ಜಾನು—) : ಮೇಲ್ತೊಡೆ ಮತ್ತು ಮೊಳಕಾಲು

ಜಂತ್ರದವಳಿ : ಯಂತ್ರದ ಜೋಡಿ 1301

ಜರಗ ತೊಳೆ : ಮಣಿನಲ್ಲಿ ಬೆರೆತ ಚಿನ್ನದ ಪುಡಿಯನ್ನು ತೊಳೆದು ಜಾಲಿಸಿ ತೆಗೆ 103

ಜಲಗರ ಕುತ್ತ : ಹೊಟ್ಟೆಯಲ್ಲಿ ನೀರು ತುಂಬಿಕೊಳ್ಳುವ 'ಜಲೋದರ'ವೆಂಬ ರೋಗ 520

ಜಲವ ಕೂಡಿ ಹೋಗು : ಕೊಚ್ಚಿಹೋಗು ನಾಶವಾಗು 207.

ಜವ : ಯಮ 27, 124

ಜವನವರು : ಯಮದೂತರು 44

ಜವಳಿಗಂಭ : ಜೋಡುಗಂಬ 99

ಜವಳಿಗುಂಡಿಗೆ : ಜೋಡಿಪಾತ್ರೆ, ಜೋಡಿ ಕಮಂಡಲು 721

ಜಾಗರ : ಜಾಗರಣೆ, ಎಚ್ಚರ 812, 1314

ಜಾಣಿಕೆ : ಜಾಣ್ಮೆ 848

ಜಾಯಿಗ : (1) ಜಾತಿಯಲ್ಲಿ ವ್ಯವಹರಿಸುವವನು, ಸ್ವಜಾತಿಯವನು (2) ನಾಯಿ ? 1317

ಜೋಡು: ಯೋಧನ ದೇಹಕವಚ 1235

## ಝ

ಝುಂಕಿಸು : ಆಕ್ಷೇಪಿಸು 52

## ಠ

ಠಕ್ಕ : ವಂಚಕ, 122

ಠಾಣಾಂತರ ಹೇಳು : ಅಲೆಸು, ವಲಸೆ ಹೋಗಿಸು, ಒಂದು ಜಾಗವನ್ನು ಬಿಟ್ಟು

ಇನ್ನೊಂದು ಜಾಗಕ್ಕೆ ಹೋಗು ಎನ್ನು 239

ಠಾವು : ತಾವು, 74, 183, 479, 1214

ಠೊಪ್ಪರ : ಟೊಪ್ಪಿಗೆ, ಕುಲಾವಿ 374

## ಡ

ಡಿಂಗರಿಗ : ಸೇವಕ

## ಢ

ಢಾಳ : ಕಾಂತಿ 101, 1147

## ತ

ತಕ್ಕೈಸು : ಆಲಿಂಗಿಸು 80

ತಗರ ಹೋರಟೆ : ಟಗರ ಕಾಳಗ 465

ತಗಹು : ಅಡ್ಡಿ ಆತಂಕ 723 'ಕಾನನದ ನಡುವೆ ತಗಹಿನಲಿರಿಸಿ ಹುಸಿಕನೆಸಿಸು' (ಹ. ಕಾ. 9-16)

ತಟ್ಟು : ಕೌದಿ, ಕಂತೆ 721

ತಡವಾಗಿರು : ? 886

ತಂಡುಲ : ಅಕ್ಕಿ 1214

ತತ್ತ : ಸರಿಯಾದ, ನಿಯಮಿತ 1299

ತತ್ತಬಿದಱು : ಚೂರುಚೂರಾಗಿ ಕೊಚ್ಚು 1299

ತತ್ತಲ್ಲೀಯವಾಗು : ತಲ್ಲೀನವಾಗು 1161

ತಪ್ಪುಕರು : ಅಪರಾಧಿಗಳು 192

ತಮಂಧ : ಕಗ್ಗತ್ತಲು 132, 1122

ತರತರಂಬೋಗು : ಹರ್ಷಾಧಿಕ್ಯದಿಂದ ಕಂಪಿಸು 100

ತರಹರವಾಗು: ಸರಿಯಾಗು, ಹೊಂದಿಕೋ 180. ಸ್ಥಿಮಿತವಾಗು, ಸ್ವಸ್ಥವಾಗು 540, 1003

ತರುವಲಿಗಳು : ತರಳರು, ಅಪ್ರಬುದ್ಧರು 793

ತರುವಕ್ಕಳು : ಹುಡುಗರು 865,

ತಱಿಕಟಗಾಡು: ವಿಪರೀತವಾಗಿ ನೋಯಿಸು 264

ತಲೆವರಿಗೆ : ಗುರಾಣಿ 547

ತಲೆವಾರು : ( < ತರವಾರು, ತಲವಾರ) ಖಡ್ಗ 928

ತಳಕಂಬ : ಆಧಾರಸ್ತಂಭ ? 112

ತಳಿಸು : ಕುಟ್ಟು 1270

ತವರಾಜ : 'ಹಾಲ ತೊಱೆಗೆ ಬೆಲ್ಲದ ಕೆಸಱು, ಸಕ್ಕರೆಯು ಮಳಲು, ತವ ರಾಜದ ನೊರೆತೆರೆ' (ಬ. ವ. 290) 'ತವರಾಜ ಹೆತ್ತ ತುಪ್ಪ ಹಲಸಿನ ಹಣ್ಣು' (ಬ. ವ. ಹೆ. 273) ಯವಾಸದಿಂದ ತೆಗೆದ ಒಂದು ವಿಧ ವಾಧ ಸಕ್ಕರೆ. ಒಂದು ವಿಧವಾದ ಸಸ್ಯದ ಅಂಟನಿಂದ ಮಾಡಿದ ಸಕ್ಕರೆ 1217. 'ನೀರಿಂದಾದ ಮುತ್ತು ಮತ್ತೆ ನೀರಾಗದು ಎಂಬ ಹಾಗೆ, ಹಗಿನದಿಂದಾದ ತವರಾಜ ಮತ್ತೆ ಹಗಿನವಾಗದು' (ಅ. ವ. 122 ನೋಡಿ)

ತಾರ್ಕಣೆಯಾಗು : ನಿಜವಾಗು 81, ಅದೇ ಇದೆನ್ನಿಸು, ಹೋಲು, 1063 'ಎನ್ನ ಮನಮನ ತಾರ್ಕಣೆಯಪ್ಪಂತೆ ನಿಮ್ಮಲ್ಲಿ ಐಕ್ಯನ ಮಾಡಿಕೊಳ್ಳಾ' (ಬ. ವ. ಹೆ. 380)

ತಾಗು ಕಡೆ (= ತಾಗು ತಡೆ ?) : ತಾಗುವುದು ಮತ್ತು ಮಧ್ಯಕ್ಕೇ ನಿಲ್ಲುವುದು, ಅಡ್ಡಿ ಆತಂಕ

ತ್ರಾಸುಕಟ್ಟಳೆ : ತಕ್ಕಡಿ ಮತ್ತು ಅದಕ್ಕೆ ಸಂಬಂಧಿಸಿದ ನಿಯಮಗಳು 490, 'ನಡೆಯೊಳಗೆ ನುಡಿಯ ಪೂರೈಸುವೆ, ಮೇಲೆ ತೂಗುವ ತ್ರಾಸುಕಟ್ಟಳೆ ನಿಮ್ಮ ಕೈಯಲ್ಲಿ' (ಬ. ವ. 440)

ತ್ರಾಹಿ : ಕಾಪಾಡು 1139

ತಿಂಥಿಣಿ : ಸಮೂಹ 287, 1299

ತಿಂದಿತ್ತು : ಕಚ್ಚಿತು 324 'ಹಾವು ತಿಂದವರ ನುಡಿಸಬಹುದು' (ಬ. ವ. 132)
ತಿಂಬ : ನವೆಯಾಗುವ, 1063
ತಿಂಬುದ : ಕಚ್ಚುವುದನ್ನು 73
ತಿಲ : ಎಳ್ಳು 761
ತುಡುಕು : ಹಿಡಿ 228, 1315
ತುಡುಗುಣಿ : ಕದ್ದು ತಿನ್ನುವ ದನ 468
ತುಂಬು : (1) ಮುಗಿ, ಕೊನೆಯಾಗು 1231 (2) ತೂಬು 1310
ತುಯ್ಯಲು : ಅಕ್ಕಿಯ ಪಾಯಸ 607 'ತುಯ್ಯಲಾದರೆ ಉಂಬೆ, ಹುಯ್ಯಲಾದರೆ ಓಡುವೆ' (ಬ. ವ. 254)
ತುಱುಚಿ : ತಾಗಿದರೆ ಉರಿ ಮತ್ತು ನವೆಯನ್ನು ಬರಿಸುವ ಒಂದು ವಿಧವಾದ ಸೊಪ್ಪು 315
ತುಷ : ತೌಡು 1214
ತೆಗೆ : ಹಿಡಿದೆತ್ತು 54, 215
ತೆರಣೆಗಟ್ಟು : ಸುತ್ತಿ ಬಿಗಿದು ಕಟ್ಟು 1311
ತೆರೆ : ನೀರಿನ ಅಲೆ 414
ತೆಱನು : ರೀತಿ 965
ತೆಱಹು : ಸಂದು, ಅಂತರ, ಭಿನ್ನಭಾವ 185, 310, 635, 891, 1023, 1262, 1297. ಅವಕಾಶ, ಎಡೆ 1028, 1108, 1307
ತೆಱೆಮಱೆ : ಪ್ರಕಟಿತ ಮತ್ತು ಗೋಪ್ಯ 1150
ತೆವರು : ಮಣ್ಣಿನ ದಿಣ್ಣೆ 368
ತೇಜ : ಅಗ್ನಿ 136
ತೊಡಕು (ಸರಿ–) : ಸರಿಗಂಟು, ಬಿಡಿಸಲಾಗದ ಬಂಧ 500
ತೊಡರು : ವೀರನ ಕಾಲ್ಬಳೆ 820 'ಕಲಿಯ ಕಾಲ ತೊಡರು ಛಲದಾಳಿಗಲ್ಲದೆ ಇಕ್ಕಬಾರದು' (ಬ. ವ. 665)
ತೊಂಡಾಡುಗಳು : ತೊಂಡಲೆಯುವ ಮೇಕೆಗಳು 1317
ತೊಂಡಿಲು : ಮುಡಿಯುವ ಹೂವಿನ ದಂಡೆ 607
ತೊಡೆ : ಅಳಿಸು, (ಬರೆವ×ತೊಡೆವ) 642
ತೊತ್ತಳದುಳಿ : ತೊತ್ತನ್ನು ತುಳಿಯುವಂತೆ ತುಳಿ 371, 1250
ತೊತ್ತಿರು : ದಾಸಿಯರು 1270
ತೋರ : ದಪ್ಪ 48, 328
ತೋಹು : ಬೇಟೆಯಾಡುವಾಗ ಅಡಗಿಕೊಳ್ಳುವ ಮರೆಯಾದ ಜಾಗ 721 'ಬೇಂಟೆಯಾಡುತ್ತ ಶತಶೃಂಗತಟವಿಪಿನದೊಳು ತೋಹುಗೊಂಡು ಮುನಿದೊಂದು ಹರಿಣನಂ ತೀವಿ ತೆಗೆದೆಚ್ಚು' (ಸಿ. ಚಾ. 4-44)

## ಥ

ಥಟ್ಟುಗೆಡಹು : ಮೆದೆಗೆಡಹು, ರಾಶಿಯಾಗಿ ಬೀಳಿಸು 699

## ದ

ದಡಿಕಾಱರು : ದಂಡಧಾರಿಗಳಾದ ದ್ವಾರಪಾಲಕರು 1008
ದಂಡೆ : ಹೂವಿನ ದಂಡೆ 628, 1309
ದಂದುಗ : ಕಷ್ಟ 425
ದರಿದ್ರ : ದಾರಿದ್ರ್ಯ 115
ದಳ : ಎಲೆ, ಚಿಗುರೆಲೆ 297
ದೂರದೆಡೆ : ಅಕ್ಕಪಕ್ಕ, ಸುತ್ತುಮುತ್ತು 151
ದೇಹಾರ: (<ದೇವಗೃಹ) ದೇವರ ಗೃಹ, ದೇವರ ಪ್ರತಿಮೆ 419, 882, 885 'ಪಡಿತೀರಲ್ ಹೊನ್ನನಿತ್ತೊಡಲ್ಲದೆ ಮಿಕ್ಕರ್ ಕುಡರೆಂತುಂ ದೇಹಾರಮನ್'

ನಿರ್ವಾಣ : ದಿಗಂಬರ, ಬತ್ತಲೆ 721, 1225
ನಿವಾತವಾಗು : ನಿಶ್ಚಲವಾಗು, ಲಯವಾಗು 669
ನಿಶ್ಚಟರು : (<ನಿಃಶಠರು) ನಿರ್ವಂಚಕರು, ನಿಷ್ಕಪಟಿಗಳು : 134
ನಿಶ್ಚಯವಾಗು : ತೊಲಗು, ಚದುರಿಹೋಗು 1225
ನಿಷ್ಪತಿ : (<ನಿಃಪತ್ತಿ, ನಿಷ್ಪತ್ತಿ) ಪರಿಪೂರ್ಣತೆ 1304
ನಿಷ್ಪತಿಯಾಗು : ಕೊನೆಯಾಗು, ಕಳಚಿಬೀಳು 779, 1238. ಕೈಗೂಡು, ಪೂರ್ಣವಾಗು 781
ನಿಃಸ್ಥಲ : ಸ್ಥಲಾತೀತ ಪರವಸ್ತು 597
ನೀಲ : ನೀಲಮಣಿ 101
ನೀರಹರಿ : ಕಾಲುವೆ 111
ನೀರಿಳಿ : ಸೂತಕಸ್ನಾನಮಾಡು 864
ನುಡಿಹ : ಮಾತು 734
ನುಲಿ : ಹಗ್ಗ 438
ನೆಗಪು, ನೆಗಹು : ಮೇಲೆತ್ತು 883, 982
ನೆಗಳು : ಮೊಸಳೆ 360
ನೆರವಿ : ಗುಂಪು 957
ನೆರೆ : ಸಂಗಮಾಡು,ಕೂಟಮಾಡು, 111 1170. ಸಂಗಮಿಸು, ಸೇರು 133, 139, 238, 260, 410, 436, 444
ನೆಜಿಃ : ಸಂಪೂರ್ಣವಾಗಿ 127
ನೆಲೆಗಟ್ಟು : ಅಡಿಪಾಯ 598
ನೆಲೆಗತಿ : ಆದ್ಯಂತ, ರಹಸ್ಯ, ಚಲನವಲನ 194
ನೆಲಹು: ಜಾತೆಯಿಂದ ನೇತುಬಿದ್ದ ಹಗ್ಗದ ಕಲ್ಲಿ 572
ನೆಲೆಹೊಲೆ : 1201, 1204
ನೆಲಗತವಾಗು : ಭೂಗತವಾಗು, ಮಣ್ಣು ಪಾಲಾಗು 156. "ಅಂಕನಾಥದೇವರ ದೇವಾಲ್ಯಲು ನೆಲಗತವಾಗಿ ಇರಲಾಗಿ" (ಎ. ಕ.)
ನೆಲೆಗೆಡು : ಹಿಮ್ಮೆಟ್ಟು 151
ನೇರಿತ್ತು : ಹೊಂದಿ ಅಂದವಾಗಿರುವುದು 38
ನೇಹ : ಸ್ನೇಹ 1164, 1223
ನೊಸಲು : ಹಣೆ 1306

ಪ

ಪಕ್ಕ : (<ಪಕ್ಷ) ರೆಕ್ಕೆ 1318
ಪಟುಮಾಡು : ಊದಿ ಉರಿಮಾಡು 1175
ಪಡೆ : ಸೈನ್ಯ 112
ಪಣಿತೆ : ಹಣತೆ 57
ಪದ : ಪದವಿ 121
ಪದಶಿಲೆ : ಅಡಿಗಲ್ಲು, ಪೀಠಗಲ್ಲು 112, 711
ಪದಾರ್ಥ : ಸಾರು 250, 849. ಆಹಾರ, ನೈವೇದ್ಯ 1119, 1126, ಭಕ್ಷ್ಯಭೋಜ್ಯ 1128
ಪರ್ಬಿ : ಹಬ್ಬಿ 758, 1259
ಪರಿಣಾಮ : ಆನಂದ 738, 447
ಪರಿಭವ : ಸೋಲು 35
ಪರಿಯಾಣ : ಹರಿವಾಣ, ತಟ್ಟೆ 173, 520, 568, 1128
ಪರುಷವೇದಿ : 456
ಪಱಿ : ಹರಿ, ಕತ್ತರಿಸು 1276
ಪವಣಿಸು : ಪೋಣಿಸು 443, 617, 1321
ಪಸರ : ವಿಸ್ತಾರ 853. ಅಂಗಡಿ 18
ಪಸರಿಸು : ಹಬ್ಬು 758
ಪಂಚಾಶತ್ : ಐವತ್ತು 8, 29
ಪ್ರಪಂಚು: ಭೇದಬುದ್ಧಿ, ಠಾಕಿಕ, ಮೋಸ, ಕಪಟ 314, 502, 1131,

ನಟನೆಯ ಉಪಚಾರ 1265
ಪ್ರಮಾಣಿಸು : ಅಳತೆಮಾಡು 273, 1202
ಪ್ರಮಾಣು : (<ಪ್ರಮಾಣ) ಅಳತೆ 246, 887, 1297
ಪ್ರಸಂಗ : ವಿಚಾರಮಥನ, ಚರ್ಚೆ, ಗೋಷ್ಠಿ 934
ಪಾಕುಳ : ಅಸಹ್ಯ, ಹೇಸಿಗೆ 721
ಪಾಂಗು : ರೀತಿ 1292
ಪಾಯದಳ : ಕಾಲಾಳುಗಳ ಸೈನ್ಯ 211
ಪಾಷಾಣ : ಕಲ್ಲು, 214, 841
ಪಿಂಡಿಗೆ : ಪೀಠಿಕೆ, ಲಿಂಗವನ್ನು ಪ್ರತಿಷ್ಠಿಸುವ ಪಾಣಿಬಟ್ಟಲು 184, 193, 408. "ವೃಂತಫಲಮಂ ಸಮುಂತಂದು ಕಕ್ಷದೊಳಿರಿಸಿ.....ತೊಟ್ಟು ಪಿಂಡಿಗೆಯಾಗೆ, ಫಲಮೆ ಲಿಂಗಮುದಾಗೆ" (ಬ.ದೆ.ರ 9-57)
ಪುತ್ಥಳಿ : ಗೊಂಬೆ 30, 36, 913, 1263
ಪುನಶ್ಚರಣೆ : ಜಪಿಸುವುದು 876
ಪುರಾತರು : ಶರಣರು 733, 734
ಪುರುಷ : ಗಂಡ 444, 913, 1022
ಪೂರಾಯ : ದೊಡ್ಡ 301, 340
ಪೂಸು : ಸವರು, ಬಳಿ 375
ಪ್ರೇತಜನಾರಣ್ಯ : ಸ್ಮಶಾನ 1167
ಪೊಡಮಡು : ನಮಸ್ಕರಿಸು

ಬ

ಬಗದಳ : ಬಾಯಲ್ಲಾಗುವ ಕೆಟ್ಟ ಹುಣ್ಣು 842
ಬಗರಿಗೆ : ತಪ್ಪಲೆ, ದಬರಿಗೆ 38
ಬಗ್ಗುರಿ : (<ವಾಗುರಿ). ಬೇಡರು ಮೃಗವನ್ನು ಹಿಡಿಯಲು ಬೀಸುವ ಬಲೆ ? 377.
ಬ್ರಹ್ಮೇತಿ : ಬ್ರಹ್ಮಹತ್ಯೆ 54
ಬಟ್ಟೆ : ದಾರಿ 83. 161. 239 394
940 (ಬಂದ—) : ಯೋನಿ 312 391
ಬಂಡು : ಜೇನು, ಪುಷ್ಪರಸ 820
ಬಣಗು : ನೀಚ, ಕೆಲಸಕ್ಕೆ ಬರದ, 1314
ಬಣ್ಣ : ಸೀರೆ 16, 690
ಬಣ್ಣಕರು : ವರ್ಣಿಸಿ ಹೊಗಳುವವರು 1136
ಬಣ್ಣಿಗೆ : ಬಣ್ಣದ ಮಾತು 1019
ಬತ್ತೀಸ : ಮುವ್ವತ್ತೆರಡು 1174
ಬಂದಿ : ಸೆರೆಯಾಳು 476
ಬಂದಿ (ಒಡ—) : ಬಂದಿಯ ಒಡನಿರುವ ಬಂದಿ, ಬಂದಿಯ ಜೊತೆಗಾರ 1108
ಬದ್ದಹೆನು : ಬದುಕುವೆನು 328
ಬಧಿರ : ಕಿವುಡ 1236
ಬಯಕೆ : (=ಬಯ್ಕೆ) ನೆಲದಲ್ಲಿ ಬೈಚಿಟ್ಟ ನಿಧಿ 1229
ಬಱಡು : (× ಹಯನು) ಬಂಜೆ, 315 395
ಬಱುದೂಱು : ಮಿಥ್ಯಾಪವಾದ 1317
ಬಱಿಯ (ಬಚ್ಚ-) : ಶುದ್ಧ, ಅಪ್ಪಟ 351
ಬಱಿಯಱಿವು : ಕೆಲಸಕ್ಕೆ ಬಾರದ ತಿಳಿವಳಿಕೆ 463
ಬಱುದೊಱೆವೋಗು : ವ್ಯರ್ಥವಾಗು 185, 485, 1012
ಬಱುಮುಖರು : ಶೂನ್ಯಮುಖರು 113
ಬಱುಸೂಱೆವೋಗು : ಅತ್ಯಂತವಾಗಿ ಸೂರೆವೋಗು, ಹಾಳಾಗು 31, 155 496
ಬಲಿ : ಪೆಟ್ಟು, ಕುಟ್ಟು 1187
ಬಲಿದಿರು ; ಬಿಗಿಯಾಗಿ ಹಿಡಿದಿರು 783
ಬಲಮುರಿ : ಬಲಸುತ್ತು 1321
ಬಳಸು : ವ್ಯವಹರಿಸು 269, 1272
ಬಳ್ಳ : ('ಕೊಳಗ' ನೋಡಿ) 1010
ಬಳ್ಳು : ನರಿ 111, 1320

ಬವರ : ಯುದ್ಧ 838
ಬವರಿಗೊಡು : ತಿರುಗು, ಸುತ್ತು 1126
ಬಾಗು : ಬಗ್ಗಿಸು, ಬಸಿ 250
ಬಾಡು : ಮಾಂಸ 568
ಬಾಣಸಪ ಮನೆ : ಅಡಿಗೆಯ ಮನೆ, 662 1015
ಬಾಣಸವ ಮಾಡು : ಅಡುಗೆ ಮಾಡು 286
ಬಾನ : ಬೋನ, ಅನ್ನ 454
ಬಾರಿ : ಸರದಿ 507, 407, 492
ಬಾಳುದಲೆವಿಡಿ : ಶತ್ರುವನ್ನು ಬದುಕಿರುವಂತೆಯೇ ಸೆರೆಹಿಡಿ 385
ಬಾಹುದಕ್ಕೆ : ಬರುವುದಕ್ಕೆ 1031
ಬಿಂದು : (1) ರೇತಸ್ಸು, ವೀರ್ಯ 469 (2) ನೀರಿನ ಹನಿ 1200
ಬಿಂದು ನಿಲ್ಲುವುದು : ಗರ್ಭಧಾರಣೆಯಾಗುವುದು 1124
ಬಿನುಗು: ಕ್ಷುದ್ರ, ನಿಷ್ಪ್ರಯೋಜಕ 1308, (ಬಿನುಗುಭಾವ : ದುಷ್ಟಭಾವ 1308)
ಬಿಯ್ಯಗ : ಬೀಗ 1008
ಬಿಲ್ಲಾಳು : ಧನುರ್ಧಾರಿ 97
ಬಿಲಿ : ಕ್ರಯಮಾಡು 330, 583
ಬಿಸುಗಣ್ಣು : ಅಗ್ನಿನೇತ್ರ, 973
ಬಿಸುಜಂತೆ : ಬೆಸೆದು ಬಿಗಿಯಾಗಿ ಕುಳಿತ ಜಂತೆ 99
ಬೀದಿಗಐುವಾಗು : 398 ಪ್ರಕಟವಾಗು, ಬಸವನನ್ನಾಗಿ ಬಿಟ್ಟ ಕರುವಿನಂತೆ ಸ್ವತಂತ್ರವಾಗು, ಹೋಗು.
ಬೀದಿವರಿ : ಸ್ವೇಚ್ಛೆಯಾಗಿ ಓಡಾಡು 1166
ಬೀಯ : ವ್ಯಯ 65
ಬೀಳುಡಿಗೆ : ಬಿಟ್ಟ, ಬಟ್ಟೆ ಮೈಲಿಗೆ 733
ಬೀಸರ : ನಾಶ 104, 171, 1307
ಬೂಟಕ : ಕಪಟ, ಕೃತ್ರಿಮ 1293
ಬೂತಾಟಕೆ : ಬೂಟಾಟಿಕೆ ? ಅಲ್ಪತನ 924

ಬೆಂಗುಂಡು : (<ಬಿಣ್‌ಗುಂಡು) ಹಡಗಿಗೆ ಹಾಕುವ ಲಂಗರುಗುಂಡು 353
ಬೆಚ್ಚ : ಬೆಸುಗೆ ಹಾಕಿದ 1029
ಬೆಚ್ಚಂತಿರು : ಏಕೋಭಾವದಿಂದಿರು 1232
ಬೆಡಗು : ಅರ್ಥಾಂತರತೆ
ಬೆದಕು : ಹುಡುಕು 560
ಬೆಂಬತ್ತಿಸುವ : ಬೆನ್ನು ಹತ್ತಿ ಹೋಗುವ 1145
ಬೆಂಬಳಿಯಲ್ಲಿ : ತರುವಾಯ 1206, 1207
ಬೆರಸು : (1) ಕೂಡು, ಐಕ್ಯವಾಗು 440 1012 (2) ಸಂಗಮಾಡು, ಸಂಭೋಗಿಸು 262
ಬೆಐಗು (=ಬೆರಗು) : ಭಯ ಮತ್ತು ತಳಮಳ 18
ಬೆಳಗುವ : ಬೆಳಗನ್ನು 616
ಬೆಳವಿಗೆ : ಅಭಿವೃದ್ಧಿ 1047, 1071 274
ಬೆಳಸು : ಫಸಲು, ಬೆಳೆದ ದವಸಧಾನ್ಯ 111, 137, 274
ಬೆಳ್ಳಾರ : 662. ಬೆಳ್ಳಾರವೆನ್ನುವ ಬಲೆ "ಬೆಟ್ಟಕ್ಕೆ ಬೆಳ್ಳಾರ ಸುತ್ತಿತಯ್ಯ, ಪಾಪದ ಬಲೆಯ ತಂದು ಮುಂದೊಡ್ಡಿದರಯ್ಯ" (ಬ.ವ. 835)
ಬೆಳ್ಳಿಗೆಯಾಕಳ : ಬೆಳ್ಳಿಗೆ ಜಾತಿಯ ಹಸು 1010 "ಬೆಳ್ಳಿಹಿಂಡುಗಳಂಧ್ರ ದೇಶದಿಂ ಹೇಱು ಬಂದೆಳ್ಳ ರಾಸಿಗಳ" (ಸಿ.ಚಾ. 8–51)
ಬೆವಸಾಯ : ವ್ಯವಸಾಯ 65
ಬೆಸಗೊಳ್ : ಕೇಳು 647, 1150
ಬೆಸಲಾಗು : ಹೆರು, ಪ್ರಸವಿಸು 17, 101
ಬೆಸಸು : ಆಜ್ಞಾಪಿಸು 973
ಬೆಸನು : ಆಜ್ಞೆ 1109

ಮರಳು

ಮರಳು : ಹಿಂತಿರುಗಿ ಬಾ 238, 811
ಮರೀಚಿ : (=ಮರೀಚಿಕೆ) ಬಿಸಲ್ಗುದುರೆ 4
ಮರುಳು : (1) ಪ್ರೇತ, ಬೂತ 146 (2) ಮೂರ್ಖ 147
ಮರುಜವಣಿ (=ಮರುಜೀವಣಿ) : ಸಂಜೀವಿನಿ 456 1032
ಮರುಳುಂಡ : ದೆವ್ವಹಿಡಿದ 442
ಮರುಳುದಲೆಯಲ್ಲಿ : ಹಿಂತಿರುಗುವಾಗ 662
ಮಱವೆ : ( = ಮಱಹು) ಅಜ್ಞಾನ 185, 352
ಮಱುಗು : ದುಃಖಿಸು, ಕುದಿ 43, 122, 385
ಮಱುವಾಳು : ಪುನರ್ಜನ್ಮ 1301
ಮಸಣಗುಂಟಣಿ : ಸ್ಮಶಾನಕ್ಕೆ ಕರೆದೊಯ್ಯುವ ದೂತಿ 1320
ಮಸುಳಿಸು : ಕಾಂತಿ ಹೀನವಾಗು 1315
ಮಸೆ : ಘಾಯ 1145, 1166
ಮಾಟ : ಆಚರಣೆ 1096
ಮಾಡ : ಸುಡುಗಾಡಿಗೆ ಹೆಣವನ್ನು ಹೊತ್ತೊಯ್ಯುವ ವಿಮಾನ 26. ಅಥವಾ ಗೂಡು (ಅಂದರೆ ದೇಹ) 26
ಮಾಣ್ : (1) ವಾಸಿಯಾಗು 255 (2) ಬಿಡು, 73, 98 1013, 375
ಮಾನ : ಅರ್ಧಸೇರು 48 ("ಕೊಳಗ" ನೋಡಿ)
ಮಾನಿಸ ಮಕ್ಕಳು : ಗಂಡು ಮಕ್ಕಳು ? 803
ಮಾನಿಸರು : ಮನುಷ್ಯರು 42
ಮಾಯ್ : ತೊಲಗು 417, 798, 938 1003 ; ಬಿಡು 354 1012
ಮಾಯದ : ಮಿಥ್ಯದ 43, 408, 628
ಮಾಯಾಕೋಳಾಹಳ : ಮಾಯೆಯನ್ನು ಗೆದ್ದವ 1250

ಮೊರಡಿ

ಮಾರಡೆ : ಆಧಾರ, ಹಂಗು 1150
ಮಾಱು (ಕೊಂಡ–) : ಕೊಂಡ ಬೆಲೆ ? ∴ ಕೊಂಡಮಾಱಂಗೆ ಹೋಗು: ಲಾಭವಿಲ್ಲದೆ ಹೋಗು, ವ್ಯರ್ಥವಾಗು, 69
ಮಾವತಿಗ : ಮಾವಟಿಗ 810
ಮಿಟ್ಟೆ : ಮಣ್ಣು 851
ಮುಗಿಲು : ಮೋಡ
ಮುಜ್ಜ್ಯೋತಿ : ಮೂರು ಜ್ಯೋತಿಗಳು 1315
ಮುತ್ತಯ್ಯ : ತಾತ, ಮುತ್ತಾತ 563
ಮುದ್ರೆ : ಮುಸುಕು, ಮುಚ್ಚುಳ 89 325
ಮುನಿ : ಕೋಪಿಸು 461
ಮುನ್ನಿನ : ಪೂರ್ವದ, ಹಿಂದಣ 66
ಮುಯ್ಯಾನು : ಮರೆಸು, ಭುಜಕೊಡು 31 1146
ಮುಱು : ಸೋಲಿಸು, ಸೋಲು, ಹಿಮ್ಮೆಟ್ಟು 211, 235
ಮೂಕೊಱತಿ : ಮೂಗನ್ನು ಕೊಯ್ಸಿಕೊಂಡ ಪಾಪದ ಹೆಣ್ಣು 641
ಮೆಱೆ : ಪ್ರಕಟಿಸು 1007
ಮೆಲ್ : ತಿನ್ನು 242, 579, 1235
ಮೇಘವಹ್ನಿ : ಸಿಡಿಲು 1125
ಮೇಲು : ಭೇದ 249
ಮೇಳ : ಗುಂಪು 374
ಮೇಳಾಪ : ಸ್ನೇಹ, ಸಹವಾಸ 318, 329
ಮೊಟ್ಟೆ : ಗಂಟು 179, 599
ಮೊತ್ತ : ಸಮೂಹ 439
ಮೊದಲು : ಅಸಲು, ಮೂಲಧನ 108
ಮೊಲೆನೀರ ಮೀ : ಮಕ್ಕಳನ್ನು ಹೆತ್ತು ಮೊಲೆಯಲ್ಲಿ ಹಾಲು ತುಂಬು 1124
ಮೊಳೆ : ಮೊಳಕೆ 1256, 943
ಮೊರಡಿ (ಹುಲು–) : ಅತಿಸಾಮಾನ್ಯವಾದ ಕಲ್ಲುಗುಡ್ಡ 66

ಮೋಟ : ಭಂಡ 461
ಮೋಱಗೆಡು : ಮುಖಭಂಗವಾಗು 943
ಮೌಕ್ತಿಕ : ಮುತ್ತು 897

## ಯ

ಯಂತ್ರವಾಹಕ : ಸೂತ್ರದ ಗೊಂಬೆಯನ್ನು ಆಡಿಸುವವನು 16, 745
ಯೂಥ : ಸಮೂಹ
ಯೋಗವಟ್ಟಿಗೆ : ಯೋಗಾಭ್ಯಾಸಮಾಡುವಾಗ ದೇಹವನ್ನು ನೇರವಾಗಿರಿಸಲು ಉಯೋಗಿಸುವ ಒಂದು ಪಟ್ಟಿಕೆ. 374, 862
ಯೋಗವಾವುಗೆ : ಯೋಗಿಗಳು ಮೆಡುವ ಪಾದುಕೆ. 374

## ರ

ರಗಟ : ಚಿಂದಿ 924
ರಜ : ಕಸ 137
ರಾಟಾಳ : ನೀರು ಸೇದುವ ತಿರುಗಣಿ ಯಂತ್ರ 1196
ರತಿ : ? 1237
ರಾದು : ? 726
ರಾಶಿವಾಳ : ಹಿಂಡನ್ನು ಕಾಯುವವ 8
ರೂಹು : ರೂಪು

## ಱ

ಱಚ್ಚೆಯ ಮಾತು : ಕೊಳೆಮಾತು 500

## ಲ

ಲಗುನ ವಿಗುನ : ಲಗ್ನ ವಿಘ್ನ 36
ಲಚ್ಚಣ : ಲಕ್ಷಣ 403, 835
ಲಂದಣಿಗ: 481 ( <ರಂಧನಿಕ=ಅಡಿಗೆಯವನು) ಅಡುಗೂಳಜ್ಜ. "ಲಂದಣಗಿತ್ತಿಯಂತೆ ಬಂದ ನಿಂದ ಭಕ್ತರಲ್ಲಿ ಪೊಸತನದಂದವ ಹೇಳಿ", (ನ.ಮಾ. ತಂ. ವ. 34) ಲಂದಣಿಗರ ಬಂಧದ ಮಾತಿನ ಮಾಲೆ" (ಏ.ಕೇ.ವ. 158)
ಲಾಕುಳ : ಸನ್ಯಾಸಿಯು ಕೈಯ ದಂಡ
ಲಾಂಛನ : ಜಂಗಮವೇಷ 200, 893, 1136
ಲಾಂಛನಧಾರಿ : ಜಂಗಮ 484
ಲಿಂಗ : ಪುರುಷಜನನೇಂದ್ರಿಯ 907
ಲೆಂಕ : (ಒಡಯನಿಗೆ ಪ್ರಾಣಕೊಡುವ) ಸೇವಕ 819
ಲೆಪ್ಪ : ಲೇಪ್ಯ ? 263
ಲೋಃಯಿಸರ : ಲೋಳಸರ (ನಾಗದಾಳಿ-ಜಾತಿಗೆ ಸೇರಿದ ಸಸ್ಯ) 677

## ವ

ವರ್ಮ : ಯುದ್ಧಕವಚ, ಯುಕ್ತಿ 573 1010, 1120
ವರಮುಖಿಗಳಾಗು : ವರವನ್ನು ಬೇಡು 163
ವಸುಧಾಜಾತ : ವೃಕ್ಷ 1302
ವಸ್ತುಕ : ಚಂಪೂ 641
ವಂಗಡದೆಗೆದು ನುಡಿ : ಉದ್ದುದ್ದವಾಗಿ ಮಾತನಾಡು 1295
ವರ್ಣಕ : ಷಟ್ಪದಿ ಮುಂತಾದ ಹಾಡುಗಬ್ಬ 641
ವಾಕು : ಮಾತು 175
ವಾದು : ವಾದ 69
ವಾದಿಗೆಳಸುವರು : ವಾದ ಮಾಡಲಿಚ್ಛಿಸುವವರು 69
ವಾಯ : ವೃಥಾ 113, 178. "ವಾಯವೆಂದರೆ ಇಲ್ಲವೆ" (ಮಹಲಿಂಗನ ವ್ಯಾಖ್ಯಾನ), ಅಂದರೆ ಶೂನ್ಯ 22, 211, 307, 342,408, 588, 628, 653, 845, 863, 1101, 1295
ವಾರಿಕಲ್ಲು : ಆಲಿಕಲ್ಲು 913

ವಾಳಾವಳಿ : ಆಡಂಬರ ( <ವೇಳವಾಳಿ ?) ಒಡಯು ಸತ್ತರೆ ತಾನೂ ಸಾಯುವೆನೆಂಬ ಲೆಂಕನ ಆಡಂಬರ ? 327
ವಾಳಿ( < ವಾಹ್ಯಾಳಿ) : ಕುದುರೆ ಸವಾರಿ ಮುಂತಾದ ದೃಶ್ಯ, ದೃಶ್ಯವಾದೀ ಜಗತ್ತಿನ ಆಗುಹೋಗು, 899
ವಿಗಡ : ವೀರ 750
ವಿಭ್ರಾಂತಿ : ವಿಗತಭ್ರಾಂತಿ 898
ವಿಮಾನ : ಶವವನ್ನು ಸ್ಮಶಾನಕ್ಕೆ ಒಯ್ಯುವ ಮಂಟಪ 864
ವಿರಳ : ಸಂದು 1321
ವಿರಿಂಚಿ : ಬ್ರಹ್ಮ 1275
ವಿವರ : ವ್ಯತ್ಯಾಸ 442
ವಿವರಣೆಯ ಮಾಡು : ಬೇರ್ಪಡಿಸು, ವಿಭೇದಿಸು 702
ವಿವರಿಸು : (1) ಭಾವಿಸು 1089. (2) ಛಿದ್ರಿಸು, ಕಳೆ 1102. ಛಿದ್ರಿಸು ಸಡಿಲಿಸು 1255
ವಿಸಂಚು : ಚಾಂಚಲ್ಯ, ದ್ರೋಹ 862
ವಿಹಂಗ : ಹಕ್ಕಿ 1231
ವೆಜ್ಜ : ರಂಧ್ರ 811
ವೇದಿಸು : ತಿಳಿ 324, 388, 399,
ವೇಧಿಸು : 1145, 1183 ಭೇದಿಸು

## ಶ

ಶತಡೊಂಕು : ( × ಸಸಿನ) ಶತವಕ್ರ
ಶಾಖಪಾಕ: ವ್ಯಂಜನ ಮತ್ತುಭಕ್ಷ್ಯ1270
ಶ್ರಾವಕ : ಜೈನ ಧರ್ಮಾವಲಂಬಿ 764
ಶಿತಾಳ (ಶೀತಾಳ, ಸಿತಾಳ) : ತಣ್ಣನೆಯ ನೀರು, ಚಿಲುಮೆಯ ನೀರು "ಒಡಯರಿಗೆ ಸಲುಹುದಕ್ಕೆ ಮುನ್ನವೇ ಶಿತಾಳ ಶಿವದಾನವೆಂದು ಇಕ್ಕ ಬಹುದೇ" (ಏ. ಕೇ. ವ. 108). "ಶೀತಾಳದರವಟ್ಟಿಗೆಯ ಮಧ್ಯದಲಿ" (ಪ್ರ. ಚ. 9–14)



ಶಿವದಾನ : ಮಜ್ಜಿಗೆ 1270
ಶಿಖರಿ : ಪರ್ವತ 1008
ಶಿಶು : ಶಿಷ್ಯ 918, 1023, 1044

## ಸ

ಸಕೀಲ : ಮರ್ಮ, ರಹಸ್ಯ 1009, 1140. "ಬಹ ಹೋಹ ಸಕೀಲವನಾರೂ ಅಱಿಯರು" (ಬ.ವ.ಹೆ. 94)
ಸಕುತಿ : ಆಸಕ್ತಿ 1305
ಸಂಗಸಂಯೋಗ : ಮೈಥುನ 628
ಸಂಚ: ಸಾಮಗ್ರಿ ಸಂಗ್ರಹ, 624. ಚೀಲ 293. ರಹಸ್ಯ 196, 509 538 745, 1300. ಸಂಚಯ, ಮೊತ್ತ, 16, 737, 972. "ಅಱುಹಿರಿಯರೆಲ್ಲರೂ ಕೋಡಗದ ದಾಡೆಯ ಸಂಚದ ಕೂಳನುಂಡು ತಮ್ಮ ಸಂಚಾರದ ಸಂಚವನಱಿಯದೆ" (ಗು.ಮಂ.ವ. 68)
ಸಂಚು : ನಿರ್ವಹಣೆ, ಆಯ, ವ್ಯವಸ್ಥೆ 65, 1023
ಸಜ್ಜೀವ : 580
ಸಟೆ : ಸುಳ್ಳು 135
ಸಂತ : ಸರಿ, ನೇರ 848
ಸಂದ : ಹೊಂದಿದ 1245
ಸಂದಣಿ : (1) ಸಮೂಹ 739, 953 (2) ಹೊಂದಿಕೆ, ಜೋಡಣೆ 183 (3) ಸಡಗರ 632, 1133
ಸದಮದ ಗಜ : ಮದಿಸಿದಾನೆ 810, 1306
ಸಂದಳಿ : ಭೇದವಿಲ್ಲದಂತಾಗು, ಏಕವಾಗು 612, 727
ಸಂದಿಕ್ಕು : ಕೂಡಿಸು, ಸೇರಿಸಿ ಹುರಿಮಾಡು 438
ಸಂದಿಲ್ಲದಿಪ್ಪ : ಭೇದವಿಲ್ಲದ, ಏಕವಾದ 1029, 1105

ಸಿತ : ? 1303
ಸಿನೆ : ಶೂನ್ಯ, 625, 691
ಸೀಮೆ : ಅಂತ್ಯ, ಎಲ್ಲೆ, 135, 747
ಸುಮ್ಮಾನ : ಸುಖ 171
ಸುಯಿಧಾನ : ಸಾಧ್ಯ, ಶಕ್ಯ 12. ಅಣಿ 140. ಸಂವಿಧಾನ 273. ಸಾಮುಗ್ರಿ 1008
ಸುರಾಳ : ( × ನಿರಾಳ) ಸಗುಣ 259
ಸುಪ್ಪಾಣಿ : ಆಭರಣ ವಿಶೇಷ 624
ಸುಳಿಹು: ಸುಳುಹು, ಚಲನೆ 82, 339, 1301
ಸೂಡು : ಧರಿಸು 890, 1145
ಸೂನೆಗಾಱ : ಕಟುಗ 122, 160, 216, 1314
ಸೆಜ್ಜಾಗೃಹ : ಗರ್ಭಗುಡಿ 1187
ಸೆಜ್ಜೆ : ಕರಡಿಗೆ 198, 299, 304, 387, 595, 792
ಸೊಕ್ಕು : ಪ್ರಜ್ಞೆತಪ್ಪಿಸುವ ವಿಷ 371, 718, 1183
ಸೊಡರು : ದೀಪ 33, 71
ಸೊಪ್ಪಡಗು : ಶ್ರಾಂತಿಗುಂದು, ಲವಲವಿಕೆಯಿಂದಿರು 684
ಸೊಪ್ಪಳಿದು : ಆಸರಳಿದು, ಹುರುಪಿನಿಂದ 983
ಸೊಮ್ಮು : ಸ್ವತ್ತು, ಒಡವೆ 1015
ಸೊಲ್ಲು : ಮಾತು 878, 1298
ಸೋಂಕಿತ : ( × ಅಸೋಂಕಿತ) 575 ಸೋಕಿದ್ದು
ಸೋರುಮುಡಿ : ಜೋಲುವ ಉದ್ದವಾದ ಮುಡಿ 111
ಸೋವು : ಓಡಿಸು, ಅಟ್ಟು 1180

## ಹ

ಹಗರಣ : (1) ಇಂದ್ರಜಾಲ, ಮಾಯೆ. 35, 833. (2) ವ್ಯರ್ಥಾಲಾಪ 461
ಹಗಿನು : ಬಂಕೆ, ಅಂಟುರಸ 616
ಹತ್ತೆ : ಸಮೀಪ 662, 750
ಹಂದರ : ಚಪ್ಪರ 395, 555
ಹಂದೆ : ಹೇಡಿ 493
ಹಮ್ಮೈಸು : ಮೂರ್ಛೆಬೀಳು 1315
ಹಯನು : ಕರಾವು, ಹಾಲು ಬೆಣ್ಣೆ ಮುಂತಾದ್ದು 35, (× ಬಱಡು) 245
ಹಯನಾಗು : ಈಲಾಗು, ಹಾಲುಕೊಡು 246, 661, 1306
ಹರಹು : ಹರಡು 1047
ಹರಿ : ಚಲಿಸು, ಓಡು 328, 329, 351, 476, 981, ಮುಗಿ, ಪೂರೈಸು 727, 1261. ಬೀಸು 943
ಹರಿನುಡಿ : ಸಂಭ್ರಮದ ಮಾತು 1126. ವಾಗ್ಝರಿ
ಹರಿಹನ್ನಿಕೋಟಿ : ಒಟ್ಟು ಹನ್ನೆರಡು ಕೋಟಿ 901
ಹರು : ವಿಸ್ತಾರ 752
ಹರೆ : ಚದುರು 235, 1034
ಹಱ : ಸಾಧ್ಯವಾಗು 1133
ಹಱಹಂಚ ಮಾಡು : ಚಲ್ಲಾಪಿಲ್ಲಿಮಾಡು 600
ಹಱುಗೋಲು : ದೋಣಿ 360
ಹಱಿ : ತಮಟೆ 461, 1125
ಹಲ್ಲಣ : ಜೀನು 127, 259
ಹಳ್ಳ : ಪ್ರವಾಹ, ನದಿ 47
ಹೆಳಕುಹೂಡು : ? (ಹಿಳಕುಹೂಡು)ಬಾಣವನ್ನು ಹೂಡು 1314
ಹವಣು : ಅಳತೆ, ಹದ. 703
ಹಾಯ್ : ದಾಟು 360
ಹಾಳು: ಭೂಮಿ, ಹೊಲ 443, 1321

ಹಾಸು : ಹಾಸಿಗೆ 425

ಹಿಂಗು : ಬಿಡು 355. ಹಿಂತಿರುಗು 35, 1232

ಹುಗುಳು : ಬೊಬ್ಬೆ, ಗುಳ್ಳೆ 803

ಹುಟ್ಟು : (1) ತೆಪ್ಪ ಅಥವಾ ದೋಣಿಯನ್ನು ನಡೆಸಲು ಮೀಟುವ ಗಳು ಅಥವಾ ಮರದ ಹಲಗೆ 360, (2) ಸೌಟು, ಮರದ ಸಾಮಾನು 869 1254

ಹುಂಡನೆ ಮಾಡು (ಹೂಸಿ—) : ವಿಭೂತಿಯನ್ನು ಧರಿಸಿ ರಂಗುರಂಗಾಗು, ವೇಷಾಡಂಬರ ಮಾಡು 1010. "ತನುಮನದ ಮೇಲಾಸೆ ಹಿಂಗದೆ, ಭಕ್ತಿ ಮಾಡದೆ ಹೂಸಿಹುಂಡನಲೇನು ಫಲವೈ ಬಸವ"(ಪ್ರ.ಲೀ, 16-45)

ಹುದುಗು : ಅಡಗು 463

ಹುಳ್ಳಿ : ಪುಳ್ಳಿ ? 147 ; 438

ಹುಸಿ : ತಪ್ಪು (ಕ್ರಿ) 147 214

ಹೂದಂಬುಲ: ಮದುವೆಯ ಸಂಬಂಧವಾಗಿ ನಡೆಯುವ ವೀಳ್ಯದಶಾಸ್ತ್ರ 461

ಹೂಳು : ಮುಚ್ಚು, ಮಾಯಿ 510 ; 510 ; (ಹೂಳಿದ = ನೆಲದಲ್ಲಿ ಹುಗಿದಿದ್ದ 1032)

ಹೂಮಿಡಿ : ಹೂಹೀಚು 703 1034

ಹೆಡತಲೆ : ಹಿಂತಲೆ 1126

ಹೆಡಿಗೆ : ಮಂಕರಿ 1317

ಹೆಣನುಂಡು ಹೋಗು : ಹಾಳಾಗು: 476

ಹೆಣ ಹೋಗು : ಸಾವಾಗು 122

ಹೆಱಸಾರು : ಹಿಮ್ಮೆಟ್ಟು 737

ಹೆಱದೆಗೆ : ಹಿಂತೆಗೆ 1166

ಹೆಱಹಿಂಗು : ನಾಶವಾಗು 967

ಹೇಳಿಗೆ : 211 ಹಾವಿನ ಬುಟ್ಟಿ 371

ಹೊಗದೆಸೆ : ಹೋಗಲೆಡೆ, ಇರಲು ಜಾಗ 1301

ಹೊಗಳತೆ : ಹೊಗಳಿಕೆ 1148

ಹೊಡವಡು : ನಮಸ್ಕರಿಸು 422

ಹೊಡೆಗಿಚ್ಚು : ಒಳಗಿಚ್ಚು 966, 1282

ಹೊಣೆಯ ಕೊಡು : ಜಾಮೀನಾಗು 799

ಹೊತ್ತಿಕ್ಕು : ಹತ್ತಿಸು 44

ಹೊದಕುಳಿಗೊಳ್ : ಸಂತಪಿಸು 174, 229

ಹೊದ್ದನು : ಪಡೆಯನು 1300

ಹೊದ್ದು : ಪಡೆ 596 ; ಸಮೀಪಿಸು 750 ; ಮುಟ್ಟು, ಸೋಕು 897 ;

ಹೊಂದು : ಸಾಯ್ 75 (× ಹುಟ್ಟು 75) ; 279 ; 436 ; 575, 622, 868

ಹೊನಲು : ಪ್ರವಾಹ 113

ಹೊನ್ನು : ಚಿನ್ನದ ನಾಣ್ಯವಿಶೇಷ 721

ಹೊರಸು : ಮುಂಚ 617

ಹೊರೆ : (1) ಸಮೀಪ, ಪಕ್ಕ 265 (2) ರಕ್ಷಿಸು 901 (3) ಭಾರ 1020

ಹೊಲಬು : ದಾರಿ 174, 229, 332; 340

ಹೊಳ್ಳಾಗು (ನಷ್ಟ—) : ಬರಿದಾಗು, ಟೊಳ್ಳಾಗು 382

ಹೊಸತಿಡು : ಬಣ್ಣದನ್ನವನ್ನು ಬಲಿಯವಾಗಿ ಚೆಲ್ಲು 875

ಹೊಸತಿಲು : ಹೊಸಲು 1143

ಹೊಸೆ : ಕಡೆ, ಮಥನಮಾಡು 661

ಹೋತ : ಹೋಲಿದನು 491

ಹೋಮಾತು : ಆಗದ ಮಾತು 133

ಹೋಯಿತ್ತೆ : ಹೋದುದೆ 41

ಹೋರಟೆ : ಹೋರಾಟ 465

ಹೋರು : ಬಿಲ 114 ; 321 ; 560

# ಒಪ್ಪೋಲೆ

| ಪುಟ | ಪಂಕ್ತಿ | ತಪ್ಪು | ಒಪ್ಪು |
|---|---|---|---|
| ೧೦ | 32 | ದೊರಕೊಂಬುಯ್ಯ | ದೊರಕೊಂಬುದಯ್ಯ |
| ೧೧ | 28 | ಕಡಪಲ | ಕೂಡಲ |
| ೧೭ | 6 | ಸಂಸ್ಕೃತಿ. | ಸಂಸ್ಕೃತಿ_ |
| | 27 | ಕೇಲವಂ | ಕೇವಲಂ |
| | | ಹತನಿದ್ಯೊಪದಿಶ್ಯತೆ | ಹತವಿದ್ಯೋಪದಿಶ್ಯತೆ |
| ೧೯ | 1 | ಪ್ರಿಯಶಿಷ್ಯನಾಗಿರ | ಪ್ರಿಯಶಿಷ್ಯನಾರಿರ |
| ೨೪ | 12 | ಮೊದಲವೆಯುದರಲ್ಲಿನ | ಮೊದಲನೆಯುದರಲ್ಲಿನ |
| ೨೫ | 6 | 1161 | 1661 |
| ೨೬ | 20 | ಇದನ್ನು ಕಾಲ | ಇದನ್ನು “ ಕಾಲ |
| | 23 | ಮನ್ನ | ಮುನ್ನ |
| 7 | 4 | ಕಠಿಣವವನು | ಕಠಿಣವನು |
| 13 | 2 | ಹೊಲಗೆಟ್ಟ | ಹೊಲೆಗೆಟ್ಟ |
| 17 | 15 | ಯುಕ್ತಿಯನಱಿಯಿರು | ಯುಕ್ತಿಯನಱಿಯರು |
| 44 | 2 | ವಾಯುವನಱಿಯವೋ | ವಾಯುವನಱಿಯವೋ |
| 45 | 7 | ಅಧಾರಲಿಂಗ_ | ಆಧಾರ_ಲಿಂಗ_ |
| 73 | 3 | ಅಚ್ಚುಗ | ಅಚ್ಚಿಗ |
| 74 | 7 | ಹರಿದಾಡುತ್ತಿದ್ದ | ಹರಿದಾಡುತ್ತಿದ್ದವು |
| 79 | 5 | ಒಂದೆನೆಂದರೆ | ಒಂದನೆಂದರೆ |
| 96 | 10 | ಕಂಡೆ. | ಕಂಡೆ ಗುಹೇಶ್ವರ. |
| 99 | 6 | ಹುಟ್ಟಿದಂದಿನ | ಹುಟ್ಟಿದಂದಿನ |
| 104 | 11 | ಭಕ್ತಿನ | ಭಕ್ತನ |
| 112 | 2 | ಹಸಿ | ಹುಸಿ |
| | 11 | ಮನಣೆಯಿಲ್ಲ | ಮನ್ನಣೆಯಿಲ್ಲ |
| 117 | 3 | ನಿಭದ್ರೆ | ಖಿಭದ್ರೆ |
| 128 | 16 | ಅಗಲಿಲ್ಲ | ಅಗಲಲಿಲ್ಲ |
| 146 | 4 | ಬೇಱನಿಸಿದ | ಬೇಱನಿಸದ |
| | 21 | ಮೃತವು | ಮೃಗವು |
| 181 | 15 | ಶೃಗಾರಕ್ಕೆ | ಶೃಂಗಾರಕ್ಕೆ |
| 199 | 20 | ಹೋಲಲಱಿಯೆ | ಹೋಲಲಱಿಯೆ |
| 215 | 20 | ಬಿಸಿಯಾವರೆ | ಬಿಸಿಯಾದರೆ |

| | | | |
|---|---|---|---|
| 240 | 12 | ನಿಮ್ಮ್ರವನು | ನಿಮ್ಮ್ರವನು |
| 270 | 4 | ಬೋಱಿೊಂದು | ಬೇಱಿೊಂದು |
| 276 | 11 | ತಿಂದಾತು | ತಿಂದಾತ |
| 279 | 4 | ಎಲ್ಲಿಯ ಸೂತಕ | ಎಲ್ಲಿಯ ಕುಲಸೂತಕ |
| 279 | 15 | ಘಟಿಕೆ | ಘುಟಿಕೆ |
| 281 | 20 | ಜೀಜಾವಾಪ | ಬೀಜಾವಾಪ |
| 292 | 3 | ಸುಕುತಿ | ಸಕುತಿ |
| 318 | 4 | ಹಂಗ | ಹಂದಿ |
| 320 | 11 | (ನವ್ಯ—) | (ದಿವ್ಯ—) |
| 340 | 17 | ಳವೆನಿರಾಂಬ | ನಿರಾಳವೆಂಬ |

ಮೂರು, ಐದರಿಂದ, ಅರುಹಿರಿಯರು, ಎರಡರೊಳಗಿಪ್ಪ, ಬರಡಾಯಿತು ಎಂಬ ಪದಗಳನ್ನು ಮೂಱು, ಐದಱಿಂದ, ಅಱುಹಿರಿಯರು, ಎರಡಱೊಳಗಿಪ್ಪ, ಬಱಡಾಯಿತ್ತು, ಎಂದೂ, ಬೆಱಗಾದ, ನೇಱಿತ್ತು, ತಲೆವಾಱು ಎಂಬ ಪದಗಳನ್ನು ಬೆರಗಾದ, ನೇರಿತ್ತು, ತಲೆವಾರು ಎಂದೂ ತಿದ್ದಿಕೊಳ್ಳಬೇಕು.

"ಕಬ್ಬಿಸಿಲು" ಎಂದರೆ "ನೆರಳು" ಎಂದು ಅರ್ಥ, ಪ್ರಖರವಾದ ಬಿಸಿಲೆಂದರ್ಥವಲ್ಲ; "ಕಠಿನ ಪದಕೋಶ" ನೋಡಿ.

---

Sri L. Basava Raju, M. A. deserves the congratulations of all lovers of Kannada literature for his fine edition of the vachanas of Allamaprabhu. He has taken great pains to collect as many sayings of the great saint as is possible from the manuscripts which are available at present. This edition contains more vachanas of Allama than any other edition so far published. The text of the vachanas has been edited with love and care on the basis of several divergent readings. Such a work had not been done before as far as the vachanas of Allama are concerned.

There are many appendices which greatly enhance the usefulness of the present edition. The alphabetical index to the vachanas facilitates ready reference. An index of all technical terms occuring in the work and another defining their meanings are of great help to the students of Allama. And the reader is deeply grateful to the editor for supplying this long felt need. The two indices of proper nouns and place names occuring in the vachanas save much labour for the research worker. Words, whose symbolic significance is difficult to comprehend, have been listed in a separate index with their contextual meanings on the authority of available commentaries and oral tradition. Special thanks are due to the editor for doing this difficult job. A sufficient interpretation of the enigmatic sayings is given in the next index which enlightens the curious reader. A glossary of words of lexical interest is a fitting conclusion to the ardous task of the editor.

The introduction running to about fifty pages is scholarly and reflects the width of the information that the editor has compressed into it. Many more topics such as the philosophy and personality of Allama, for expounding which the editor has collected ample material, could not go in to the present introduction for want of space and fear of increase in the cost of production. I hope he will write about such topics in due course.

This edition has been dedicated to Sri D. C. Pavate, M. A. (Cantab), Vice-chancellor of the Karnatak University who has done much for the development of University education in this part of the country. I am sure that the Kannada public will welcome and acclaim this edition and congratulate the editor, Sri L. Basava Raju, M.A.

**D. L. Narasimhachar**
*Prof. of Kannada*
*Maharajas College. Mysore*